ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಸೃಷ್ಟಿಖಂಡ— ನಾಲ್ಕನೆಯ ಭಾಗ



ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)



ಮೈಸೂರು:

ಶ್ರೀ ಹನುಮಾನ್ ಪ್ರೆಸ್

೧೯೪೫

॥ ಶ್ರೀಃ ॥

—×—

# ಮುನ್ನುಡಿ



ಇದು ಸೃಷ್ಟಿಖಂಡದ ನಾಲ್ಕನೆಯ ಭಾಗವಾಗಿ ಪ್ರಕಟವಾಗಿದೆ. ಇದರಲ್ಲಿ ಮೂವತ್ತೇಳರಿಂದ ನಾಲ್ವತ್ತಾರನೆಯ ಅಧ್ಯಾಯದವರೆಗೂ ಪೂರ್ತಿಯಾಗಿ, ಎಂದರೆ ಹತ್ತು ಅಧ್ಯಾಯಗಳು ಕೊಡಿಸಲ್ಪಟ್ಟಿವೆ. ಈ ಅಧ್ಯಾಯಗಳಲ್ಲಿ ತಾರಕಾಸುರನ ತಪಸ್ಸು, ಅವನ ವರ, ಅವನ ದರ್ಪಗಳನ್ನು ನಿರೂಪಿಸಿ, ಅದಕ್ಕೆ ತಕ್ಕಂತೆಯೇ ವಿಷ್ಣುವಿನ ಉಪಾಯವನ್ನು ವರ್ಣಿಸಿ, ಕೇವಲ ಆರು ದಿನದ ಮಗುವಾದ ಕುಮಾರಸ್ವಾಮಿಯು ಅವನನ್ನು ಕೊಂದನೆಂದೂ ಅವನ ಉತ್ಪತ್ತಿ ಮೊದಲುಗೊಂಡು ವಿವರಿಸಲ್ಪಟ್ಟಿದೆ. ತಾರಕಾಸುರನ ಉತ್ಪತ್ತಿಗೆ ಕಾರಣನಾದ ವಜ್ರಾಂಗನ ವಿಷಯವೂ ಮನೋಹರವಾಗಿ ವರ್ಣಿತವಾಗಿದೆ. ತಾರಕಾಸುರನ ಸೇನಾಪತಿಯಾದ ಕಾಲನೇಮಿಯು ದೇವತೆಗಳನ್ನು ಹಿಡಿದು ತಂದು ಆ ತಾರಕನ ಮುಂದೆ ನಿಲ್ಲಿಸಿದುದೂ, ಆ ತಾರಕನ ಉದಾರವಾದ ಮಾತೂ, ಗ್ರಾಹ್ಯವಾಗಿವೆ. ಆ ಕುಮಾರಸ್ವಾಮಿಯು ಹುಟ್ಟಲು ಕಾರಣವಾದ ಪಾರ್ವತಿಯ ತಪಸ್ಸೂ ರಮ್ಯವಾಗಿದೆ. ಅಲ್ಲದೆ ಆಕೆಯು ಕಪ್ಪಗಿದ್ದುದನ್ನು ನೋಡಿ ಶಿವನು ಮಾಡಿದ ತಿರಸ್ಕಾರವೂ ಅದಕ್ಕೆ ಆಕೆಗೆ ಬಂದ ಕೋಪವೂ ಅವರಿಂದಲೇ ನಮಗೆ ಮೇಲ್ಪಂಙ್ಕ್ತಿಯಾದಂತಿದೆ. ಆ ಕಪ್ಪಿಗೆ ಕಾರಣವು ಬಹುರಮ್ಯವಾಗಿದೆ. ಆಡಿ ರಾಕ್ಷಸನು ಶಿವನ ಬಳಿಗೆ ಪಾರ್ವತಿಯ ರೂಪದಿಂದ ಬಂದು ಪ್ರಾಣತ್ಯಾಗಮಾಡಿದುದು, ಅನಂತರ ಕೋಪಗೊಂಡು ವೀರಕನಿಗೆ ಪಾರ್ವತಿಯು ಶಾಪಕೊಡುವುದು, ಗಮನಿಸಬೇಕಾದ ವಿಷಯಗಳು. ಈ ಸಂದರ್ಭದಲ್ಲಿ ಅವಳ ಕೋಪದಿಂದ ಸಿಂಹವು ಉತ್ಪತ್ತಿಯಾಗಿ ತಾನು ಅದರ ದಾಡೆಯಲ್ಲಿ ಕುಳಿತು ಸಿಂಹವಾಹಿನಿಯಾಗಿರುವುದು ಪಾರ್ವತಿಯ ಬಳಿಯಲ್ಲಿ ಸಿಂಹವೇತಕ್ಕಿರುವುದೆಂಬ ಸಂದೇಹವನ್ನು ನಿವಾರಿಸುವುದಾಗಿದೆ. ಪಾರ್ವತಿ ಶಂಕರರಿಂದ ಸ್ಕಂದನು ಹುಟ್ಟಿದುದು, ಆದಕ್ಕೆ ಕೃತ್ತಿಕಾದೇವಿಯರ ಸಹಾಯ, ಇದರಿಂದ ಕಾರ್ತಿಕೇಯನೆಂಬ ಹೆಸರನ್ನು ಹೊಂದಿದ ಅನ್ವರ್ಥನಾಮವು ವ್ಯಕ್ತವಾಗುತ್ತದೆ. ಶಿವನು ಅಂಧಕನನ್ನು ಕೊಂದ ವಿಷಯವು ಚಮತ್ಕಾರ

ವಾಗಿದೆ. ಹಿರಣ್ಯಕಶಿಪುವನ್ನು ನರಸಿಂಹನು ಕೊಂದುದು ವರ್ಣಿತವಾಗಿದೆ. ಬ್ರಾಹ್ಮಣನ ಲಕ್ಷಣ, ಅವನ ಅವಲಕ್ಷಣ, ಅವನ ಆಚಾರಗಳೂ ಎಲ್ಲರಿಗೂ ಗ್ರಾಹ್ಯವಾದ ವಿಷಯಗಳಾಗಿವೆ. ಗರುಡನು ಉತ್ಪನ್ನನಾಗಿ ಅವನು ಮಾಡಿದ ಅದ್ಭುತ ಕೆಲಸಗಳೂ ಭಯಂಕರವಾಗಿವೆ. ಈ ಸಂದರ್ಭದಲ್ಲಿ ಯವನರ ಉತ್ಪತ್ತಿಯನ್ನು ಚೆನ್ನಾಗಿ ವರ್ಣಿಸಿದೆ. ಗೋವಿನ ಉತ್ಪತ್ತಿಯೂ ಅದರ ಭೇದಗಳೂ, ಅವುಗಳ ದಾನದ ವಿಚಾರವೂ ವರ್ಣಿತವಾಗಿವೆ.

ಇದರಿಂದ ಹಲವಾರು ಮೂಲವಿಷಯಗಳು ಆಚಾರ ವ್ಯವಹಾರವೂ ನಮಗೆ ಗೊತ್ತಾಗಿ ಕಾಲಾನುಸಾರವಾಗಿ ಹೇಗೆ ನಡೆಯಬೇಕೆಂಬುದನ್ನು ನಾವು ಸಾಧ್ಯವಾದ ಮಟ್ಟಿಗೂ ಅನುಸರಿಸಬಹುದಾಗಿದೆ.

ಈ ರೀತಿಯಾಗಿ ಹಲವಾರು ವಿಷಯಗಳು ಕನ್ನಡಕ್ಕೆ ಪರಿವರ್ತಿತವಾಗಿ ಕನ್ನಡಿಗರಿಗೆ ತಿಳಿಯುವ ಸುಯೋಗವನ್ನು ಒದಗಿಸಿಕೊಟ್ಟ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ರವರಿಗೆ** ಕನ್ನಡಿಗರು ಚಿರಋಣಿಗಳಾಗಿರಬೇಕಾಗಿದೆ. ಇವರಿಗೆ ಸರ್ವೇಶ್ವರನು ಆಯುರಾರೋಗ್ಯ ಐಶ್ವರ್ಯಾದಿ ಸಕಲ ಸಂಪತ್ತುಗಳನ್ನು ಕೊಟ್ಟು ಕಾಪಾಡಲೆಂದು ವಿನಯಪೂರ್ವಕವಾಗಿ ಪ್ರಾರ್ಥಿಸುವ,

ಮೈಸೂರು,
18-5-1945

ಅನುವಾದಕ :
**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ.**



## ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ನಾಲ್ಕನೆಯ ಭಾಗದ

# ವಿಷಯಾನುಕ್ರಮಣಿಕೆ



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಸಪ್ತತ್ರಿಂಶೋಽಧ್ಯಾಯಃ ॥



ಅಥಯೋಗವತಾಂ ಶ್ರೇಷ್ಠಮಸೃಜದ್ಭೂರಿವರ್ಚಸಂ ।
ಸ್ರಷ್ಟಾರಂ ಸರ್ವಲೋಕಾನಾಂ ಬ್ರಹ್ಮಾಣಂ ಸರ್ವತೋ ಮುಖಂ ॥ ೧ ॥

ತಸ್ಮಿನ್ಹಿರಣ್ಮಯೇ ಪದ್ಮೇ ಬಹುಯೋಜನ ವಿಸ್ತೃತೇ ।
ಸರ್ವತೇಜೋಗುಣಮಯೇ ಪಾರ್ಥಿವೈರ್ಲಕ್ಷಣೈರ್ವೃತೆ ॥ ೨ ॥

ತಚ್ಚ ಪದ್ಮಂ ಪುರಾಣಜ್ಞಾ ಪೃಥಿವೀರೂಪಮುತ್ತಮಂ ।
ನಾರಾಯಣಸಮುದ್ಭೂತಂ ಪ್ರವದಂತಿ ಮಹರ್ಷಯಃ ॥ ೩ ॥

---

## ಮೂವತ್ತೇಳನೆಯ ಅಧ್ಯಾಯವು

೧. ಅನಂತರ ಯೋಗಿಶ್ರೇಷ್ಠನಾದ ಬಹುವಾದ ತೇಜಸ್ಸುಳ್ಳ, ಎಲ್ಲಾ ಲೋಕಗಳನ್ನೂ ಸೃಷ್ಟಿಮಾಡುವ ಸರ್ವತೋಮುಖನಾದ ಬ್ರಹ್ಮನು ಸೃಷ್ಟಿಸಲ್ಪಟ್ಟನು. (ಬ್ರಹ್ಮನನ್ನು ಸೃಷ್ಟಿಮಾಡಿದನು.)

೨. ಆ ಚಿನ್ನದ ವಿಕಾರವಾದ ಬಹುಯೋಜನಗಳು ಅಗಲವುಳ್ಳ ಎಲ್ಲಾ ತೇಜಸ್ಸಿನಿಂದಲೂ, ಗುಣಗಳಿಂದಲೂ, ಭೂಮಿಯ ಲಕ್ಷಣಗಳಿಂದ ಕೂಡಿದ ಆ ಪದ್ಮದಲ್ಲಿ ಬ್ರಹ್ಮನು ಹುಟ್ಟಿದನು.

೩. ಪುರಾಣವನ್ನು ಬಲ್ಲವರು ನಾರಾಯಣನಿಂದ ಹುಟ್ಟಿದ ಈ ಪದ್ಮವನ್ನು ಪೃಥಿವಿಯ ಗುಣಗಳುಳ್ಳದ್ದನ್ನಾಗಿ ಹೇಳುತ್ತಾರೆ.

ಯಾ ಪದ್ಮಸಾರತಾ ದೇವ ಪೃಥಿವೀ ಪರಿಚಕ್ಷತೇ ।
ಯೇ ಪದ್ಮಸಾರಗುರವಸ್ತಾನ್ದಿವ್ಯಾನ್ಪರ್ವತಾನ್ವಿದುಃ ॥ ೪ ॥

ಹಿಮವಂತಂ ಚ ಮೇರುಂ ಚ ನೀಲಂ ನಿಷಧಮೇವ ಚ ।
ಕೈಲಾಸಂ ಶೃಂಗವಂತಂ ಚ ತಥಾದ್ರಿಂ ಗಂಧಮಾದನಂ ॥ ೫ ॥

ಪುಣ್ಯಂ ತ್ರಿಶಿಖರಂ ಚೈವ ಕಾಂತಂ ಮಂದರಮೇವ ಚ ।
ಉದರಂ ಪಿಂಜರಂ ಚೈವ ವಿಂಧ್ಯಮಸ್ತಂ ಚ ಪರ್ವತಂ ॥ ೬ ॥

ಏತೇ ದಿವ್ಯಗಣಾನಾಂ ಚ ಸಿದ್ಧಾನಾಂ ಚ ಮಹಾತ್ಮನಾಂ ।
ಆಶ್ರಯಾಃ ಪುಣ್ಯಶೀಲಾನಾಂ ಸರ್ವಕಾಮಫಲಪ್ರದಾಃ ॥ ೭ ॥

ಏತೇಷಾಮಂತರೇ ದೇಶೋ ಜಂಬುದ್ವೀಪ ಇತಿ ಸ್ಮೃತಃ ।
ಜಂಬೂದ್ವೀಪಸ್ಯ ಸಂಸ್ಥಾನಂ ಯಜ್ಞಿಯಾ ಯತ್ರ ವೈ ಕ್ರಿಯಾಃ ॥ ೮ ॥

ತೇಭ್ಯೋ ಯದ್ರವತೇ ತೋಯಂ ದಿವ್ಯಾಮೃತ ರಸೋಪಮಂ ।
ದಿವ್ಯತೀರ್ಥ ಶತಾಯಾಮಾಃ ಸರ್ವಸ್ಯ ಸರಿತಸ್ಸ್ಮೃತಾಃ ॥ ೯ ॥

---

೪. ಆ ಪದ್ಮದ ಸಾರವನ್ನೇ ಪೃಥಿವಿ ಎಂದೆನ್ನುತ್ತಾರೆ. ದಪ್ಪವಾಗಿರುವ ಪದ್ಮದ ಸಾರಗಳೇ ಉತ್ತಮವಾದ ಪರ್ವತಗಳೆನ್ನುತ್ತಾರೆ.

೫-೭. ಹಿಮವಂತ, ಮೇರು, ನೀಲ, ನಿಷಧ, ಕೈಲಾಸ, ಗಂಧಮಾದನ, ತ್ರಿಶಿಖರ, ಮಂದರ, ಉದರ, ಪಿಂಜರ, ವಿಂಧ್ಯ, ಅಸ್ತಪರ್ವತ, ಇವೇ ಮುಖ್ಯವಾದ ಪರ್ವತಗಳು. ಇವು ದೇವಗಣಗಳಿಗೂ, ಸಿದ್ಧರಿಗೂ, ಮಹಾತ್ಮರಿಗೂ, ಪುಣ್ಯವಂತರಿಗೂ, ಆಶ್ರಯವನ್ನು ಕೊಟ್ಟುಕೊಂಡು ಇಷ್ಟಾರ್ಥಗಳನ್ನು ಕೊಡುತ್ತವೆ.

೮-೯. ಇವುಗಳ ಮಧ್ಯದಲ್ಲಿರುವ ದೇಶಕ್ಕೆ ಜಂಬೂದ್ವೀಪವೆಂದು ಹೆಸರು. ಇಲ್ಲಿಯೇ ಯಾಗದ ಕೆಲಸಗಳೆಲ್ಲವೂ ನಡೆಯುತ್ತವೆ. ಆ ಪರ್ವತಗಳಿಂದ ಸ್ರವಿಸುವ ನೀರು ಉದ್ದಕ್ಕೂ ಹೋಗುತ್ತ ಸರೋವರಗಳಾಗಿಯೂ, ನದಿಗಳಾಗಿಯೂ, ಪ್ರಸಿದ್ಧಿಗೊಂಡಿವೆ.

ಯಾನ್ಯೇತಾನೀಹ ಪದ್ಮಸ್ಯ ಕೇಸರಾಣಿ ಸಮನ್ತತಃ ।
ಅಸಂಖ್ಯೇಯಾಃ ಪೃಥಿವ್ಯಾಂ ತೇ ವಿವಿಧಾಶ್ಚೈವ ಪರ್ವತಾಃ ॥ ೧೦ ॥

ಯಾನಿ ಪದ್ಮಸ್ಯ ಪರ್ಣಾನಿ ಭೂರಿ ಪರ್ವಾಣಿ ಪಾರ್ಥಿವ ।
ತೇ ದುರ್ಗಮಾಶ್ಶೈಲಚಿತಾಃ ಮ್ಲೇಚ್ಛದೇಶಾಃ ಪ್ರಕೀರ್ತಿತಾಃ ॥ ೧೧ ॥

ಯಾನ್ಯಧೋಭಾಗಪರ್ವಾಣಿ ತೇ ನಿವಾಸಾಸ್ತು ಭಾಗಶಃ ।
ದೈತ್ಯಾನಾಮಸುರಾಣಾಂ ಚ ಪನ್ನಗಾನಾಂ ಚ ಪಾರ್ಥಿವ ॥ ೧೨ ॥

ತೇಷಾಂ ಮಧ್ಯೇಂತರಂ ಯತ್ತು ತತ್ರಾಸಹ್ಯೇತಿ ಸಂಜ್ಞಿತಂ ।
ಮಹಾಪಾತಕ ಕರ್ಮಾಣೋ ಮಜ್ಜಂತೇ ಮಾತ್ರ ಯನವಾಃ ॥ ೧೩ ॥

ಪದ್ಮಸ್ಯ ಚಾಂತರೇ ಪದ್ಮ ಏಕಾರ್ಣವಗತಾ ಮಹೀ ।
ಪ್ರೋಕ್ತಾಸ್ತೇ ದಿಕ್ಷು ಸಂಘಾತಾಶ್ಚತ್ವಾರಸ್ಸಲಿಲಾಕರಾಃ ॥ ೧೪ ॥

ಏವಂ ನಾರಾಯಣಸ್ಯಾರ್ಥೇ ಮಹೀ ಪುಷ್ಕರಸಂಭವಾ ।
ಪ್ರಾದುರ್ಭಾವಪ್ರೋಕ್ಸ್ಯಯಂ ತಸ್ಮಾನ್ನಾಮ್ನಾ ಪುಷ್ಕರ ಸಂಜ್ಞಿತಃ ॥ ೧೫ ॥

---

೧೦-೧೧. ಈ ಪದ್ಮದ ಸುತ್ತಲೂ, ಕೇಸರಗಳು ಬಹುವಾಗಿದ್ದು ಅವುಗಳೇ ಭೂಮಿಯಲ್ಲಿ ನಾನಾಬಗೆಯ ಪರ್ವತಗಳಾಗಿವೆ. ಪದ್ಮದಲ್ಲಿರುವ ದಳಗಳು ಬೆಟ್ಟದಿಂದ ಕೂಡಿರುವ ಮ್ಲೇಚ್ಛದೇಶಗಳು ಎಂದೆನಿಸಿಕೊಂಡಿವೆ.

೧೨-೧೩. ಆ ಪದ್ಮದ ತಳಭಾಗದಲ್ಲಿರುವ ದಳಗಳು ದೈತ್ಯರಿಗೂ, ಅಸುರರಿಗೂ, ಪನ್ನಗರಿಗೂ, ವಾಸಸ್ಥಾನವಾಗಿವೆ. ಅವುಗಳ ಮಧ್ಯಭಾಗವು ಅಸಹ್ಯವೆಂಬುದಾಗಿ ಹೆಸರುಗೊಂಡಿದೆ. ಅಲ್ಲಿ ಪಾಪಿಗಳಾದ ಮನುಷ್ಯರು ಇರುತ್ತಾರೆ.

೧೪. ಪದ್ಮದ ಒಳಗಡೆಯಲ್ಲಿಯೂ ಕೂಡ, ಅಂತಸ್ತು ಅಂತಸ್ತಿಗೂ, ನಡುವೆ ನೀರು ತುಂಬಿಕೊಂಡಿರುತ್ತದೆ. ಅವುಗಳು ದಿಕ್ಕುಗಳಿಗನುಸಾರವಾಗಿ ನಾಲ್ಕು ಸಮುದ್ರಗಳಾಗಿವೆ.

೧೫. ಈ ರೀತಿಯಾಗಿ ನಾರಾಯಣನ ಇಚ್ಛೆಯಂತೆ ಆ ಸ್ವಾಮಿಯ ನಾಭಿಯ ಪುಷ್ಕರದಲ್ಲಿ ಈ ಭೂಮಿಯು ಹುಟ್ಟಿತು. ಹೀಗೆ ಹುಟ್ಟಿದುದರಿಂದ ಇದಕ್ಕೆ ಪುಷ್ಕರವೆಂದು ಹೆಸರು ಬಂದಿದೆ.

ಏತಸ಼್ಾತ್ಕಾರಣಾದ್ಯಜ್ಞೇ ಪುರಾಣ್ಯೈಃ ಪರಮರ್ಷಿಭಿಃ ।
ಯಜ್ಞಿಯೈರ್ವೇದದೃಷ್ಟಾಸ್ತ್ರೈರ್ಯಜ್ಞೇಷು ವಿಚಿತಿಃ ಕೃತಾ ॥ ೧೬ ॥

ಏವಂ ಭಗವತಾ ತೇನ ವಿಜ್ಞೇಯಯಾಥ ಧರಾ ಚಿತಾ ।
ಪರ್ವತಾನಾಂ ನದೀನಾಂ ಚ ರಚನಾ ಚೈವ ನಿರ್ಮಿತಾ ॥ ೧೭ ॥

ವಿಶ್ವಸ್ಯ ಯಶ್ಚಾಪ್ರತಿಮಪ್ರಭಾವಃ ।
ಪ್ರಭಾಕರಾಭೋ ವರುಣಾಮಿತದ್ಯುತಿಃ ॥
ಶನೈಸ್ಸ್ವಯಂಭೂರ್ವ್ಯಸೃಜನ್ಮಹಾತ್ಮಾ ।
ಜಗನ್ಮಯಃ ಪದ್ಮನಿಧಿಂ ಮಹಾರ್ಣವೇ ॥ ೧೮ ॥

ವಿಷ್ಣುಸ್ತಮಸಿ ಸಂಭೂತೋ ಮಧುರ್ನಾಮ ಮಹಾಸುರಃ ।
ಕಥಾ ರಜಸಿ ಸಂಭೂತೋ ಹ್ಯಸುರೋ ನಾಮ ಕೈಟಭಃ ॥ ೧೯ ॥

ತೌ ರಜಸ್ತಮಸೋದ್ಭೂತೌ ಸಂಭೂತೌ ತಾಮಸೌ ಗುಣೈಃ ।
ಏಕಾರ್ಣವಂ ಜಗತ್ಸರ್ವಂ ಕ್ಷೋಭಯೇತಾಂ ಮಹಾಬಲೌ ॥ ೨೦ ॥

---

೧೬. ಇವರಿಂದಲೇ ಪೂರ್ವೀಕರಾದ ಮಹರ್ಷಿಗಳು ವೇದದಲ್ಲಿರುವ ಯಜ್ಞದ ದೃಷ್ಟಾಂತಗಳನ್ನು ನೋಡಿಕೊಂಡು ಯಜ್ಞಗಳಲ್ಲಿ ಹೋಮಗಳನ್ನು ಸೇರಿಸಿ ಮಾಡುತ್ತಾರೆ.

೧೭. ಈ ರೀತಿಯಾಗಿ ಭೂಮಿಯನ್ನೂ ಪರ್ವತ ನದಿಗಳನ್ನೂ ರಚಿಸಿದ್ದಾನೆಂದು ವೇದೋಕ್ತವಾದ ರೀತಿಯಿಂದ ಹೋಲಿಸಿಕೊಂಡು ತಿಳಿಯಬೇಕು.

೧೮. ಪ್ರಪಂಚದಲ್ಲೆಲ್ಲಾ ಬಹುವಾದ ಪ್ರಭಾವವುಳ್ಳ ಸೂರ್ಯನತೇಜಸ್ಸುಳ್ಳ ವರುಣನಂತೆ ಕಾಂತಿಯುಳ್ಳ ಮಹಾತ್ಮನೂ ಆದ ಜಗತ್ತಿನ ರೂಪನಾದ ಆ ನಾರಾಯಣನು ಮಹಾಸಮುದ್ರದಲ್ಲಿ ಪದ್ಮವನ್ನೂ ಬ್ರಹ್ಮನನ್ನೂ ಉತ್ಪತ್ತಿಮಾಡಿದನು.

೧೯-೨೦. ಆ ಕತ್ತಲೆಯಲ್ಲಿ ಮಧುವೆಂಬ ರಾಕ್ಷಸನೂ, ರಜಸ್ಸಿನಲ್ಲಿ (ಧೂಳಿನಲ್ಲಿ) ಕೈಟಭನೆಂಬ ರಾಕ್ಷಸನೂ, ಇಬ್ಬರೂ ಹುಟ್ಟಿದರು. ಇವರಿಬ್ಬರೂ ರಜಸ್ತಮೋಗುಣವಂತರೇ ಆದರು. ಇವರಿಬ್ಬರೂ ಎಲ್ಲಾ ಜಗತ್ತುಗಳನ್ನೂ ಬಹುವಾಗಿ ತೊಂದರೆ ಪಡಿಸಿದರು.

ದಿವ್ಯರಕ್ತಾಂಬರಧರೌ ಶ್ವೇತದೀಪ್ತ್ಯಗ್ರದಂಷ್ಟ್ರಿಣೌ ।
ಕಿರೀಟಮಕುಟೋದಗ್ರೌ ಕೇಯೂರವಲಯೋಜ್ವಲೌ ॥ ೨೧ ॥

ಮಹಾವಿವೃತತಾಮ್ರಾಕ್ಷೌ ಪೀನೋರಸ್ಕೌ ಮಹಾಭುಜೌ ।
ಮಹಾಗಿರೇಸ್ಸಂಹನನೌ ಜಂಗಮಾವಿವ ಪರ್ವತೌ ॥ ೨೨ ॥

ನವಮೇಘಪ್ರತೀಕಾಶೌ ಆದಿತ್ಯಪ್ರತಿಮಾನಸೌ ।
ವಿದ್ಯುದಾಭೌ ಗದೋಗ್ರಾಭ್ಯಾಂ ಕರಾಭ್ಯಾಮರಿಕರ್ಷಿಣೌ ॥ ೨೩ ॥

ಪಾದಸಂಚಾರವಿನ್ಯಾಸ್ಯೈಃ ಪ್ರಕ್ಷಿಪನ್ತಾವಿಮರ್ಣವೌ ।
ಕಂಪಯಂತೌ ಹರಿವರಂ ಶಯಾನಂ ಮಧುಸೂದನಂ ॥ ೨೪ ॥

ತೌ ತತ್ರ ವಿಚರಂತೌ ತು ಪುಷ್ಕರೇ ವಿಶ್ವತೋ ಮುಖೌ ।
ಯೋಗಿನಾಂ ಶ್ರೇಷ್ಠಮತ್ಯಂತಂ ದೀಪ್ತಂ ದದೃಶತುಸ್ತದಾ ॥ ೨೫ ॥

---

೨೧. ಅವರಿಬ್ಬರೂ ಒಳ್ಳೆಯ ಕೆಂಪು ಬಟ್ಟೆಯನ್ನೂ ಹಾಕಿಕೊಂಡು ಇದ್ದರು. ಬೆಳ್ಳಗೆ ಅವರ ಬಣ್ಣವಿದ್ದಿತು. ಎತ್ತರವಾಗಿದ್ದರು. ಒಳ್ಳೆಯ ಕಾಂತಿಗಳಿಂದ ಕೂಡಿದ ಕಿರೀಟಗಳನ್ನು ಎತ್ತರವಾದ ಭುಜಕೀರ್ತಿ ಕೈಬಳೆಗಳನ್ನೂ ಹಾಕಿಕೊಂಡೂ, ಉಜ್ವಲರಾಗಿಯೂ ಇದ್ದರು.

೨೨-೨೩. ದೊಡ್ಡದಾಗಿಯೂ, ವಿಕಾರವಾಗಿ ತಿರುಗಿಸುತ್ತಲೂ, ಕೆಂಪಗೂ, ಇರುವ ಕಣ್ಣುಳ್ಳವರಾಗಿಯೂ- ದೊಡ್ಡದಾದ ಎದೆಯುಳ್ಳವರಾಗಿಯೂ, ದೊಡ್ಡ ಭುಜವುಳ್ಳವರಾಗಿಯೂ, ದೊಡ್ಡ ಪರ್ವತಗಳಂತೆ ಗಟ್ಟಿಗರಾಗಿಯೂ, ಸಂಚರಿಸುವ ಪರ್ವತಗಳೋ ಎಂಬಂತೆಯೂ, ಹೊಸ ಮೇಘಗಳಂತೆಯೂ, ಸೂರ್ಯರಂತೆಯೂ, ಮಿಂಚಿನಂತೆ ಕಾಂತಿಯುಳ್ಳವರಾಗಿಯೂ, ಗದೆಯಿಂದ ಕೂಡಿದ ಕೈಯ್ಯಿಂದ ಶತ್ರುಗಳನ್ನು ಹಿಂಸಿಸುವರಾಗಿಯೂ ಇದ್ದರು.

೨೪-೨೫. ಕಾಲುಗಳನ್ನು ನೆಲದ ಮೇಲಿಡುವ ರಭಸದಿಂದ ಸಮುದ್ರವನ್ನೇ ಎಸೆಯುವವರಂತೆಯೂ, ಮಲಗಿರುವ ಶ್ರೇಷ್ಠನಾದ ಮಧುಸೂದನನನ್ನು ನಡುಗಿಸುತ್ತ ಆ ಪುಷ್ಕರದಲ್ಲಿ (ನಾಳ) ಅವರಿಬ್ಬರೂ ಎಲ್ಲಾ ಕಡೆಗೂ ಸಂಚರಿಸುತ್ತ ಯೋಗಿಗಳಲ್ಲಿ ಶ್ರೇಷ್ಠರಾಗಿಯೂ ಕಾಂತಿಯುಳ್ಳವನಾಗಿಯೂ ಇರುವ ಆ ಸ್ವಾಮಿಯನ್ನು ನೋಡಿದರು.

ನಾರಾಯಣಂ ಸಮಾಜ್ಞಾತಂ ಸೃಜನ್ತಮಖಿಲಾಃ ಪ್ರಜಾಃ ।
ದೈವತಾನಿ ಚ ವಿಶ್ವಾನಿ ಮಾನಸಾಂಶ್ಚ ಶುಭಾನೃಷೀನ್ ॥ ೨೬ ॥

ತತಸ್ತಾವೂಚತುಸ್ತತ್ರ ಬ್ರಹ್ಮಾಣಮಸುರೋಪಮೌ ।
ದೃಷ್ಟ್ವಾ ಯುಯುತ್ಸಾಸಂಕ್ರುದ್ಧೌ ರೋಷವ್ಯಾಕುಲಿತೇಕ್ಷಣೌ ॥ ೨೭ ॥

ಕಸ್ತ್ವಂ ಪುರುಷಮಧ್ಯಸ್ಥಃ ಸಿತೋಷ್ಣೀಷಶ್ಚತುರ್ಭುಜಃ ।
ಅನಾವಾಮಗಣಯನ್ಮೋಹಾದಾಸ್ಸೇ ತ್ವಂ ವಿಗತಸ್ಪೃಹಃ ॥ ೨೮ ॥

ಏಹ್ಯಾಗಚ್ಛಾವಯೋರ್ಯುದ್ಧಂ ದೇಹಿ ತ್ವಂ ಕಮಲೋದ್ಭವ ।
ಆವಾಭ್ಯಾಂ ಪರಮೇಶಾಭ್ಯಾಮಶಕ್ತಸ್ಸ್ಥಾತುಮರ್ಣವೇ ॥ ೨೯ ॥

ತತ್ರ ಕಶ್ಚ ಭವೇತ್ತುಭ್ಯಂ ಯೇನ ಚಾತ್ರ ನಿಯೋಜಿತಃ ।
ಕಸ್ಸ್ರಷ್ಟಾ ಕಶ್ಚತೇ ಗೋಪ್ತಾ ಕೇನ ನಾಮ್ನಾಭಿಧೀಯತೇ ॥ ೩೦ ॥

---

೨೬. ಎಲ್ಲಾ ಋಷಿಗಳನ್ನೂ, ದೇವತೆಗಳನ್ನೂ, ಪ್ರಪಂಚವನ್ನೂ, ಸೃಷ್ಟಿ ಮಾಡುತ್ತಿರುವ, ನೀರಿನ ಮಧ್ಯದಲ್ಲಿ ಆ ಪದ್ಮದಲ್ಲಿರುವ ಬ್ರಹ್ಮನನ್ನು ನೋಡಿ ಅವನ ಬಳಿಗೆ ಹೋದರು.

೨೭. ಕೊಬ್ಬಿರುವ, ಯುದ್ಧದ ಇಚ್ಛೆಯಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡಿರುವ ಆ ರಾಕ್ಷಸರು ಆ ಬ್ರಹ್ಮನನ್ನು ಕುರಿತು ಕೋಪದಿಂದ ಇಂತೆಂದರು.

೨೮. ಈ ಕಮಲದ ಮಧ್ಯಭಾಗದಲ್ಲಿ ಬಿಳಿಯ ಬಟ್ಟೆಯನ್ನು ತಲೆಗೆ ಸುತ್ತಿಕೊಂಡು ನಾಲ್ಕು ಕೈಗಳನ್ನು ಹೊಂದಿರುವ ನೀನಾರು? ಮೂಢತನದಿಂದ ನಮ್ಮನ್ನೂ ಲೆಕ್ಕಿಸದೆ ಜೀವದ ಮೇಲಿನ ಆಸೆಯನ್ನು ಬಿಟ್ಟು ಕುಳಿತಿರುವೆಯಲ್ಲ !

೨೯. ಎಲೈ ಕಮಲದಲ್ಲಿ ಹುಟ್ಟಿರುವ ಮನುಷ್ಯನೇ! ಎದ್ದು ಬಾ. ನಮಗೆ ಯುದ್ಧವನ್ನು ಕೊಡು. ನಾವು ಸ್ವತಂತ್ರರು, ಶಕ್ತರು ನಾವು ಬಂದಿರುವಾಗ ನೀನಿಂತು ಕುಳಿತಿರಲು ಸಾಧ್ಯವಾಗಲಾರದು.

೩೦. ನಿನಗೆ ಯಜಮಾನನಾರು? ನಿನಗೆ ಇಲ್ಲಿರುವಂತೆ ಅಪ್ಪಣೆಮಾಡಿರುವವ ರಾರು? ನಿನ್ನನ್ನು ಸೃಷ್ಟಿಮಾಡಿದವರಾರು? ನಿನಗೆ ರಕ್ಷಕರಾರು? ನಿನ್ನ ಹೆಸರೇನು?

॥ ಬ್ರಹ್ಮೋವಾಚ ॥

ಏಕ ಇತ್ಯುಚ್ಯತೇ ಲೋಕೇ ರವಿಸ್ತ್ವನ್ಯಃ ಸಹಸ್ರಭುಕ್ ।
ಯತ್ತತ್ಸಂಯೋಗವಂತಂ ಚ ಕರ್ಮ ನಾಮ್ನಾವಗಚ್ಛತೇ ॥ ೩೧ ॥

॥ ಮಧುಕೈಟಭಾವೂಚತುಃ ॥

ನಾವಯೋಃ ಪರಮಂ ಲೋಕೇ ಕಿಂಚಿದಸ್ತಿ ಮಹಾಮುನೇ ।
ಆವಾಭ್ಯಾಂ ಛಾದಿತಂ ವಿಶ್ವಂ ತಮಸಾ ರಜಸಾ ಚ ವೈ ॥ ೩೨ ॥

ರಜಸ್ತಮೋಮಯಾವಾವಾಮೃಷೀಣಾಮವಿಲಂಬಿತೌ ।
ಛಾದ್ಯಮಾನೌ ಧರ್ಮಶೀಲೌ ದುಸ್ತರೌ ಸರ್ವದೇಹಿನಾಂ ॥ ೩೩ ॥

ಆವಾಭ್ಯಾಂ ಮುಹ್ಯತೇ ಲೋಕೋ ದುಷ್ಕರಾಭ್ಯಾಂ ಯುಗೇ ಯುಗೇ ।
ಆವಾಮರ್ಥಶ್ಚ ಕಾಮಶ್ಚ ಯಜ್ಞಸ್ಸರ್ವಪರಿಗ್ರಹಃ ॥ ೩೪ ॥

---

೩೧. ಬ್ರಹ್ಮನು ಹೇಳಿದನು- ಯಾವನನ್ನು ಲೋಕದಲ್ಲಿ ಒಬ್ಬನೆಂದೇ ಹೇಳುತ್ತಾರೋ, ಸಹಸ್ರ ಕಿರಣಗಳುಳ್ಳ ಬೇರೆ ಸೂರ್ಯನೆಂದೆನ್ನುತ್ತಾರೋ ಅವನನ್ನು ಅವನು ಮಾಡುವ ಕೆಲಸದ ರೀತಿಯಿಂದ ಸಂಯೋಗವಂತನೆಂದು ಹೇಳುತ್ತಾರೆ.

೩೨. ಮಧುಕೈಟಭರು ಹೇಳಿದರು—ಎಲೈ ಋಷಿಯೇ! ನಮಗಿಂತಲೂ, ಉತ್ತಮವಾದುದು ಲೋಕದಲ್ಲಿ ಯಾವುದೂ ಇಲ್ಲ. ನಾವುಗಳು ತಮಸ್ಸಿನಿಂದಲೂ, ರಜಸ್ಸಿನಿಂದಲೂ, ಪ್ರಪಂಚವನ್ನು ಮುಚ್ಚಿದ್ದೇವೆ. ರಜಸ್ತಮೋಗುಣಗಳಿಂದ ಕೂಡ ಪ್ರಪಂಚವೇ ನಮಗೆ ಬೇಕು.

೩೩. ನಾವುಗಳು ರಜಸ್ತಮೋಗುಣಗಳಿಂದ ಕೂಡಿದ್ದೇವೆ. ನಾವುಗಳು ಋಷಿಗಳ ಧರ್ಮವನ್ನು ಜಾಗ್ರತೆಯಾಗಿ ಮುಚ್ಚುತ್ತೇವೆ. ಯಾವ ಪ್ರಾಣಿಯೂ ನಮ್ಮನ್ನು ಮೀರಲಾರವು. ಋಷಿಗಳ ಧರ್ಮಗಳನ್ನು ನಾಶಮಾಡುವುದೇ ನಮ್ಮ ಸ್ವಭಾವವು.

೩೪. ಜಯಿಸಲಸಾಧ್ಯರಾದ ನಮ್ಮಿಂದ ಪ್ರತಿಯುಗದಲ್ಲಿಯೂ, ಲೋಕವು ಮೋಹಗೊಳ್ಳುತ್ತದೆ. ನಾವೇ ಅರ್ಥ, ಕಾಮ, ಯಜ್ಞ, ದಾನವೆಲ್ಲವೂ ಆಗಿದ್ದೇವೆ.

ಸುಖಂ ಯತ್ರ ಮುದಾ ಯುಕ್ತಂ ಯತ್ರ ಶ್ರೀಃ ಕೀರ್ತಿರೇವ ಚ ।
ಯೇಷಾಂ ಯತ್ಕಾಂಕ್ಷಿತಂ ಕಿಂಚಿತ್ತತ್ತದಾನಾಂ ವಿಚಿಂತಯ ॥ ೩೫ ॥

॥ ಬ್ರಹ್ಮೋವಾಚ ॥

ಆವಾಭ್ಯಾಂ ಸಂಹಿತೌ ದೃಷ್ಟ್ವಾ ಯುವಾಂ ಪೂರ್ವಂ ಮಯಾ ಜಿತೌ ।
ತಂ ಸಮಾಧಾಯ ಗುಣವತ್ಸತ್ವೇ ಚಾಸ್ಮಿ ಸಮಾಶ್ರಿತಃ ॥ ೩೬ ॥

ಯಃ ಪರೋ ಯೋಗಮತಿನಾಂ ಯೋಽಕ್ಷರಃ ಸತ್ವಮೇವ ಚ ।
ರಜಸಸ್ತಮಸಶ್ಚೈವ ಯಸ್ಸ್ರಷ್ಟಾ ವಿಶ್ವಸಂಭವಃ ॥ ೩೭ ॥

ತತೋ ಭೂತಾನಿ ಜಾಯಂತೇ ಸಾತ್ವಿಕಾನೀತರಾಣಿ ಚ ।
ಸ ಏವ ಹಿ ಯುವಾಂ ನಾಶಂ ವಾಸುದೇವಃ ಕರಿಷ್ಯತಿ ॥ ೩೮ ॥

ಸ್ವಯಮೇವ ತತಶ್ಚಿರೇಮಾನ್ಬಹುಯೋಜನ ವಿಸ್ತೃತೌ ।
ಬಾಹೂ ನಾರಾಯಣೋ ಬ್ರಹ್ಮಾ ಕೃತವಾನಾತ್ಮಮಾಯಯಾ ॥ ೩೯ ॥

---

೩೫. ಸಂತೋಷದಿಂದ ಕೂಡಿರುವ ಸುಖ, ಸಂಪತ್ತು, ಕೀರ್ತಿ, ಯಾರಿಗೆ ಏನೇನು ಬೇಕಾಗುವುದೋ ಅವೆಲ್ಲವೂ ನಾವೆಂದು ತಿಳಿ.

೩೬. ಬ್ರಹ್ಮನು ಹೇಳಿದನು- ನೀವಿಬ್ಬರೂ ಕೂಡಿರುವುದನ್ನು ನೋಡಿಯೇ ನಾನು ಪೂರ್ವದಲ್ಲಿ ನಿಮ್ಮಿಬ್ಬರನ್ನೂ ಜಯಿಸಿದೆನು. ಅವನ್ನು ಅನುಭವದಿಂದ ತಿಳಿದು ಈಗ ಗುಣಪೂರಿತವಾದ ಸತ್ವವನ್ನಾಶ್ರಯಿಸಿದ್ದೇನೆ.

೩೭. ಯೋಗಿಗಳಲ್ಲಿ ಉತ್ತಮನಾದ, ನಾಶರಹಿತನಾದ, ಸತ್ವಗುಣವನ್ನು ಹೊಂದಿದ ರಜೋಗುಣ ತಮೋಗುಣಗಳನ್ನು ಸೃಷ್ಟಿಸಿದ ಸೃಷ್ಟಿಕರ್ತನೊಬ್ಬನಿರುವನು.

೩೮. ಆ ವಾಸುದೇವನಿಂದಲೇ ಪ್ರಾಣಿಗಳೂ, ಸಾತ್ವಿಕಾದಿ ಗುಣಗಳೂ ಹುಟ್ಟುತ್ತವೆ. ಆತನೇ ನಿಮ್ಮನ್ನು ನಾಶಮಾಡುತ್ತಾನೆ.

೩೯. ಅನಂತರ ಆ ನಾರಾಯಣನು ತನ್ನ ಮಾಯೆಯಿಂದ ತನ್ನ ತೋಳುಗಳು ಬಹು ಯೋಜನ ವಿಸ್ತಾರವಾಗುವಂತೆ ಬೆಳಸಿಕೊಂಡನು.

ಕೃಷ್ಯಮಾಣೌ ತತಸ್ತಸ್ಯ ಬಾಹೂನಾ ಬಾಹುಶಾಲಿನೌ ।
ಚೇರತುಸ್ತೌ ವಿಗಳಿತೌ ಶಕುನಾವಿವ ಧೀವರೌ ॥ ೪೦ ॥

ತತಸ್ತಾವೂಚತುರ್ಗತ್ವಾ ತತೋ ದೇವಂ ಸನಾತನಂ ।
ಪದ್ಮನಾಭಂ ಹೃಷೀಕೇಶಂ ಪ್ರಣಿಪತ್ಯ ನರಾವ್ರಭೌ ॥ ೪೧ ॥

ಜಾನೀವಸ್ತ್ವಾಂ ವಿಶ್ವಯೋನಿಂ ತ್ವಾಮೇಕಂ ಪುರುಷೋತ್ತಮಂ ।
ತ್ವನ್ಮಾಯಾಜಾತಿಹೇತುಸ್ತ್ವಮಿಮೌ ತೌ ಬುದ್ಧಿಕಾರಣೇ ॥ ೪೨ ॥

ಆವಯೋರ್ದರ್ಶನಂ ಸತ್ಯಂ ಯತಸ್ತ್ವಾಂ ವಿಸ್ಮಯಾನ್ವಿತಂ ।
ತತಸ್ತ್ವಮಭಿತೋ ದೇವ ತ್ವಯಾ ಹಿತಮರಿಂದಮ ॥ ೪೩ ॥

ಅಮೋಘದರ್ಶನಂ ಸಿದ್ಧಂ ಯುಸ್ತ್ವಾಂ ವಿದ್ವಶ್ಚ ಶಾಶ್ವತಂ ।
ತತಸ್ತ್ವಾಮಭಿತೋ ದೇವಾಃ ಕಾಂಕ್ಷಂತಿ ಪ್ರಸಮೀಕ್ಷಿತುಂ ॥ ೪೪ ॥

---

೪೦. ಆಗ ಬಾಹುಬಲವುಳ್ಳ ಇವರಿಬ್ಬರನ್ನೂ, ಆ ಸ್ವಾಮಿಯು ಎಳೆಯಲುಪ ಕ್ರಮಿಸಿದನು. ಹೀಗೆ ಎಳೆಯಲ್ಪಟ್ಟ ಅವರು ಬಲೆಯಲ್ಲಿ ಸಿಕ್ಕಿಬಿದ್ದ ಪಕ್ಷಿಗಳಂತೆ ಸುತ್ತುತ್ತಿದ್ದರು.

೪೧. ಅನಂತರ ಅವರಿಬ್ಬರೂ, ಪದ್ಮನಾಭನೂ ಹೃಷೀಕೇಶನೂ, ಸನಾತನನೂ ಆದ ಸ್ವಾಮಿಯ ಬಳಿಗೆ ಹೋಗಿ ನಮಸ್ಕರಿಸಿ ಇಂತೆಂದರು.

೪೨. ಎಲೈ ಸ್ವಾಮಿಯೇ! ನೀನು ಪ್ರಪಂಚದ ಸೃಷ್ಟಿಕರ್ತನೆಂಬುದನ್ನೂ ಏಕನೆಂಬುದನ್ನೂ, ಪುರುಷೋತ್ತಮನೆಂಬುದನ್ನೂ ಬಲ್ಲೆವು. ಈ ನಾವಿಬ್ಬರೂ ಕೂಡ ಬುದ್ಧಿಕಾರಣಗಳಲ್ಲಿ ನಿನ್ನ ಮಾಯೆಯು ಜಾತಿಕಾರಣ ಹೊಂದಿಲ್ಲವೆಂಬುದನ್ನೂ ಬಲ್ಲೆವು.

೪೩-೪೪. ನಾವಿಬ್ಬರೂ ನಿನ್ನನ್ನು ದರ್ಶನಮಾಡಿದ್ದೇವೆ. ನೀನು ಅದರಿಂದ ಆಶ್ಚರ್ಯಗೊಂಡಿದ್ದೀಯೆ. ಆದ್ದರಿಂದ ನೀನು ನಮಗೆ ಎಲ್ಲಾ ವಿಷಯದಲ್ಲಿಯೂ ಹಿತ ವನ್ನು ಮಾಡಬೇಕು. ನಿನ್ನ ದರ್ಶನ ಫಲವು ವ್ಯರ್ಥವಲ್ಲವೆಂದೂ, ನೀನು ಶಾಶ್ವತ ನೆಂದೂ ಬಲ್ಲೆವು. ಆದ್ದರಿಂದಲೇ ದೇವತೆಗಳು ನಿನ್ನನ್ನು ನೋಡಬೇಕೆಂದು ಅಪೇಕ್ಷಿ ಸುತ್ತಿರುವುದು.

ತಮಿಚ್ಛಾವೋ ವರಂ ದೇವ ತ್ವಯಾ ಹಿತಮರಿಂದಮ ।
ಅಮೋಘದರ್ಶನೋಽಸಿ ತ್ವಂ ನಮಸ್ತೇ ಸಮಿತಿಂಜಯ ॥ ೪೫ ॥

॥ ಶ್ರೀ ಭಗವಾನುವಾಚ ॥

ಕಿಮರ್ಥಂ ತದನುಬ್ರೂತಂ ವರಂ ಹ್ಯಸುರಸತ್ತಮೌ ।
ಗತಾಯುಷ್ಕೌ ಯುವಾಂ ಭೂಯೋಽಪ್ಯಹೋ ಜೀವಿತುಮಿಚ್ಛತಂ ॥ ೪೬ ॥

॥ ಮಧುಕೈಟಭಾವೂಚತುಃ ॥

ಯಸ್ಮಿನ್ನ ಕಶ್ಚಿನ್ಮೃತವಾನ್ನಾಸಂ ತಸ್ಮಿನ್ವರಂ ಪ್ರಭೋ ।
ಇಚ್ಛಾವಃ ಪುತ್ರತಾಂ ಚೈವ ಭವತಸ್ಸುಮಹಾತಪಃ ॥ ೪೭ ॥

॥ ಶ್ರೀ ಭಗವಾನುವಾಚ ॥

ಬಾಢಮೇತದ್ಯುವಾಂ ತಸ್ಮಾದ್ಭವಿಷ್ಯೌ ಕಲಿಸಂಭವೇ ।
ಭವಿಷ್ಯೇತಾಂ ನ ಸಂದೇಹಃ ಸತ್ಯಮೇತದ್ಬ್ರವೀಮಿ ವಾಂ ॥ ೪೮ ॥

---

೪೫. ಆದ್ದರಿಂದ ಎಲೈ ದೇವನೇ! ನೀನು ನಮಗೆ ಹಿತವಾದ ವರವನ್ನು ಕೊಡು. ನಿನ್ನ ದರ್ಶನವು ವ್ಯರ್ಥವಾಗುವುದಿಲ್ಲ. ಎಲೈ ಶತ್ರುಸಂಹಾರಕನೇ! ನಿನಗೆ ನಮಸ್ಕಾರವು.

೪೬. ಭಗವಂತನು ಹೇಳಿದನು—ಎಲೈ ಅಸುರಶ್ರೇಷ್ಠರೇ! ನಿಮಗೆ ಯಾವ ವರವು ಬೇಕೆಂಬುದನ್ನು ಹೇಳಿ. ನಿಮ್ಮಿಬ್ಬರಿಗೂ ಆಯುಸ್ಸು ಕಳೆದುಹೋಗಿದೆ. ಮತ್ತೆ ಜೀವಿಸಲು ಇಚ್ಛಿಸುತ್ತೀರಿ.

೪೭. ಮಧುಕೈಟಭರು ಹೇಳಿದರು—ಎಲೈ ಸ್ವಾಮಿಯೇ! ಎಲ್ಲಿ ಯಾರೊಬ್ಬರೂ ಸಾಯುವುದಿಲ್ಲವೋ ಅಲ್ಲಿರುವುದು ನಮಗೆ ಬೇಕಾದ ವರವು. ಆದ್ದರಿಂದ ಎಲೈ ತಪಸ್ವಿಯೇ! ನಿನಗೆ ಮಕ್ಕಳಾಗಿ ಆಗಬೇಕೆಂದು ಅಪೇಕ್ಷಿಸುತ್ತೇವೆ.

೪೮. ಭಗವಂತನು ಹೇಳಿದನು—ಹೌದು, ಹಾಗೇ ಆಗಲಿ. ನೀವಿಬ್ಬರೂ ಕಲಿಯ ಕಾಲದಲ್ಲಿರಬೇಕಾದವರು. ಆದ್ದರಿಂದ ಅವನ ಕಾಲದಲ್ಲಿ ಹುಟ್ಟುತ್ತೀರಿ. ಸಂದೇಹವಿಲ್ಲ, ಇದು ಸತ್ಯ.

ವರಂ ಪ್ರದಾಯಾಥ ಮಹಾಸುರಾಭ್ಯಾಂ ।
ಸನಾತನೋ ವಿಶ್ವವರಃ ಸುರೋತ್ತಮಃ ॥
ರಜಸ್ತಮಸ್ಕೌ ಚ ತದಾಂಜನೋಪಮೌ ।
ಮಮಂಥ ತಾವೂರು ತಲೇಮರಪ್ರಭುಃ ॥ ೪೯ ॥

ಹತ್ವಾ ತೌ ತಮುಲೇ ತಸ್ಮಿನ್ಯುದ್ಧೇ ಬ್ರಹ್ಮವಿದಾಂ ವರಃ
ಊರ್ಧ್ವಬಾಹುರ್ಮಹಾತೇಜಾಸ್ತಪೋ ಘೋರಂ ಸಮಾಶ್ರಿತಃ ॥ ೫೦ ॥

ಪ್ರಜ್ವಲನ್ನಿವ ತೇಜೋಭಿರ್ಭಾಸ್ವಾನಿವ ತಮೋನುದಃ ।
ಬಭಾಸೇ ಸತ್ಯಧರ್ಮಾತ್ಮಾ ಸಹಸ್ರಾಂಶುರಿವಾಂಶುಭಿಃ ॥ ೫೧ ॥

ಅಥಾನ್ಯದ್ರೂಪಮಾಸ್ಥಾಯ ಶಂಭುರ್ನಾರಾಯಣೋವ್ಯಯಃ ।
ಆಜಗಾಮ ಮಹಾತೇಜಾ ಯೋಗಾಚಾರ್ಯೋ ಮಹಾಯಶಾಃ ॥ ೫೨ ॥

ಸಾಂಖ್ಯಾಚಾರ್ಯಶ್ಚ ಮತಿಮಾನ್ಕಪಿಲೋ ಬ್ರಹ್ಮಣೋ ವರಃ ।
ಉಭಾವಪಿ ಮಹಾತ್ಮಾನೌ ಪೂರ್ವತಃ ಕ್ಷತ್ರತತ್ಪರೌ ॥ ೫೩ ॥

---

೪೯. ಸನಾತನನಾದ ಆ ಸ್ವಾಮಿಯು ಹೀಗೆ ಅವರಿಗೆ ವರವನ್ನು ಕೊಟ್ಟು ರಜಸ್ಸು ತಮಸ್ಸುಗಳಿಂದ ಕೂಡಿದ ಕಪ್ಪಗಿರುವ ಅವರನ್ನು ತೊಡೆಯ ಪ್ರದೇಶದಲ್ಲಿ ಹೊಡೆದುಕೊಂದನು.

೫೦. ಆ ಸ್ವಾಮಿಯು ಆ ತುಮುಲ ಯುದ್ಧದಲ್ಲಿ ಅವರಿಬ್ಬರನ್ನೂ ಕೊಂದು ಕೈಗಳನ್ನು ಮೇಲಕ್ಕೆತ್ತಿಕೊಂಡು ಘೋರವಾದ ತಪಸ್ಸನ್ನು ಮಾಡಲು ಮೊದಲು ಮಾಡಿದನು.

೫೧ ಕತ್ತಲೆಯನ್ನು ನಾಶಮಾಡುವ ಸೂರ್ಯನಂತೆ ಪ್ರಕಾಶಿಸುತ್ತಾ ಆ ಸೂರ್ಯ ನಂತೆಯೇ ಅನೇಕ ಕಿರಣಗಳನ್ನು ಹೊಂದಿದವನಾಗಿ ಪ್ರಕಾಶಿಸಿದನು.

೫೨. ಅವ್ಯಯನಾದ ಈ ನಾರಾಯಣನೇ ಬೇರೆಯ ರೂಪದಿಂದ ಯೋಗಾ ಚಾರ್ಯನಾಗಿ ತೇಜೋವಂತನಾಗಿ ಬೆಳಗಿ ಬಂದನು.

೫೩. ಬುದ್ಧಿವಂತನಾದ ಸಾಂಖ್ಯಾಚಾರ್ಯನೇ ಕಪಿಲನಾದನು. ಈ ಕಪಿಲನು ಬ್ರಹ್ಮನ ಅನಂತರ ಹುಟ್ಟಿದವನು. ಈ ಸಾಂಖ್ಯಾಚಾರ್ಯ ಯೋಗಾಚಾರ್ಯರಿಬ್ಬರೂ ಪುತ್ರಾ ತ್ಮರು. ಇವರಿಬ್ಬರೂ ಮೊದಲು ಒಬ್ಬರಿಗೊಬ್ಬರು ವಿರೋಧಿಗಳಾಗಿದ್ದರು.

ತೌ ವಿಪ್ರಾವೂಚತುಸ್ತತ್ರ ಬ್ರಹ್ಮಾಣ ಮಮಿತೌಜಸಂ ।
ಪರಾವರವಿಶೇಷಜ್ಞೌ ಪೂಜಿತೌ ಚ ಮಹರ್ಷಿಭಿಃ ॥ ೫೪ ॥

ಬ್ರಹ್ಮಾ ಚ ದೃಢಪಾದಶ್ಚ ವಿಶಾಲೌ ಜಗದಾಸ್ಥಿತೌ ।
ಗ್ರಾಮಣೀಸ್ಸರ್ವಭೂತಾನಾಂ ಬ್ರಹ್ಮಾ ತ್ರೈಲೋಕ್ಯಪೂಜಿತಃ ॥ ೫೫ ॥

ತಯೋಸ್ತದ್ವಚನಂ ಶ್ರುತ್ವಾ ವಿಪ್ರೋಹಾಗತಯೋಃ ಪುರಾ ।
ತ್ರೀನಿಮಾನ್ಕೃತವಾಂಲ್ಲೋಕಾನ್ಯಥೇಯಂ ಬ್ರಹ್ಮಣಶ್ರುತಿಃ ॥ ೫೬ ॥

ಪುತ್ರಂ ಸ್ವಯಂಭುವಂ ಚೈಕಂ ಸಮುತ್ಪಾದಿವಾನ್ನೃಷಿಃ ।
ತಸ್ಯಾಗ್ರೇ ಚಾಗ್ರತಸ್ತಸ್ಯ ಬ್ರಹ್ಮಾ ಮಾನಸಮವ್ಯಯಂ ॥ ೫೭ ॥

ಸೋತ್ಪನ್ನಮಾತ್ರೋ ಬ್ರಹ್ಮಾಣಮುಕ್ತವಾನ್ಮಾನಸಸ್ಸುತಃ ।
ಕಿಂಕುರ್ಮೋ ವದ ಸಾಹಾಯ್ಯಂ ಬ್ರವೀತು ಭಗವಾನಿತಿ ॥ ೫೮ ॥

॥ ಬ್ರಹ್ಮೋವಾಚ ॥

ಯ ಏಷ ಕಪಿಲೋ ಬ್ರಹ್ಮಾ ನಾರಾಯಣಪರಸ್ತಥಾ ।
ವದತೇ ಭಾವತಸ್ತಸ್ಯ ತತ್ಕುರುಷ್ವ ಮಹಾದ್ಯುತೇ ॥ ೫೯ ॥

---

೫೪. ಹಿಂದುಮುಂದನ್ನು ಬಲ್ಲ ಋಷಿಗಳಿಂದ ಪೂಜಿತರಾದ ಇವರು ಶಕ್ತನಾದ ಬ್ರಹ್ಮನನ್ನು ಕುರಿತು ಇಂತೆಂದರು.

೫೫-೫೬. ಬ್ರಹ್ಮನೂ ದೃಢಪಾದನೂ, ವಿಶಾಲವಾದ ಈಜಗತ್ತನ್ನು ಆಶ್ರಯಿಸಿ ಕೊಂಡಿರುವರು. ಸರ್ವಪ್ರಾಣಿಗಳಿಗೂ ಯಜಮಾನನಾಗಿ ಮೂರುಲೋಕದಿಂದಲೂ ಪೂಜಿತನಾದ ಬ್ರಹ್ಮನು ಜ್ಞಾನದಿಂದ ಬಂದು ಇಂತೆಂದು ಹೇಳಿದ ಅವರ ಮಾತನ್ನು ಕೇಳಿ ವೇದದಲ್ಲಿ ಹೇಳಿರುವ ರೀತಿಯಲ್ಲಿ ಈ ಲೋಕಗಳನ್ನು ಮೂರಾಗಿ ಸೃಷ್ಟಿಸಿದನು.

೫೭. ಆಗ ಆ ಪರಬ್ರಹ್ಮನು ಅವರ ಎದುರಿಗೆ ಸ್ವಯಂಭೂ ಎಂಬ ನಾಶರಹಿತ ನಾದ ಒಬ್ಬನನ್ನು ಮನಸ್ಸಿನಿಂದ ಸೃಷ್ಟಿಸಿದನು.

೫೮. ಸ್ವಯಂಭೂ ಬ್ರಹ್ಮನು ಹುಟ್ಟಿದೊಡನೆಯೇ ಪರಬ್ರಹ್ಮನನ್ನು ಕುರಿತು ನಿನಗೆ ನಾನೇನು ಸಹಾಯ ಮಾಡಬೇಕು? ಎಂದು ಕೇಳಿದನು.

೫೯. ಬ್ರಹ್ಮನು ಹೇಳಿದನು— ನಾರಾಯಣನಲ್ಲಿ ಆಸಕ್ತಿಯುಳ್ಳ ಈ ಕಪಿಲ ಬ್ರಹ್ಮನು ಹೇಳಿದಂತೆ ಅವನ ಅಭಿಪ್ರಾಯವನ್ನನುಸರಿಸಿ ನೀನು ಎಲ್ಲವನ್ನೂ ಮಾಡು.

ಬ್ರಾಹ್ಮಣಶ್ಚ ತದರ್ಥಂ ತು ತದಾ ಭೂಯಸ್ಸಮುತ್ಥಿತಃ ।
ಶುಶ್ರೂಷುರಸ್ಮಿ ಯುವಯೋಃ ಕಿಂ ಕರೋಮಿ ಕೃತಾಂಜಲಿಃ ॥ ೬೦ ॥

॥ ಭಗವಾನುವಾಚ ॥

ಯತ್ಸತ್ಯಮಕ್ಷರಂ ಬ್ರಹ್ಮ ಹ್ಯಷ್ಟಾದಶವಿಧಂ ತು ತತ್ ।
ಯತ್ಸತ್ಯಮಮೃತಂ ತತ್ತು ಪರಂಪದಮನುಸ್ಮರ ॥ ೬೧ ॥

ಏತದ್ವಚೋ ನಿಶಮ್ಯೈವ ಯಯೌ ಚ ದಿಶಮುತ್ತರಾಂ ।
ಗತ್ವಾ ತತ್ರ ಚ ಬ್ರಹ್ಮತ್ವಮಗಮಜ್ಜ್ಞಾನಚಕ್ಷುಷಾ ॥ ೬೨ ॥

ತತೋ ಬ್ರಹ್ಮಾ ಭುವನ್ನಾಮ ದ್ವಿತೀಯಮಸೃಜತ್ಪ್ರಭುಃ ।
ಸಂಕಲ್ಪಯಿತ್ವಾ ಮನಸಾ ತಮೇವ ಚ ಮಹಾಮನಾಃ ॥ ೬೩ ॥

ತತಸ್ಸೋಽಪ್ಯಬ್ರವೀದ್ವಾಕ್ಯಂ ಕಿಂ ಕರೋಮಿ ಪಿತಾಮಹ ।
ಪಿತಾಮಹಸಮಾಜ್ಞಾತೋ ಬ್ರಹ್ಮಾಣಂ ಸಮುಪಸ್ಥಿತಃ ॥ ೬೪ ॥

---

೬೦. ಅದಕ್ಕೋಸ್ಕರ ನಿನ್ನನ್ನು ಸೃಷ್ಟಿಸಿರುವೆನು, ಎನ್ನಲು ಆಗ ಸ್ವಯಂಭೂ ಬ್ರಹ್ಮನು ಎದ್ದು ಆ ಇಬ್ಬರು ಆಚಾರ್ಯರಿಗೂ ನಮಸ್ಕರಿಸಿ ಅಯ್ಯಾ, ! ನಿಮ್ಮಿಬ್ಬರಿಗೂ ಸೇವಕನಾಗಿದ್ದೇನೆ. ನಾನೇನು ಮಾಡಲಿ? ಎಂದು ಕೈ ಮುಗಿದುಕೊಂಡು ಕೇಳಿದನು.

೬೧. ಭಗವಂತನು ಹೇಳಿದನು—ಸತ್ಯವೂ, ನಾಶರಹಿತವೂ ಆದ ಬ್ರಹ್ಮವು ಹದಿನೆಂಟು ಬಗೆಯಾಗಿದೆ. ಸತ್ಯವಾದ, ಅಮೃತರೂಪವಾದ ಆ ಪರಮಪದವನ್ನು ಸ್ಮರಿಸು, ಎಂದನು.

೬೨. ಕಪಿಲನ ಈ ಮಾತನ್ನು ಕೇಳಿ ಉತ್ತರದಿಕ್ಕಿಗೆ ಹೋದನು. ಅಲ್ಲಿಗೆ ಹೋಗಿ ಜ್ಞಾನಚಕ್ಷುಸ್ಸಿನಿಂದ ಬ್ರಹ್ಮನನ್ನು ಧ್ಯಾನಿಸಿದನು.

೬೩. ಆನಂತರ ಬ್ರಹ್ಮನು ಭುವ ಎಂಬುವ ಎರಡನೆಯವನನ್ನು ಸೃಷ್ಟಿಸಿದನು. ಆವನನ್ನು ಸಂಕಲ್ಪಮಾತ್ರದಿಂದಲೇ ಸೃಷ್ಟಿಸಿದನು.

೬೪. ಆಗ ಆ ಭುವ ಬ್ರಹ್ಮನು ಎಲೈ ಪಿತಾಮಹನೇ! ನಾನೇನು ಮಾಡಲಿ? ಎಂದು ಕೇಳುತ್ತ ಆದಿಮೂರ್ತಿಯಾದ ಸ್ವಾಮಿಯ ಇಷ್ಟವನ್ನು ತಿಳಿದು ಬ್ರಹ್ಮನ ಬಳಿಗೆ ಬಂದನು.

ಬ್ರಾಹ್ಮಣಸ್ಯಾಮೃತರಸೋಽನುಭೂತೋ ಭವತೋ ಗತಿಃ ।
ಪ್ರಾಪ್ತಸ್ಸಪರಮಂ ಸ್ಥಾನಂ ಸದ್ಯೋಗಃ ಪಾರ್ಶ್ವತೋ ಗತಃ ॥ ೬೫ ॥

ತಸ್ಮಿನ್ನಪಿ ಗತೇ ಪುತ್ರೇ ತೃತೀಯಮಸೃಜತ್ಪ್ರಭುಃ ।
ಮೋಕ್ಷಪ್ರವೃತ್ತಿಕುಶಲಂ ಭೂರ್ಭುವಂ ನಾಮತೋ ವಿಭುಂ ॥ ೬೬ ॥

ಸೋಽಪಿ ತಂ ಧರ್ಮಮಾಸಾದ್ಯ ತಯೋರೇವಾಗಮದ್ಗತಿಂ ।
ಏವಂ ಪುತ್ರಾಸ್ತ್ರಯೋಽಪ್ಯೇತೇ ಭಕ್ತಾಶ್ಶಂಭೋರ್ಮಹಾತ್ಮನಃ ॥ ೬೭ ॥

ತಾನ್ಗೃಹೀತ್ವಾ ಸುತಾಂಸ್ತಸ್ಯ ಪ್ರಯಯೌ ಸ್ವಾರ್ಜಿತಾಂ ಗತಿಂ ।
ನಾರಾಯಣಶ್ಚ ಭಗವಾನ್ಕಪಿಲಶ್ಚ ಯತೀಶ್ವರಃ ॥ ೬೮ ॥

ಯಂ ಕಾಲಂ ತೌಗತೌ ಬ್ರಹ್ಮನ್ಬ್ರಹ್ಮಾ ತಂ ಕಾಲಮೇವ ಹ ।
ತಪ್ತ್ವೋ ಘೋರತಮಂ ಭೂಯಃ ಸಂಶ್ರಿತಃ ಪರಮಂ ಪದಂ ॥ ೬೯ ॥

---

೬೫. ಬ್ರಹ್ಮನ ಸಂಬಂಧವಾದ ಅಮೃತರಸವನ್ನು ಅನುಭವಿಸಿದನು. ಉತ್ತಮಸ್ಥಾನವು ಸಿಕ್ಕಿತು. ಒಳ್ಳೆಯ ಯೋಗವು ತನಗೆ ಕೈಗೂಡಿತು.

೬೬. ಆ ಮಗನು ಹೊರಟುಹೋಗುತ್ತಲೂ, ಮೋಕ್ಷದಲ್ಲಿ ಆಸೆಯುಳ್ಳ ಭೂರ್ಭುವನೆಂಬ ಮೂರನೆಯ ಮಗನನ್ನು ಸೃಷ್ಟಿಸಿದನು.

೬೭. ಅವನೂ ಹಿಂದಿನವರ ಧರ್ಮವನ್ನೇ ಹೊಂದಿ, ಹಿಂದಿನವರ ಸ್ಥಿತಿಯನ್ನೇ ಹೊಂದಿದನು. ಈ ರೀತಿ ಮೂರು ಜನ ಮಕ್ಕಳಾಗಿ ಆ ಪರಬ್ರಹ್ಮನಿಗೆ ಭಕ್ತರಾಗಿದ್ದರು.

೬೮-೬೯. ಈ ಬ್ರಹ್ಮನು ಆ ಮೂರು ಜನ ಮಕ್ಕಳನ್ನೂ ಕರೆದುಕೊಂಡು ತಾನು ತಪಸ್ಸಿನಿಂದ ಸಂಪಾದಿಸಿದ ಉತ್ತಮಗತಿಯನ್ನು ಹೊಂದಿದನು. ನಾರಾಯಣನೂ ಕಪಿಲನೂ ಇಬ್ಬರೂ ಯಾವ ಕಾಲಗತಿಯನ್ನು ಹೊಂದಿದರೋ ಅದೇ ಕಾಲಗತಿಯನ್ನೂ ಬ್ರಹ್ಮನೂ ಹೊಂದಿದನು. ಹೊಂದಿ ಅಷ್ಟು ಕಾಲವವರೆಗೂ ಮತ್ತೆ ಘೋರವಾದ ತಪಸ್ಸನ್ನು ಮಾಡಿ ಅದಕ್ಕಿಂತಲೂ ಉತ್ತಮ ಸ್ಥಾನವನ್ನು ಹೊಂದಿದನು.

ನ ರೇಮೇ ಸತತೋ ಬ್ರಹ್ಮಾ ಪ್ರಭುರೇಕಸ್ತಪಶ್ಚರನ್ ।
ಶರೀರಾರ್ಧಾತ್ತತೋ ಭಾರ್ಯಾಮುತ್ಪಾದಯತಿ ವಾ ಶುಭಂ ॥ ೭೦ ॥

ಆತ್ಮನಸ್ಸದೃಶಾನ್ಪುತ್ರಾನಸೃಜದ್ವೈ ಪಿತಾಮಹಃ ।
ವಿಶ್ವೇ ಪ್ರಜಾನಾಂ ಪತಯೋ ಯೋಗಿನೋ ಲೋಕವಿಶ್ರುತಾಃ ॥ ೭೧ ॥

ವಿಶ್ವೇಶಂ ಪ್ರಥಮಂ ತಾವದ್ದೇಹಾತ್ತಾಪಸಮಾತ್ಮನಃ ।
ಸರ್ವತ್ರ ಸಹಿತಂ ಪುಣ್ಯಂ ನಾಮ್ನಾ ಧರ್ಮಂ ಸ ಸೃಷ್ಟವಾನ್ ॥ ೭೨ ॥

ದಕ್ಷಂ ಮರೀಚಿಮತ್ರಿಂ ಚ ಪುಲಸ್ತ್ಯಂ ಪುಲಹಂ ಕ್ರತುಂ ।
ವಸಿಷ್ಠಂ ಗೌತಮಂ ಚೈವ ಭೃಗುಮಂಗಿರಸಂ ಮುನಿಂ ॥ ೭೩ ॥

ಅಥೈವ ಕೃತಕೃತ್ಯೇನ ಜ್ಞೇಯಾಸ್ತೇ ತು ಮಹರ್ಷಯಃ ।
ತ್ರಯೋದಶಗುಣಾರಂಭಾಃ ಯೇ ವಂಶಾತ್ತು ಮಹರ್ಷಿಣಾಂ ॥ ೭೪ ॥

---

೭೦. ಅಲ್ಲಿದ್ದುಕೊಂಡೂ ಆ ಬ್ರಹ್ಮನು ಸಂತೋಷಿಸದೆ ಮತ್ತೂ ಒಬ್ಬನೇ ತಪಸ್ಸು ಮಾಡಿದನು. ಆಗ ಅವನ ಅರ್ಧ ಶರೀರದಿಂದ ಒಬ್ಬಳು ಒಳ್ಳೆಯ ಹೆಂಡತಿಯನ್ನೂ ಸೃಷ್ಟಿಸಿಕೊಂಡನು.

೭೧. ಆ ಬ್ರಹ್ಮನು ತನ್ನಂತೆಯೇ ಇರುವ ಮಕ್ಕಳನ್ನು ಹುಟ್ಟಿಸಿದನು. ಅವರೂ ಕೂಡ ಸಮಸ್ತ ಪ್ರಜೆಗಳಿಗೂ ಒಡೆಯರಾಗಿ ಯೋಗಿಗಳಾಗಿ ಲೋಕ ಪ್ರಸಿದ್ಧರಾದರು.

೭೨. ಮೊದಲು ತನ್ನ ದೇಹದಿಂದ ತಪಸ್ವಿಯಾದ, ಎಲ್ಲರಿಗೂ ಹಿತವನ್ನು ಕೋರುವ ಧರ್ಮನೆಂಬ ಮಗನನ್ನು ಹುಟ್ಟಿಸಿದನು.

೭೩. ಅನಂತರ ದಕ್ಷ, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಗೌತಮ, ಭೃಗು, ಅಂಗಿರಸ ಎಂಬ ಮುನಿಗಳನ್ನು ಸೃಷ್ಟಿಸಿದನು.

೭೪. ಅವರೆಲ್ಲರೂ ತಪಸ್ಸು ಮಾಡಿದುದರಿಂದ ಅವರು ಮಹರ್ಷಿಗಳೆಂದೆನ್ನಿಸಿಕೊಂಡರು. ಆದ್ದರಿಂದ ಅವರ ವಂಶವು ಹದಿಮೂರು ಗುಣಗಳಿಂದ ಕೂಡಿ ಮೆರೆಯುತ್ತಿರುವುದು.

ಅದಿತಿರ್ದಿತಿರ್ದನುಃ ಕಾಲಾ ಅನಾಯುಃ ಸಿಂಹಿಕಾ ಮುನೀ ।
ಪ್ರಾಚೀ ಕ್ರೋಧಾಥ ಪರಮಾ ವಿನತಾ ಕದ್ರುರೇವ ಚ ॥ ೭೫ ॥

ದಕ್ಷಸ್ಯಾಪತ್ಯಮೇತದ್ವೈ ಕನ್ಯಾ ದ್ವಾದಶ ಪಾರ್ಥಿವ । ॥ ೭೬ ॥

ಮರೀಚೇಃ ಕಶ್ಯಪಃ ಪುತ್ರಃ ತಪಸಾ ನಿರ್ಮಿತಃ ಕಿಲ ।
ತಸ್ಮೈ ಕನ್ಯಾದ್ವಾದಶಕಂ ದಕ್ಷಸ್ತಾಶ್ಚಾನ್ವಮನ್ಯತ ॥ ೭೭ ॥

ನಕ್ಷತ್ರಾಣಿ ಚ ಸೋಮಾಯ ತಥಾ ವೈ ದತ್ತವಾನ್ನೃಷಿಃ ।
ರೋಹಿಣ್ಯಾದೀನಿ ಸರ್ವಾಣಿ ಪುಣ್ಯಾನಿ ಕುರುನಂದನ ॥ ೭೮ ॥

ತಥೈವ ದಶ ಧರ್ಮಾಯ ದತ್ತಾಶ್ಚಾಪಿ ಮನೋರಮಾಃ ।
ಲಕ್ಷ್ಮೀಸ್ಸರಸ್ವತೀಸ್ಸಂಧ್ಯಾ ವಿಶೇಷಾ ಚ ಮತಾ ಶುಭಾ ॥ ೭೯ ॥

ದೇವೀ ಸರಸ್ವತೀ ಚೈವ ಬ್ರಹ್ಮಣಾ ನಿರ್ಮಿತಾ ಪುರಾ ।
ಏತಾಃ ಪಂಚ ವರಿಷ್ಠಾ ವೈ ಸುರಶ್ರೇಷ್ಠಾಶ್ಚ ಪಾರ್ಥಿವ ॥ ೮೦ ॥

---

೭೫-೭೬. ಅದಿತಿ, ದಿತಿ, ದನು, ಕಾಲೆ, ಅನಾಯು, ಸಿಂಹಿಕೆ, ಮುನೀ, ಪ್ರಾಚೀ, ಕ್ರೋಧೆ, ಪರಮೆ, ವಿನತೆ, ಕದ್ರು, ಉಂಬದಾಗಿ ದಕ್ಷಬ್ರಹ್ಮನಿಗೆ ಹನ್ನೆರಡು ಜನ ಹೆಣ್ಣುಮಕ್ಕಳಾದರು.

೭೭. ಮರೀಚಿ ಬ್ರಹ್ಮನು ತನ್ನ ತಪಶ್ಶಕ್ತಿಯಿಂದ ಕಶ್ಯಪನೆಂಬ ಮಗನನ್ನು ಸೃಷ್ಟಿಸಿದನು. ದಕ್ಷನು ಆ ಕಶ್ಯಪನಿಗೆ ಆ ಹನ್ನೆರಡು ಜನ ಮಕ್ಕಳನ್ನೂ ಕೊಟ್ಟು ಮದುವೆ ಮಾಡಿದನು.

೭೮. ಅಂತೆಯೇ ಆ ದಕ್ಷನು ರೋಹಿಣಿಯೇ ಮುಂತಾದ ಪುಣ್ಯರೂಪಿಣಿಯರಾದ ಇಪ್ಪತ್ತೇಳು ನಕ್ಷತ್ರಗಳನ್ನೂ ಚಂದ್ರನಿಗೆ ಕೊಟ್ಟನು.

೭೯. ಮತ್ತೂ ಮತ್ತೆ ಹತ್ತು ಜನ ಹೆಣ್ಣು ಮಕ್ಕಳನ್ನು ಧರ್ಮನಿಗೆ ಕೊಟ್ಟು ಮದುವೆ ಮಾಡಿದನು. ಲಕ್ಷ್ಮೀ, ಸರಸ್ವತಿ, ಸಂಧ್ಯೆ, ವಿಶೇಷೆ, ಶುಭೆ ಎಂಬವರು ಉತ್ಕೃಷ್ಟರು.

೮೦. ಮೊದಲು ಒಬ್ಬಳು ಸರಸ್ವತೀದೇವಿಯನ್ನು ಬ್ರಹ್ಮನು ಸೃಷ್ಟಿಸಿದನು. ಅಂತೂ ಲಕ್ಷ್ಮಿ, ಸರಸ್ವತಿ, ಸಂಧ್ಯೆ, ವಿಶೇಷೆ, ಶುಭೆ ಎಂಬ ಐವರೂ ಉತ್ಕೃಷ್ಟರು.

ದತ್ತಾ ಧರ್ಮಾಯ ಭದ್ರಂ ತೇ ಬ್ರಹ್ಮಣಾ ದೃಷ್ಟಕರ್ಮಣಾ ।
ಯಾ ರೂಪಾರ್ಧವತೀ ಪತ್ನೀ ಬ್ರಹ್ಮಣಃ ಕಾಮರೂಪಿಣೀ ॥ ೮೧ ॥

ಸುರಭಿಸ್ಸಹಸಾ ಭೂತ್ವಾ ಬ್ರಹ್ಮಾಣಂ ಸಮುಪಸ್ಥಿತಾ ।
ತತಸ್ತಾಮಗಮದ್ಬ್ರಹ್ಮಾ ಮೈಥುನಂ ಲೋಕಪೂಜಿತಃ ॥ ೮೨ ॥

ಲೋಕಸರ್ಜನಹೇತುಜ್ಞೋ ಗಮನಾರ್ಥಾಯ ಸತ್ತಮಃ ।
ಜಜ್ಞೇ ಚೈಕಾದಶಸುತಾನ್ವಿಪುಲಾನ್ಧರ್ಮ ಸಂಜ್ಞಿತಾನ್ ॥ ೮೩ ॥

ರಕ್ತಸಂಧ್ಯಾಭ್ರಸಂಕಾಶಾಂಸ್ತದಹಸ್ತಿಗ್ಮತೇಜಸಃ ।
ತೇ ರುದಂತೋ ದ್ರವಂದಶ್ಚ ಗರ್ಭವಂತಃ ಪಿತಾಮಹಾತ್ ॥ ೮೪ ॥

ರೋದನಾದ್ರವಣಾಚ್ಚೈವ ರುದ್ರಾಶ್ಚ ಇತಿ ತೇ ಸ್ಮೃತಾಃ ।
ನಿರ್ಋತಿಶ್ಚೈವ ಸಂಘಶ್ಚ ತೃತೀಯಶ್ಚಾಪ್ಯಯೋನಿಜಃ ॥ ೮೫ ॥

ಮೃಗವ್ಯಾಧಃ ಕಪರ್ದೀ ಚ ಮಹಾವಿಶ್ವೇಶ್ವರಶ್ಚ ಯಃ ।
ಅಹಿರ್ಬುಧ್ನಶ್ಚ ಭಗವಾನ್ಕಪಾಲೀ ಚೈವ ಪಿಂಗಳಃ ॥ ೮೬ ॥

---

೮೧-೮೨. ಬ್ರಹ್ಮನು ತನ್ನ ಅರ್ಧ ಶರೀರದಿಂದ ಸೃಷ್ಟಿಸಿದ ಇಚ್ಛಾರೂಪವನ್ನು ಹೊಂದುವ ಆ ಬ್ರಹ್ಮನ ಹೆಂಡತಿಯು ಸುರಭಿಯಾಗಿ (ಕಾಮಧೇನು) ಬ್ರಹ್ಮನ ಒಳಿಗೆ ಒಂದಳು. ಆಗ ಬ್ರಹ್ಮನು ಅವಳಲ್ಲಿ ರಮಿಸಿದನು

೮೩. ಲೋಕಸೃಷ್ಟಿಯಲ್ಲಿ ಕಾರಣವನ್ನು ಬಲ್ಲ ಆ ಬ್ರಹ್ಮನು ಪ್ರಪಂಚದಲ್ಲಿ ಗೋವುಗಳಿಗೋಸ್ಕರ ಧರ್ಮವೆಂದು ಹೆಸರುಳ್ಳ ಹನ್ನೊಂದು ಜನ ಮಕ್ಕಳನ್ನು ಆ ಸುರಭಿಯಲ್ಲಿ ಪಡೆದನು.

೮೪ ಅವರೆಲ್ಲರೂ ಸಾಯಂಕಾಲದ ಮೋಡಗಳಂತಿದ್ದು ಕ್ರೂರವಾದ ತೇಜಸ್ಸಿನಿಂದ ಕೂಡಿದವರಾಗಿದ್ದರು. ಪಿತಾಮಹನಿಂದ ಹುಟ್ಟಿದ ಇವರು ಅಳುತ್ತಾ ಓಡಲು ಮೊದಲಿಟ್ಟರು. ಹೀಗೆ ಅಳುತ್ತ ಓಡುತ್ತಿದ್ದುದರಿಂದ ಇವರನ್ನು ರುದ್ರರು ಎಂಬುದಾಗಿ ತಿಳಿಯಬೇಕು

೮೫-೮೬. ನಿರ್ಋತಿ, ಸಂಘ, ಅಯೋನಿಜ, ಮೃಗವ್ಯಾಧ, ಕಪರ್ದೀ, ಮಹಾವಿಶ್ವೇಶ್ವರ, ಅಹಿರ್ಬುಧ್ನ್ಯ, ಕಪಾಲಿ, ಪಿಂಗಳ, ಸೇನಾನಿ, ಮಹಾತೇಜ ಎಂಬುದಾಗಿ

ಸೇನಾನೀಶ್ಚ ಮಹಾತೇಜಾ ರುದ್ರಾ ಏಕಾದಶ ಸ್ಮೃತಾಃ ।
ತಸ್ಯಾಮೇವಂ ಸುರಭ್ಯಾಂ ಚ ಗಾವೋ ಯಜ್ಞಾ ಸುರಾಶ್ಚ ವೈ ॥ ೮೭ ॥

ಅಕೃಷ್ಟಾಶ್ಚ ತಥಾ ಮಾಷಾಃ ಸುಕೃಷ್ಟಾಶ್ಚ ಸುಪುಷ್ಕರಾಃ ।
ಅಜಶ್ಚೈವ ತು ಹಂಸಶ್ಚ ತಥೈವಾಸೂತ ಸತ್ತಮಃ ॥ ೮೮ ॥

ಓಷಧ್ಯಃ ಪ್ರವರಾ ಯಾಶ್ಚ ಸುರಭ್ಯಶ್ಚ ಸಮುತ್ಥಿತಾಃ ।
ಧರ್ಮಂ ಲಕ್ಷ್ಮೀಂ ತಥಾ ಸೋಮಂ ಸಂಧ್ಯಾಂ ಸಂಧ್ಯಾ ವ್ಯಜಾಯತ ॥ ೮೯ ॥

ಭವಂ ಚ ಪ್ರಭವಂ ಚೈವ ಕೃಶಾಶ್ವಂ ಸುವಹಂ ತಥಾ ।
ಅರುಣಂ ವರುಣಂ ಚೈವ ವಿಶ್ವಾಮಿತ್ರಚಲಧ್ರುವೌ ॥ ೯೦ ॥

ಹವಿಷ್ಮತಂ ತನೂಜಂ ಚ ವಿಧಾನಾಭಿಮತಾವಪಿ ।
ವತ್ಸರಂ ಚೈವ ಭೂತಿಂ ಚ ಸರ್ವಾಸುರನಿಷೂದನಂ ॥ ೯೧ ॥

ಸುಪರ್ವಾಣಂ ಬೃಹತ್ಕಾಂತಂ ಮಹಾಲೋಕನಮಸ್ಕೃತಂ ।
ವಾಸವಾನುಗತಾ ದೇವೀ ಜನಯಾಮಾಸ ವೈ ಸುರಾನ್ ॥ ೯೨ ॥

---

ರುದ್ರರು ಹನ್ನೊಂದು ಜನರಾದರು. ಆ ಸುರಭಿಯಲ್ಲಿ ಹೀಗೆಯೇ ದೇವತೆಗಳೂ, ಯಜ್ಞಗಳೂ, ಪಶುಗಳೂ, ಸೃಷ್ಟವಾದುವು.

೮೮. ಅಂತೆಯೇ ಮಾಷ (ಉದ್ದು) ಮೊದಲಾದ ಧಾನ್ಯಗನ್ನೂ, ಸೃಷ್ಟಿಸಿದನು. ಪುಷ್ಕರ (ಕೊಳಗಳು) ಇವನ್ನು ಮಾಡಿದನು. ಮತ್ತೆ ಅಜಹಂಸರೆಂದು ಮತ್ತಿಬ್ಬರನ್ನೂ ಹುಟ್ಟಿಸಿದನು.

೮೯. ಓಷಧಿಯಲ್ಲಿ ಉತ್ತಮವಾದವುಗಳೆಲ್ಲಾ ಈ ಸುರಭಿಯಿಂದ ಉತ್ಪನ್ನವಾದುವು. ಧರ್ಮ, ಲಕ್ಷ್ಮಿ. ಸೋಮ, ಸಂಧ್ಯೆ, ಇವರು ಸಂಧ್ಯೆಯಲ್ಲಿ ಹುಟ್ಟಿದರು.

೯೦-೯೨. ಭವ, ಪ್ರಭವ, ಕೃಶಾಶ್ವ, ಸುವಹ, ಅರುಣ, ವರುಣ, ವಿಶ್ವಾಮಿತ್ರ, ಚಲಧ್ರುವ, ಹವಿಷ್ಮಂತ, ವಿಧಾನ, ಅಭಿಮತ, ವತ್ಸರ, ಭೂತಿ, ಸುಪರ್ವಾಣ, ಬೃಹತ್ಕಾಂತ, ಇವರನ್ನು, ವಾಸವನನ್ನು ಹೊಂದಿದ ದೇವಿಯು ಹೆತ್ತಳು.

ಧರಂ ವೈ ಪ್ರಥಮಂ ದೇವಂ ದ್ವಿತೀಯಂ ಕ್ರತುಮವ್ಯಯಂ ।
ವಿಶ್ವಾವಸುಂ ತೃತೀಯಂ ಚ ಚತುರ್ಥಂ ಸೋಮಮೀಶ್ವರಂ ॥ ೯೩ ॥

ತತೋ ಸ್ವರೂಪಮಾಯಾಂ ಚ ಯಮಸ್ತಸ್ಮಾದನಂತರಂ ।
ಸಪ್ತಮಶ್ಚ ತತೋ ವಾಯುರಷ್ಟಮಂ ನಿರ್ಋತಿಂ ವಸುಂ ॥ ೯೪ ॥

ಧರ್ಮಸ್ಯಾಪತ್ಯಮೇತದ್ವೈ ಸುರಭ್ಯಾಂ ತದಜಾಯತ ।
ವಿಶ್ವೇದೇವಾಶ್ಚ ವಿಶ್ವಾಯಾಂ ಧರ್ಮಜಾತಾ ಇತಿ ಸ್ಮೃತಾಃ ॥ ೯೫ ॥

ದಕ್ಷಶ್ಚೈವ ಮಹಾಬಾಹುಃ ಪುಷ್ಕರಶ್ಚ ನರೇಶ್ವರಃ ।
ಚಾಕ್ಷುಷಶ್ಚ ಮನುಶ್ಚಾತ್ರ ತಥಾ ತತ್ರ ಮಹೋರಗಾಃ ॥ ೯೬ ॥

ವಿಶ್ವಾನುಗವಸುರ್ಬಾಲೋ ನಿಷ್ಕಲಶ್ಚ ಮಹಾಯಶಾಃ ।
ರುರುದಶ್ಚಾತಿಸತ್ಯೌಜಾ ಭಾಸ್ಕರಃ ಪರಮದ್ಯುತಿಃ ॥ ೯೭ ॥

ವಿಶ್ವಾನ್ದೇವಾನ್ದೇವಮಾತಾ ವಿಶ್ವೇಷಾಂ ಜನಯತ್ಸುತಾನ್ ।
ಮರುತ್ವತೀ ಮರುತ್ವತೋ ದೇವಾನಜನಯತ್ಸುತಾನ್ ॥ ೯೮ ॥

ಅಗ್ನಿಶ್ಚಕ್ಷುರಿತಿ ಜ್ಯೋತಿಃ ಸಾವಿತ್ರೀ ಮಿತ್ರ ಏವ ಚ ।
ಅಮರಂ ಶರವೃಷ್ಟೀಚ ಸುವರ್ಷಂ ಚ ಮಹಾಭುಜಂ ॥ ೯೯ ॥

---

೯೩-೯೫. ಧರ, ಕ್ರತು, ವಿಶ್ವಾವಸು, ಸೋಮ, ಗಂಡಸಿನ ರೂಪವಾದ ಮಾಯೆ, ಯಮ, ವಾಯು, ನಿರ್ಋತಿ, ವಸು ಇಷ್ಟು ಜನರೂ ಧರ್ಮನಿಂದ ಸುರಭಿಯಲ್ಲಿ ಹುಟ್ಟಿದರು. ವಿಶ್ವೆ ಎಂಬುವಳಲ್ಲಿ ವಿಶ್ವೇದೇವರು ಧರ್ಮನಿಂದಲೇ ಹುಟ್ಟಿದರು.

೯೬-೯೮. ದಕ್ಷ, ಪುಷ್ಕರ, ಚಾಕ್ಷುಷಮನು, ಅಂತೆಯೇ ಮಹೋರಗರು, ವಿಶ್ವ, ವಸು, ನಿಷ್ಕಲ, ರುರುದ, ಸತ್ಯೌಜ, ಭಾಸ್ಕರ, ವಿಶ್ವೇದೇವರು, ಇವರನ್ನು ದೇವಮಾತೆಯಾದ ಅದಿತಿಯು ಹೆತ್ತಳು. ಮರುತ್ವತಿಯು ಮರುತ್ಪುತ್ರರನ್ನು ಹಡೆದಳು.

೯೯-೧೦೩. ಅಗ್ನಿಯು ಚಕ್ಷುರೆಂಬ ಜ್ಯೋತಿಸ್ಸನ್ನೂ, ಸಾವಿತ್ರಿಯು ಮಿತ್ರನನ್ನೂ ಪ್ರಸವಿಸಿದರು. ಅಮರ, ಶರವೃಷ್ಟಿ, ಸುವರ್ಷ, ವಿರಾಜ, ರಾಜ, ವಿಶ್ವಾಯು,

ವಿರಾಜಂ ಚೈವ ರಾಜಂ ಚ ವಿಶ್ವಾಯುಂ ಸುಮತಿಂ ತಥಾ ।
ಅಶ್ವಗಂಧಂ ಚಿತ್ರರಶ್ಮಿಂ ತಥಾ ಚ ನಿಷಧಂ ನೃಪಂ ॥ ೧೦೦ ॥

ಭೂಯ ಏವಂ ಚಾತ್ಮವಿಧಿಂ ಚಾರಿತ್ರಂ ಪಾದಮಾತ್ರಗಂ ।
ಬೃಹಂತಂ ವೈ ಬೃಹದ್ರೂಪಂ ತಥಾ ವಿಷ್ಣು ಸನಾಭಿಗಂ ॥ ೧೦೧ ॥

ಮರುತ್ವತೀ ಪ್ರಜಾ ಜಜ್ಞೇ ಏತಂ ವೈ ಮರುತಾಂ ಗಣಂ ।
ಅದಿತಿಃ ಕಶ್ಯಪಾಜ್ಜಜ್ಞೇ ಆದಿತ್ಯಾನ್ದ್ವಾದಶೈವ ಹಿ ॥ ೧೦೨ ॥

ಇಂದ್ರೋ ವಿಷ್ಣುರ್ಭಗಸ್ತ್ವಷ್ಟಾ ವರುಣೋಂಶೋರ್ಯಮಾ ರವಿಃ ।
ಪೂಷಾ ಮಿತ್ರಶ್ಚ ವರದೋ ಧಾತಾ ಪರ್ಜನ್ಯ ಏವ ಚ ॥ ೧೦೩ ॥

ಇತ್ಯೇತೇ ದ್ವಾದಶಾದಿತ್ಯಾ ವರಿಷ್ಠಾ ಸ್ತ್ರಿದಿವೌಕಸಾಂ ।
ಆದಿತ್ಯಸ್ಯ ಸರಸ್ವತ್ಯಾಂ ಜಜ್ಞಾತೇ ದ್ವೌಸುತೌ ವರೌ ॥ ೧೦೪ ॥

ತಪಶ್ರೇಷ್ಠೌ ಗುಣಶ್ರೇಷ್ಠೌ ತ್ರಿದಿವಸ್ಯಾಪಿ ಸಮ್ಮತೌ ।
ದನುಸ್ತು ದಾನವಾಞ್ಜಜ್ಞೇ ದಿತಿರ್ದೈತ್ಯಾನಜೀಜನತ್ ॥ ೧೦೫ ॥

ಕಾಲಾ ತು ಕಾಲಕೇಯಾಂಸ್ತು ಅಸುರಾನ್ರಾಕ್ಷಸಾಂಸ್ತಥಾ ।
ಅನಾಯುಷಾಯಾನ್ತನಯೋ ಮಯೋ ನಾಮ ಮಹಾಬಲಃ ॥ ೧೦೬ ॥

---

ಸುಮತಿ, ಅಶ್ವಗಂಧ, ಚಿತ್ರರಶ್ಮಿ, ನಿಷಧ, ಆತ್ಮವಿಧಿ, ಚಾರಿತ್ರ, ಪಾದಮಾತ್ರಗ, ಬೃಹಂತ, ಬೃಹದ್ರೂಪ, ವಿಷ್ಣುಸನಾಭಿಗ ಈ ಮರುದ್ಗಣಗಳನ್ನು ಮರುತ್ವತಿಯು ಹೆತ್ತಳು. ಅದಿತಿಯು ಕಶ್ಯಪನಿಂದ ಹನ್ನೆರಡು ಜನ ಆದಿತ್ಯರನ್ನೂ ಹಡೆದಳು.

೧೦೩. ಇಂದ್ರ, ವಿಷ್ಣು, ಭಗ, ತ್ವಷ್ಟಾ, ವರುಣ, ಅಂಶ, ಅರ್ಯಮಾ, ರವಿ, ಪೂಷಾ, ಮಿತ್ರ, ಧಾತ, ಪರ್ಜನ್ಯ ಇವರುಗಳು ಹನ್ನೆರಡು ಜನರು ಆದಿತ್ಯರುಗಳು. ದೇವತೆಗಳಲ್ಲಿ ಇವರು ಶ್ರೇಷ್ಠರು.

೧೦೪. ಆದಿತ್ಯನಿಗೆ ಸರಸ್ವತಿಯಲ್ಲಿ ಇಬ್ಬರು ಮಕ್ಕಳಾದರು. ಅವರು ತಪಸ್ಸು ಗುಣಗಳಲ್ಲಿ ಶ್ರೇಷ್ಠರಾಗಿ ದೇವಲೋಕಕ್ಕೆ ಪ್ರೀತಿಪಾತ್ರರಾಗಿದ್ದರು.

೧೦೫-೧೦೬. ದನುವಿಗೆ ದಾನವರೂ, ದಿತಿಗೆ ದೈತ್ಯರೂ, ಕಾಲೆಗೆ ಕಾಲೇಯರೂ, ಅಸುರರೂ, ರಾಕ್ಷಸರೂ, ಅನಾಯುಷೆಗೆ ಮಯನೂ ಮಕ್ಕಳಾದರು.

ಸಿಂಹಿಕಾ ಗ್ರಹಮಾತಾ ವೈ ಗಂಧರ್ವಜನನೀ ಶುನೀ ।
ಪ್ರಾಚೀತ್ವಪ್ಸರಸಾಂ ಮಾತಾ ಪುಣ್ಯಾನಾಂ ಭಾರತೇಽಭವತ್ ॥ ೧೦೭ ॥

ಕ್ರೋಧಾಯಾಸ್ಸರ್ವಭೂತಾನಿ ಪಿಶಾಚಾಯಾಶ್ಚ ಪಾರ್ಥಿವ ।
ಜಜ್ಞೇ ಯಕ್ಷಗಣಾಂಶ್ಚೈವ ರಾಕ್ಷಸಾಂಶ್ಚ ವಿಶಾಂಪತೇ ॥ ೧೦೮ ॥

ಚತುಷ್ಪಾದಾನಿ ಸತ್ವಾನಿ ಏತಾ ಗಾಶ್ಚೈವ ಸೌರಭೀಃ ।
ಸುಪರ್ಣಂ ಪಕ್ಷಿಣಶ್ಚೈವ ಮಾಯಾಂ ವಿಷ್ಣುರ್ಹರಿಃ ಪ್ರಭುಃ
ಕಥಿತಸ್ತೇನ-ಪೂರ್ವೇಣ ಸಂಸ್ತುತಶ್ಚ ಮಹರ್ಷಿಭಿಃ ॥ ೧೦೯ ॥

ಯಶ್ಚೇದಮಗ್ರ್ಯಂ ಶೃಣುಯಾತ್ಪುರಾಣಂ ।
ಸದಾ ನರಃ ಪರ್ವಸುಚೇತ್ಪಠೇತ್ ॥
ಅವಾಪ್ಯ ಲೋಕಂ ಸಹ ವೀತರಾಗಃ ।
ಪರತ್ರ ಚ ಸ್ವರ್ಗಫಲಾನಿ ಭುಂಕ್ತೇ ॥ ೧೧೦ ॥

ಚಕ್ಷುಷಾ ಮನಸಾ ವಾಚಾ ಕರ್ಮಣಾ ಚ ಚತುರ್ವಿಧಂ ।
ಪ್ರಸಾದಯತಿ ಯಃ ಕೃಷ್ಣಂ ತಸ್ಯ ಕೃಷ್ಣಃ ಪ್ರಸೀದತಿ ॥ ೧೧೧ ॥

---

೧೦೭. ಸಿಂಹಿಕೆಗೆ ಗ್ರಹರೂ, ಶುನಿಗೆ ಗಂಧರ್ವರೂ, ಪ್ರಾಚಿಗೆ ಅಪ್ಸರರೂ, ಪುಣ್ಯಜನಗಳೂ ಮಕ್ಕಳಾದರು.

೧೦೮. ಕ್ರೋಧೆಗೆ ಎಲ್ಲಾ ಪ್ರಾಣಿಗಳೂ, ಪಿಶಾಚಿಗೆ ಯಕ್ಷಸರೂ, ರಾಕ್ಷಸರೂ, ಮಕ್ಕಳಾದರು

೧೦೯. ನಾಲ್ಕು ಕಾಲುಳ್ಳ ಪ್ರಾಣಿಗಳನ್ನು ಸುರಭಿಯು ಹೆತ್ತಳು ಪಕ್ಷಿಗಳು ಸುಪರ್ಣನನ್ನೂ, ವಿಷ್ಣುವು ಮಾಯೆಯನ್ನೂ ಸೃಷ್ಟಿಸಿದರು ಮಹರ್ಷಿಗಳು ಹೇಳಿರುವುದನ್ನು ನಿಮಗೆ ಕ್ರಮವಾಗಿ ಹೇಳಿದ್ದೇನೆ.

೧೧೦. ಈ ಉತ್ತಮವಾದ ಪುರಾಣವನ್ನು ಕೇಳಿದವನೂ, ಪರ್ವಕಾಲಗಳಲ್ಲಿ ಓದಿದವನೂ, ಈ ಲೋಕದಲ್ಲಿ ಒಳ್ಳೆಯ ಸ್ಥಿತಿಯನ್ನು ಹೊಂದಿ ಅನಂತರ ವೈರಾಗ್ಯವನ್ನು ಹೊಂದಿ ಪರದಲ್ಲಿಯೂ ಸ್ವರ್ಗಸುಖವನ್ನು ಅನುಭವಿಸುತ್ತಾರೆ.

೧೧೧. ಕಣ್ಣು, ಮನಸ್ಸು, ಮಾತು, ಕೆಲಸ, ಈ ನಾಲ್ಕು ವಿಧದಿಂದಲೂ. ಯಾವನು ಕೃಷ್ಣನನ್ನು ತೃಪ್ತಿಪಡಿಸುತ್ತಾನೋ ಅವನಿಗೆ ಕೃಷ್ಣನು ಪ್ರಸನ್ನನಾಗುತ್ತಾನೆ.

ರಾಜ್ಯಂ ಚ ಲಭತೇ ರಾಜಾ ಅಧನಶ್ಚೋತ್ತಮಂ ಧನಂ ।
ಕ್ಷೀಣಾಯುರ್ಲಭತೇ ಚಾಯುಃ ಪುತ್ರಕಾಮಃ ಸುತಾಂಸ್ತಥಾ ॥ ೧೧೨ ॥

ಯಜ್ಞಾನ್ವೇದಾಂಸ್ತಥಾ ಕಾಮಾಂಸ್ತಪಾಂಸಿ ವಿವಿಧಾನಿ ಚ ।
ಯದ್ಯತ್ಕಾಮಯತೇ ಕಿಂಚಿತ್ತತ್ತಲ್ಲೋಕೇಶ್ವರಾದ್ಭವೇತ್ ॥ ೧೧೩ ॥

ಸರ್ವಂ ವಿಹಾಯ ಯ ಇಮಂ ಪಠೇತ್ಪೌಷ್ಕರಕಂ ಹರೇಃ ।
ಪ್ರಾದುರ್ಭಾವಂ ನರಶ್ರೇಷ್ಠ ನ ತಸ್ಯ ಹ್ಯಶುಭಂ ಭವೇತ್ ॥ ೧೧೪ ॥

ಏಷ ಪೌಷ್ಕರಕೋ ನಾಮ ಪ್ರಾದುರ್ಭಾವೋ ಮಹಾತ್ಮನಃ ।
ಕೀರ್ತಿತಸ್ತೇ ನರಶ್ರೇಷ್ಠ ವ್ಯಾಸಶ್ರುತಿನಿದರ್ಶನಾತ್ ॥ ೧೧೫ ॥

ವಿಷ್ಣುತ್ವಂ ಶೃಣು ಮೇ ವಿಷ್ಣೋಃ ಹರಿತ್ವಂ ಚ ಕೃತೇ ಯುಗೇ ।
ವೈಕುಂಠತ್ವಂ ಚ ದೇವೇಷು ಕೃಷ್ಣತ್ವಂ ಮಾನುಷೇಷು ಚ ॥ ೧೧೬ ॥

ಈಶ್ವರಸ್ಯ ಹಿ ತಸ್ಯೈಷಾ ಕರ್ಮಣಾಂ ಗಹನಾ ಗತಿಃ ।
ಸಾಂಪ್ರತಂ ಭೂತಭವ್ಯಂ ಚ ಶೃಣು ರಾಜನ್ಯಥಾತಥಂ ॥ ೧೧೭ ॥

---

೧೧೨. ಆ ಕೃಷ್ಣನನ್ನು ಪೂಜಿಸಿದರೆ ರಾಜನು ರಾಜ್ಯವನ್ನೂ, ಬಡವನು ಹಣವನ್ನೂ, ಆಯುಸ್ಸಿಲ್ಲದವನು ಆಯುಸ್ಸನ್ನೂ, ಪುತ್ರರನ್ನೂ ಅಪೇಕ್ಷಿಸುವವನು ಮಕ್ಕಳನ್ನೂ ಹೊಂದುತ್ತಾರೆ.

೧೧೩. ಯಜ್ಞಗಳು, ವೇದಗಳು, ತಪಸ್ಸುಗಳು, ಇನ್ನೂ ಯಾವುಯಾವುದು ಬೇಕೋ ಅವುಗಳೆಲ್ಲವನ್ನೂ ಆ ಲೋಕೇಶ್ವರನಾದ ಕೃಷ್ಣನು ಕೊಡುವನು.

೧೧೪. ಯಾವನು ಎಲ್ಲವನ್ನೂ ಬಿಟ್ಟು ಈ ಪುಷ್ಕರದ ಉತ್ಪತ್ತಿಯನ್ನು ಓದುತ್ತಾನೆಯೋ ಅವನಿಗೆ ಸ್ವಲ್ಪವೂ ಕೆಟ್ಟದ್ದಾಗುವುದೇ ಇಲ್ಲ.

೧೧೫. ಎಲೈ ದೊರೆಯೆ ! ಈ ಪುಷ್ಕರದ ಉತ್ಪತ್ತಿಯನ್ನೂ ವ್ಯಾಸನಿಂದ ಕೇಳಿರುವ ರೀತಿಯಲ್ಲಿ ನಿನಗೆ ಹೇಳಿದ್ದೇನೆ.

೧೧೬-೧೧೭. ಕೃತಯುಗದಲ್ಲಿ ವಿಷ್ಣುವಾದ ಇವನ ವಿಷ್ಣುತ್ವವನ್ನೂ, ಹರಿಯಾಗಿ ಇರುವಿಕೆಯನ್ನೂ, ವೈಕುಂಠನಾಗಿ ದೇವತೆಗಳಲ್ಲಿರುವಿಕೆಯನ್ನೂ, ಕೃಷ್ಣನಾಗಿ ಮನುಷ್ಯರಲ್ಲಿದ್ದುದನ್ನೂ ಕೇಳು. ಸರ್ವಶಕ್ತನಾದ ಆ ಸ್ವಾಮಿಯ ಕರ್ಮಗಳ ಸ್ಥಿತಿಯು ಇದು. ಪ್ರಾಚೀನ ಕರ್ಮಗಳ ಸ್ಥಿತಿಯು ಬಹು ರಹಸ್ಯವಾದುದು. ಈಗ ಹಿಂದೆ ನಡೆದುದು ಮುಂದೆ ನಡೆವುದರ ಸರಿಯಾದ ವಿಷಯವನ್ನು ಕೇಳು.

ಅವ್ಯಕ್ತೋ ವ್ಯಕ್ತಲಿಂಗಸ್ಥಃ ಯ ಏಷ ಭಗವಾನ್ಪ್ರಭುಃ ।
ನಾರಾಯಣೋ ಹ್ಯನಂತಾತ್ಮಾ ಪ್ರಭವೋಽವ್ಯಯ ಏವ ಚ ॥ ೧೧೮ ॥

ಏಷ ನಾರಾಯಣೋ ಭೂತ್ವಾ ಹರಿರಾಸೀತ್ಸನಾತನಃ ।
ಬ್ರಹ್ಮಾ ಕಾಮಶ್ಚ ಧರ್ಮಶ್ಚ ವಾಯುಶ್ಚೈವ ಬೃಹಸ್ಪತಿಃ ॥ ೧೧೯ ॥

ಅದಿತೇರಪಿ ಪುತ್ರತ್ವಮೇತ್ಯ ಯಾದವನಂದನಃ ।
ಏಷ ವಿಷ್ಣುರಿತಿ ಖ್ಯಾತಃ ಇಂದ್ರಸ್ಯಾವರಜಃ ಪ್ರಭುಃ ॥ ೧೨೦ ॥

ಪ್ರಸಾದನಂ ತಸ್ಯ ವಿಭೋರದಿತ್ಯಾಃ ಪುತ್ರಕಾರಣಂ ।
ವಧಾರ್ಥಂ ಸುರಶತ್ರೂಣಾಂ ದೈತ್ಯದಾನವರಕ್ಷಸಾಂ ॥ ೧೨೧ ॥

ಪ್ರಧಾನಾತ್ಮಾ ಪುರಾಹ್ಯೇಷಃ ಬ್ರಹ್ಮಾಣಮಸೃಜತ್ಪ್ರಭುಃ ।
ಸಸರ್ಜಾಥ ಸುರಾನ್ಕಲ್ಪೇ ಬ್ರಹ್ಮಾ ಚೈವ ಪ್ರಜಾಪತೀನ್ ॥ ೧೨೨ ॥

ಅಸೃಜನ್ಮಾನವಾಂಸ್ತತ್ರ ಬ್ರಹ್ಮವಂಶಾನನುತ್ತಮಾನ್ ।
ತೇಭ್ಯೋಽಭವನ್ಮಹಾತ್ಮಭ್ಯಃ ಪರಂ ಬ್ರಹ್ಮ ಸನಾತನಂ ॥ ೧೨೩ ॥

---

೧೧೮. ವ್ಯಕ್ತವಾಗಿ ಕಾಣಿಸಿಕೊಳ್ಳದ ಮತ್ತು ಎಲ್ಲರಂತೆಯೂ ಚೆನ್ನಾಗಿಯೂ ಕಾಣಿಸಿಕೊಳ್ಳುವ ಭಗವಂತನಾದ ನಾರಾಯಣನು ಅಂತರಹಿತನು, ಪ್ರಭುವು, ಅವ್ಯಯನು, ಇವನೇನೇ ನಾರಾಯಣನೂ ಆಗಿದ್ದನು. ಹರಿಯೂ ಆದನು.

೧೧೯-೧೨೦. ಬ್ರಹ್ಮನು, ಕಾಮನು, ಧರ್ಮನು, ವಾಯುವು, ಬೃಹಸ್ಪತಿಯು, ಇವೆಲ್ಲವೂ ಆ ಸ್ವಾಮಿಯ ಅವತಾರಗಳೇ. ಈ ಶ್ರೀಕೃಷ್ಣನೇ ಅದಿತಿಗೆ ಮಗನಾಗಿಯೂ ಇಂದ್ರನಿಗೆ ತಮ್ಮನಾಗಿಯೂ ಹುಟ್ಟಿದನು.

೧೨೧. ದೇವತೆಗಳಿಗೆ ಶತ್ರುಗಳಾದ ದೈತ್ಯರು, ದಾನವರು, ರಾಕ್ಷಸರುಗಳನ್ನು ನಾಶಮಾಡಿ ಸಂತೋಷಪಡಿಸುವುದೇ ಆ ಅದಿತಿಯ ಮಗನಾಗಲು ಕಾರಣವಾಗಿದೆ.

೧೨೨. ಮುಖ್ಯನಾದ ಈ ಸ್ವಾಮಿಯು ಮೊದಲು ಬ್ರಹ್ಮನನ್ನು ಸೃಷ್ಟಿಸಿದನು ಆನಂತರ ಆ ಬ್ರಹ್ಮನು ಪ್ರಜಾಪತಿಗಳನ್ನು ಸೃಷ್ಟಿಸಿದನು.

೧೨೩. ಅವರು ಬ್ರಹ್ಮನ ವಂಶಕ್ಕೆ ಸೇರಿದ ಉತ್ತಮರಾದ ಬ್ರಾಹ್ಮಣರನ್ನು ಸೃಷ್ಟಿಸಿದರು. ಆ ಮಹಾತ್ಮರಿಗೋಸ್ಕರವೇ ಈ ಸನಾತನವಾದ ಪರಬ್ರಹ್ಮನಿರುವುದು.

ಏತದಾಶ್ಚರ್ಯಭೂತಸ್ಯ ವಿಷ್ಣೋಃ ಕರ್ಮಾನುಕೀರ್ತನಂ ।
ಕೀರ್ತನೀಯಸ್ಯ ಲೋಕೇಷು ಕೀರ್ತ್ಯಮಾನಂ ವಿಭೋಧಮೇ ॥ ೧೨೪ ॥

ವೃತ್ತೇ ವೃತ್ರವಧೇ ಭೀಷ್ಮ ವರ್ತಮಾನೇ ಕೃತೇ ಯುಗೇ ।
ಆಸೀತ್ತ್ರೈಲೋಕ್ಯವಿಖ್ಯಾತಃ ಸಂಗ್ರಾಮಸ್ತಾರಕಾಮಯಃ ॥ ೧೨೫ ॥

ಯತ್ರ ತೇ ದಾನವಾ ಘೋರಾಃ ಸರ್ವೇ ಸಂಗ್ರಾಮದುರ್ಜಯಾಃ ।
ಘ್ನಂತಿ ದೇವಗಣಾನ್ಸರ್ವಾನ್ಸಯಕ್ಷೋರಗರಾಕ್ಷಸಾನ್ ॥ ೧೨೬ ॥

ತೇ ವಧ್ಯಮಾನಾ ವಿಮುಖಾಃ ಕ್ಷೀಣಪ್ರಹರಣಾ ರಣೇ ।
ತ್ರಾತಾರಂ ಮನಸಾ ಜಗ್ಮುಃ ದೇವಂ ನಾರಾಯಣಂ ಪರಂ ॥ ೧೨೭ ॥

ಏತಸ್ಮಿನ್ನಂತರೇ ಮೇಘಾ ನಿರ್ವಾಣಾಂಗಾರವರ್ಚಸಃ ।
ಸಾರ್ಕಚಂದ್ರಗ್ರಹಗಣಂ ಛಾದಯನ್ತೋ ನಭಸ್ಥಳಂ ॥ ೧೨೮ ॥

---

೧೨೪. ಇದು ಆಶ್ಚರ್ಯಕ್ಕೆ ಕಾರಣಭೂತನಾದ ವಿಷ್ಣುವಿನ ಕೆಲಸಗಳನ್ನು ಹೊಗಳುವಿಕೆಯು. ಲೋಕದಲ್ಲೆಲ್ಲಾ ಹೊಗಳಲು ಯೋಗ್ಯವಾದುದು. ಅದನ್ನು ಹೇಳುವೆನು ಕೇಳು.

೧೨೫. ಎಲೈ ಭೀಷ್ಮನೇ! ವೃತ್ರಾಸುರನ ವಧೆಯಾದನಂತರ ಕೃತಯುಗವು ನಡೆಯುತ್ತಿರಲು ಲೋಕದಲ್ಲೆಲ್ಲಾ ಪ್ರಸಿದ್ಧವಾದ ತಾರಕಾಸುರನ ಯುದ್ಧವು ನಡೆಯಿತು.

೧೨೬. ಕ್ರೂರರಾದ, ಬಲಿಷ್ಠರಾದ, ಯುದ್ಧದಲ್ಲಿ ಜಯಿಸಲು ಅಸಾಧ್ಯರಾದ ದಾನವರು ದೇವಗಣಗಳನ್ನೂ, ಯಕ್ಷರನ್ನೂ, ಸರ್ಪಗಳನ್ನೂ, ರಾಕ್ಷಸರನ್ನೂ ಕೊಲ್ಲುತ್ತಿದ್ದರು.

೧೨೭. ಏಟು ತಿನ್ನುತ್ತಿದ್ದ ಈ ದೇವತೆಗಳು ಆ ಯುದ್ಧವೆಲ್ಲವನ್ನೂ ಕಳೆದುಕೊಂಡು ಹಿಂತಿರುಗಿ ಓಡುತ್ತಾ ದೇವದೇವನಾದ ನಾರಾಯಣನನ್ನು ರಕ್ಷಣೆಗೋಸ್ಕರ ಧ್ಯಾನಮಾಡಿದರು.

೧೨೮-೧೨೯. ಇಷ್ಟರಲ್ಲಿ ನೀಲವಾದ ಮೇಘಗಳು ಚಂದ್ರ, ಸೂರ್ಯ, ಗ್ರಹ, ನಕ್ಷತ್ರಗಳುಳ್ಳ ಆಕಾಶವನ್ನು ಮುಚ್ಚುತ್ತಾ ಭಯಂಕರವಾದ ಮಿಂಚುಗಳಿಂದ ಕೂಡಿ

ಚಂಡವಿದ್ಯುದ್ಘನೋಪೇತಾ ಘೋರನಿರ್ಹ್ರಾದಕಾರಿಣಃ ।
ಅನ್ಯೋನ್ಯ ವೇಗಾಭಿಹತಾಃ ಪ್ರವವುಸ್ಸಪ್ತಮಾರುತಾಃ ॥ ೧೨೯ ॥

ದೀಪ್ತತೋಯಾಸ್ಸನಿರ್ಘಾತೈಃ ಸಹವಜ್ರಾನಲಾನಿಲೈಃ ।
ರವೈಸ್ಸುಘೋರೈರುತ್ಪಾತೈರ್ದಹ್ಯಮಾನಮಿವಾಂಬರಂ ॥ ೧೩೦ ॥

ಪೇತುರುಲ್ಕಾಸಹಸ್ರಾಣಿ ನಿಪೇತುಃ ಖಚರಾಣ್ಯಪಿ ।
ನ್ಯುಬ್ಜಾನಿ ಚ ವಿಮಾನಾನಿ ಪ್ರಪತಂತ್ಯುತ್ಪತಂತಿ ಚ ॥ ೧೩೧ ॥

ತಪೋ ಯೋಗವಿಪರ್ಯಾಸೇ ಲೋಕಾನಾಂ ಯದ್ಭಯಂ ಭವೇತ್ ।
ಅರೂಪವಂತಿ ರೂಪಾಣಿ ತಸ್ಮಿನ್ನುತ್ಪಾತಲಕ್ಷಣೇ ॥ ೧೩೨ ॥

ತಸ್ಮಾತ್ಪ್ರಭಂಜನಾತ್ಸರ್ವಂ ನ ಪ್ರಜ್ಞಾಯತ ಕಿಂಚನ ।
ತಿಮಿರೌಘಾ ಪರಿಕ್ಷಿಪ್ತಾ ನ ರೇಜುಶ್ಚ ದಿಶೋ ದಶ ॥ ೧೩೩ ॥

---

ಕೊಂಡು ಗುಡುಗುತ್ತಾ ವೇಗದಿಂದ ಒಂದಕ್ಕೊಂದು ಬಡಿದಾಡುತ್ತ ಬಂದುವು. ಏಳು ಗಾಳಿಗಳೂ ಕೂಡ ವೇಗದಿಂದ ಬೀಸಿದುವು

೧೩೦-೧೩೧. ತನ್ನ ಕಾಂತಿಯಿಂದ ನೀರನ್ನು ಪ್ರಕಾಶಪಡಿಸುತ್ತಾ, ವಜ್ರಾಯುಧದಂತೆ ಇರುವ, ಬೆಂಕಿ ಮತ್ತು ಗಾಳಿಗಳಿಂದ ಕೂಡಿದ ಸಿಡಿಲು ಘೋರವಾಗಿ ಕೂಗುತ್ತ, ಆಕಾಶವನ್ನು ಸುಡುತ್ತಿವೆಯೋ ಎಂಬಂತಿದ್ದಿತು. ಆಗ ಉಲ್ಕಾಪಾತಗಳಾದುವು. ಅಂತರಿಕ್ಷದಲ್ಲಿ ಸಂಚರಿಸುತ್ತಿರುವ ವಿಮಾನಗಳು ಮೇಲಕ್ಕೂ, ಕೆಳಕ್ಕೂ ಓಡಾಡುತ್ತ ಇದ್ದುವು.

೧೩೨. ತಪಸ್ಸು, ಯೋಗಗಳು ವ್ಯತ್ಯಾಸದರೆ ಲೋಕಕ್ಕೆ ಯಾವ ರೀತಿಯಾದ ಭಯವು ಬರುತ್ತದೆಯೋ, ಹಾಗೆ ಆ ಉತ್ಪಾತದ ಲಕ್ಷಣದಲ್ಲಿ ರೂಪವುಳ್ಳವುಗಳೂ ಕೂಡ ಕುರೂಪಗಳಾಗುತ್ತಿದ್ದುವು.

೧೩೩. ಆ ಗಾಳಿಯ ಹೊಡೆತದಲ್ಲಿ ಒಂದೂ ಕಾಣುತ್ತಿರಲಿಲ್ಲ. ಕತ್ತಲೆಯಿಂದ ದಿಕ್ಕುಗಳೆಲ್ಲವೂ ಮುಚ್ಚಿಹೋಗಿ ಏನೂ ಪ್ರಕಾಶಿಸುತ್ತಿರಲಿಲ್ಲ.

ವಿಶೇಷರೂಪಿಣೀ ಕಾಳೀ ಕಾಲಮೇಘಾವಗುಂಠಿತಾ ।
ದ್ಯೌರ್ನಭಾತ್ಯಭಿಭೂತಾರ್ತಾ ಘೋರೇಣ ತಮಸಾವೃತಾ ॥ ೧೩೪ ॥

ತಾಂ ಘನೌಘಾಂ ಸತಿಮಿರಾಂ ದೋರ್ಭ್ಯಾಮಾಕ್ಷಿಪ್ಯ ಸ ಪ್ರಭುಃ ।
ವಪುಸ್ಸಂದರ್ಶಯಾಮಾಸ ದಿವ್ಯಂ ಕೃಷ್ಣವಪುರ್ಹರಿಃ ॥ ೧೩೫ ॥

ಬಲಾಹಕಾಂಜನ ನಿಭಂ ಬಲಾಹಕತನೂರುಹಂ ।
ತೇಜಸಾ ವಪುಷಾ ಚೈವ ಕೃಷ್ಣಂ ಕೃಷ್ಣಮಿವಾಚಲಂ ॥ ೧೩೬ ॥

ದೀಪ್ತಪೀತಾಂಬರಂ ಚೈವ ತಪ್ತಕಾಂಚನ ಭೂಷಣಂ ।
ಧೂಮಾಂಧಕಾರವಪುಷಂ ಯುಗಾನ್ತಾಗ್ನಿಮಿವೋತ್ಥಿತಂ ॥ ೧೩೭ ॥

ವೃತ್ತದ್ವಿಗುಣಪೀನಾಂಸಂ ಕಿರೀಟಚ್ಛನ್ನಮೂರ್ಧಜಂ ।
ಬಭೌ ಚಾಮೀಕರಪ್ರಖ್ಯೈರಾಯುಧೈರುಪಶೋಭಿತೈಃ ॥ ೧೩೮ ॥

---

೧೩೪. ವಿಶೇಷವಾದ ಅವತಾರವನ್ನು ಹೊಂದಿದ ಕಾಳಿಯು ಕಾಲಮೇಘದಿಂದ ಮುಸುಕು ಹಾಕಿಕೊಂಡಂತೆ ಇದ್ದು ಘೋರವಾದ ಕತ್ತಲೆಯಿಂದ ಸೂರ್ಯನು ಮರೆಯಾಗಿ ಅಂತರಿಕ್ಷವು ಪ್ರಕಾಶಿಸುತ್ತಿರಲಿಲ್ಲ.

೧೩೫. ಆಗ ಶ್ರೀಕೃಷ್ಣನು ಮೇಘದಿಂದ ಕೂಡಿ ಕತ್ತಲಾಗಿರಲು ಆ ಮೇಘವನ್ನೆಲ್ಲಾ ಅತ್ತಿತ್ತಲಾಗಿ ತಳ್ಳಿ ತನ್ನ ದಿವ್ಯದೇಹವನ್ನು ತೋರಿಸಿದನು.

೧೩೬. ಮೋಡದಂತೆ ಕಪ್ಪಾದ ಬಲಾಹಕಪಕ್ಷಿಗಳಂತೆ ಕೂದಲುಗಳುಳ್ಳ ದೇಹದಿಂದ ಪ್ರಕಾಶಿಸುವ ಆ ಸ್ವಾಮಿಯಾದ ಕೃಷ್ಣನು ಅಂಜನ ಪರ್ವತದಂತೆ ಪ್ರಕಾಶಿಸಿದನು.

೧೩೭. ಹೊಳಪಾದ ಪೀತಾಂಬರವನ್ನು ಹೊದ್ದು ಪ್ರಕಾಶಮಾನವಾದ ಚಿನ್ನದ ಒಡವೆಗಳನ್ನೂ ತೊಟ್ಟಿರುವ ಆ ದೇಹವು ಹೊಗೆಯಿಂದ ಕೂಡಿದ ಕಾಲಾಗ್ನಿಯು ಎದ್ದಂತೆ ಇದ್ದಿತು.

೧೩೮. ದುಂಡಗೆ ದಪ್ಪವಾಗಿದ್ದ ಭುಜಶಿರಸ್ಸುಳ್ಳ, ತಲೆಗೆ ಕೂದಲು ಮುಚ್ಚಿಕೊಳ್ಳುವ ಹಾಗೆ ಕಿರೀಟವನ್ನು ಹಾಕಿಕೊಂಡಿರುವ, ಆ ಸ್ವಾಮಿಯು ಚಿನ್ನದಂತೆ ಬೆಳಗುತ್ತಿರುವ ಆಯುಧಗಳಿಂದ ಕೂಡಿಕೊಂಡು ಪ್ರಕಾಶಿಸಿದನು.

ಚಂದ್ರಾರ್ಕಕಿರಣೋದ್ಯೋತಂ ಗಿರಿಕೂಟಮಿವೋಚ್ಛ್ರಿತಂ ।
ನಂದಕಾನಂದಿತಕರಂ ಕೌಸ್ತುಭೋದ್ಭಾಸಿತೋರಸಂ ॥ ೧೩೯ ॥

ಶಕ್ತಿಚಿತ್ರಹಲೋದಗ್ರಂ ಶಂಖಚಕ್ರಗದಾಧರಂ ।
ವಿಷ್ಣುಶೈಲಂ ಕ್ಷಮಾಮೂಲಂ ಶ್ರೀವೃಕ್ಷಂ ಶಾರ್ಙ್ಗಶೃಂಗಿಣಂ ॥ ೧೪೦ ॥

ಹಸ್ತ್ಯಶ್ವರಥಸಂಯುಕ್ತಂ ಸುಪರ್ಣಧ್ವಜಸಂಯುತಂ ।
ಚಂದ್ರಾರ್ಕಚಕ್ರರಚಿತಂ ಉದಾರಾಕ್ಷವೃತಾಂತರಂ ॥ ೧೪೧ ॥

ಅನಂತರಶ್ಮಿಸಂಯುಕ್ತೇ ದುರ್ದರ್ಶೇ ಮೇರುಭೂಧರೇ ।
ತಾರಕಾಬದ್ಧಕುಸುಮಂ ಗ್ರಹನಕ್ಷತ್ರಬಂಧುರಂ ॥ ೧೪೨ ॥

ಭಯೇಷ್ವಭಯದಂ ವ್ಯೋಮ್ನಿ ದೇವದೈತ್ಯಾಪರಾಜಿತಂ ।
ತ್ರಿದಶೋದಾರಫಲದಂ ಸ್ವರ್ಗಸ್ತ್ರೀಚಾರುಪಲ್ಲವಂ ॥ ೧೪೩ ॥

---

೧೩೯. ಚಂದ್ರಸೂರ್ಯರ ಕಿರಣಗಳಿಂದ ಪ್ರಕಾಶಿಸುವ ಎತ್ತರವಾದ ಪರ್ವತದ ಶಿಖರದಂತೆಯೂ, ಇದ್ದು ಕೈಯಲ್ಲಿ ನಂದಕವನ್ನೂ ಎದೆಯಲ್ಲಿ ಕೌಸ್ತುಭವನ್ನೂ ಹಾಕಿಕೊಂಡು ಇರುವ ಆ ಸ್ವಾಮಿಯು ಪ್ರಕಾಶಿಸಿದನು

೧೪೦. ಶಕ್ತ್ಯಾಯುಧದಿಂದ ಚಿತ್ರವಾದ ನೇಗಿಲ ತುದಿಯುಳ್ಳ, ಶಂಖಚಕ್ರ ಗದೆಗಳನ್ನು ಧರಿಸಿರುವ ಕ್ಷಮಾಗುಣವೆಂಬ ಮೂಲವುಳ್ಳ, ಲಕ್ಷ್ಮಿಯೆಂಬ ಮರಗಳುಳ್ಳ ಶಾರ್ಙ್ಗವೆಂಬ ಆಯುಧವೇ ಶಿಖರವಾಗಿ ಉಳ್ಳ ವಿಷ್ಣುವೆಂಬ ಪರ್ವತವನ್ನು ಕಂಡರು.

೧೪೧–೧೪೨ ಇಂದ್ರನ ಕುದುರೆಯನ್ನು ಕಟ್ಟಿರುವ ರಥವುಳ್ಳ, ಗರುಡನೇ ಧ್ವಜದಲ್ಲಿರುವ, ಸೂರ್ಯಚಂದ್ರರೇ ಚಕ್ರವಾಗಿ ಉಳ್ಳ, ಉದಾರವೆಂಬ ಬುದ್ಧಿಯೇ ಗಾಡಿಯ ಅಚ್ಚಾಗಿ ಉಳ್ಳ, ಸರ್ಪವೆಂಬ ಹಗ್ಗದಿಂದ ಕೂಡಿರುವ ಮೇರು ಪರ್ವತದಲ್ಲಿ ನೋಡಲು ಆಗದ ಆ ಸ್ವಾಮಿಯನ್ನು ಇಲ್ಲಿ ಕಂಡರು

೧೪೩-೧೪೪. ಭಯಕಾಲದಲ್ಲಿ ಅಭಯವನ್ನು ನೀಡುತ್ತಿರುವ ದೇವತೆಗಳಿಂದಲೂ, ದೈತ್ಯರಿಂದಲೂ, ಜಯಿಸಲಾಗದ, ದೇವತೆಗಳಿಗೆ ಯಥೇಚ್ಛವಾಗಿ ಫಲವನ್ನು ಕೊಡುವಂತಹ, ಸ್ವರ್ಗವೆಂಬ ಸ್ತ್ರೀಯಿಂದ ಮನೋಹರನಾದ; ಪ್ರಪಂಚದಲ್ಲಿ ಒಬ್ಬರ

ಸರ್ವಲೋಕಮನೋತೀತಂ ಸರ್ವಸತ್ತ್ವಮನೋಹರಂ ।
ನಾನಾವಿಮಾನವಿಟಪಂ ತೋಯದೌಘಸಮಪ್ರಭಂ ॥ ೧೪೪ ॥

ವಿಪ್ರಾಹಂಕಾರಮಾನಾಢ್ಯಂ ಮಹಾಭೂತಪ್ರರೋಹಣಂ ।
ವಿಶೇಷಪತ್ರೈರ್ನಿಚಿತಂ ಗ್ರಹನಕ್ಷತ್ರಪುಷ್ಪಿತಂ ॥ ೧೪೫ ॥

ದೈತ್ಯಲೋಕಮಹಾಸ್ಕಂಧಂ ಮರ್ತ್ಯಲೋಕಪ್ರಕಾಶಿತಂ ।
ಸಾಗರಾಕಾರನಿರ್ಹ್ರಾದಂ ರಸಾತಲತಲಾಶ್ರಯಂ ॥ ೧೪೬ ॥

ನಾಗೇಂದ್ರಪಾಶೈರ್ವಿತತಂ ಪಕ್ಷಿಜಂತುನಿಷೇವಿತಂ ।
ಶೀಲಾರ್ಥವಹಗಂಧಾಢ್ಯಂ ಸರ್ವಲೋಕಮಹಾಹ್ರದಂ ॥ ೧೪೭ ॥

ಅವ್ಯಕ್ತಾನಂದಸಲಿಲಂ ವ್ಯಕ್ತಾಹಂಕಾರಫೇನಿಲಂ ।
ಮಹಾಭೂತಕರೌಘೌಘಂ ಗ್ರಹನಕ್ಷತ್ರಬುದ್ಬುದಂ ॥ ೧೪೮ ॥

ವಿಮಾನವಾಹನೈರ್ವ್ಯಾಪ್ತಂ ತೋಯದಾಡಂಬರಾಕುಲಂ ।
ಜಂತುಮತ್ಸ್ಯಗಣಾಕೀರ್ಣಂ ಶೈಲಶಂಖಕುಲೈರ್ಯುತಂ ॥ ೧೪೯ ॥

---

ಮನಸ್ಸಿಗೂ ಕೂಡ ಗೋಚರನಾಗದ, ಎಲ್ಲರಿಗೂ ಮನೋಹರವಾದ ಅನೇಕ ವಿಮಾನಗಳೆಂಬ ಕೊಂಬೆಗಳುಳ್ಳ ಮೋಡಗಳಂತೆ ಕಾಂತಿಯುಳ್ಳ ಆ ಶ್ರೀ ವಿಷ್ಣುವನ್ನು ನೋಡಿದರು.

೧೪೫-೧೪೬. ಬ್ರಾಹ್ಮಣರೆಂಬ ಅಹಂಕಾರದಿಂದ ಕೂಡಿದ ಮಹಾಭೂತಗಳನ್ನೆ ಉತ್ಪತ್ತಿಮಾಡುವ ವಿಶೇಷಕವೆಂಬ ಎಲೆಗಳಿಂದ ಕೂಡಿದ (ವಿಶೇಷಕವೆಂಬುದು ತಿಲಕ) ಗ್ರಹನಕ್ಷತ್ರಗಳೆಂಬ ಹೂವನ್ನು ಹೊಂದಿರುವ ದೈತ್ಯರೆಂಬ ದೊಡ್ಡ ಮರವುಳ್ಳ ಮನುಷ್ಯಲೋಕದಲ್ಲಿ ಪ್ರಕಾಶಿಸುತ್ತಿರುವ ಸಾಗರದ ಧ್ವನಿಯಂತ ಧ್ವನಿಮಾಡುತ್ತಿರುವ ರಸಾತಳದ ತಳವನ್ನು ಆಶ್ರಯಿಸಿರುವ ಆ ಸ್ವಾಮಿಯನ್ನು ನೋಡಿದರು.

೧೪೭-೧೪೮. ಸರ್ಪಗಳೆಂಬ ಹಗ್ಗಗಳಿಂದ ಕೂಡಿದ, ಹಕ್ಕಿ ಎಂಬ ಪ್ರಾಣಿಗಳಿಂದ ಸೇವಿಸಲ್ಪಡುತ್ತಿರುವ ಒಕ್ಕೈಯ ಸ್ವಭಾವವೆಂಬ ವ್ಯಾಪಾರಿಗಳಿಂದ ಕೂಡಿದ, ಸರ್ವಲೋಕವೆಂಬ ಮಹಾಮಡುವುಳ್ಳ, ವ್ಯಕ್ತವಾಗದ ಸ್ಥಿತಿಯೆಂಬ ಅಗಾಧವಾದ ನೀರುಳ್ಳ, ವ್ಯಕ್ತವಾದ ಅಹಂಕಾರವೆಂಬ ನೊರೆಯುಳ್ಳ, ಮಹಾಭೂತಗಳ ಕೈಗಳ ಗುಂಪೆಂಬ ಪ್ರವಾಹವುಳ್ಳ ಗ್ರಹನಕ್ಷತ್ರಗಳೆಂಬ ಗುಳ್ಳೆಗಳುಳ್ಳ ನದಿಯರೂಪವಾದ ಸ್ವಾಮಿಯನ್ನು ನೋಡಿದರು.

ತ್ರೈಗುಣ್ಯವಿಷಯಾವರ್ತಂ ಸರ್ವಲೋಕತಿಮಿಂಗಿಲಂ ।
ವೀರವೃಕ್ಷಲತಾಗುಲ್ಮಂ ಭುಜಗೋತ್ಕೃಷ್ಟಶೈವಲಂ ॥ ೧೫೦ ॥

ದ್ವಾದಶಾರ್ಕಮಹಾದ್ವೀಪಂ ರುದ್ರೈಕಾದಶಪತ್ತನಂ ।
ವಸ್ವಷ್ಟಪರ್ವತೋಪೇತಂ ತ್ರೈಲೋಕ್ಯಾಂಭೋಮಹೋದಧಿಂ ॥ ೧೫೧ ॥

ಸಂಧ್ಯಾಸಂಧ್ಯೋರ್ಮಿಸಲಿಲಮಾಪೂರ್ಣಾನಿಲಸೇವಿತಂ ।
ದೈತ್ಯ ಯಕ್ಷಗಣಗ್ರಾಹಂ ರಕ್ಷೋಗಣಝಷಾಕುಲಂ ॥ ೧೫೨ ॥

ಪಿತಾಮಹಮಹಾವೀರ್ಯಂ ದಿವ್ಯಸ್ತ್ರೀರತ್ನಭೂಷಿತಂ ।
ಶ್ರೀಕೀರ್ತಿಕಾಂತಿಲಕ್ಷ್ಮೀಭಿರ್ನದೀಭಿರುಪಶೋಭಿತಂ ॥ ೧೫೩ ॥

ಕಾಲಯೋಗಮಹಾಪರ್ವ ಪ್ರತ್ಯಯೋತ್ಪಾತವೇಗಿನಂ ।
ತಂ ಸಂಯೋಗಸಮಾಧಾರಂ ನಾರಾಯಣಮಹಾರ್ಣವಂ ॥ ೧೫೪ ॥

ದೇವಾತಿದೇವಂ ವರದಂ ಭಕ್ತಾನಾಂ ಭಕ್ತವತ್ಸಲಂ ।
ಅನುಗ್ರಹಕರಂ ದೇವಂ ಪ್ರಶಾಂತಿಕರಣಂ ಶಿವಂ ॥ ೧೫೫ ॥

---

೧೪೯-೧೫೧. ವಿಮಾನಗಳೆಂಬ ವಾಹನಗಳಿಂದ ಕೂಡಿದ, ಮೇಘಗಳ ಔದ್ಧತ್ಯದಿಂದ ಕೂಡಿರುವ ಮೀನುಗಳೆಂಬ ಪ್ರಾಣಿಗಳ ಗುಂಪುಳ್ಳ, ಶಂಖವೆಂಬ ಬೆಟ್ಟದಿಂದ ಕೂಡಿದ, ಸತ್ವರಜಸ್ತಮೋಗಳೆಂಬ ವಿಷಯಗಳ ಸುಳಿಗಳುಳ್ಳ, ವೀರರೆಂಬ ಮರಗಳು ಪೊದರುಗಳು, ಇವುಗಳಿಂದ ಕೂಡಿದ ಸರ್ಪಗಳೆಂಬ ಪಾಚಿಗಳುಳ್ಳ, ಹನ್ನೆರಡು ಜನ ಸೂರ್ಯರೆಂಬ ದೊಡ್ಡದೊಡ್ಡ ದ್ವೀಪಗಳುಳ್ಳ, ಏಕಾದಶ (ಹನ್ನೊಂದು) ರುದ್ರರೆಂಬ ಪಟ್ಟಣಗಳುಳ್ಳ ಸ್ವಾಮಿಯೆಂಬ ಸಮುದ್ರವನ್ನು ನೋಡಿದರು.

೧೫೨-೧೫೪.. ಸಂಧ್ಯೆ, ಅಸಂಧ್ಯೆಯೆಂಬ ಅಲೆಗಳುಳ್ಳ ಪೂರ್ಣತೆಯೆಂಬ ಗಾಳಿಯಿಂದ ಕೂಡಿರುವ, ದೈತ್ಯರು, ಯಕ್ಷರುಗಳ ಗುಂಪೆಂಬ ಮೊಸಳೆಯುಳ್ಳ, ರಾಕ್ಷಸರ ಗುಂಪೆಂಬ ಮೀನುಗಳಿಂದ ಕೂಡಿದ ಪಿತಾಮಹನೆಂಬ ಮಹಾವೀರ್ಯವುಳ್ಳ, ದಿವ್ಯರಾದ ಹೆಂಗಸರೆಂಬ ರತ್ನಗಳಿಂದ ಕೂಡಿರುವ, ಕಾಲಯೋಗವೆಂಬ ಪರ್ವಕಾಲವು ಬರುವುದೆಂಬ ನಂಬಿಕೆ ಬರುವಂತೆ ವೇಗವುಳ್ಳ, ಸಂಯೋಗವೆಂಬ ಆಧಾರವುಳ್ಳ, ಆ ನಾರಾಯಣನೆಂಬ ಮಹಾಸಮುದ್ರವು ಪ್ರಕಾಶಿಸಿತು.

೧೫೫-೧೫೭. ದೇವರಿಗೆಲ್ಲಾ ದೇವನಾದ ಭಕ್ತರಿಗೆ ವರವನ್ನು ಕೊಡುವ ಭಕ್ತರಲ್ಲಿ ಪ್ರೀತಿಯುಳ್ಳ, ಅನುಗ್ರಹವನ್ನು ಮಾಡುವ, ಶಾಂತಿಯನ್ನು ಉಂಟುಮಾಡುವ

ದದೃಶುಸ್ತೇ ಸ್ಥಿತಂ ದೇವಂ ದಿವ್ಯಲೋಕಮಯೇ ರಥೇ ।
ಹರ್ಯಶ್ವರಥಸಂಯುಕ್ತೇ ಸುಪರ್ಣಧ್ವಜಶೋಭಿತೇ ॥ ೧೫೬ ॥

ತೇ ಕೃತಾಂಜಲಯಸ್ಸರ್ವೇ ದೇವಾಶ್ಶಕ್ರಪುರೋಗಮಾ ।
ಜಯಶಬ್ದಂ ಪುರಸ್ಕೃತ್ಯ ಶರಣ್ಯಂ ಶರಣಂ ಗತಾಃ ॥ ೧೫೭ ॥

ಸ ತೇಷಾಂ ತಾಂ ಗಿರಂ ಶ್ರುತ್ವಾ ವಿಷ್ಣುರ್ದೈವತದೈವತಂ ।
ಮನಶ್ಚಕ್ರೇ ವಿನಾಶಾಯ ದಾನವಾನಾಂ ಮಹಾಮೃಧೇ ॥ ೧೫೮ ॥

ಆಕಾಶೇ ತು ಸ್ಥಿತೋ ದೇವಃ ಉತ್ತಮಂ ವಪುರಾಸ್ಥಿತಃ ।
ಉವಾಚ ದೇವಾನ್ ಶಕ್ರಾದೀನ್ಸಪ್ರತಿಜ್ಞಮಿದಂ ವಚಃ ॥ ೧೫೯ ॥

॥ ಶ್ರೀ ವಿಷ್ಣುರುವಾಚ ॥

ಶಾನ್ತಿಂ ವ್ರಜತ ಭದ್ರಂ ವೋ ಮಾಭೈಷ್ಟ ಮರುತಾಂ ಗಣಾಃ ।
ಜಿತಾ ಮೇ ದಾನವಾಸ್ಸರ್ವೇ ತ್ರೈಲೋಕ್ಯಂ ಪರಿಗೃಹ್ಯತಾಂ ॥ ೧೬೦ ॥

---

ಮಂಗಳಕರನಾದ ಆ ಸ್ವಾಮಿಯನ್ನು ಇಂದ್ರನ ಕುದುರೆಗಳಿಂದ ಕೂಡಿದ ಚಿನ್ನದ ಧ್ವಜವುಳ್ಳ, ದಿವ್ಯಜನಗಳಿಂದ ಕೂಡಿರುವ ಆ ರಥದಲ್ಲಿ ನೋಡಿದರು.

೧೫೭. ಆಗ ಇಂದ್ರನೇ ಮೊದಲಾದ ಆ ದೇವತೆಗಳೆಲ್ಲರೂ ಕೈಮುಗಿದುಕೊಂಡು ಜಯಜಯವೆಂದು ಹೇಳುತ್ತಾ ರಕ್ಷಕನಾದ ಆ ಸ್ವಾಮಿಯನ್ನು ಮೊರೆಹೊಕ್ಕರು.

೧೫೮. ದೇವರಿಗೆಲ್ಲಾ ದೇವನಾದ ಆ ವಿಷ್ಣುವು, ಅವರ ಆ ಮಾತನ್ನು ಕೇಳಿ ಯುದ್ಧದಲ್ಲಿ ದಾನವರನ್ನು ಕೊಲ್ಲಲು ಮನಸ್ಸುಮಾಡಿದನು.

೧೫೯. ಉತ್ತಮವಾದ ದೇಹವನ್ನು ಹೊಂದಿ ಆ ಸ್ವಾಮಿಯು ಆಕಾಶದಲ್ಲಿದ್ದುಕೊಂಡು ಇಂದ್ರಾದಿದೇವತೆಗಳನ್ನು ಕುರಿತು ಪ್ರತಿಜ್ಞೆಮಾಡುತ್ತ ಇಂತೆಂದನು.

೧೬೦. ವಿಷ್ಣುವು ಹೇಳಿದನು- ಎಲೈ ದೇವತೆಗಳಿರಾ ! ಶಾಂತಿಯನ್ನು ಹೊಂದಿ. ನಿಮಗೆ ಮಂಗಳವಾಗಲಿ. ಹೆದರಬೇಡಿ. ನಾನು ದಾನವರನ್ನು ಜಯಿಸಿದೆನು. ಮೂರು ಲೋಕವನ್ನೂ ತೆಗೆದುಕೊಳ್ಳಿರಿ.

॥ ಪುಲಸ್ತ್ಯ ಉವಾಚ ॥

ತೇ ತಸ್ಯ ಸತ್ಯಸಂಧಸ್ಯ ವಿಷ್ಣೋರ್ವಾಕ್ಯೇನ ತೋಷಿತಾಃ ।
ದೇವಾಃ ಪ್ರೀತಿಂ ಪರಾಂ ಜಗ್ಮುಃ ಪ್ರಾಶ್ಯಾಮೃತಮಿವೋತ್ತಮಂ ॥ ೧೬೧ ॥

ತತಸ್ತಮಶ್ಚ ಸಂಹೃತ್ಯ ವಿನೇಶುಶ್ಚ ಬಲಾಹಕಾಃ ।
ಪ್ರವವುಶ್ಚ ಶಿವಾ ವಾತಾಃ ಪ್ರಸನ್ನಾಶ್ಚ ದಿಶೋ ದಶ ॥ ೧೬೨ ॥

ಶುದ್ಧಪ್ರಾಯಾಣಿ ಜ್ಯೋತೀಂಷಿ ಸೋಮಂ ಚಕ್ರುಃ ಪ್ರದಕ್ಷಿಣಂ ।
ನ ವಿಗ್ರಹಂ ಗ್ರಹಾಶ್ಚಕ್ರುಃ ಪ್ರಸನ್ನಾಶ್ಚಾಪಿ ಸಿಂಧವಃ ॥ ೧೬೩ ॥

ನಿರಜಾಶ್ಚಾಭಗವನ್ಮಾರ್ಗಾಲೋಕಾಸ್ಸ್ವರ್ಗಾದಯಸ್ತ್ರಯಃ ।
ಯಥಾರ್ಥಮೂಪುಸ್ಸರಿತೋ ಚುಕ್ಷುಭೇ ನ ತಥಾರ್ಣವಃ ॥ ೧೬೪ ॥

ಆಸನ್ ಶುಭಾನೀಂದ್ರಿಯಾಣಿ ನರಾಣಾಮಂತರಾತ್ಮಸು ।
ಮಹರ್ಷಯೋ ವೀತಶೋಕಾ ವೇದಾರಂಭೋಽಭಿಧೀಯತೇ ॥ ೧೬೫ ॥

---

೧೬೧. ಪುಲಸ್ತ್ಯನು ಹೇಳಿದನು- ಸತ್ಯಪ್ರತಿಜ್ಞೆಯುಳ್ಳ ಆ ವಿಷ್ಣುವಿನ ಮಾತನ್ನು ದೇವತೆಗಳು ಕೇಳಿ ಉತ್ತಮವಾದ ಅಮೃತವನ್ನು ಕುಡಿದಂತೆ ಸಂತೋಷಪಟ್ಟರು ಪ್ರೀತಿಯನ್ನು ಹೊಂದಿದರು.

೧೬೨. ಆಗ ಮೋಡಗಳೆಲ್ಲಾ ನಾಶವಾಗಿ ಹೋದುವು. ಕತ್ತಲೆಯು ಹೋಯಿತು. ಮಂಗಳಕರವಾಗಿ ಗಾಳಿಯು ಬೀಸಿತು. ಹತ್ತು ದಿಕ್ಕುಗಳೂ ನಿರ್ಮಲವಾದುವು.

೧೬೩-೧೬೪. ಜ್ಯೋತಿಸ್ಸುಗಳೆಲ್ಲವೂ ಶುದ್ಧವಾಗಿ ಚಂದ್ರನನ್ನು ಪ್ರದಕ್ಷಿಣೆ ಮಾಡಿದುವು ಗ್ರಹಗಳು ಯುದ್ಧವನ್ನು ಮಾಡಲಿಲ್ಲ ಸಮುದ್ರಗಳು ಪ್ರಸನ್ನವಾದುವು. ದಾರಿಯಲ್ಲಿ ಧೂಳು ಅಡಗಿತು. ಸ್ವರ್ಗ ಮರ್ತ್ಯ ಪಾತಾಳಗಳೂ ಕೂಡ ಧೂಳನ್ನು ತ್ಯಜಿಸಿದವು. ನದಿಗಳೆಲ್ಲ ಶುದ್ಧವಾದ ನೀರನ್ನು ಹೊಂದಿ ಪ್ರಸನ್ನವಾದುವು ಸಮುದ್ರವು ಅಲ್ಲೋಲಕಲ್ಲೋಲವಾಗುವುದನ್ನು ಬಿಟ್ಟಿತು.

೧೬೫-೧೬೬. ಇಂದ್ರಿಯಗಳೆಲ್ಲವೂ ಚಂಚಲತೆಯನ್ನು ಬಿಟ್ಟು ನಿರ್ಮಲವಾದುವು. ಜನರ ಅಂತರಾತ್ಮವು ಶುದ್ಧವಾಯಿತು ಮಹರ್ಷಿಗಳು ದುಃಖವನ್ನು ಬಿಟ್ಟು ವೇದಾಧ್ಯಯನವನ್ನು ಮಾಡುತ್ತಿದ್ದರು. ಯಜ್ಞದಲ್ಲಿ ಅಗ್ನಿಯು ಹವಿಸ್ಸನ್ನು

ಯಜ್ಞೇಷು ಚ ಹವಿಷ್ಪಾಕಂ ಶಿವಮಾಪ ಹ ಪಾವಕಃ ।
ಪ್ರವೃತ್ತಧರ್ಮಸಂವೃತ್ತಾ ಲೋಕಾ ಮುದಿತಮಾನಸಾಃ ॥ ೧೬೬ ॥

ವಿಷ್ಣೋಃ ಕೃತಪ್ರತಿಜ್ಞಸ್ಯ ಶ್ರುತ್ವಾರಿನಿಧನೇ ಗಿರಂ ।
ತತೋ ಭಯಂ ವಿಷ್ಣುಮುಖಾಚ್ಛ್ರುತ್ವಾ ದೈತೇಯದಾನವಾಃ ॥ ೧೬೭ ॥

ಉದ್ಯೋಗಂ ವಿಪುಲಂ ಚಕ್ರುಃ ಯುದ್ಧಾಯ ವಿಜಯಾಯ ಚ ॥
ಮಯಸ್ತು ಕಾಂಚನಮಯಂ ನೃದಂಡಾಜರಮಕ್ಷಯಂ ॥ ೧೬೮ ॥

ಚತುಶ್ಚಕ್ರಂ ಸುವಿಪುಲಂ ವಿಕಲ್ಪಿತಮಹಾಧ್ವಜಂ ।
ಕಿಂಕಿಣೀಜಾಲನಿರ್ಘೋಷಂ ದ್ವೀಪಿಚರ್ಮಪರಿಷ್ಕೃತಂ ॥ ೧೬೯ ॥

ರುಚಿರಂ ರಶ್ಮಿಜಾಲೈಶ್ಚ ನಾನಾರತ್ನೈಶ್ಚ ಶೋಭಿತಂ ।
ಈಹಾಮೃಗಗಣಾಕೀರ್ಣಂ ಪಕ್ಷಿಸಂಘವಿರಾಜಿತಂ ॥ ೧೭೦ ॥

ದಿವ್ಯಾಸ್ತ್ರಹಂತೃಖಚರಂ ಪಯೋಧರಪಿನಾದಿತಂ ।
ಸ್ವಚ್ಛಂ ಚಾಥ ಪರೋದಾರಮುಪಸ್ಥಾಯ ರಥೋತ್ತಮಂ ॥ ೧೭೧ ॥

---

ಮಂಗಳಕರನಾಗಿ ಗ್ರಹಿಸಿದನು ಲೋಕವೆಲ್ಲವೂ ಸಂತೋಷಪಟ್ಟು ಧರ್ಮದಲ್ಲಿ ಪ್ರವೇಶಮಾಡಿತು.

೧೬೭-೧೬೯. ವಿಷ್ಣುವು ಪ್ರತಿಜ್ಞೆಮಾಡಿ ಶತ್ರುಸಂಹಾರವನ್ನು ಮಾಡುತ್ತೇನೆಂದು ಹೇಳಿದ ಮಾತನ್ನು ಕೇಳಿ ದೈತ್ಯರೂ, ದಾನವರೂ, ಯುದ್ಧಕ್ಕೂ, ವಿಜಯಕ್ಕೂ ಬಹುವಾದ ಪ್ರಯತ್ನವನ್ನು ಮಾಡಿದರು. ಮಯನು ಒಂದು ಚಿನ್ನದ ರಥವನ್ನು ಹತ್ತಿದನು. ಅದು ಎತ್ತರವಾಗಿ ಗಟ್ಟಿಮುಟ್ಟಾಗಿ ಮುರಿಯದಂತಿದ್ದಿತು. ನಾಲ್ಕು ಚಕ್ರಗಳಿದ್ದವು. ದೊಡ್ಡದಾಗಿಯೂ, ಚೆನ್ನಾಗಿ ನಿರ್ಮಿಸಿರುವ ಪತಾಕೆಯುಳ್ಳದ್ದಾಗಿಯೂ, ಗೆಜ್ಜೆಗಳ ಗುಂಪುಳ್ಳದ್ದಾಗಿಯೂ, ಹುಲಿಯ ಚರ್ಮದಿಂದ ಶೃಂಗರಿಸಲ್ಪಟ್ಟದ್ದಾಗಿಯೂ ಇದ್ದಿತು.

೧೭೦-೧೭೧. ಕಿರಣಗಳಿಂದ ಮನೋಹರವಾಗಿಯೂ, ನಾನಾರತ್ನಗಳಿಂದ ಶೋಭಿಸುತ್ತಲೂ ಇದ್ದಿತು. ಕ್ರೂರವಾದ ಸಿಂಹ ಮೊದಲಾದ ಪ್ರಾಣಿಗಳ ಚಿತ್ರದಿಂದಲೂ, ಹಕ್ಕಿಗಳ ಚಿತ್ರದಿಂದಲೂ ಕೂಡಿದ್ದಿತು. ಉತ್ತಮವಾದ ಅಸ್ತ್ರಗಳನ್ನು ಹಿಡಿದುಕೊಂಡಿದ್ದ ರಾಕ್ಷಸರಿಂದ ಕೂಡಿಯೂ, ಗುಡುಗಿನಂತೆ ಶಬ್ದಮಾಡುತ್ತಲೂ ಇದ್ದಿತು ನಿರ್ಮಲವಾಗಿಯೂ, ಉದಾರವಾಗಿಯೂ ಇರುವ ಉತ್ತಮವಾದ ರಥವನ್ನು ಹೊಂದಿದನು.

**ಗದಾಪರಿಘಸಂಪೂರ್ಣಂ ಮೂರ್ತಿಮಂತಮಿವಾನಲಂ ।**
**ಹೇಮಕಪೂರ್ರವಲಯಂ ಚಂದ್ರಮಂಡಲಕೂಬರಂ ॥ ೧೭೨ ॥**

**ಸ ಪತಾಕಂ ಧ್ವಜೋಪೇತಮಾದಿತ್ಯಸ್ಯೇವ ಮಂಡಲಂ ।**
**ಗಜೇಂದ್ರಭೋಗವಪುಷಂ ಕ್ವಚಿತ್ಕೇಸರವರ್ಚಸಾ ॥ ೧೭೩ ॥**

**ಯುಕ್ತಮೃಕ್ಷಸಹಸ್ರೇಣ ಸುಧಾರಾಂಬುದನಾದತಂ ।**
**ದೀಪ್ತಮಾಕಾಶಕಂ ದಿವ್ಯಂ ರಥಂ ಪರರಥಾರುಜಂ ॥ ೧೭೪ ॥**

**ಅಧ್ಯತಿಷ್ಠದ್ರಣಾಕಾಂಕ್ಷೀ ಮೇರುಂ ದೀಪ್ತ ಇವಾಂಶುಮಾನ್ ।**
**ತಾರಸ್ತು ಕ್ರೋಧವಿಸ್ತಾರೋ ಯಾನಂ ಸರ್ವಹರಂ ರಥಂ ॥ ೧೭೫ ॥**

**ಶೈಲಾಕಾರಾಭಿಸಂಕಾಶಂ ನೀಲಾಂಜನಚಯೋಪಮಂ ।**
**ಕಾಲಲೋಷ್ಟಂ ಚ ರತ್ನಾನಾಂ ಸಹೇಮಾಬದ್ಧಕೂಬರಂ ॥ ೧೭೬ ॥**

**ತಿಮಿರಾಂಗಾರಕಿರಣಂ ಗರ್ಜಂತಮಿವ ತೋಯದಂ ।**
**ಲೋಹಜಾಲೇನ ಮಹತಾ ಶತಸಂಖ್ಯೇನ ದಂಶಿತಂ ॥ ೧೭೭ ॥**

---

ಗದೆ, ಪರಿಘೆಗಳಿಂದ ತುಂಬಿದ್ದಿತು. ಪ್ರತ್ಯಕ್ಷವಾದ ಅಗ್ನಿದೇವನಂತೆ ಉರಿಯುತ್ತಿದ್ದಿತು. ಚಿನ್ನದ ಪಟ್ಟಿಯನ್ನು ಹಾಕಿದ್ದರು. ಚಂದ್ರಮಂಡಲದಂತೆ ಗುಂಬಗಳಿದ್ದುವು.

೧೭೩-೧೭೪. ಪತಾಕೆಯನ್ನು ಕಟ್ಟಿರುವ, ಧ್ವಜದಿಂದ ಕೂಡಿದ, ಸೂರ್ಯ ಪ್ರಕಾಶಮಾನವಾದ, ಆನೆಯ ಮೈಯಂತೆ ದಪ್ಪವಾದ, ಆಕಾರವುಳ್ಳದ್ದಾಗಿಯೂ, ಅಲ್ಲಲ್ಲಿಯೇ ಕೆಂಸರಿಯ ಬಣ್ಣವನ್ನು ಹೊಂದಿಯೂ ಇದ್ದಿತು. ಎಲ್ಲೆಲ್ಲಿಯೂ ಕರಡಿಗಳನ್ನು ಕೆತ್ತಿದ್ದರು. ನೀರುಳ್ಳ ಮೇಘದ ಧ್ವನಿಯಂತೆ ಸದ್ದುಮಾಡುತ್ತಿದ್ದಿತು. ಪ್ರಜ್ವಲಿಸುತ್ತ ಪ್ರಕಾಶಿಸುತ್ತ ದಿವ್ಯವಾದ ಶತ್ರುಗಳ ರಥಕ್ಕೆ ನೋವನ್ನು ಕೊಡುವ ರಥವನ್ನು ಮಯನು ಪ್ರಕಾಶಿಸುವ ಸೂರ್ಯನು ಮೇರುವನ್ನು ಹತ್ತುವಂತೆ ಹತ್ತಿದನು

೧೭೫-೧೭೬. ತಾರಕಾಸುರನೂ ಕೋಪಗೊಂಡು ಒಂದು ರಥವನ್ನು ಏರಿದನು. ಅದು ವಿಸ್ತಾರವಾಗಿಯೂ, ಸರ್ವರನ್ನೂ ನಾಶಮಾಡುವುದಾಗಿಯೂ, ಬೆಟ್ಟದಂತೆಯೂ ದೊಡ್ಡದಾಗಿಯೂ ನೀಲಪರ್ವತದಂತೆ ಕಪ್ಪಗೂ ರತ್ನಗಳ ಹಾರೆಕಾಲುಗಳಿಂದ ಕೂಡಿಯೂ, ಚಿನ್ನದಿಂದ ಮಾಡಿದ ದೂರಿಯುಳ್ಳದ್ದಾಗಿಯೂ ಇದ್ದಿತು.

೧೭೭-೧೭೮. ಇದ್ದಿಲಿನಂತೆ ಕಪ್ಪಗಿರುವ ಮೋಡವನ್ನು ಹೆದರಿಸುವುದಕ್ಕೋ ಎಂಬಂತೆ ಅನೇಕರೀತಿಯಲ್ಲಿ ಕಬ್ಬಿಣದ ಕವಚಗಳಿಂದ ಕಟ್ಟಲ್ಪಟ್ಟು ಕಬ್ಬಿಣದ ಪರಿಘಾ

ಆಯುಸ್ಯೈಃ ಪರಿಘೈಃ ಪೂರ್ಣಂ ಕ್ಷೇಪಣೀಯೈಶ್ಚ ಮುದ್ಗರೈಃ ।
ಪ್ರಾಸೈಃ ಪಾಶೈಶ್ಚ ವಿತತೈರಸಂಯುಕ್ತೈಶ್ಚ ಕಂಟಕೈಃ ॥ ೧೭೮ ॥

ಶೋಭನಂ ತ್ರಾಸನೀಯೈಶ್ಚ ತೋಮರೈಶ್ಚ ಪರಶ್ವಥೈಃ ।
ಉದ್ಯತಾಂ ದ್ವಿಷತಾಂ ಹೇತೋರ್ದ್ವಿತೀಯಮಿವ ಮಂದರಂ ॥ ೧೭೯ ॥

ಯುಕ್ತಂ ಖರಸಹಸ್ರೇಣ ಸೋಽಧ್ಯಾರೋಹದ್ರಥೋತ್ತಮಂ ।
ವಿರೋಚನಸ್ತು ಸಂಕ್ರುದ್ಧೋ ಗದಾಪಾಣಿರವಸ್ಥಿತಃ ॥ ೧೮೦ ॥

ಪ್ರಮುಖೇ ತಸ್ಯ ಸೈನ್ಯಸ್ಯ ದೀಪ್ತ ಶೃಂಗ ಇವಾಚಲಃ ।
ಯುಕ್ತಂ ಹಯಸಹಸ್ರೇಣ ಹಯಗ್ರೀವಸ್ತು ದಾನವಃ ॥ ೧೮೧ ॥

ವ್ಯೂಹಿತಂ ದಾನವಂ ವ್ಯೂಹಂ ಪರಿಚಕ್ರಾಮ ವೀರ್ಯವಾನ್ ।
ವಿಪ್ರಚಿತ್ತಿಸುತಶ್ಶ್ವೇತಃ ಶ್ವೇತಕುಂಡಲಭೂಷಣಂ ॥ ೧೮೨ ॥

ಸ್ಯಂದನಂ ವಾಹಯಾಮಾಸ ಪರಾನೀಕಸ್ಯ ಮರ್ದನಃ ।
ವ್ಯಾಯತಂ ಕಿಷ್ಕುಸಾಹಸ್ರಂ ಧನುರ್ವಿಸ್ಫಾರಯನ್ಮಹಾನ್ ॥ ೧೮೩ ॥

---

ಯುಧ, ಮುದ್ಗರ ಈಟಿಗಳಿಂದ ತುಂಬಲ್ಪಟ್ಟು ಮುಳ್ಳಿಲ್ಲದ ಗಂಟಿಲ್ಲದ ಹಗ್ಗಗಳಿಂದಲೂ ಒಲೆಗಳಿಂದಲೂ ಕೂಡಿದ್ದಿತು.

೧೭೯. ಹೆದರಿಕೆಯನ್ನುಂಟುಮಾಡುವ ಪದಾರ್ಥಗಳಾದ ತೋಮರ, ಕೊಡಲಿಗಳಿಂದ ತುಂಬಿದ ಶತ್ರುಗಳಿಗೋಸ್ಕರ ಎದ್ದಿರುವ ಎರಡನೇ ಮಂದರಪರ್ವತದಂತಿರುವ, ಸಾವಿರ ಕತ್ತೆಗಳನ್ನು ಕಟ್ಟಿ ಎಳೆಸುತ್ತಿರುವ, ರಥವನ್ನು ಆ ತಾರಕನು ಹತ್ತಿದನು.

೧೮೦. ವಿರೋಚನನು ಬಹು ಕೋಪಹೊಂದಿ ಗದೆಯನ್ನು ಕೈಯಲ್ಲಿ ಹಿಡಿದು ಪ್ರಕಾಶಮಾನವಾದ ಶಿಖರವನ್ನು ಹೊಂದಿದ ಬೆಟ್ಟದಂತೆ ಪ್ರಕಾಶಿಸುತ್ತ ಸೈನ್ಯದ ಮುಂಭಾಗದಲ್ಲಿ ನಿಂತನು.

೧೮೧. ಹಯಗ್ರೀವನೆಂಬ ದಾನವನು ಸಾವಿರ ಕುದುರೆಗಳಿಂದ ಕೂಡಿದ ವ್ಯೂಹರಚಿತವಾದ ಶಿಬಿರವನ್ನು ಸುತ್ತುತ್ತಿದ್ದನು.

೧೮೨-೧೮೩. ವಿಪ್ರಚಿತ್ತಿಯ ಮಗನಾದ ಶ್ವೇತನು ಬಿಳಿಯ ಕುಂಡಲವನ್ನು ಧರಿಸಿಕೊಂಡು ಶತ್ರುಗಳಿಗೆ ಭಯಂಕರವಾದ ರಥವನ್ನು ಹತ್ತಿದನು. ಮತ್ತು ಬಹು ದೊಡ್ಡದಾದ ಧನುಸ್ಸನ್ನು ಹೆದೆಯೇರಿಸಿ ಹಿಡಿದು ಹುಂಕಾರಮಾಡುತ್ತಿದ್ದನು.

ವರಾಹಃ ಪ್ರಮುಖೇ ತಸ್ಥೌ ಸಪ್ರರೋಹ ಇವಾಚಲಃ ।
ಖರಸ್ತು ವಿಕ್ಷರನ್ದರ್ಪಾನ್ನೇತ್ರಾಭ್ಯಾಂ ಕ್ರೋಧಜಂ ಜಲಂ ॥ ೧೨೪ ॥

ಸ್ಫುರದ್ದಂತೋಷ್ಠನಯನಃ ಸಂಗ್ರಾಮಂ ಸೋಭ್ಯಕಾಂಕ್ಷತ ।
ತ್ವಷ್ಟಾತ್ವಷ್ಟಾದಶಹಯಂ ಯಾನಮಾಸ್ಥಾಯ ದಾನವಃ ॥ ೧೨೫ ॥

ಶ್ವೇತಮೇಘಪ್ರತೀಕಾಶೋ ಯುದ್ಧಾಯಾಭಿಮುಖಸ್ಸ್ಥಿತಃ ।
ಅರಿಷ್ಟೋ ಬಲಿಪುತ್ರಶ್ಚ ವರಿಷ್ಠೋದ್ರಿಶಿಲಾಯುಧಃ ॥ ೧೨೬ ॥

ಯುದ್ಧಾಯಾಭಿಮುಖಸ್ತಸ್ಥೌ ಧರಾಧರ ವಿಕಂಪನಃ ।
ಕಿಶೋರಸ್ತ್ವತಿಸಂಹರ್ಷಾತ್ಕಿಶೋರ ಇವ ಚೋದಿತಃ ॥ ೧೨೭ ॥

ಅಭವದ್ದೈತ್ಯ ಮಧ್ಯೇ ಸಃ ಗ್ರಹಮಧ್ಯೇ ಯಥಾ ರವಿಃ ।
ಲಂಬಸ್ತು ಲಂಬಮೇಘಾಭಃ ಪ್ರಲಂಬಾಂಬರಭೂಷಣಃ ॥ ೧೨೮ ॥

ದೈತ್ಯವ್ಯೂಹಗತೋ ಭಾತಿ ಸ ನೀಹಾರ ಇವಾಂಶುಮಾನ್ ।
ವಸುಂಧರಾಭಸ್ತು ದನುಃ ದಶನೌಷ್ಠೇ ಕ್ಷಣಾಯುಧಃ ॥ ೧೨೯ ॥

---

೧೨೪. ವರಾಹನೆಂಬುವನು ಕೋಡುಗಲ್ಲುಗಳುಳ್ಳ ಬೆಟ್ಟದಂತೆ ಮುಖಭಾಗದಲ್ಲಿ ನಿಂತನು. ಖರನು ದರ್ಪದಿಂದಲೂ, ಕೋಪದಿಂದಲೂ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಹಲ್ಲುಗಳನ್ನೂ, ತುಟಿಗಳನ್ನೂ ಕೋಪದಿಂದ ನಡುಗಿಸುತ್ತ ಯುದ್ಧವನ್ನು ಅಪೇಕ್ಷಿಸುತ್ತಿದ್ದನು.

೧೨೫. ತ್ವಷ್ಟನು ಹದಿನೆಂಟು ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತು ಬಿಳಿಯ ಮೋಡದಂತೆ ಯುದ್ಧಕ್ಕೆ ಎದುರಾದನು.

೧೨೬. ಬಲಿಯ ಮಗನಾದ ಅರಿಷ್ಟನು ಬೆಟ್ಟಗಳನ್ನು ಹಿಡಿದು ಬೆಟ್ಟಗಳನ್ನು ಹೆದರಿಸುವವನಂತೆ ಯುದ್ಧಕ್ಕೆ ನಿಂತನು.

೧೨೭. ಕಿಶೋರನೆಂಬ ದೈತ್ಯನು ಬಹು ಸಂತೋಷದಿಂದ ಉಲ್ಲಾಸಪಡಿಸಿದ ಹುಡುಗರಂತೆ, ಗ್ರಹಮಧ್ಯದಲ್ಲಿ ಸೂರ್ಯನಿರುವಂತೆ ದೈತ್ಯರ ಮಧ್ಯೆ ನಿಂತನು.

೧೨೮-೧೨೯. ಲಂಬನೆಂಬುವನು ನೇತಾಡುತ್ತಿರುವ ಮೋಡದಂತೆ ಬಟ್ಟೆ ಒಡವೆಗಳನ್ನು ಜೋಲುಹಾಕಿಕೊಂಡು ನೇತಾಡಿಸುತ್ತ ದೈತ್ಯರ ಸೈನ್ಯದಲ್ಲಿ ಮಂಜಿನಿಂದ ಕೂಡಿದ ಸೂರ್ಯನಂತಿದ್ದನು. ಹಲ್ಲು, ತುಟಿ, ನೋಟಗಳಿಂದಲೇ ಕೊಲ್ಲಲು ಶಕ್ತಿಯುಳ್ಳ ವಸುಂಧರಾಭನು ಲಂಬನ ಹಿಂದೆ ನಿಂತನು.

ಹಂಸಸ್ತಿಷ್ಠತಿ ದೈತ್ಯಾನಾಂ ಪ್ರಮುಖೇ ಸ ಮಹಾಗ್ರಹಃ ।
ಅನ್ಯೇ ಹಯಗತಾಸ್ತತ್ರ ಗಜಸ್ಕಂಧಗತಾಃ ಪರೇ ॥ ೧೯೦ ॥

ಸಿಂಹವ್ಯಾಘ್ರಗತಾಶ್ಚಾನ್ಯೇ ವರಾಹರ್ಕ್ಷೇಷು ಚಾಪರೇ ।
ಕೇಚಿತ್ಖರೋಷ್ಟ್ರಯಾತಾರಃ ಕೇಚಿತ್ಪಯೋದವಾಹನಾಃ ॥ ೧೯೧ ॥

ಪತ್ತ್ರಯಸ್ತ್ವಪರೇ ದೈತ್ಯಾ ಭೀಷಣಾ ವಿಕೃತಾನನಾಃ ।
ಏಕಪಾದಾ ದ್ವಿಪಾದಾಶ್ಚ ನನೃತುರ್ಯುದ್ಧಕಾಂಕ್ಷಿಣಃ ॥ ೧೯೨ ॥

ಆಸ್ಫೋಟಯಂತೋ ಬಹವಃ ಕ್ಷ್ವೇಡಂತಶ್ಚ ತಥಾಪರೇ ।
ದೃಪ್ತಶಾರ್ದೂಲ ನಿರ್ಘೋಷಾ ನೇದುರ್ದಾನವ ಪುಂಗವಾಃ ॥ ೧೯೩ ॥

ತೇ ಗದಾ ಪರಿಘೈರುಗ್ರೈಃ ಶಿಲಾಮುಸಲಪಾಣಯಃ ।
ಬಾಹುಭಿಃ ಪರಿಘಾಕಾರೈಃ ತರ್ಜಯಂತಿ ಸ್ಮ ದೇವತಾಃ ॥ ೧೯೪ ॥

ಪ್ರಾಸೈಃ ಪಾಶೈಶ್ಚ ಖಡ್ಗೈಶ್ಚ ತೋಮರಾಂಕುಶಪಟ್ಟಿಶೈಃ ।
ಚಿಕ್ರೀಡುಸ್ತೇ ಶತಘ್ನೀಭಿಃ ಶತಧಾರೈಶ್ಚ ಮುದ್ಗರೈಃ ॥ ೧೯೫ ॥

---

೧೯೦-೧೯೧. ಹಂಸನು ಕೋಪಗೊಂಡು ಸೈನ್ಯದ ಮುಂದೆ ನಿಂತಿದ್ದನು. ಮತ್ತೆಕೆಲವರು ಕುದುರೆಗಳಮೇಲೂ, ಕೆಲವರು ಆನೆಗಳ ಮೇಲೂ, ಮತ್ತೆಕೆಲವರು ಸಿಂಹದಮೇಲೆಯೂ, ಕೆಲವರು ಹುಲಿಯ ಮೇಲೆಯೂ, ಹಂದಿಕರಡಿಗಳ ಮೇಲೆ ಕೆಲಕೆಲವರೂ ಕೂತು ಹೊರಟರು. ಕೆಲವರು ಕತ್ತೆ ಒಂಟೆಗಳಮೇಲೂ ಕುಳಿತಿದ್ದರು.

೧೯೨. ಕೆಲವರು ಕಾಲುನಡಗೆಯಿಂದ ಹೋದರು. ಇವರು ಭಯಂಕರರಾಗಿಯೂ ವಿಕಾರವಾದ ಮುಖವುಳ್ಳವರಾಗಿಯೂ ಇದ್ದರು. ಕೆಲವರು ಒಂದೇ ಕಾಲಿನಿಂದಲೂ, ಕೆಲವರು ಎರಡು ಕಾಲಿನಿಂದಲೂ ನಿಂತು ಯುದ್ಧವನ್ನು ಅಪೇಕ್ಷಿಸುತ್ತಿದ್ದರು. ಮತ್ತು ಕುಣಿಯುತ್ತಿದ್ದರು.

೧೯೩. ಕೆಲವರು ತೋಳು ತೊಡೆಗಳನ್ನು ತಟ್ಟುತ್ತಲೂ ಮತ್ತೆಕೆಲವರು ಗರ್ಜಿಸುತ್ತಲೂ ಕೊಬ್ಬಿದ ಹುಲಿಯಂತೆ ಕುಣಿದರು.

೧೯೪. ಅವರು ಗದೆ, ಪರಿಘ, ಕಲ್ಲು, ಮುಸಲಗಳನ್ನೂ ಹಿಡಿದು ಉದ್ದವಾದ ಬಾಹುಗಳನ್ನು ತೋರಿಸುತ್ತ ದೇವತೆಗಳನ್ನು ಹೆದರಿಸುತ್ತಿದ್ದರು.

೧೯೫. ಪ್ರಾಸ, ಪಾಶ, ಕತ್ತಿ, ತೋಮರ, ಪಟ್ಟಿಶ, ಬಂದೂಕ, ಗರಗಸ ಮುದ್ಗರಗಳನ್ನು ಹಿಡಿದು ಆಟವಾಡುತ್ತಿದ್ದರು.

ಖಡ್ಗೈಶ್ಶೂಲೈಶ್ಚ ಶೈಲೈಶ್ಚ ಪರಿಘೈಶ್ಚೋನ್ನತಾಯುಧೈಃ ।
ಯುಕ್ತಂ ವಲಾಹಕಗಣೈಃ ಸರ್ವತಃ ಸಂವೃತಂ ನಭಃ ॥ ೧೯೬ ॥

ಏವಂ ತದ್ದಾನವಂ ಸೈನ್ಯಂ ಸರ್ವಸತ್ವಮುದೋತ್ಕಟಂ ।
ದೇವತಾಭಿಮುಖಂ ತಸ್ಥೌ ಮೇಘಾನೀಕಮಿವೋದರಂ ॥ ೧೯೭ ॥

ತದದ್ಭುತಂ ದೈತ್ಯಸಹಸ್ರಗಾಢಂ ।
ವಾಯ್ವಗ್ನಿಶೈಲಾಂಬುದತೋಯಕಲ್ಪಂ ॥
ಬಲಂ ರಣೌಘಾಯುಸಮಭ್ಯುದೀರ್ಣಂ ।
ಯುಯುತ್ಸಯೋನ್ಮತ್ತಮಿವಾವಭಾಸೇ ॥ ೧೯೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದೈತ್ಯಸೈನ್ಯವರ್ಣನಂ
॥ ನಾಮ ಸಪ್ತತ್ರಿಂಶೋಽಧ್ಯಾಯಃ ॥

---

೧೯೬. ಖಡ್ಗ, ಶೂಲ, ಬೆಟ್ಟ, ಪರಿಘವೇ ಮುಂತಾದ ಒಳ್ಳೆಯ ಆಯುಧಗಳನ್ನು ಹಿಡಿದು ನಿಂತಿದ್ದರೆ ಮೋಡಗಳಿಂದ ಅಂತರಿಕ್ಷವು ತುಂಬಿರುವಂತಿದ್ದಿತು.

೧೯೭. ಎಲ್ಲಾ ರೀತಿಯ ಮದದಿಂದಲೂ, ಕೂಡಿದ ಆ ದಾನವರ ಸೈನ್ಯವು ಮೇಲಕ್ಕೆ ಎದ್ದ ಮೇಘಗಳ ಸೈನ್ಯಗಳಂತೆ ದೇವತೆಗಳಿಗೆ ಎದುರಾಗಿ ನಿಂತಿತು.

೧೯೮. ಅನೇಕ ದೈತ್ಯರನ್ನು ಹೊಂದಿರುವ ವಾಯು, ಬೆಂಕಿ, ಬೆಟ್ಟ, ಮೋಡ ಸಮುದ್ರಗಳಿಗೆ ಸಮವಾದ ಆ ದಾನವ ಸೈನ್ಯವು ಮುಂದೆ ನಿಂತು ಯುದ್ಧಕ್ಕೋಸ್ಕರ ನಿಂತು ಕೊಬ್ಬಿ ಕಾಣುತ್ತಿದ್ದಿತು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ದೈತ್ಯಸೈನ್ಯವರ್ಣನವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ.

## ॥ ಅಷ್ಟತ್ರಿಂಶೋಽಧ್ಯಾಯಃ ॥



**॥ ಪುಲಸ್ತ್ಯ ಉವಾಚ ॥**

**ಶ್ರುತಸ್ತೇ ದೈತ್ಯಸೈನ್ಯಸ್ಯ ವಿಸ್ತರಃ ಕುರುನಂದನ ।**
**ಸುರಾಣಾಮಪಿ ಸೈನ್ಯಸ್ಯ ವಿಸ್ತರಂ ವೈಷ್ಣವಂ ಶೃಣು ॥ ೧ ॥**

**ಆದಿತ್ಯಾ ವಸವೋ ರುದ್ರಾ ಅಶ್ವಿನೌ ಚ ಮಹಾಬಲೌ ।**
**ಸಬಲಾಸ್ಸಾನುಗಾಶ್ಚೈವ ಸನ್ನಹ್ಯಂತ ಯಥಾಕ್ರಮಂ ॥ ೨ ॥**

**ಪುರುಹೂತಶ್ಚ ಪುರತೋ ಲೋಕಪಾಲಃ ಸಹಸ್ರದೃಕ್ ।**
**ಗ್ರಾಮಣೀಸ್ಸರ್ವದೇವಾನಾಮಾರುರೋಹ ದ್ವಿಪಂ ವರಂ ॥ ೩ ॥**

---

## ಮೂವತ್ತೆಂಟನೆಯ ಅಧ್ಯಾಯವು

೧. ಪುಲಸ್ತ್ಯನು ಹೇಳಿದನು- ದಾನವರ ಸೈನ್ಯದ ವಿಸ್ತಾರವನ್ನು ಹೇಳಿದು ದಾಯಿತು. ಇನ್ನು ವಿಷ್ಣುವಿಗೆ ಸಹಾಯಕರಾದ ದೇವತೆಗಳ ವಿಸ್ತಾರವನ್ನು ಕೇಳು.

೨. ಆದಿತ್ಯರು, ವಸುಗಳು, ರುದ್ರರು, ಅಶ್ವಿನಿಗಳು, ಇನ್ನೂ ಬಲಿಷ್ಠರಾದ ವರೂ ತಮ್ಮ ಅನುಯಾಯಿಗಳೊಡನೆ ಕ್ರಮವಾಗಿ ಸನ್ನಾಹ ಮಾಡಿಕೊಂಡರು.

೩. ಲೋಕಪಾಲಕನೂ, ಸಾವಿರ ಕಣ್ಣುಳ್ಳವನೂ, ದೇವತೆಗಳ ಒಡೆಯನೂ ಆದ ಇಂದ್ರನು ಉತ್ತಮವಾದ ಐರಾವತವೆಂಬ ಆನೆಯನ್ನು ಹತ್ತಿದನು.

ಸವ್ಯೇ ಚಾಸ್ಯ ರಥಃ ಪಾರ್ಶ್ವೇ ಪಕ್ಷಿಪ್ರವರಕೇತನಃ ।
ಸುಚಾರುಚಕ್ರಚರಣೋ ಹೈಮವಸ್ತ್ರಪರಿಷ್ಕೃತಃ ॥ ೪ ॥

ದೇವಗಂಧರ್ವಯಕ್ಷಾದ್ಯೈರನುಯಾತಃ ಸಹಸ್ರಶಃ ।
ದೀಪ್ತಿಮದ್ಭಿಶ್ಚ ಸ್ವರ್ಗಸ್ಥೈ ಬ್ರಹ್ಮರ್ಷಿಭಿರಭಿಷ್ಟುತಃ ॥ ೫ ॥

ವಜ್ರವಿಸ್ಫಾರಿತೋದ್ಭೂತೈರ್ವಿದ್ಯುದಿಂದ್ರಾಯುಧಪ್ರಭೈಃ ।
ಯುಕ್ತಂ ವಲಾಹಕಗಣೈಃ ಪರ್ವತೈರಿವಕಾಮಗೈಃ ॥ ೬ ॥

ಯಮಾರೂಢಃ ಸಭಗವಾನ್ಪರ್ಯೇತಿ ಸಕಲಂ ಜಗತ್ ।
ಹವಿರ್ಧಾನೇಷು ಗಾಯಂತಿ ವಿಪ್ರಾ ಮಖಮುಖೇ ಸ್ಥಿತಾಃ ॥ ೭ ॥

ಸ್ವರ್ಗಸಂಗ್ರಾಮಯಾತೇಷು ದೇವತೂರ್ಯನಿನಾದಿಷು ।
ಸದಾ ಯಮುಪನೃತ್ಯಂತಿ ಶತಶೋಽಪ್ಸರೋ ಗಣಾಃ ॥ ೮ ॥

---

೪-೫. ಈ ಇಂದ್ರನ ಬಲದಲ್ಲಿ ಗರುಡನೇ ಧ್ವಜವಾಗಿ ಉಳ್ಳ ವಿಷ್ಣುವು ಸಿದ್ಧವಾದನು. ಚೆನ್ನಾಗಿರುವ ಚಕ್ರವನ್ನು ಹಿಡಿದು ಸರಿಗೆಯ ಬಟ್ಟೆಯನ್ನುಟ್ಟು ದೇವ ಗಂಧರ್ವ ಯಕ್ಷರಿಂದ ಅನುಸರಿಸಲ್ಪಟ್ಟವನಾಗಿ ಸ್ವರ್ಗದಲ್ಲಿದ್ದ ಬ್ರಹ್ಮರ್ಷಿಗಳಿಂದ ಹೊಗಳಲ್ಪಡುತ್ತಿದ್ದನು.

೬. ಶಿಡಿಲನ್ನು ಸುರಿಸುತ್ತಿರುವ ಮಿಂಚಿನಿಂದ ಪ್ರಕಾಶಿತವಾದ ಕಾಮನ ಬಿಲ್ಲನ್ನು ತೋರಿಸುವ ಪರ್ವತಗಳಂತೆ ಎದ್ದ ಮೋಡಗಳನ್ನೂ ಇಂದ್ರನು ಕರೆದುಕೊಂಡು ಹೊರಟನು.

೭-೮. ಯಾವ ಮೋಡಗಳನ್ನು ಹತ್ತಿ ಇಂದ್ರನು ಸಕಲ ಜಗತ್ತನ್ನೂ ನಾಶ ಮಾಡುವನೋ ಅಂತಹ ಮೋಡಗಳೊಡನೆ ಹೊರಟನು. ಯಾಗದ ಆದಿಯಲ್ಲಿ ಬ್ರಾಹ್ಮಣರು ಹವಿಸ್ಸನ್ನು ಹೋಮಮಾಡುವಾಗ ಸ್ತುತಿಸಲ್ಪಡುವ ಆ ಇಂದ್ರನು ಹೊರಟನು. ಸ್ವರ್ಗದ ಯುದ್ಧದಲ್ಲಿ ಧ್ವನಿ ಮಾಡುವ ದುಂದುಭಿಗಳು ಮೊಳಗುತ್ತಿದ್ದುವು. ಅಪ್ಸರಸ್ತ್ರೀಯರು ಸ್ತುತಿಸುತ್ತಲೂ, ಕುಣಿದೂ ಯಾವ ಇಂದ್ರನನ್ನು ಸಂತೋಷ ಪಡಿಸುತ್ತಿದ್ದರೋ ಅವರೂ ಹೊರಟರು.

ಕೇತುನಾ ಗಜರಾಜೇನ ರಾಜಮಾನೋ ಯಥಾ ರವಿಃ ।
ಯುಕ್ತೋ ಹಯಸಹಸ್ರೇಣ ಮನೋ ಮಾರುತರಂಹಸಾ ॥ ೯ ॥

ಯಸ್ಸ್ಯಂದನವರೋ ಭಾತಿ ಗುಪ್ತೋ ಮಾತಲಿನಾ ತದಾ ।
ಕೃತ್ಸ್ನಃ ಪರಿವೃತೋ ಮೇರುರ್ಭಾಸ್ಕರಸ್ಯೇವ ತೇಜಸಾ ॥ ೧೦ ॥

ಯಮಸ್ತು ದಂಡಮುದ್ಯಮ್ಯ ಕಾಲಯುಕ್ತಂ ಚ ಮುದ್ಗರಂ ।
ತಸ್ಥೌ ಸುರಗಣಾನೀಕೇ ದೈತ್ಯಾನ್ನಾದೇನ ಭೀಷಯನ್ ॥ ೧೧ ॥

ಚತುರ್ಭಿಸ್ಸಾಗರೈರ್ಯುಕ್ತೋ ಲೇಲಿಹಾನೈಶ್ಚ ಪನ್ನಗೈಃ ।
ಶಂಖಮುಕ್ತಾಂಗದಧರೋ ಬಿಭ್ರತ್ತೋಯಮಯಂ ವಪುಃ ॥ ೧೨ ॥

ಕಾಲಪಾಶಾನ್ಸಮಾವಿಧ್ಯ ಹಯೈಶ್ಶಶಿಕರೋಪಮೈಃ ।
ವಾಯ್ವೀರಿತಜಲಾಕಾರೈಃ ಕುರ್ವಂಲ್ಲೀಲಾಸ್ಸಹಸ್ರಶಃ ॥ ೧೩ ॥

ಪಾಂಡುರೋದ್ಧೂತವಸನಃ ಪ್ರವಾಳರುಚಿರಾಂಗದಃ ।
ಮಣಿಶ್ಯಾಮೋತ್ತಮವಪುರ್ಹಾರಭಾರಾರ್ಪಿತೋ ಧರಃ ॥ ೧೪ ॥

---

೯-೧೦. ಐರಾವತದ ಧ್ವಜದಿಂದ ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಮನಸ್ಸು ಗಾಳಿಗಳಂತೆ ವೇಗವುಳ್ಳ, ಸಾವಿರ ಕುದುರೆಗಳನ್ನೂ ಕಟ್ಟಿ ಮಾತಳಿಯು ಕಾಪಾಡುತ್ತಿರುವ ರಥವನ್ನು ಹತ್ತಿ ಹೊರಟನು.

೧೧. ಯಮನು ಯಮದಂಡವನ್ನೂ ಮುದ್ಗರವನ್ನೂ ಹಿಡಿದು ಕಾಲನಿಂದ ಕೂಡಿಕೊಂಡು ದೈತ್ಯರನ್ನು ಗರ್ಜನೆಯಿಂದಲೇ ಹೆದರಿಸುತ್ತ ದೇವಸೈನ್ಯದಲ್ಲಿ ನಿಂತನು

೧೨-೧೩. ನಾಲಗೆಯನ್ನು ಮುಂದಕ್ಕೆ ನೀಡುತ್ತಿರುವ ಹಾವುಗಳುಳ್ಳ, ನಾಲ್ಕು ಸಮುದ್ರಗಳಿಂದ ಕೂಡಿಯೂ, ಶಂಖ ಮತ್ತು ಭುಜ ಕೀರ್ತಿಗಳನ್ನು ಧರಿಸಿ ನೀರಿನ ಶರೀರವನ್ನೂ ಧರಿಸಿ ಕಾಲಪಾಶಗಳನ್ನು (ವರುಣ ಪಾಶ) ಸರಿಮಾಡಿಕೊಂಡು ಛಟೀರೆಂದು ಸದ್ದುಮಾಡುತ್ತ, ಬೆಳ್ಳಗಿರುವ ಮತ್ತು ವಾಯುವಿನಿಂದ ಮೇಲಕ್ಕೆದ್ದ ಅಲೆಗಳಂತೆಯೂ ಇರುವ ಕುದುರೆಗಳಿಂದ ಕೂಡಿಕೊಂಡು ಅನೇಕ ಲೀಲೆಗಳನ್ನಾಡುತ್ತ ಬಿಳಿಯ ಬಟ್ಟೆಯನ್ನುಟ್ಟ ಹವಳದಿಂದ ಮಾಡಿದ ಭುಜಕೀರ್ತಿಯುಳ್ಳವನಾಗಿ ಮಣಿಗಳನ್ನು ಧರಿಸಿ ಉತ್ತಮವಾದ ಶರೀರವುಳ್ಳವನಾಗಿ ಹಾರವನ್ನು ಹಾಕಿಕೊಂಡು

ವರುಣಃ ಪಾಶಧೃಙ್ಮಧ್ಯೇ ದೇವಾನೀಕಸ್ಯ ಸಂಸ್ಥಿತಃ ।
ಯುದ್ಧವೇಳಾಮಭಿಲಷನ್ಭಿನ್ನವೇಲ ಇವಾರ್ಣವಃ ॥ ೧೫ ॥

ಯಕ್ಷರಾಕ್ಷಸಸೈನ್ಯೇನ ಗುಹ್ಯಕಾನಾಂ ಗಣೈರಪಿ ।
ಯುಕ್ತಶ್ಚ ಶಂಖಪದ್ಮಾಭ್ಯಾಂ ನಿಧೀನಾಮಧಿಪಃ ಪ್ರಭುಃ ॥ ೧೬ ॥

ರಾಜರಾಜೇಶ್ವರಶ್ಶ್ರೀಮಾನ್ಗದಾಪಾಣಿರದೃಶ್ಯತ ।
ವಿಮಾನಯೋಧೀ ಧನದೋ ವಿಮಾನೇ ಪುಷ್ಪಕೇ ಸ್ಥಿತಃ ॥ ೧೭ ॥

ಸ ರಾಜರಾಜಶ್ಶುಶುಭೇ ಯುದ್ಧಾರ್ಥಂ ನರವಾಹನಃ ।
ಈಕ್ಷಮಾಣಸ್ಸ್ವಸಂಗ್ರಾಮಂ ಸಾಕ್ಷಾದಿವ ಶಿವಸ್ಸ್ವಯಂ ॥ ೧೮ ॥

ಪೂರ್ವಪಕ್ಷೇ ಸಹಸ್ರಾಕ್ಷಃ ಪಿತೃರಾಜಸ್ತು ದಕ್ಷಿಣೇ ।
ವರುಣಃ ಪಶ್ಚಿಮೇ ಪಕ್ಷೇ ಉತ್ತರೇ ನರವಾಹನಃ ॥ ೧೯ ॥

ಚತುರ್ಷು ಯುಕ್ತಾಶ್ಚತ್ವಾರೋ ಲೋಕಪಾಲಾ ಮಹಾಬಲಾಃ ।
ಸ್ವಾಸು ದಿಕ್ಷು ಚ ರಕ್ಷಂತಃ ತಸ್ಯ ದೇವಬಲಸ್ಯ ತೇ ॥ ೨೦ ॥

---

ಜೋಲಾಡಿಸುತ್ತ ಪಾಶವನ್ನು ಹಿಡಿದು ವರುಣನು ಎಲ್ಲೆಯನ್ನು ಮೀರಿದ ಸಮುದ್ರದಂತೆ ಯುದ್ಧದ ಕಾಲವನ್ನು ನಿರೀಕ್ಷಿಸುತ್ತ ದೇವತೆಗಳ ಸೈನ್ಯದ ಮಧ್ಯದಲ್ಲಿ ನಿಂತನು.

೧೬-೧೮. ಯಕ್ಷರಾಕ್ಷಸ ಗುಹ್ಯಕ ಸೈನ್ಯದಿಂದ ಕೂಡಿ ಶಂಖ ಪದ್ಮಗಳನ್ನೂ ಧರಿಸಿ ನಿಧಿಗಳಿಗೆ ಒಡೆಯನಾದ, ರಾಜರಾಜನಾದ, ಶ್ರೀಮಂತನಾದ, ಕುಬೇರನು ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ವಿಮಾನದಲ್ಲಿ ಯುದ್ಧಮಾಡಲು ಪುಷ್ಪಕದಲ್ಲಿ ಕುಳಿತನು. ಯಾವಾಗಲೂ ನರವಾಹನನಾದ ಆ ರಾಜರಾಜನಾದ ಕುಬೇರನು ಪುಷ್ಪಕದಲ್ಲಿ ಕುಳಿತು ಯುದ್ಧವನ್ನು ಎದುರು ನೋಡುತ್ತಾ ಪ್ರತ್ಯಕ್ಷನಾದ ಶಿವನಂತೆ ಕಂಡು ಬಂದನು.

೧೯-೨೦. ಪೂರ್ವ ದಿಕ್ಕಿನಲ್ಲಿ ಇಂದ್ರನೂ, ದಕ್ಷಿಣದಲ್ಲಿ ಯಮನೂ, ಪಶ್ಚಿಮದಲ್ಲಿ ವರುಣನೂ, ಉತ್ತರದಲ್ಲಿ ಕುಬೇರನೂ, ಆ ದೇವಸೈನ್ಯವನ್ನು ಕಾಪಾಡುತ್ತಿದ್ದರು.

ಸೂರ್ಯಸ್ಸಪ್ತಾಶ್ವಯುಕ್ತೇನ ರಥೇನಾನಿಲಗಾಮಿನಾ ।
ಶ್ರಿಯಾ ಜಾಜ್ವಲ್ಯಮಾನೇನ ದೀಪ್ಯಮಾನೈಶ್ಚ ರಶ್ಮಿಭಿಃ ॥ ೨೦ ॥

ಉದಯಾಸ್ತಮನೇ ಚಕ್ರೇ ಮೇರುಪರ್ಯಂತಗಾಮಿನಾ ।
ತ್ರಿದಿವದ್ವಾರಚಕ್ರೇಣ ತಪಸಾ ಲೋಕಮವ್ಯಯಂ ॥ ೨೨ ॥

ಸಹಸ್ರರಶ್ಮಿಯುಕ್ತೇನ ಭ್ರಾಜಮಾನೇನ ತೇಜಸಾ ।
ಚಚಾರ ಮಧ್ಯೇ ದೇವಾನಾಂ ದ್ವಾದಶಾತ್ಮಾ ದಿನೇಶ್ವರಃ ॥ ೨೩ ॥

ಸೋಮಶ್ಶ್ವೇತಹಯೋ ಭಾತಿ ಸ್ಯಂದನೇ ಶೀತರಶ್ಮಿವಾನ್ ।
ಹಿಮತೋಯಸ್ಸವರ್ಣಾಭಿರ್ಭಾಭಿರಾಹ್ಲಾದಯನ್ ಜಗತ್ ॥ ೨೪ ॥

ತಮೃಕ್ಷಯೋಗಾನುಗತಂ ಶಿಶಿರಾಂಶುಂ ದ್ವಿಜೇಶ್ವರಂ ।
ಶಶಚ್ಛಾಯಾಂಕಿತತನುಂ ನೈಶಸ್ಯ ತಮಸಃ ಕ್ಷಯಂ ॥ ೨೫ ॥

ಜ್ಯೋತಿಷಾಮೀಶ್ವರಂ ವ್ಯೋಮ್ನಿ ರಸಾನಾಂ ಪ್ರಭುಮವ್ಯಯಂ ।
ಓಷಧೀನಾಂ ಪವಿತ್ರಾಣಾಂ ನಿಧಾನಮಮೃತಸ್ಯ ಚ ॥ ೨೬ ॥

---

೨೧-೨೩. ಸೂರ್ಯನು ವಾಯುವೇಗವುಳ್ಳ ಏಳು ಕುದುರೆಗಳನ್ನು ಕಟ್ಟಿರುವ ರಥದಲ್ಲಿ ಕುಳಿತು ಹೊರಟನು. ತಾನು ಪ್ರಕಾಶಮಾನವಾಗಿ ಮೇರುವಿನ ಕೊನೆಯ ವರಿಗೂ ಹೋಗುವ ಕಾಂತಿಯುಳ್ಳ ಸ್ವರ್ಗದ ದ್ವಾರದಲ್ಲಿರುವ ತನ್ನ ಚಕ್ರದಿಂದ, ತಪಶ್ಶಕ್ತಿಯಿಂದ ಲೋಕಗಳಿಗೆ ಉದಯಾಸ್ತಮಾನಗಳನ್ನು ಮಾಡುತ್ತಿದ್ದನು ತಾನು ತನ್ನ ಪ್ರಕಾಶಮಾನವಾದ ರಶ್ಮಿಗಳನ್ನು ಹೊಂದಿ ದೇವತೆಗಳ ಮಧ್ಯದಲ್ಲಿ ಸುತ್ತುತ್ತಿದ್ದನು.

೨೪. ಚಂದ್ರನು ಮಂಜಿನ ನೀರಿನಂತೆ ಬೆಳ್ಳಗಿರುವ ಕಿರಣಗಳಿಂದ ಪ್ರಪಂಚವನ್ನು ಸಂತೋಷಪಡಿಸುತ್ತ ತಂಪಾಗಿರುವ ಕಿರಣವುಳ್ಳವನಾಗಿ ಬಿಳಿಯ ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತು ಹೊರಟನು.

೨೫-೨೬. ನಕ್ಷತ್ರಗಳ ಯೋಗಗಳನ್ನು ಯಾವಾಗಲೂ ಅನುಸರಿಸುತ್ತಿರುವ ತಣ್ಣಗಿರುವ ಕಿರಣಗಳುಳ್ಳ, ಬ್ರಾಹ್ಮಣರಿಗೆ ಒಡೆಯನಾದ, ಶಶಾಂಕನಾದ, ರಾತ್ರಿಯ ಕತ್ತಲೆಯನ್ನು ನಾಶಮಾಡುವ, ಅಂತರಿಕ್ಷದ ಜ್ಯೋತಿಸ್ಸಿಗೆ ಒಡೆಯನಾದ, ರಸಗಳಿಗೆ

ಜಗತಃ ಪ್ರಥಮಂ ಭಾಗಂ ಸೌಮ್ಯಂ ಸತ್ಯಮಯಂ ರಸಂ ।
ದದೃಶುರ್ದಾನವಾಸ್ಸೋಮಂ ಹಿಮಪ್ರಹರಣಂ ಸ್ಥಿತಂ ॥ ೨೭ ॥

ಯಃ ಪ್ರಾಣಃ ಸರ್ವಭೂತಾನಾಂ ಪಂಚಧಾ ಭಿದ್ಯತೇ ನೃಷು ।
ಸಪ್ತಸ್ಕಂಧಗತೋ ಲೋಕೇ ತ್ರಿದಿವಂ ಚ ಚಚಾರ ಯಃ ॥ ೨೮ ॥

ಯಮಾಹುರಗ್ನಿಕರ್ತಾರಂ ಸರ್ವಪ್ರಭವಮೀಶ್ವರಂ ।
ಸಪ್ತಸ್ವರಗತಾ ಯಸ್ಯ ಯೋನಿರ್ಗೀರ್ಭಿರುದೀರ್ಯತೇ ॥ ೨೯ ॥

ಯಂ ವದಂತ್ಯುತ್ತಮಂ ಭೂತಂ ಯಂ ವದಂತ್ಯಶರೀರಿಣಂ ।
ಯಮಾಹುರಾಕಾಶಗಮಂ ಶೀಘ್ರಗಂ ಶಬ್ದಯೋನಿಜಂ ॥ ೩೦ ॥

ಸವಾಯುಸ್ಸರ್ವಭೂತಾಯುರುದ್ಧತಃ ಸ್ವೇನ ತೇಜಸಾ ।
ಪವೌ ಪ್ರವ್ಯಥಯನ್ದೈತ್ಯಾನ್ಪ್ರತಿಲೋಮಗತೋ ಹಿ ಸಃ ॥ ೩೧ ॥

---

ಒಡೆಯನಾದ, ನಾಶರಹಿತನಾದ ಓಷಧಿಗಳನ್ನು ಕಾಪಾಡುತ್ತಿರುವ, ಅಮೃತಕ್ಕೆ ಪಾತ್ರೆಯಾದ, ಪ್ರಪಂಚಕ್ಕೆ ಮೊದಲನೆಯ ಭಾಗವಾದ, ಸೌಮ್ಯನಾದ, ಸತ್ಯರೂಪನೂ, ರಸರೂಪನೂ, ಆದ ಹಿಮದಿಂದ ಹೊಡೆಯುತ್ತಿರುವ ಚಂದ್ರನನ್ನು ದಾನವರು ನೋಡಿದರು.

೨೮–೩೧. ಸರ್ವ ಪ್ರಾಣಿಗಳಿಗೂ ಪ್ರಾಣರೂಪನಾದ ಮನುಷ್ಯರಲ್ಲಿ ಐದು ಭಾಗವಾಗಿ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನಗಳೆಂದು ಭೇಧವನ್ನು ಹೊಂದುವ ಪ್ರಪಂಚದಲ್ಲಿ ಆವಹ, ನಿವಹ, ಸಂಗಹ ಮೊದಲಾದ ಏಳು ಭೇದಗಳನ್ನು ಹೊಂದಿರುವ, ಮೂರು ಲೋಕದಲ್ಲಿಯೂ ಸಂಚರಿಸುವ, ಅಗ್ನಿಯನ್ನು ಹುಟ್ಟಿಸುವ, ಎಲ್ಲಕ್ಕೂ ಉತ್ಪತ್ತಿಸ್ಥಾನನಾಗಿ, ಒಡೆಯನಾದ, ಸ್ಥಾನಭೇದದಿಂದ ನಿಷಾಧ, ಋಷಭ, ಗಾಂಧಾರ ಷಡ್ಜ, ಮಧ್ಯಮ, ಧೈವತ, ಪಂಚಮವೆಂಬ ಭೇದಗಳನ್ನು ಹೊಂದುವ, ಉತ್ತಮಭೂತವಾದ, ಅಶರೀರಿಯಾದ, ಆಕಾಶದಲ್ಲಿ ಓಡಾಡುವ, ಜಾಗ್ರತೆ ಹೋಗುವ, ಶಬ್ದಕ್ಕೆ ಜನಕನಾದ, ವಾಯುವು ತನ್ನ ಶಕ್ತಿಯಿಂದ ಉದ್ಧತನಾಗಿ ದೈತ್ಯರನ್ನು ನೋಯಿಸುತ್ತ ಪ್ರತಿಲೋಮವಾಗಿ (ವಿರುದ್ಧವಾಗಿ) ಬೀಸಿದನು.

ಮರುತಾ ದೇವಗಂಧರ್ವವಿದ್ಯಾಧರಗಣೈಸ್ಸಹ ।
ಚಿಕ್ರೀಡೊರಶ್ಮಿಭಿಶ್ಶುಭ್ರೈಃ ನಿರ್ಮುಕ್ತೈರಿವ ಪನ್ನಗೈಃ ॥ ೩೨ ॥

ಸೃಜನ್ತಸ್ಸರ್ಪಪತಯೋ ತೀವ್ರಂ ರೋಷಮಯಂ ವಿಷಂ ।
ಶರಭೂತಾ ವಿಲಗ್ನಾಶ್ಚ ಚೇರುರ್ವ್ಯಾತ್ತಾನನಾ ದಿವಿ ॥ ೩೩ ॥

ಪರ್ವತಾಶ್ಚ ಶಿಲಾಶೃಂಗೈಃ ಶತಶಾಖೈಶ್ಚ ಪಾದಪೈಃ ।
ಉಪತಸ್ಥುಸ್ಸುರಗಣಾ ಪ್ರಹರ್ತುಂ ದಾನವೇ ಬಲೇ ॥ ೩೪ ॥

ಯಸ್ಯ ದೇವೋ ಹೃಷೀಕೇಶಃ ಪದ್ಮನಾಭಸ್ತ್ರಿವಿಕ್ರಮಃ ।
ಯುಗಾಂತೇ ಕೃಷ್ಣವರ್ತ್ಮಾ ಯೋ ವಿಶ್ವಸ್ಯ ಜಗತಃ ಪ್ರಭುಃ ॥ ೩೫ ॥

ಸರ್ವಯೋನಿಸ್ಸಮಧುಹಾ ಹವ್ಯಭುಕ್ಕ್ರತುಸಂಸ್ಥಿತಃ ।
ಭೂಮ್ಯಾಪೋವ್ಯೋಮಭೂತಾತ್ಮಾ ಶ್ಯಾಮಶ್ಶಾಂತಿಕರೋರಿಹಾ ॥ ೩೬ ॥

---

೩೨. ಈ ಗಾಳಿಯು ದೇವತೆಗಳು, ಗಂಧರ್ವರು, ವಿದ್ಯಾಧರರುಗಳೊಡನೆ ಶುಭ್ರವಾದ ತೇಜಸ್ಸಿನಿಂದ ಪರೆಯನ್ನು ಬಿಟ್ಟ ಹಾವಿರಂತೆ ಆಡುತ್ತಿದ್ದನು.

೩೩. ಸರ್ಪಶ್ರೇಷ್ಠರು ರೋಷದಿಂದ ಕೂಡಿದ ವಿಷವನ್ನು ಸೃಷ್ಟಿಸುತ್ತಾ ಬಾಯನ್ನು ತೆರೆದುಕೊಂಡು ಬಿಲ್ಲಿನಿಂದ ಬಿಟ್ಟ ಬಾಣದಂತೆ ಅಂತರಿಕ್ಷದಲ್ಲಿ ಸುತ್ತಿದವು

೩೪. ಪರ್ವತಗಳೂ ಕೂಡ ಕೋಡುಗಲ್ಲುಗಳಿಂದಲೂ, ನಾನಾಶಾಖೆಗಳುಳ್ಳ ಮರಗಳಿಂದಲೂ ಕೂಡಿ ದಾನವರ ಸೈನ್ಯವನ್ನು ನಾಶಮಾಡಲು ದೇವತೆಗಳನ್ನು ಹೊಂದಿದುವು.

೩೫-೩೬. ಇಂದ್ರಿಯಗಳಿಗೆ ಒಡೆಯನಾದ, ನಾಭಿಯಲ್ಲಿ ಪದ್ಮವುಳ್ಳ, ತ್ರಿವಿಕ್ರಮಾವತಾರ ಮಾಡಿದ್ದ, ಪ್ರಳಯಕಾಲದಲ್ಲಿ ಪ್ರಳಯಾಗ್ನಿಯಾದ, ಎಲ್ಲಾ ಜಗತ್ತಿಗೂ ಒಡೆಯನಾದ, ಎಲ್ಲಕ್ಕೂ ಉತ್ಪತ್ತಿಸ್ಥಾನನಾದ, ಹವ್ಯವನ್ನು ತಿನ್ನುತ್ತಾ ಯಾಗದಲ್ಲಿರುವ ಭೂಮಿ ನೀರು ಆಕಾಶಗಳೇ ಆತ್ಮವಾಗಿ ಉಳ್ಳ, ಶ್ಯಾಮವರ್ಣವುಳ್ಳ, ಶಾಂತಿಯನ್ನು

ಸೋಮಾರ್ಕಾಗ್ನಿಮಯಂ ಚಕ್ರಮುದ್ಯಮ್ಯೋತ್ತಮ ತೇಜಸಂ ।
ಅವಿಘ್ನಮಸುರಾದೀನಾಂ ವಧಂ ಚಕ್ರೇ ಗದಾಧರಃ ॥ ೩೭ ॥

ಸವ್ಯೇನಾಲಂಬ್ಯ ಮಹತೀಂ ಸರ್ವಾಸುರವಿನಾಶಿನೀಂ ।
ಕರೇಣ ಕಾಳೀಂ ವಪುಷಾ ಶತ್ರುಕಾಲಪ್ರದಾಂ ಗದಾಂ ॥ ೩೮ ॥

ಶೇಷೈರ್ಭುಜೈಃ ಪ್ರದೀಪ್ತಾಂಶುರ್ಭುಜಗಾರಿಧ್ವಜಃ ಪ್ರಭುಃ ।
ದಧಾರಾಯುಧಜಾತಾನಿ ಶಾರ್ಙ್ಗಾದೀನಿ ಮಹಾಬಲಃ ॥ ೩೯ ॥

ಸ ಕಶ್ಯಪಸ್ಯಾತ್ಮಭವಂ ದ್ವಿಜಂ ಭುಜಗಭೋಜನಂ ।
ಪವನಾಧಿಕಸಂಯಾತಂ ಗಗನಂ ಕ್ಷೋಭಿತಂ ಖಗಂ ॥ ೪೦ ॥

ಭುಜಗೇಂದ್ರೇಣ ವದನೇ ನಿವಿಷ್ಟೇನ ವಿರಾಜಿತಂ ।
ಅಮೃತಾರಂಭಸಂಯುಕ್ತಂ ಮಂದರಾದ್ರಿಮಿವೋಚ್ಛ್ರಿತಂ ॥ ೪೧ ॥

---

ದೊರಕಿಸುವ, ಆ ಶತ್ರುನಾಶಕನಾದ ವಿಷ್ಣುವು, ಚಂದ್ರ, ಸೂರ್ಯ, ಅಗ್ನಿರೂಪವಾದ, ಉತ್ತಮ ತೇಜಸ್ಸುಳ್ಳ ಚಕ್ರವನ್ನು ಎತ್ತಿ ನಿರ್ಬಾಧಕವಾಗಿ ಅಸುರರನ್ನು ಕೊಲ್ಲುತ್ತಾ ಬಂದನು.

೩೮. ದಾನವರೆಲ್ಲರನ್ನೂ ಧ್ವಂಸಮಾಡುವ, ಕಪ್ಪಗಿರುವ, ಶತ್ರುಗಳಿಗೆ ಸಾವನ್ನುಂಟುಮಾಡುವ, ಗದೆಯನ್ನು ಬಲಗೈಯಲ್ಲಿ ಹಿಡಿದು ಕೊಲ್ಲುತ್ತ ಬಂದನು.

೩೯. ಗರುಡಧ್ವಜನಾದ ವಿಷ್ಣುವು ಉಳಿದ ತೋಳುಗಳಿಂದ ಶಾರ್ಙ್ಗವೇ ಮೊದಲಾದ ಆಯುಧಗಳನ್ನು ಹಿಡಿದಿದ್ದನು.

೪೦-೪೧. ಕಶ್ಯಪನ ಮಗನಾದ, ಪಕ್ಷಿಯಾದ, ಸರ್ಪಗಳನ್ನು ತಿನ್ನುವ, ಗಾಳಿಗಿಂತಲೂ ವೇಗವುಳ್ಳ, ಅಂತರಿಕ್ಷವನ್ನೇ ಕ್ಷೋಭಿಸುತ್ತಿರುವ, ಅಂತರಿಕ್ಷಸಂಚಾರಿಯಾದ ಸರ್ಪರಾಜನನ್ನು ಬಾಯಲ್ಲಿ ಕಚ್ಚಿಕೊಂಡಿರುವ, ಅಮೃತವನ್ನು ಹೊಂದುವ ಪರಾಕ್ರಮವನ್ನು ತೋರಿಸಿರುವ, ಮಂದರಪರ್ವತದಂತೆ ಬೆಳೆದಿರುವ ಗರುಡನನ್ನು ವಿಷ್ಣುವು ಹತ್ತಿದನು.

ದೇವಾಸುರವಿಮರ್ದೇಷು ಬಹುಶೋ ದೃಷ್ಟವಿಕ್ರಮಂ ।
ಮಹೇಂದ್ರೇಣಾಮೃತಸ್ಯಾರ್ಥೇ ವಜ್ರೇಣ ಕೃತಲಕ್ಷಣಂ ॥ ೪೨ ॥

ವಿಚಿತ್ರಪತ್ರವಸನಂ ಧಾತುಮಂತಮಿವಾಚಲಂ ।
ಸ್ಫೀತಕ್ರೋಡಾವಲಂಬೇನ ಶೀತಾಂಶುಸಮತೇಜಸಾ ॥ ೪೩ ॥

ಭೋಗಿಭೋಗಾವಸಕ್ತೇನ ಮಣಿರತ್ನೇನ ಭಾಸ್ವತಾ ।
ಪಕ್ಷಾಭ್ಯಾಂ ಚಾರುಪತ್ರಾಭ್ಯಾಮಾವೃತ್ಯ ದಿವಿ ಲೀಲಯಾ ॥ ೪೪ ॥

ಯುಗಾಂತೇ ಸೇಂದ್ರಚಾಪಾಭ್ಯಾಂ ತೋಯದಾಭ್ಯಾಮಿವಾಂಬರಂ ।
ನೀಲಲೋಹಿತಪೀತಾಭಿಃ ಪತಾಕಾಭಿರಲಂಕೃತಂ ॥ ೪೫ ॥

ಕೇತುವಂಶಪರಿಚ್ಛಿನ್ನಂ ಮಹಾಕಾಯನಿಕೇತನಂ ।
ಅರುಣಾವರಜಂ ಶ್ರೀಮಾನಾರುಹ್ಯ ಸಮರೇ ವಿಭುಃ ॥ ೪೬ ॥

---

೪೨-೪೪. ದೇವಾಸುರರ ಯುದ್ಧದಲ್ಲಿ ಅನೇಕಸಾರಿ ಪರಾಕ್ರಮವನ್ನು ತೋರಿಸಿರುವ ಅಮೃತವನ್ನು ತರಲು ಹೋಗಿದ್ದಾಗ ಮಹೇಂದ್ರನು ವಜ್ರಾಯುಧದಿಂದ ಹೊಡೆಯಲು ಆ ಗಾಯದ ಗುರುತನ್ನು ಹೊಂದಿರುವ, ವಿಚಿತ್ರವಾದ ರೆಕ್ಕೆಯೆಂಬ ಬಟ್ಟೆಗಳುಳ್ಳ, ಮಣಿಶಿಲೆಯನ್ನು ಹೊಂದಿರುವ ಬೆಟ್ಟದಂತೆ ಕಾಂತಿಯುಳ್ಳ, ದೊಡ್ಡದಾಗಿರುವ ಭುಜಗಳ ಮಧ್ಯಭಾಗವುಳ್ಳ, ಎದೆಯ ಜಾಗದಲ್ಲಿ ಚಂದ್ರನಂತೆ ಬೆಳ್ಳಗಿರುವ, ಬಾಯಲ್ಲಿ ಹಿಡಿದಿರುವ ಸರ್ಪದ ಹೆಡೆಯಲ್ಲಿರುವ ಮಣಿಯ ಕಾಂತಿಯಿಂದ ಪ್ರಕಾಶಿಸುತ್ತಿರುವ, ಮನೋಹರವಾದ ರೆಕ್ಕೆಪುಕ್ಕಗಳುಳ್ಳ, ರೆಕ್ಕೆಗಳಿಂದ ಅಂತರಿಕ್ಷವನ್ನು ಆವರಿಸಿಕೊಂಡಿರುವ ಗರುಡನನ್ನು ವಿಷ್ಣುವು ಹತ್ತಿದನು.

೪೫-೪೬. ಯುಗದ ಕೊನೆಯಲ್ಲಿ ಅಂತರಿಕ್ಷದಲ್ಲಿ ಇಂದ್ರಧನುಸ್ಸಿನಿಂದ ಕೂಡಿದ ಮೋಡಗಳಂತಿರುವ ರಕ್ಕೆಗಳುಳ್ಳ, ನೀಲಿಕೂಡಿದ ಕೆಂಪಾದ ಪತಾಕೆಗಳಿಂದ ಅಲಂಕರಿಸಲ್ಪಟ್ಟ, ಬಾವುಟದ ಬಿದಿರಿನಿಂದ ಕೂಡಿರುವ, ದೊಡ್ಡದೇಹವೇ ಬಾವುಟವುಳ್ಳ, ಅರುಣನ ತಮ್ಮನಾದ ಗರುಡನನ್ನು ವಿಷ್ಣುವು ಹತ್ತಿ ಯುದ್ಧಕ್ಕೆ ಸಿದ್ಧನಾದನು.

**ಸುವರ್ಣವರ್ಣವಪುಷಾ ಸುಪರ್ಣಂ ಖೇಚರೋತ್ತಮಂ ।**
**ಪರ್ವತಾನದ್ಧನಿರ್ಘೋಷಂ ಸಂಪ್ರದೀಪ್ತಹುತಾಶನಂ ॥ ೪೭ ॥**

**ವಿಷ್ಣೋರ್ಜಿಷ್ಣೋಸ್ಸಹಿಷ್ಣೋಶ್ಚ ಭ್ರಾಜಿಷ್ಣೋಸ್ತೇಜಸಾ ವೃತಂ ।**
**ಬಲಂ ಬಲವದುದ್ರಿಕ್ತಂ ಯುದ್ಧಾಯ ಸಮವರ್ತತ ॥ ೪೮ ॥**

**ತಮನ್ವಯುರ್ದೇವಗಣಾ ಮುನಯಶ್ಚ ಸಮಾಹಿತಾಃ ।**
**ಗೀರ್ಭಿಃ ಪರಮಮಂತ್ರಾಭಿಃ ತುಷ್ಟುವುಸ್ತೇ ಗದಾಧರಂ ॥ ೪೯ ॥**

**ತದ್ವೈಶ್ರವಣಸಂಶ್ಲಿಷ್ಟಂ ವೈವಸ್ವತಪುರಸ್ಸರಂ ।**
**ವಾರಿರಾಜಪರಿಕ್ಷಿಪ್ತಂ ದೇವರಾಜವಿರಾಜಿತಂ ॥ ೫೦ ॥**

**ಸ್ವಸ್ತ್ಯಸ್ತು ದೇವೇಭ್ಯ ಇತಿ ಬೃಹಸ್ಪತಿರಭಾಷತ ।**
**ಸ್ವಸ್ತ್ಯಸ್ತು ದೈತ್ಯೇಭ್ಯ ಇತಿ ಉಶನಾ ವಾಕ್ಯಮಾದದೇ ॥ ೫೧ ॥**

---

೪೭-೪೮. ಚಿನ್ನದ ಬಣ್ಣದಿಂದ ಕೂಡಿದ ದೇಹವುಳ್ಳ, ಪಕ್ಷಿಗಳಲ್ಲಿ ಶ್ರೇಷ್ಠನಾದ, ಬೆಟ್ಟಗಳಲ್ಲಿ ಪ್ರತಿಧ್ವನಿಕೊಡುವ ಗರ್ಜನೆಯುಳ್ಳ, ಉರಿಯುತ್ತಿರುವ ಅಗ್ನಿಯಂತಿರುವ, ವಿಷ್ಣು, ಜಿಷ್ಣು, ಸಹಿಷ್ಣು, ಭ್ರಾಜಿಷ್ಣುಗಳ ತೇಜಸ್ಸಿನಿಂದ ಕೂಡಿದ, ಬಲಿಷ್ಠನಾದ, ಬಲವಂತರಲ್ಲಿ ಹೆಮ್ಮೆಪಡುವ ಗರುಡನನ್ನು ಹತ್ತಿ ವಿಷ್ಣುವು ಯುದ್ಧಕ್ಕೆ ಸಿದ್ಧನಾದನು.

೪೯. ದೇವತೆಗಳೂ, ಮುನಿಗಳೂ, ಒಂದೇ ಸ್ತಿಮಿತದಿಂದ ಮಂತ್ರರೂಪವಾದ ಋಕ್ಕುಗಳಿಂದ ಆ ವಿಷ್ಣುವನ್ನು ಸ್ತೋತ್ರಮಾಡುತ್ತಿದ್ದರು.

೫೦. ಆ ಕುಬೇರನಿಂದ ಕೂಡಿಯೂ, ಸೂರ್ಯನನ್ನು ಮುಂದಾಳಾಗಿಯೂ, ವರುಣನಿಂದ ಪ್ರತ್ಯೇಕಿಸಿ ನಿಲ್ಲಿಸುವುದಾಗಿಯೂ, ಇಂದ್ರನಿಂದ ಪ್ರಕಾಶಮಾನವಾಗಿಯೂ, ಇರುವ ಆ ಸೈನ್ಯವು ಪ್ರಕಾಶಿಸಿತು

೫೧. ಬೃಹಸ್ಪತಿಯು ದೇವತೆಗಳಿಗೆ ಒಳ್ಳೆಯದಾಗಲಿ, ಎಂದನು. ಶುಕ್ರನು ದೈತ್ಯರಿಗೆ ಒಳ್ಳೆಯದಾಗಲಿ. ಎಂದನು.

ತಾಭ್ಯಾಂ ಬಲಾಭ್ಯಾಂ ಸಂಜಜ್ಞೇ ತುಮುಲೋ ವಿಗ್ರಹಸ್ತದಾ ।
ಸುರಾಣಾಮಸುರಾಣಾಂ ಚ ಪರಸ್ಪರಜಯೈಷಿಣಾಂ ॥ ೫೨ ॥

ದಾನವಾ ದೈವತೈಸ್ಸಾರ್ಧಂ ನಾನಾಪ್ರಹರಣೋದ್ಯತಾಃ ।
ಸಮೀಯುರ್ಯುಧ್ಯಮಾನಾ ವೈ ಪರ್ವತಾ ಇವ ಪರ್ವತೈಃ ॥ ೫೩ ॥

ತತ್ಸುರಾಸುರಸಂಯುಕ್ತಂ ಯುದ್ಧಮತ್ಯದ್ಭುತಂ ಬಭೌ ।
ಧರ್ಮಾಧರ್ಮಸಮಾಯುಕ್ತಂ ದರ್ಪೇಣ ವಿನಯೇನ ಚ ॥ ೫೪ ॥

ತತೋ ಹಯೈಃ ಪ್ರಜವಿತೈಃ ವಾರಣೈಶ್ಚ ಪ್ರಚೋದಿತೈಃ ।
ಉತ್ಪತದ್ಭಿಶ್ಚ ಗಗನಂ ಸಾಸಿಹಸ್ತೈಸ್ಸಮಂತತಃ ॥ ೫೫ ॥

ಕ್ಷಿಪ್ಯಮಾಣೈಶ್ಚ ಮುಸಲೈಃ ಸಂಪತದ್ಭಿಶ್ಚ ಸಾಯಕೈಃ ।
ಚಾಪೈರ್ವಿಸ್ಫಾರ್ಯಮಾಣೈಶ್ಚ ಪಾತ್ಯಮಾನೈಸ್ಸುದಾರುಣೈಃ ॥ ೫೬ ॥

ತದ್ಯುದ್ಧಮಭವದ್ಘೋರಂ ದೇವದಾನವಸಂಕುಲಂ ।
ಜಗತಸ್ತ್ರಾಸಜನನಂ ಯುಗಸಂವರ್ತಕೋಪಮಂ ॥ ೫೭ ॥

---

೫೨. ತಮತಮಗೆ ಜಯವಾಗಲೆಂದಪೇಕ್ಷೆಯುಳ್ಳ ದೇವದಾನವರ ಸೈನ್ಯಗಳಿಗೆ ತುಮುಲಯುದ್ಧವು ಉಪಕ್ರಮವಾಯಿತು.

೫೩. ದಾನವರು ಅನೇಕ ಬಗೆಯಾದ ಆಯುಧಗಳನ್ನು ತೆಗೆದುಕೊಂಡು ಪರ್ವತಗಳೊಡನೆ ಪರ್ವತಗಳು ಯುದ್ಧಕ್ಕೆ ಬೀಳುವಂತೆ ದೇವತೆಗಳೊಡನೆ ಯುದ್ಧ ಮಾಡಿದರು.

೫೪. ಧರ್ಮ, ಅಧರ್ಮ, ದರ್ಪ, ವಿನಯಗಳಿಂದ ಕೂಡಿದ ಆ ದೇವದಾನವ ಯುದ್ಧವು ಅದ್ಭುತವಾಗಿದ್ದಿತು.

೫೫-೫೭ ಎಲ್ಲೆಡೆಯಲ್ಲಿಯೂ ಓಡಿಯಾಡಿಸುತ್ತಿರುವ ಕುದುರೆಗಳಿಂದಲೂ, ಆನೆಗಳಿಂದಲೂ, ಕೂಡಿರುವ ಮೇಲಕ್ಕೆ ನೆಗೆಯುತ್ತಿರುವ, ಕತ್ತಿಯನ್ನು ಹಿಡಿದುಕೊಂಡಿರುವ ರಾಹುತರುಳ್ಳ, ಮುಸಲಾಯುಧವನ್ನೂ ಎಸೆಯುತ್ತಿರುವ, ಎಲ್ಲೆಡೆಗೂ ಬಾಣಗಳನ್ನು ಬಿಡುತ್ತಿರುವ, ಧನುಸ್ಸನ್ನು ಠೇಂಕಾರಮಾಡುತ್ತಿರುವ, ಆ ಭಟರುಗಳಿಂದ ದಾನವದೇವತೆಗಳ ಆ ಸಂಕುಲ ಯುದ್ಧವು ಪ್ರಳಯಕಾಲಕ್ಕೆ ಸಮವಾಗಿ ಪ್ರಪಂಚಕ್ಕೆ ಹೆದರಿಕೆಯನ್ನುಂಟುಮಾಡುತ್ತ ಘೋರವಾಗಿ ನಡೆಯಿತು.

ಸ್ವಹಸ್ತಯುಕ್ತೈಃ ಪರಿಘೈಃ ಮುದ್ಗರೈಶ್ಚೈವ ಪರ್ವತೈಃ ।
ದಾನವಾ ಸಮರೇ ಜಘ್ನುರ್ದೇವಾನಿಂದ್ರಪುರೋಗಮಾನ್ ॥ ೫೮ ॥

ತೇ ವಧ್ಯಮಾನಾ ಬಲಿಭಿರ್ದಾನವೈರ್ಜಿತಕಾಶಿಭಿಃ ।
ವಿಷಣ್ಣವದನಾ ದೇವಾ ಜಗ್ಮುರಾರ್ತಿಂ ಪರಾಂ ಮೃಧೇ ॥ ೫೯ ॥

ತೇ ಚಾಸ್ತ್ರಶೂಲಮಥಿತಾಃ ಪರಿಘೈರ್ಭಿನ್ನಮಸ್ತಕಾಃ ।
ಭಿನ್ನೋರಸ್ಕಾದಿತಿಸುತೈಃ ಸಸ್ರೂರಕ್ತಂ ರಣೇ ಬಹು ॥ ೬೦ ॥

ಸೂದಿತಾಶ್ಯರಜಾಲೈಶ್ಚ ನಿರ್ಯತ್ನಾಸ್ಸಮರೇ ಕೃತಾಃ ।
ಪ್ರವಿಷ್ಟಾ ದಾನವೀಂ ಮಾಯಾಂ ನ ಶೇಕುಸ್ತೇ ವಿಚೇಷ್ಟಿತುಂ ॥ ೬೧ ॥

ಉತ್ತಂಭಿತಮಿವಾಭಾತಿ ನಿಷ್ಪ್ರಾಣಸದೃಶಾಕೃತಿ ।
ಬಲಂ ಸುರಾಣಾಮುಸುರೈಃ ನಿಷ್ಪ್ರಯತ್ನಾಯುಧಂ ಕೃತಂ ॥ ೬೨ ॥

---

೫೮. ತಮ್ಮ ಕೈಯ್ಯಿಂದಲೇ ಬಿಡುತ್ತಿರುವ ಮುದ್ಗರಗಳಿಂದಲೂ, ಪರಿಘಗಳಿಂದಲೂ, ದಾನವರು ಇಂದ್ರನೇ ಮುಂತಾದ ದೇವತೆಗಳನ್ನು ಹೊಡೆದರು.

೫೯. ಇಂತು ಬಲಿಷ್ಠರಾದ ದಾನವರಿಂದ ಹೊಡೆಯಲ್ಪಡುತ್ತಿರುವ ದೇವತೆಗಳು ದುಃಖಪಡುತ್ತಾ, ಯುದ್ಧದಲ್ಲಿ ಹೆಚ್ಚು ತೊಂದರೆಯನ್ನು ಹೊಂದಿದರು.

೬೦. ಅಸ್ತ್ರ ಶೂಲಗಳಿಂದ ಗಾಯಹೊಂದಿ, ಪರಿಘದಿಂದ ಕತ್ತನ್ನು ಕಡಿಸಿಕೊಂಡು, ಎದೆಯು ಬಿರಿಯುವಂತೆ ಏಟು ತಿಂದ, ಅವರು ಯುದ್ಧದಲ್ಲಿ ರಕ್ತವನ್ನು ಸುರಿಸಿದರು.

೬೧. ಬಾಣಗಳ ಸುರಿಮಳೆಯಿಂದ ಹೊಡೆಯುತ್ತ ದೇವತೆಗಳನ್ನು ಯುದ್ಧದಲ್ಲಿ ಸುಮ್ಮನಿರುವಂತೆ ಮಾಡಿದರು. ಈ ದೇವತೆಗಳೂ, ದಾನವರ ಆ ಮಾಯೆಗೆ ಒಲಿಯಾಗಿ ಅಲ್ಲಾಡಲೂ ಆಗದವರಾದರು.

೬೨. ಆ ದೇವತೆಗಳ ಸೈನ್ಯವು ಪ್ರಾಣವಿಲ್ಲದಿರುವ ಹೆಣಗಳಂತೆ ಸಂಕಿರುತ್ತಾ ಸಿಲ್ಲಿಸಿ ಕಟ್ಟಿರುವಂತಾದವರು. ಅವರ ಆಯುಧಗಳು ಉಪಯೋಗಕ್ಕೆ ಬಾರದಂತೆ ದೈತ್ಯರು ಮಾಡಿದರು.

ದೈತ್ಯಚಾಪಚ್ಯುತಾನ್ಘೋರಾನ್ ಛಿತ್ವಾ ವಜ್ರೇಣ ತಾಞ್ಛರಾನ್ ।
ಶಕ್ರೋ ದೈತ್ಯಬಲಂ ಘೋರಂ ವಿವೇಶ ಬಹುಲೋಚನಃ ॥ ೬೩ ॥

ಸ ದೈತ್ಯಪ್ರಮುಖಾನ್ಸರ್ವಾನ್ಹತ್ವಾ ದೈತ್ಯಬಲಂ ಮಹತ್ ।
ತಾಮಸೇನಾಸ್ತ್ರಜಾಲೇನ ತಮೋಭೂತಮಥಾಕರೋತ್ ॥ ೬೪ ॥

ತೇನ್ಯೋನ್ಯಂ ನಾವಬುಧ್ಯಂತ ದೇವಾನಾಂ ವಾಹನಾನಿ ಚ ।
ಘೋರೇಣ ತಮಸಾವಿಷ್ಟಾಃ ಪುರುಹೂತಸ್ಯ ತೇಜಸಾ ॥ ೬೫ ॥

ಮಾಯಾಪಾಶೈರ್ವಿಮುಕ್ತಾಸ್ತು ಯತ್ನವನ್ತಸ್ಸುರೋತ್ತಮಾಃ ।
ಬದ್ಧ್ವಾಥ ದೈತ್ಯಸೈನ್ಯಾನಿ ತಮೋಭೂತಾನ್ಯಪಾತಯನ್ ॥ ೬೬ ॥

ಅಪಧ್ವಸ್ತಾ ವಿಸಂಜ್ಞಾಶ್ಚ ತಮಸಾ ನೀಲವರ್ಚಸಃ ।
ಪೇತುಸ್ತೇ ದಾನವಗಣಾಶ್ಛಿನ್ನಪಕ್ಷಾ ಇವಾದ್ರಯಃ ॥ ೬೭ ॥

ತತ್ರಾಭಿಭೂತದೈತ್ಯೇಂದ್ರಮಂಧಕಾರ ಇವಾರ್ಣವಂ ।
ದಾನವಂ ದೇಹಸದನಂ ತಮೋಭೂತಮಿವಾಭವತ್ ॥ ೬೮ ॥

---

೬೩. ದೈತ್ಯರು ಬಿಟ್ಟ ಆ ಉಗ್ರವಾದ ಬಾಣಗಳನ್ನು ವಜ್ರಾಯುಧದಿಂದ ಕತ್ತರಿಸಿ ಇಂದ್ರನು ಅವರ ಸೈನ್ಯದೊಳಕ್ಕೆ ನುಗ್ಗಿದನು.

೬೪. ಆ ಇಂದ್ರನು ದೈತ್ಯಪ್ರಮುಖರೆಲ್ಲರನ್ನೂ ಕೊಂದು ಆ ದೈತ್ಯಸೇನೆಯನ್ನು ಕತ್ತಲೆಯನ್ನುಂಟುಮಾಡುವ ಅಸ್ತ್ರದಿಂದ ಕಣ್ಣುಕಾಣದಂತೆ ಮಾಡಿದನು.

೬೫. ಆ ದೈತ್ಯರು ದೇವತೆಗಳನ್ನಾಗಲಿ, ಅವರ ವಾಹನಗಳನ್ನಾಗಲಿ, ಆ ದೊಡ್ಡ ಕತ್ತಲೆಯಿಂದಲೂ, ಇಂದ್ರನ ತೇಜಸ್ಸಿನಿಂದಲೂ ಕಾಣದವರಾದರು.

೬೬. ಮಾಯೆಯಿಂದ ಬಿಡಲ್ಪಟ್ಟ ಆ ದೇವತೆಗಳು ಬಹುಪ್ರಯತ್ನದಿಂದ ದೈತ್ಯರ ಸೈನ್ಯವನ್ನೆಲ್ಲಾ ಕಟ್ಟಿಹಾಕಿ ಒಂದೆಡೆಗೆ ಎಸೆದರು.

೬೭. ಜ್ಞಾನವಿಲ್ಲದೇ ಬಿದ್ದು ಆ ಮಾಯೆಯಿಂದ ಮೈಯೆಲ್ಲಾ ನೀಲಿಗಟ್ಟಿದ ಆ ದಾನವರ ಸೈನ್ಯವು ರೆಕ್ಕೆಯನ್ನು ಕತ್ತರಿಸಿದ ಪರ್ವತಗಳಂತೆ ಬಿದ್ದುವು.

೬೮ ಈ ರೀತಿ ಮಾಯೆಗೆ ಸಿಕ್ಕಿಬಿದ್ದ ಆ ದೈತ್ಯೇಂದ್ರನ ದೇಹವು ಕತ್ತಲೆಗೆ ಬಲಿಯಾದ ಸಮುದ್ರದಂತೆ ಕಪ್ಪಗಾಯಿತು.

ತದಾಸೃಜನ್ಮಹಾಮಾಯಾಂ ಮಯಸ್ತಾಂ ತಾಮಸೀಂ ದಹನ್ ।
ಯುಗಾಂತೋದ್ವೇಗಜನನೀಂ ಸೃಷ್ಟ್ವಾಮೌರ್ವೇಣ ವಹ್ನಿನಾ ॥ ೬೯ ॥

ಸಾ ದದಾಹ ಚ ತಾಂ ಶಾಕ್ರೀಂ ಮಾಯಾಂ ಮಯವಿಕಲ್ಪಿತಾ ।
ದೈತ್ಯಾಶ್ಚಾದಿತ್ಯವಪುಷಃ ಸರ್ವ ಉತ್ತಸ್ಥುರಾಹವೇ ॥ ೭೦ ॥

ಮಾಯಾಮೌರ್ವೀಂ ಸಮಾಸಾದ್ಯ ದಹ್ಯಮಾನಾ ದಿವೌಕಸಃ ।
ಭೇಜಿರೇ ಚಂದ್ರವಿಷಯಂ ಶೀತಾಂಶುಸಲಿಲಂ ಹ್ರದಂ ॥ ೭೧ ॥

ತೇ ದಹ್ಯಮಾನಾ ಔರ್ವೇಣ ವಹ್ನಿನಾ ನಷ್ಟಚೇತಸಃ ।
ಜಗ್ಮುಸ್ತೇ ವಜ್ರಿಣಂ ದೇವಾಃ ಸಂತ್ರಸ್ತಾಶ್ಶರಣೈಷಿಣಃ ॥ ೭೨ ॥

ಸಂತಪ್ತೇ ಮಾಯಯಾ ಸೈನ್ಯೇ ಹನ್ಯಮಾನೇ ಚ ದಾನವೈಃ ।
ಚೋದಿತೋ ದೇವರಾಜೇನ ವರುಣೋ ವಾಕ್ಯಮಬ್ರವೀತ್ ॥ ೭೩ ॥

॥ ವರುಣ ಉವಾಚ ॥

ಪುರಾ ಬ್ರಹ್ಮರ್ಷಿಜಶ್ಶಕ್ರ ತಪಸ್ತೇಪೇ ಸುದಾರುಣಂ ।
ಉರ್ವಃ ಪೂರ್ವಂ ಸತೇಜಸ್ವೀ ಸದೃಶೋ ಬ್ರಹ್ಮಣಾ ಗುಣೈಃ ॥ ೭೪ ॥

---

೬೯. ಆಗ ಮಯನು ಭಯಂಕರವಾದ ಆ ತಾಮಸೀ ಮಾಯೆಯನ್ನು ಬಡಬಾಗ್ನಿಯನ್ನು ಸೃಷ್ಟಿಸಿ ಅದರಿಂದ ನಾಶಮಾಡಿದನು.

೭೦. ಆ ಮಯನಿಂದ ಕಲ್ಪಿತವಾದ ಆ ಮಾಯೆಯು ಇಂದ್ರಮಾಯೆಯನ್ನು ನಾಶಮಾಡಿತು. ಆಗ ದೈತ್ಯರೆಲ್ಲರೂ ಹೊಳೆಯುವ ದೇಹವುಳ್ಳವರಾಗಿ ಎದ್ದರು.

೭೧. ಬಡಬಾಗ್ನಿಯ ಮಾಯೆಗೊಳಗಾದ ಆ ದೇವತೆಗಳು ಬಿಸಿಯನ್ನು ತಡೆಯಲಾರದೆ ಶೀತಾಂಶುವಾದ ಚಂದ್ರನನ್ನು ಹೋಗಿ ಮುತ್ತಿಕೊಂಡರು

೭೨. ಬಡಬಾಗ್ನಿಯಿಂದ ಸುಡಲ್ಪಡುತ್ತ ಜ್ಞಾನಶೂನ್ಯರಾದ ಆ ದೇವತೆಗಳು ಹೆದರಿ ಶರಣಾರ್ಥಿಗಳಾಗಿ ದೇವೇಂದ್ರನ ಬಳಿಗೋಡಿದರು.

೭೩. ದೇವತೆಗಳ ಸೈನ್ಯವು ಈ ಮಾಯೆಯಿಂದ ತೊಂದರೆಪಡುತ್ತಿರುವಾಗ ದಾನವರು ಹೊಡೆಯುತ್ತಿರಲು ಇಂದ್ರನಿಂದ ಪ್ರೇರಿತನಾದ ವರುಣನಿಂತೆಂದನು.

೭೪. ವರುಣನು ಹೇಳಿದನು—ಎಲೈ ಇಂದ್ರನೇ! ಬ್ರಹ್ಮರ್ಷಿಯ ವಂಶದಲ್ಲಿ ಉತ್ಪನ್ನನಾದ ಉರ್ವನು ಪೂರ್ವದಲ್ಲಿ ತಪಸ್ಸು ಮಾಡಿದನು. ಆಗ ತೇಜಸ್ವಿಯಾದ ಉರ್ವನು ಬ್ರಹ್ಮನ ಗುಣಗಳಿಗೆ ಸಮವಾದ ಗುಣಗಳುಳ್ಳವನಾದನು.

ತಂ ತಪಂತಮಿವಾದಿತ್ಯಂ ತಪಸಾ ಜಗದವ್ಯಯಂ ।
ಉಪತಸ್ಥುರ್ಮುನಿಗಣಾಃ ದಿವ್ಯಾಃ ದೇವರ್ಷಿಭಿಸ್ಸಹ ॥ ೭೫ ॥

ಹಿರಣ್ಯಕಶಿಪುಶ್ಚೈವ ದಾನವೋ ದಾನವೇಶ್ವರಃ ।
ಋಷಿಂ ವಿಜ್ಞಾಪಯಾಮಾಸ ಪುರಾ ಪರಮತೇಜಸಂ ॥ ೭೬ ॥

ಊಚುರ್ಬ್ರಹ್ಮರ್ಷಯಸ್ತತ್ರ ವಚನಂ ಬ್ರಹ್ಮಸಮ್ಮಿತಂ ।
ಋಷಿವಂಶೇಷು ಭಗವಂಶ್ಛಿನ್ನಮೂಲಮಿದಂ ಕುಲಂ ॥ ೭೭ ॥

ಏಕಸ್ತ್ವಮನಪತ್ಯಶ್ಚ ಗೋತ್ರಾಯಾನ್ಯೋ ನ ವಿದ್ಯತೇ ।
ಕೌಮಾರಂ ವ್ರತಮಾಸ್ಥಾಯ ಕ್ಲೇಶಮೇವಾನುವರ್ತಸೇ ॥ ೭೮ ॥

ಬಹೂನಿ ವಿಪ್ರಗೋತ್ರಾಣಿ ಮುನೀನಾಂ ಭಾವಿತಾತ್ಮನಾಂ ।
ಏಕದೇಹಾನಿ ತಿಷ್ಠಂತಿ ವಿವಿಕ್ತಾನಿ ವಿನಾ ಪ್ರಜಾಃ ॥ ೭೯ ॥

ಏವಂ ಭೂತೇಷು ಸರ್ವೇಷು ಪುತ್ರೈರ್ನೋ ನಾಸ್ತಿ ಕಾರಣಂ ।
ಭವಾಂಸ್ತು ತಾಪಸಶ್ರೇಷ್ಠಃ ಪ್ರಜಾಪತಿಸಮುದ್ಯುತಿಃ ॥ ೮೦ ॥

---

೭೫. ಆಗ ಸೂರ್ಯನಂತೆ ಬೆಳಗುತ್ತಾ ತಪಸ್ಸು ಮಾಡುತ್ತಿರುವ ಆ ಉರ್ವನನ್ನು ದೇವರ್ಷಿಗಳೂ, ಮುನಿಗಳೂ, ಸೇವಿಸಲು ಬಂದರು

೭೬. ಆಗ ಬಂದವರಲ್ಲಿ ಬಹು ತೇಜಸ್ವಿಯಾದ ಉರ್ವನನ್ನು ನೋಡಿ ದಾನವೇಶ್ವರನಾದ ಹಿರಣ್ಯಕಶಿಪುವು ಇಂತೆಂದು ವಿಜ್ಞಾಪಿಸಿದನು.

೭೭-೭೮. ಆಗ ಬ್ರಹ್ಮರ್ಷಿಗಳೂ ಕೂಡ ಇಂತೆಂದರು. ಎಲೈ ಉರ್ವನೇ! ಋಷಿಗಳ ವಂಶದಲ್ಲಿ ನಿನ್ನ ವಂಶವು ಮಾತ್ರ ವೃದ್ಧಿಯಾಗದೆ ನಿಂತಿದೆ. ನೀನಿರುವವನು ಒಬ್ಬನೇ ಮಗನು. ವಂಶಕ್ಕೆ ಮತ್ತೊಬ್ಬನೂ ಇಲ್ಲ. ಕೌಮಾರವಯಸ್ಸಿನಲ್ಲಿಯೇ ಈ ಕಷ್ಟಗಳನ್ನು ಅನುಭವಿಸುತ್ತಿದ್ದೀಯೆ.

೭೯-೮೧. ಎಲೈ ಬ್ರಾಹ್ಮಣನೇ! ಯೋಗ್ಯರಾದ ಬಹಳ ಮಂದಿ ಋಷಿಗಳ ವಂಶವು ಒಂದೊಂದೇ ಕೊಂಬೆಯಾಗಿ ನಿಂತಿದೆ. ಅವರಿಗೆ ಮಕ್ಕಳೇ ಇಲ್ಲ. ಹೀಗೆ ಲ್ಲರೂ ಇರುತ್ತಿರಲು ನಮಗೆ ಮಕ್ಕಳಾಗಿ ಪ್ರಯೋಜನವೇನು? ಅದರಿಂದೇನೂ ಉಪಯೋಗವಿಲ್ಲ. ನೀನಾದರೋ ಮಹಾತಪಸ್ವಿಯು. ಬ್ರಹ್ಮನಿಗೆ ಸಮನಾದ ತೇಜಸ್ಸುಳ್ಳವನು. ವಂಶವೃದ್ಧಿಗೆ ಯತ್ನಮಾಡು. ಆತ್ಮನಿಂದ ಆತ್ಮನನ್ನು ಬೆಳಸು. ನಿನ್ನ

ತತ್ಪ್ರವರ್ತಸ್ವ ವಂಶಾಯ ವರ್ಧಯಾತ್ಮಾನಮಾತ್ಮನಾ ।
ಸಮಾಧತ್ಸ್ವೋರ್ಜಿತಂ ತೇಜೋ ದ್ವಿತೀಯಾಂ ಕುರು ವೈತನುಂ ॥ ೮೧ ॥

॥ ವರುಣ ಉವಾಚ ॥

ಏವಮುಕ್ತಸ್ಸ ಮುನಿಭಿಃ ಮುನಿರ್ಮರ್ಮಸು ತಾಡಿತಃ ।
ಜಗರ್ಹ ತಾನೃಷಿಗಣಾನ್ವಚನಂ ಚೇದಮಬ್ರವೀತ್ ॥ ೮೨ ॥

॥ ಉರ್ವ ಉವಾಚ ॥

ಯಥಾಯಂ ವಿಹಿತೋ ಧರ್ಮಃ ಮುನೀನಾಂ ಶಾಶ್ವತಃ ಪುರಾ ।
ಆರ್ಷಂ ಹಿ ಕೇವಲಂ ಕರ್ಮ ವನ್ಯಮೂಲಫಲಾಶಿನಃ ॥ ೮೩ ॥

ಬ್ರಹ್ಮಯೋನೌ ಪ್ರಸೂತಸ್ಯ ಬ್ರಾಹ್ಮಣಸ್ಯಾತ್ಮವರ್ತಿನಃ ।
ಬ್ರಹ್ಮಚರ್ಯಂ ಸುಚರಿತಂ ಬ್ರಹ್ಮಣಾಪಿ ಸುರಾಲಯೇ ॥ ೮೪ ॥

ಜನಾನಾಂ ವೃತ್ತಯಸ್ತಿಸ್ರೋ ಯೇ ಗೃಹಾಶ್ರಮವಾಸಿನಃ ।
ಅಸ್ಮಾಕಂ ಚ ವನೇ ವೃತ್ತಿಃ ವನಾಶ್ರಮನಿವಾಸಿನಾಂ ॥ ೮೫ ॥

---

ಲ್ಲಿರುವ ಬಲವಾದ ತೇಜಸ್ಸನ್ನು ಸರಿಮಾಡಿ ಎರಡನೆಯ ದೇಹವನ್ನು ಪಡೆ. ಎಂದು ಬ್ರಹ್ಮರ್ಷಿಗಳು ಹೇಳಿದರು.

೮೨. ವರುಣನು ಹೇಳಿದನು—ಮಹರ್ಷಿಗಳು ಹೀಗೆನ್ನಲು ಈ ಉರ್ವನು ಮನನೊಂದವನಾಗಿ ಆ ಋಷಿಗಳನ್ನು ಹಳಿಯುತ್ತಾ ಇಂತೆಂದನು.

೮೩. ಉರ್ವನು ಹೇಳಿದನು–ಈ ಧರ್ಮವು ಪೂರ್ವದಿಂದಲೂ, ಋಷಿಗಳಿಗೆ ನಿಯತವಾದುದು. ಶಾಶ್ವತವಾದುದು. ಕಾಡಿನಲ್ಲಿರುವ ಗೆಡ್ಡೆ ಗೆಣಸುಗಳನ್ನು ತಿನ್ನುತ್ತಾ ತಪಸ್ಸು ಮಾಡುವುದೇ ಹಿಂದಿನಿಂದಲೂ ಬಂದ ಕರ್ಮವು.

೮೪. ಬ್ರಾಹ್ಮಣಜನ್ಮದಲ್ಲಿ ಹುಟ್ಟಿ ಬ್ರಾಹ್ಮಣನಾಗಿ ಜಿತೇಂದ್ರಿಯನಾಗಿ ಬ್ರಹ್ಮನೂ ಕೂಡ ಸ್ವರ್ಗದಲ್ಲಿ ಬ್ರಹ್ಮಚರ್ಯವನ್ನು ಕಾಪಾಡಿಕೊಂಡನು.

೮೫. ಜನಗಳ ಸ್ಥಿತಿಯು ಮನೆಯಲ್ಲಿರುವವರು, ಆಶ್ರಮದಲ್ಲಿರುವವರು, ವನದಲ್ಲಿರುವವರು ಎಂದು ಮೂರು ಬಗೆಯಾಗಿರುವುದು. ವನವೆಂಬ ಆಶ್ರಮದಲ್ಲಿರುವವರಾದುದರಿಂದ ನಾವು ಕಾಡಿನಲ್ಲಿದ್ದೇವೆ.

ಅಂಬುಭಕ್ಷಾ ವಾಯುಭಕ್ಷಾ ದಂತೋಲೂಖಲಿನಸ್ತಥಾ ।
ಅಶ್ಮಕುಟ್ಟಾದಯೋ ಯತ್ರ ಪಂಚಪಂಚತಪಾಶ್ಚ ಯೇ ॥ ೮೬ ॥

ಏತೇ ತಪಸಿ ತಿಷ್ಠಂತೇ ವ್ರತೈರಪಿ ಸುದುಷ್ಕರೈಃ ।
ಬ್ರಹ್ಮಚರ್ಯಂ ಪುರಸ್ಕೃತ್ಯ ಪ್ರಾರ್ಥಯಂತಿ ಪರಾಂ ಗತಿಂ ॥ ೮೭ ॥

ಬ್ರಹ್ಮಚರ್ಯಾದ್ಬ್ರಾಹ್ಮಣಸ್ಯ ಬ್ರಾಹ್ಮಣತ್ವಂ ವಿಧೀಯತೇ ।
ಏವಮಾಹುಃ ಪರೇ ಲೋಕೇ ಬ್ರಹ್ಮಚರ್ಯವಿದೋ ಜನಾಃ ॥ ೮೮ ॥

ಬ್ರಹ್ಮಚರ್ಯೇ ಸ್ಥಿತೋ ಧರ್ಮೋ ಬ್ರಹ್ಮಚರ್ಯೇ ಸ್ಥಿತಂ ಮನಃ ।
ಯೇ ಸ್ಥಿತಾ ಬ್ರಹ್ಮಚರ್ಯೇ ತು ಬ್ರಾಹ್ಮಣಾ ದಿವಿ ತೇ ಸ್ಥಿತಾಃ ॥ ೮೯ ॥

ನಾಸ್ತಿ ಯೋಗಂ ವಿನಾ ಸಿದ್ಧಿಃ ನಾಸ್ತಿ ಸಿದ್ಧಿಂ ವಿನಾ ಯಶಃ ।
ನಾಸ್ತಿ ಲೋಕೇ ಯಶೋಮೂಲಂ ಬ್ರಹ್ಮಚರ್ಯಾತ್ಪರಂ ತಪಃ ॥ ೯೦ ॥

---

೮೬-೮೭. ನೀರು ಕುಡಿಯುವವರು, ವಾಯುವನ್ನು ಸೇವಿಸಿ ಇರುವವರು, ದಂತೋಲೂಖಲಿಗಳು, (ಹಲ್ಲಿನಿಂದ ಬಿಡಿಸಿ ತಿನ್ನುವವರು) ಕಲ್ಲಿನಲ್ಲಿ ಜಜ್ಜಿ ತಿನ್ನುವವರು, ಈ ಐದು ಜನವೂ, ತಪಸ್ವಿಗಳು. ಇವರು ದುಷ್ಕರವಾದ ವ್ರತದ ತಪಸ್ಸುಳ್ಳವರು. ಇವರೂ ಕೂಡ ಬ್ರಹ್ಮಚರ್ಯವನ್ನು ಮುಂದೆಮಾಡಿಕೊಂಡು ಉತ್ತಮಗತಿಯನ್ನು ಅಪೇಕ್ಷಿಸುತ್ತಾರೆ.

೮೮. ಬ್ರಹ್ಮಚರ್ಯದಿಂದಲೇ ಬ್ರಾಹ್ಮಣನಿಗೆ ಬ್ರಾಹ್ಮಣ್ಯವು ಬರುವುದೆಂದು ಬ್ರಹ್ಮಚರ್ಯವನ್ನು ಬಲ್ಲವರು ಪರಲೋಕದಲ್ಲಿಯೂ ಕೂಡ ಹೇಳುತ್ತಾರೆ.

೮೯. ಬ್ರಹ್ಮಚರ್ಯದಲ್ಲಿಯೇ ಧರ್ಮವಿರುವುದು. ಬ್ರಹ್ಮಚರ್ಯದಲ್ಲಿಯೇ ಮನಸ್ಸು ಸರಿಯಾಗಿರುವುದು. ಬ್ರಹ್ಮಚರ್ಯದಲ್ಲಿದ್ದ ಬ್ರಾಹ್ಮಣರು ಸ್ವರ್ಗವನ್ನೂ ಹೊಂದುವರು. ಹೊಂದಿರುವರು.

೯೦. ಯೋಗಾಭ್ಯಾಸ ಮಾಡದಿದ್ದರೆ ಸಿದ್ಧಿಯಾಗುವುದಿಲ್ಲ. ಸಿದ್ಧಿಯಾಗದಿದ್ದರೆ ಯಶಸ್ಸು ಲಭಿಸುವುದಿಲ್ಲ. ಬ್ರಹ್ಮಚರ್ಯಕ್ಕಿಂತಲೂ ಯಶಸ್ಸಿಗೆ ಕಾರಣವಾದುದು ಬೇರೆ ಮತ್ತೊಂದಿಲ್ಲ. ಮತ್ತು ಅದಕ್ಕಿಂತ ತಪಸ್ಸೂ ಸಹ ಮತ್ತೊಂದಿಲ್ಲ.

ಯೋ ನಿಗೃಹ್ಯೇಂದ್ರಿಯಗ್ರಾಮಂ ಭೂತಗ್ರಾಮಂ ಚ ಪಂಚಕಂ ।
ಬ್ರಹ್ಮಚರ್ಯಂ ಸಮಾಧತ್ತೇ ಕಿಮತಃ ಪರಮಂ ತಪಃ ॥ ೯೧ ॥

ಅಯೋಗೇ ಕೇಶಧರಣಮಸಂಕಲ್ಪೇ ವ್ರತಕ್ರಿಯಾ ।
ಅಬ್ರಹ್ಮಚರ್ಯೇ ಚರ್ಯಾ ಚ ತ್ರಯಂ ಸ್ಯಾದ್ದಂಭಸಂಜ್ಞಿತಂ ॥ ೯೨ ॥

ಕ್ವ ದಾರಾಃ ಕ್ವ ಚ ಸಂಯೋಗಃ ಕ್ವ ಚ ಭಾವವಿಪರ್ಯಯಃ ।
ನನ್ವಿಯಂ ಬ್ರಹ್ಮಣಾ ಸೃಷ್ಟಾ ಮನಸಾ ಮಾನವೀ ಪ್ರಜಾ ॥ ೯೩ ॥

ಯದ್ಯಸ್ತಿ ತಪಸೋ ವೀರ್ಯಂ ಯುಷ್ಮಾಕಂ ವಿಜಿತಾತ್ಮನಾಂ ।
ಸೃಜಧ್ವಂ ಮಾನಸಾನ್ಪುತ್ರಾನ್ಪ್ರಾಜಾಪತ್ಯೇನ ಕರ್ಮಣಾ ॥ ೯೪ ॥

ಮನಸಾ ನಿರ್ಮಿತಾ ಯೋನಿರಾಧಾನಂ ಸ್ಯಾತ್ತಪಸ್ವಿಭಿಃ ।
ನೋ ದಾರಯೋಗೋ ಬೀಜಂ ಚ ವ್ರತಮುಕ್ತಂ ತಪಸ್ವಿನಾಂ ॥ ೯೫ ॥

---

೯೧. ಯಾವನು ಪಂಚೇಂದ್ರಿಯಗಳನ್ನೂ, ಪಂಚಭೂತಗಳನ್ನೂ ಜಯಿಸಿ ಬ್ರಹ್ಮಚರ್ಯವನ್ನು ಬಿಗಿ ಹಿಡಿದಿರುತ್ತಾನೆಯೋ ಅವನಿಗೆ ಅದಕ್ಕಿಂತಲೂ ಮತ್ತೊಂದು ತಪಸ್ಸೇನಿರುವುದು ?

೯೨. ಕೇಶವನ್ನು ಇಡಲು ಕಾರಣವಿಲ್ಲದಿದ್ದರೂ ಕೇಶವನ್ನು ಧರಿಸುವಿಕೆ. ಸಂಕಲ್ಪವಿಲ್ಲದಿದ್ದರೂ, ವ್ರತವನ್ನು ಮಾಡುವಿಕೆ. ಬ್ರಹ್ಮಚರ್ಯವಿಲ್ಲದ ಆಚರಣೆಗಳು. ಇವು ಮೂರು ಹೊರಗಿನವರು ನೋಡುವುದಕ್ಕೆ ಮಾತ್ರ ಮಾಡುವ ಡಂಭಾಚಾರಗಳು ಎನ್ನಿಸಿಕೊಳ್ಳುತ್ತವೆ.

೯೩. ಹೆಂಡಿರೆಲ್ಲಿ ? ಹೆಂಡಿರ ಸಂಗಡ ಸಂಭೋಗವೆಲ್ಲಿ ? ಭಾವಗಳ ವ್ಯತ್ಯಾಸವೆಲ್ಲಿ ? ಇವೆಲ್ಲವೂ ಸಾಧ್ಯವಿಲ್ಲವು. ಬ್ರಹ್ಮನು ಮಾನವ ಪ್ರಜೆಗಳನ್ನು ಮನಸ್ಸಿನಿಂದಲೇ ಸೃಷ್ಟಿಸಲಿಲ್ಲವೇ ?

೯೪. ಜಿತಮನಸ್ಸುಳ್ಳ ನಿಮಗೆ ತಪಸ್ಸಿನ ಶಕ್ತಿಯಿದ್ದರೆ ಪ್ರಾಜಾಪತ್ಯ ಕರ್ಮದಿಂದ ಮಾನಸ ಪುತ್ರರನ್ನು ಸೃಷ್ಟಿಸಿರಿ.

೯೫. ತಪಸ್ವಿಗಳಿಗೆ ಮನಸ್ಸಿನಿಂದ ನಿರ್ಮಿಸಿಕೊಂಡ ಯೋನಿಯು ವೀರ್ಯವಿಡುವ ಸ್ಥಳವು. ಹೆಂಡಿರನ್ನು ಹೊಂದುವುದು, ಅವರ ಸಂಬಂಧ, ಅಲ್ಲಿ ವೀರ್ಯವನ್ನಿಡುವುದು, ಇವು ತಪಸ್ವಿಗಳಿಗೆ ಹೇಳಲ್ಪಟ್ಟಿಲ್ಲ.

ಯದಿದಂ ಲುಪ್ತಧರ್ಮಾರ್ಥಂ ಯುಷ್ಮಾಭಿರಿಹ ನಿರ್ಭಯೈಃ ।
ವ್ಯಾಹೃತಂ ಸದ್ಭಿರತ್ಯರ್ಥಮಸದ್ಭಿರಿವ ಸಮ್ಮತಂ ॥ ೯೭ ॥

ವಪುರ್ದೀಪ್ತಾನ್ತರಾತ್ಮಾನಮೇಷಕೃತ್ವಾ ಮನೋಮಯಂ ।
ದಾರಯೋಗಂ ವಿನಾ ಸ್ರಕ್ಷ್ಯೇ ಪುತ್ರಮಾತ್ಮತನೂರುಹಂ
ಏವಮಾತ್ಮಾನಮಾತ್ಮಾ ಮೇ ದ್ವಿತೀಯಂ ಜನಯಿಷ್ಯತಿ ॥ ೯೭ ॥

॥ ವರುಣ ಉವಾಚ ॥

ಪ್ರಾಜಾಪತ್ಯೇನ ವಿಧಿನಾ ದಿಧಕ್ಷನ್ತಮಿವ ಪ್ರಜಾಃ ॥
ಉರ್ವಸ್ತು ತಪಸಾವಿಷ್ಟೋ ನಿವಿಶ್ಯೋರುಂ ಹುತಾಶನೇ ॥ ೯೮ ॥

ಮಮಂಥೈಕೇನ ದರ್ಭೇಣ ಪುತ್ರಸ್ಯ ಪ್ರಸೂರಣಂ ।
ತಸ್ಯೋರುಂ ಸಹಸಾ ಭಿತ್ವಾ ಜ್ವಾಲಾಮಾಲೀ ಹ್ಯನಿಂಧನಃ ॥ ೯೯ ॥

ಜಗತೋ ದಹನಾಕಾಂಕ್ಷೀ ಪುತ್ರೋಗ್ನಿಸ್ಸಮಪದ್ಯತ ।
ಊರ್ವಸ್ಯೋರುಂ ವಿನಿರ್ಭಿದ್ಯ ಔರ್ವೋನಾಮಾಂತಕೋಽನಲಃ ॥ ೧೦೦ ॥

---

೯೬. ನೀವು ಒಂದು ವೇಳೆ ಧರ್ಮವನ್ನು ಲೋಪಮಾಡಿಕೊಂಡವರಿಗೆ ಹೇಳು ತ್ತಿರುವುದೆಂದು ಭಯವಿಲ್ಲದೆ ಹೇಳುವ ಪಕ್ಷದಲ್ಲಿ ಅದನ್ನು ಸತ್ಪುರುಷರು ಅಯೋಗ್ಯ ರಂತೆ ಹೇಳಿದರು. ಅಯೋಗ್ಯರು ಅನುಮೋದಿಸಿದರು.

೯೭. ಪ್ರಕಾಶಿಸುತ್ತಿರುವ ಅಂತರಾತ್ಮವುಳ್ಳ ಮನೋವಿಕಾರವಾದ ದೇಹವನ್ನು ಮಾಡಿಕೊಂಡು ಹೆಂಡತಿಯನ್ನು ಹೊಂದದೇನೆ ನನ್ನಿಂದಲೇ ಉತ್ಪನ್ನನಾಗುವ ಮಗ ನನ್ನು ಹುಟ್ಟಿಸುತ್ತೇನೆ. ಇದೇ ರೀತಿ ನನ್ನ ಆತ್ಮನು ಆತ್ಮನನ್ನು ಹೊಂದಿ ಎರಡನೆಯ ಆತ್ಮನನ್ನು ಉತ್ಪತ್ತಿಮಾಡುತ್ತದೆ.

೯೮-೧೦೪. ವರುಣನು ಹೇಳಿದನು- ಪ್ರಾಜಾಪತ್ಯವಿಧಿಯಿಂದ ಪ್ರಜೆಗಳನ್ನು ಸುಡುವಂತೆ ಉರ್ವನು ತಪಸ್ಸನ್ನು ಹೊಂದಿ ಬೆಂಕಿಯಲ್ಲಿ ತನ್ನ ತೊಡೆಯನ್ನಿಟ್ಟು ಅವನ್ನು ಅರಣಿಯನ್ನಾಗಿ ಮಾಡಿ ಒಂದು ದರ್ಭೆಯಿಂದ ಆ ತೊಡೆಯನ್ನು ಕಡೆದನು. ಆಗ ಆ ಉರ್ವನ ತೊಡೆಗಳನ್ನು ಭೇದಿಸಿಕೊಂಡು ಜ್ವಾಲೆಯನ್ನು ಧರಿಸಿರುವ ಸೌದೆಯನ್ನು ಹೊಂದದೆ ಪ್ರಕಾಶಿಸುವ, ಜಗತ್ತನ್ನೇ ಸುಡಲಪೇಕ್ಷೆಯುಳ್ಳ, ಅಗ್ನಿಯು ಮಗನಾಗಿ ಹುಟ್ಟಿ ದನು. ಉರ್ವನ ತೊಡೆಗಳನ್ನು ಭೇದಿಸಿಕೊಂಡು ಔರ್ವನೆಂಬ ಕಾಲಾಗ್ನಿಯು ಮೂರು

ದಿಧಕ್ಷುರಿವ ಲೋಕಾನ್ಸಿ ತ್ರೀ ಜಜ್ಞೇ ಪರಮಕೋಪನಃ ।
ಉತ್ಪನ್ನಮಾತ್ರಃ ಪ್ರೋವಾಚ ಪಿತರಂ ದೀನಯಾ ಗಿರಾ ॥ ೧೦೧ ॥

ಕ್ಷುಧಾ ಮೇ ವರ್ತತೇ ತಾತ ಜಗದ್ಭಕ್ಷೇ ದಿಶಸ್ವ ಮಾಂ ।
ತ್ರಿದಿವಾರೋಹಿಭಿರ್ಜ್ವಾಲೈ ರ್ಜೃಂಭಮಾಣೋ ದಿಶೋ ದಶ ॥ ೧೦೨ ॥

ನಿರ್ದಹನ್ಸರ್ವಭೂತಾನಿ ವವೃಧೇ ಸೋಽಂತಕೋಪಮಃ ।
ಏತಸ್ಮಿನ್ನಂತರೇ ಬ್ರಹ್ಮಾ ಮುನಿಮುರ್ವಂ ಸಮಾಗತಃ ॥ ೧೦೩ ॥

ಉವಾಚ ವಾರ್ಯತಾಂ ಪುತ್ರೋ ಜಗತಸ್ತ್ವಂ ದಯಾಂ ಕುರು ।
ಅಸ್ಯಾಪತ್ಯಸ್ಯ ತೇ ವಿಪ್ರ ಕರಿಷ್ಯೇ ಸ್ಥಾನಮುತ್ತಮಂ
ತಥ್ಯಮೇತದ್ವಚಃ ಪುತ್ರ ಶೃಣು ತ್ವಂ ವದತಾಂ ವರ ॥ ೧೦೪ ॥

॥ ಉರ್ವ ಉವಾಚ ॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮೇ ತ್ವಂ ಭಗವಾನ್ ಶಿಶೋಃ ।
ಮತಿಮೇತಾಂ ದದಾಸೀಹ ಪರಮಾನುಗ್ರಹಾಯ ವೈ ॥ ೧೦೫ ॥

---

ಲೋಕವನ್ನೂ ದಹಿಸುವಷ್ಟು ಕೋಪವುಳ್ಳವನಾಗಿ ಹುಟ್ಟಿದನು. ಅವನು ಹುಟ್ಟಿದೊಡನೆಯೇ ತಂದೆಯೊಡನೆ ದೀನವಾದ ಮಾತಿನಿಂದ ಇಂತೆಂದನು. ಎಲೈ ತಂದೆಯೇ! ನನಗೆ ಹಸಿವು ಬಾಧಿಸುತ್ತಿದೆ. ಜಗತ್ತನ್ನೇ ತಿಂದುಬಿಡುತ್ತೇನೆ. ಅಪ್ಪಣೆಕೊಡೆಂದನು. ಹೀಗೆನ್ನುತ್ತಲೇ ದೇವಲೋಕವನ್ನು ಮುಟ್ಟುತ್ತಿರುವ ಜ್ವಾಲೆಗಳಿಂದ ವೃದ್ಧಿಹೊಂದುತ್ತ ಹತ್ತು ದಿಕ್ಕುಗಳನ್ನೂ ಎಲ್ಲಾ ಭೂತಗಳನ್ನೂ ಸುಡಲು ಯಮನಂತೆ ಬೆಳೆದನು. ಇಷ್ಟರೊಳಗೆ ಅಲ್ಲಿಗೆ ಬ್ರಹ್ಮನು ಬಂದು ಉರ್ವನನ್ನು ಕುರಿತು ಎಲೈ ಉರ್ವನೇ! ಮಗನನ್ನು ಸಮಾಧಾನ ಪಡಿಸಿ ಹಿಂತಿರುಗಿಸು. ನೀನು ಜಗತ್ತಿಗೆ ದಯೆ ತೋರಿಸು. ಈ ನಿನ್ನ ಮಗನಿಗೆ ಉತ್ತಮ ಸ್ಥಾನವನ್ನು ಕಲ್ಪಿಸುತ್ತೇನೆ. ಇದು ನಿಶ್ಚಯವು. ಎಲೈ ತಿಳಿದವರಲ್ಲಿ ಶ್ರೇಷ್ಠನೇ! ನಾನು ಹೇಳುವುದನ್ನು ಕೇಳು.

೧೦೫ ಉರ್ವನು ಹೇಳಿದನು— ಎಲೈ ಬ್ರಹ್ಮನೇ! ಧನ್ಯನಾದೆನು. ಅನುಗ್ರಹವನ್ನು ಹೊಂದಿದೆನು. ನೀನು ನನ್ನ ಮಗನಿಗೆ ಒಳ್ಳೆಯ ಬುದ್ಧಿಯನ್ನು ಕೊಡಲು ಬಂದಿರುವೆಯಲ್ಲ. ಅದೇ ನನಗೆ ಪರಮಾನುಗ್ರಹವಲ್ಲವೇ!

ಪ್ರಭಾತಕಾಲೇ ಸಂಪ್ರಾಪ್ತೇ ಕಾಂಕ್ಷಿತವ್ಯೇ ಸಮಾಗಮೇ ।
ಭಗವಂಸ್ತರ್ಪಿತಃ ಪುತ್ರಃ ಕೈರ್ಹವ್ಯೈಃ ಪ್ರಾಪ್ಯತೇ ಸುಖಂ ॥ ೧೦೬ ॥

ಕುತ್ರ ಚಾತ್ರ ನಿವಾಸಸ್ಸ್ಯಾದ್ಭೋಜನಂ ತು ಕಿಮಾತ್ಮಕಂ ।
ವಿದಧಾಸೀಹ ಭಗವನ್ವೀರ್ಯತುಲ್ಯಂ ಮಹೌಜಸಃ ॥ ೧೦೭ ॥

॥ ಬ್ರಹ್ಮೋವಾಚ ॥

ಬಡಬಾಮುಖೇ ಚ ವಸತಿಃ ಸಮುದ್ರೇ ವೈ ಭವಿಷ್ಯತಿ ।
ಮಮಯೋನಿರ್ಜಲಂ ವಿಪ್ರ ತಚ್ಚಾನೇಯಂ ವ್ರಜತ್ವಯಂ ॥ ೧೦೮ ॥

ತತ್ರಾಯಮಾಸ್ತೇ ನಿಯತಂ ಪಿಬನ್ವಾರಿಮಯಂ ಹವಿಃ ।
ತದ್ವಾರಿ ತವ ಪುತ್ರಸ್ಯ ವಿಸೃಷ್ಟನಿಲಯಂ ಚ ತತ್ ॥ ೧೦೯ ॥

ತತೋ ಯುಗಾಂತೇ ಭೂತಾನಾಮೇಷ ಚಾಹಂ ಚ ಪುತ್ರಕ ।
ಸಹಿತೌ ವಿಚರಿಷ್ಯಾವೋ ನಿಷ್ಪುರಾಣಕರಾವಿವ ॥ ೧೧೦ ॥

---

೧೦೬-೧೦೭. ಬೆಳಗಾಗುತ್ತಲೂ ಎಲ್ಲರನ್ನೂ ನೋಡುವಾಗ ನನ್ನ ಮಗನು ಯಾವ ಹವ್ಯಗಳಿಂದ ತೃಪ್ತಿಹೊಂದುವನೋ ಅಂತಹ ಹವ್ಯವು ಯಾವುದು ? ಇವನು ಎಲ್ಲಿರಬೇಕು ? ಊಟವು ಏನು ? ಅವನ ಪರಾಕ್ರಮಕ್ಕೂ ತೇಜಸ್ಸಿಗೂ ಸರಿಯಾಗಿರುವ ಇವನ್ನು ಸೃಷ್ಟಿಸು.

೧೦೮. ಬ್ರಹ್ಮನು ಹೇಳಿದನು- ಇವನು ಸಮುದ್ರದಲ್ಲಿರುವ ಬಡಬೆಯ ಮುಖವಲ್ಲಿರುವನು. ಎಲೈ ಬ್ರಾಹ್ಮಣನೇ ! ನೀರು ನನ್ನ ಯೋನಿಯು. ಅದು ಅಸಾಧ್ಯವಾದುದು. ಅಲ್ಲಿಗೆ ಇವನು ಹೋಗಲಿ.

೧೦೯. ಅಲ್ಲಿ ನಿನ್ನ ಮಗನು ನೀರಿನ ರೂಪವಾದ ಹವಿಸ್ಸನ್ನು ಕುಡಿಯುತ್ತಲಿರುವನು. ಆ ನೀರೇ ನಿನ್ನ ಮಗನಿಗೆ ಬಿಟ್ಟಿರುವ ಮನೆಯು.

೧೧೦. ಆಮೇಲೆ ಈತನೂ ನಾನೂ ಯುಗಾಂತದಲ್ಲಿ ಪುರಾಣ ಪುರುಷನ ಕೈಗಳಂತೆ ಸಂಚರಿಸುತ್ತೇವೆ.

ಏಷೋಽಗ್ನಿ ರಂತಕಾಲೇ ತು ಸಲಿಲಾಶೀ ಮಯಾ ಕೃತಃ ।
ದಹನಸ್ಸರ್ವಭೂತಾನಾಂ ಸದೇವಾಸುರ ರಕ್ಷಸಾಂ ॥ ೧೧೧ ॥

ಏವಮಸ್ತ್ವಿತಿ ತಂ ಸೋಽಗ್ನಿಃ ಸಂವೃತಜ್ವಾಲಮಂಡಿತಃ ।
ಪ್ರವಿವೇಶಾರ್ಣವಮುಖಂ ನತ್ವೋರಂ ಪಿತರಂ ಪ್ರಭುಂ ॥ ೧೧೨ ॥

ಪ್ರತಿಯಾತಸ್ತತೋ ಬ್ರಹ್ಮಾ ತೇ ಚ ಸರ್ವೇ ಮಹರ್ಷಯಃ ।
ಔರ್ವಸ್ಯಾಗ್ನೇಃ ಪ್ರಭಾವಜ್ಞಾಃ ಸ್ವಾಂ ಸ್ವಾಂ ಗತಿಮುಪಾಶ್ರಿತಾಃ ॥ ೧೧೩ ॥

ಹಿರಣ್ಯಕಶಿಪುರ್ದೃಷ್ಟ್ವಾ ತದಾ ತನ್ಮಹದದ್ಭುತಂ ।
ಊರ್ವಂ ಪ್ರಣತಸರ್ವಾಂಗೋ ವಾಕ್ಯಮೇತದುವಾಚ ಹ ॥ ೧೧೪ ॥

॥ ಹಿರಣ್ಯಕಶಿಪುರುವಾಚ ॥

ಭಗವನ್ನದ್ಭುತಮಿದಂ ಸಂವೃತ್ತಂ ಲೋಕಸಾಕ್ಷಿಕಂ ।
ತಪಸಾ ತೇ ಮುನಿಶ್ರೇಷ್ಠ ಪರಿತುಷ್ಟಃ ಪಿತಾಮಹಃ ॥ ೧೧೫ ॥

---

೧೧೧. ನೀರನ್ನು ಕುಡಿಯುತ್ತಿರುವ ಈ ಅಗ್ನಿಯು ಯುಗಾಂತ್ಯದಲ್ಲಿ ದೇವಾಸುರ ರಾಕ್ಷಸರೇ ಮೊದಲಾಗಿ ಎಲ್ಲರನ್ನೂ ಸುಡುವಂತೆ ಮಾಡಿದ್ದೇನೆ.

೧೧೨. ಆ ಅಗ್ನಿಯು ಹಾಗೆ ಆಗಲೆಂದು ಜ್ವಾಲೆಗಳನ್ನು ಬೀರುತ್ತ ತನ್ನ ತಂದೆಯಾದ ಊರ್ವನಿಗೆ ನಮಸ್ಕರಿಸಿ ಸಮುದ್ರವನ್ನು ಹೊಕ್ಕನು.

೧೧೩. ಆಗ ಬ್ರಹ್ಮನೂ, ಆ ಮಹರ್ಷಿಗಳೂ ಔರ್ವಾಗ್ನಿಯ ಪ್ರಭಾವವನ್ನು ತಿಳಿದವರಾಗಿ ಹಿಂತಿರುಗಿ ತಮ್ಮ ತಮ್ಮ ಸ್ಥಳಗಳಿಗೆ ಹೋದರು.

೧೧೪. ಆಗ ಹಿರಣ್ಯಕಶಿಪುವು ಆ ಅದ್ಭುತವನ್ನು ನೋಡಿ ಊರ್ವನಿಗೆ ಸಾಷ್ಟಾಂಗವೆರಗಿ ಇಂತೆಂದನು.

೧೧೫. ಹಿರಣ್ಯಕಶಿಪುವು ಹೇಳಿದನು– ಎಲೈ ಭಗವಂತನೇ ! ಲೋಕಸಾಕ್ಷಿಕವಾಗಿ ಈ ಅದ್ಭುತವು ನಡೆಯಿತು. ಈ ನಿನ್ನ ತಪಸ್ಸಿಗೆ ಪಿತಾಮಹನು ಸಂತೋಷಗೊಂಡನು.

ಅಹಂ ತು ತವ ಪುತ್ರಸ್ಯ ತವ ಚೈವ ಮಹಾವ್ರತ ।
ಭೃತ್ಯ ಇತ್ಯವಗಂತವ್ಯಃ ಶ್ಲಾಘ್ಯಸ್ತ್ವಮಿಹ ಕರ್ಮಣಾ ॥ ೧೧೬ ॥

ತಸ್ಮಾಂ ಪಶ್ಯ ಸಮಾಪನ್ನಂ ತವೈವಾರಾಧನಂ ಪ್ರತಿ ।
ಯದಿ ಸೀದೇಸ್ಮ್ಯನಿಶ್ರೇಷ್ಠ ತಸ್ಯೈವಸ್ಯಾತ್ಪರಾಜಯಃ ॥ ೧೧೭ ॥

॥ ಉರ್ವ ಉವಾಚ ॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ತೇಽಹಂ ಗುರುರ್ಮತಃ ।
ನಾಸ್ತಿ ತೇ ತಪಸಾ ತೇನ ಭಯಂ ಚೈವೇಹ ಸುವ್ರತ ॥ ೧೧೮ ॥

ತಾಮೇವ ಮಾಯಾಂ ಗೃಹ್ಣೀಷ್ವ ಮಮ ಪುತ್ರೇಣ ನಿರ್ಮಿತಾಂ ।
ನಿರಿಂಧನಾಮಗ್ನಿಮಯೀಂ ದುಸ್ಪರ್ಶಾಂ ಪಾವಕೈರಪಿ ॥ ೧೧೯ ॥

ಏಷಾ ತೇ ಸ್ವಸ್ಯ ವಂಶಸ್ಯ ವಶಗಾರಿವಿನಿಗ್ರಹಾತ್ ।
ರಕ್ಷಿಷ್ಯತ್ಯಾತ್ಮಪಕ್ಷಂ ಚ ವಿಪಕ್ಷಂ ಚ ಪ್ರಧಕ್ಷ್ಯತಿ ॥ ೧೨೦ ।

---

೧೧೬. ಎಲೈ ಮಹಾತಪಸ್ವಿಯೇ ! ನನ್ನನ್ನು ನಿನಗೂ ನಿನ್ನ ಮಗನಿಗೂ ಆಳೆಂಬುದಾಗಿ ತಿಳಿ, ಈ ಕಾರ್ಯದಿಂದ ನೀನು ಸ್ತುತ್ಯನಾಗಿದ್ದೀಯೆ

೧೧೭. ಆದ್ದರಿಂದ ನಾನು ನಿನ್ನನ್ನು ಸೇವಿಸಲು ಬಂದಿದ್ದೇನೆ ಎಲೈ ಮುನಿವರ್ಯನೇ ! ನಾನು ಸೇವೆಯಲ್ಲಿ ದುಃಖಿಸಿದರೆ (ಹಿಂಚಿಗಿದರೆ) ನನಗೆ ಪರಾಜಯವಾಗಲಿ.

೧೧೮. ಉರ್ವನು ಹೇಳಿದನು- ಎಲೈ ಹಿರಣ್ಯಕಶಿಪುವೇ ! ನೀನು ನನಗೆ ಶಿಷ್ಯನೂ, ನಾನು ನಿನಗೆ ಗುರುವೂ ಆದುದರಿಂದ ಧನ್ಯನಾದೆನು. ಅನುಗ್ರಹ ಹೊಂದಿದವನಾದೆನು. ಎಲೈ ಸುವ್ರತನೇ ! ಈ ತಪಸ್ಸಿನಿಂದ ನಿನಗೆ ಭಯವಿಲ್ಲ.

೧೧೯. ಸೌದೆಯಿಲ್ಲದೆ ಬೆಂಕಿಯಾಗುವ ಅಗ್ನಿದೇವನಿಗೂ ಮುಟ್ಟಲಾಗದ, ನನ್ನ ಮಗನು ನಿರ್ಮಿಸಿರುವ ಆ ಮಾಯೆಯನ್ನೇ ತೆಗೆದುಕೋ.

೧೨೦. ಈ ಮಾಯೆಯು ನಿನ್ನ ವಂಶಕ್ಕೆ ಅಧೀನವಾಗಿ ಶತ್ರುಗಳನ್ನು ನಾಶ ಮಾಡುತ್ತದೆ. ನಿನ್ನವರವನ್ನು ರಕ್ಷಿಸುತ್ತದೆ ಶತ್ರುಪಕ್ಷವನ್ನು ಸುಡುತ್ತದೆ ಎಂದನು.

॥ ವರುಣ ಉವಾಚ ॥

ಏಷಾ ದುರ್ನಿಃಷಹಾ ಮಾಯಾ ದೇವೈರಪಿ ದುರಾಸದಾ ।
ಔರ್ವೇಣ ನಿರ್ಮಿತಾ ಪೂರ್ವಂ ಪಾವಕೇನೋರ್ವಸೂನುನಾ ॥ ೧೨೧ ॥

ತಸ್ಮಿಂಸ್ತು ವ್ಯಥಿತೇ ದೈತ್ಯೇ ನಿವಾರ್ಯೈಷಾ ನ ಸಂಶಯಃ ।
ಶಾಪೋ ಹ್ಯಸ್ಯಾಃ ಪುರಾ ದತ್ತಃ ಸೃಷ್ಟ್ವಾ ಯೇನೈವ ತೇಜಸಾ ॥ ೧೨೩ ॥

ಯದ್ಯೇಷಾ ಪ್ರತಿಹನ್ತವ್ಯಾ ಕರ್ತವ್ಯೋ ಭಗವಾನ್ಸುಖೀ ।
ದೀಯತಾಂ ಮೇ ಸಖಾ ಶಕ್ರ ತೋಯಯೋನಿಃ ನಿಶಾಕರಃ ॥ ೧೨೩ ॥

ತೇನಾಹಂ ಸಹ ಸಂಗಮ್ಯ ಯಾದೋಭಿಶ್ಚ ಸಮಾವೃತಃ ।
ಮಾಯಾಮೇತಾಂ ಹನಿಷ್ಯಾಮಿ ತ್ವತ್ಪ್ರಸಾದಾನ್ನ ಸಂಶಯಃ ॥ ೧೨೪ ॥

॥ ಪುಲಸ್ತ್ಯ ಉವಾಚ ॥

ಏವಮಸ್ತ್ವಿತಿ ಸಂಹೃಷ್ಟಃ ಶಕ್ರಸ್ತ್ರಿದಶವರ್ಧನಃ ।
ಸಂದಿದೇಶಾಗ್ರತಸ್ಸೋಮಂ ಯುದ್ಧಾಯ ಶಿಶಿರಾಯುಧಂ ॥ ೧೨೫ ॥

---

೧೨೧. ವರುಣನು ಹೇಳಿದನು- ಆದ್ದರಿಂದ ಈ ಮಾಯೆಯು ತಡೆಯಲಸಾಧ್ಯವಾದುನು. ದೇವತೆಗಳಗೂ ಸಾಧ್ಯವಿಲ್ಲ. ಉರ್ವನ ಮಗನಾದ ಅಗ್ನಿಯು ಇದನ್ನು ಪೂರ್ವದಲ್ಲಿ ಸೃಷ್ಟಿಸಿದನು.

೧೨೨-೧೨೩. ಮಾಯಾ ಸೃಷ್ಟಕನಾದ ದೈತ್ಯನನ್ನು ದುಃಖಪಡಿಸಿದರೆ ಈ ಮಾಯೆಯು ಹೋಗುತ್ತದೆ. ಈ ಮಾಯೆಯನ್ನು ಸೃಷ್ಟಿಮಾಡಿದಾಗಲೇ ಅವನು ಹಾಗೆ ಶಾಪಕೊಟ್ಟಿರುವನು. ಈ ಮಾಯೆಯನ್ನು ನಾನು ನಾಶಮಾಡಬೇಕಾದರೆ ಅ ನಿನ್ನನ್ನು ಸುಖಿಯನ್ನಾಗಿ ಮಾಡಬೇಕಾದರೆ ನನ್ನ ಜೊತೆಗೆ ನೀರಿನಲ್ಲಿ ಹುಟ್ಟಿದ ಈ ಚಂದ್ರನನ್ನು ಸಹಾಯಕ್ಕೆ ಕಳುಹಿಸು.

೧೨೪. ನಾನು ಆ ಚಂದ್ರನೊಡನೆಯೂ, ಜಲಜಂತುಗಳೊಡನೆಯೂ, ಕೂಡಿಕೊಂಡು ನಿನ್ನ ಅನುಗ್ರಹದಿಂದ ಆ ಮಾಯೆಯನ್ನು ನಾಶಮಾಡುತ್ತೇನೆ. ಸಂಶಯ ಪಡಬೇಡ.

೧೨೫. ಪುಲಸ್ತ್ಯನು ಹೇಳಿದನು- ಆಗ ಇಂದ್ರನು ಸಂತೋಷಪಟ್ಟು ಹಾಗೇ ಆಗಲೆಂದು ತಂಪಾದ ಹಿಮವೇ ಆಯುಧವಾಗಿ ಉಳ್ಳ ಚಂದ್ರನನ್ನು ಯುದ್ಧಕ್ಕೆ ಮುಂದೆ ಹೋಗುವಂತೆ ಅಪ್ಪಣೆ ಮಾಡಿದನು.

॥ ಇಂದ್ರ ಉವಾಚ ॥

ಸಾಹಾಯ್ಯಂ ಗಚ್ಛ ಸೋಮ ತ್ವಂ ಕುರು ಪಾಶಧರಸ್ಯ ವೈ ।
ಅಸುರಾಣಾಂ ವಿನಾಶಾಯ ವಿಜಯಾರ್ಥಂ ದಿವೌಕಸಾಂ ॥ ೧೨೬ ॥

ತ್ವಂ ಮತ್ತಃ ಪ್ರತಿವೀರ್ಯಶ್ಚ ಜ್ಯೋತಿಷಾಮಪಿ ಚೇಶ್ವರಃ ।
ಧರ್ಮಾಯ ಸರ್ವಲೋಕಸ್ಯ ರಸಾನಾಮಧಿದೇವತಾ ॥ ೧೨೭ ॥

ತ್ವಯಾ ಸಮೋ ನ ಲೋಕಸ್ಯ ವಿದ್ಯತೇ ಶಿಶಿರಾಯುಧ ।
ಕ್ಷಯವೃದ್ಧೀ ತವಾವ್ಯಕ್ತೇ ಸಾಗರಸ್ಯೇವ ಚಾಂಬರೇ ॥ ೧೨೮ ॥

ಪರಿವರ್ತಯ ಅಹೋರಾತ್ರಾತ್ಕಾಲಂ ಜಗತಿ ಮೋಹಯೇಃ ।
ಲೋಕಚ್ಛಾಯಾಮಯಂ ಲಕ್ಷ್ಮ ತವಾಂಕಶ್ಶಶವಿಭ್ರಮ ॥ ೧೨೯ ॥

ನ ವಿದುಸ್ಸೋಮ ದೇವಾಪಿ ಯೇ ಚ ನಕ್ಷತ್ರಯೋನಯಃ ।
ತ್ವಮಾದಿತ್ಯಯಥಾಪೂರ್ವಂ ಜ್ಯೋತಿಷೋಪರಿಸಂಸ್ಥಿತಃ ॥ ೧೩೦ ॥

---

೧೨೬. ಇಂದ್ರನು ಹೇಳಿದನು– ಎಲೈ ಚಂದ್ರನೇ! ನೀನು ಹೋಗು ಅಸುರ ನಾಶಕ್ಕೋಸ್ಕರವೂ, ದೇವತೆಗಳ ವಿಜಯಕ್ಕೋಸ್ಕರವೂ. ನೀನು ಈ ಪಾಶಧರನಾದ ವರುಣನಿಗೆ ಸಹಾಯಮಾಡು.

೧೨೭ ನೀನು ನನಗಿಂತಲೂ ಬಲಿಷ್ಠನು. ಜ್ಯೋತಿಸ್ಸಿಗೆಲ್ಲಾ ಒಡೆಯನು. ರಸಗಳಿಗೆಲ್ಲಾ ಅಧಿದೇವತೆಯು ನೀನು ಹೋಗಿ ಸರ್ವಲೋಕಗಳ ಧರ್ಮವನ್ನೂ ಉಳಿಸು.

೧೨೮. ಎಲೈ ಶಿಶಿರಾಯುಧನೇ! ಲೋಕದಲ್ಲಿ ನಿನಗೆ ಸಮನಾದವನೇ ಇಲ್ಲವು. ಭೂಮಿಯಲ್ಲಿ ಸಮುದ್ರಕ್ಕೆ ಉಬ್ಬರವಿಳಿತವಿರುವಂತೆ ಆಕಾಶದಲ್ಲಿ ನಿನಗೆ ಕ್ಷಯವೃದ್ಧಿಗಳು ಅವ್ಯಕ್ತವಾಗಿ ತಿಳಿಯುತ್ತವೆ.

೧೨೯. ಆ ಆಕಾಶದಲ್ಲಿ ಸುತ್ತುತ್ತ ಜಗತ್ತಿನ ಪ್ರಾಣಿಗಳು ಕಾಲದ ವಿಷಯದಲ್ಲಿ ಭ್ರಮೆಗೊಳ್ಳುವಂತೆ ಮಾಡುತ್ತೀಯೆ. ಲೋಕಗಳ ನೆರಳೇ ನಿನ್ನಲ್ಲಿ ಬಿದ್ದು ಛಾಯೆಯು ಕಾಣುತ್ತಿದ್ದರೂ, ಅದು ಮೊಲವೆಂಬ ಭ್ರಾಂತಿಯನ್ನುಂಟುಮಾಡುತ್ತದೆ.

೧೩೦. ಎಲೈ ಸೋಮನೆ! ದೇವತೆಗಳಾಗಲಿ, ನಕ್ಷತ್ರಗಳಾಗಲಿ ನಿನ್ನ ಸ್ಥಿತಿಯನ್ನು ತಿಳಿಯರು. ಕ್ರಮದಲ್ಲಿ ನೋಡಿದರೆ ನೀನು ಆದಿತ್ಯನಿಗಿಂತಲೂ, ಮತ್ತು ಎಲ್ಲಾ ಜ್ಯೋತಿಸ್ಸುಗಳಿಗಿಂತಲೂ ಮೇಲೆ ಇಡಲ್ಪಟ್ಟಿದ್ದೀಯೆ.

**ತಮಃ ಪ್ರೋತ್ಸಾರ್ಯ ಸಹಸಾ ಭಾಸಯಸ್ಯಖಿಲಂ ಜಗತ್ ।**
**ಶೀತಭಾನುರ್ಹಿಮತನುರ್ಜ್ಯೋತಿಷಾಮಧಿಪಶ್ಶಶೀ ॥ ೧೩೧ ॥**

**ಅಪಿ ತತ್ಕಾಲಯೋಗಾತ್ಮಾ ಇಜ್ಯೋ ಯಜ್ಞರಸೋವ್ಯಯಃ ।**
**ಓಷಧೀಶಃ ಕ್ರಿಯಾಯೋನಿರಾಪೋಜ್ಯೋತಿಸ್ಸಮೂರ್ತಿಮಾನ್ ॥ ೧೩೨ ॥**

**ಶೀತಾಂಶುರಮೃತಾಧಾರಶ್ಚಪಲಃ ಶ್ವೇತವಾಹನಃ ।**
**ತ್ವಂ ಕಾಂತಿಃ ಕಾಂತಿವಪುಷಾಂ ತ್ವಂ ಸೋಮಃ ಸೋಮಪಾಯಿನಾಂ ॥೧೩೩॥**

**ಸೋಮಸ್ತ್ವಂ ಸರ್ವಭೂತಾನಾಂ ತಿಮಿರಘ್ನಸ್ತ್ವಮೃಕ್ಷರಾಟ್ ।**
**ತದ್ಗಚ್ಛ ತ್ವಂ ಮಹಾಸೇನ ವರುಣೇನ ವರೂಥಿನಾ ।**
**ಶಮಯಸ್ವಾಸುರೀಂ ಮಾಯಾಂ ದಹಮಾನಾಂ ಸುಸಂಯುಗೇ ॥ ೧೩೪ ॥**

---

೧೩೧. ಅಂಧಕಾರವನ್ನು ಓಡಿದೋಡಿಸಿ ಎಲ್ಲಾ ಜಗತ್ತನ್ನೂ ಬೆಳಗುತ್ತೀಯೆ. ನೀನು ತಣ್ಣಗಿರುವ ಕಿರಣಗಳುಳ್ಳವನು. ಹಿಮದ ಮೈಯುಳ್ಳವನು. ಜ್ಯೋತಿಸ್ಸಿಗೆಲ್ಲಾ ಅಧಿಪತಿಯು. ಮೊಲವನ್ನು ಹೊಂದಿರುವವನು.

೧೩೨. ಆಯಾಯ ಕಾಲದಲ್ಲಿ, ಆಯಾಯ ರಸದಲ್ಲಿ ನಿನ್ನ ಆತ್ಮವನ್ನು ಇಡುತ್ತೀಯೆ. ನೀನೇ ಯಾಗಕ್ಕೆ ಗುರಿಯಾದ ಪದಾರ್ಥವು. ಯಜ್ಞದ ರಸವೇ ನೀನು ನೀನು ನಾಶರಹಿತನು. ಓಷಧಿಗಳಿಗೆ ಒಡೆಯನು. ಕ್ರಿಯೆಯುಳ್ಳವನು. ನೀನೇ ನೀರು. ನೀನೇ ಮೂರ್ತಿಮತ್ತಾದ ತೇಜಸ್ಸು.

೧೩೩. ನೀನು ಶೀತವಾದ ಕಿರಣವುಳ್ಳವನು. ಅಮೃತಕ್ಕೆ ಆಧಾರಭೂತನು. ಚಪಲನು. ಬಿಳಿಯ ಕುದುರೆಗಳುಳ್ಳವನು. ಕಾಂತಿಯಾದ ಶರೀರಗಳಲ್ಲೆಲ್ಲಾ ನೀನೇ ಕಾಂತಿಯಾಗಿರುತ್ತೀಯೆ. ಸೋಮರಸವನ್ನು ಕುಡಿಯುವವರಿಗೆಲ್ಲಾ ನೀನೇ ಸೋಮನು.

೧೩೪. ಎಲೆ ಸೋಮನೇ! ನೀನೇ ಎಲ್ಲಾ ಪ್ರಾಣಿಗಳಿಗೂ ಕತ್ತಲೆಯನ್ನು ನಾಶಮಾಡಿ ಬೆಳಕು ಕೊಡುವವನು. ನಕ್ಷತ್ರಗಳಿಗೂ ಒಡೆಯನು. ಎಲೈ ಶೂರನೇ! ಸೇನೆಯೊಡನೆ ಆ ವರುಣನ ಜೊತೆಯಲ್ಲಿ ನೀನು ಹೋಗು. ಯುದ್ಧದಲ್ಲಿ ಸುಡುತ್ತಿರುವ ಈ ರಾಕ್ಷಸ ಮಾಯೆಯನ್ನು ನಾಶಮಾಡು.

॥ ಸೋಮ ಉವಾಚ ॥

ಯನ್ಮಾಂ ವದಸಿ ಯುದ್ಧಾರ್ಥೇ ದೇವರಾಜ ವರಪ್ರದ ।
ಏಷ ವರ್ಷಾಮಿ ಶಿಶಿರಂ ದೈತ್ಯಮಾಯಾಪಕರ್ಷಣಂ ॥ ೧೩೫ ॥

ಏತಾನ್ಮೇ ಶೀತನಿರ್ದಗ್ಧಾನ್ಪಶ್ಯಸ್ವ ಹಿಮವೇಷ್ಟಿತಾನ್ ।
ವಿಮಾಯಾನ್ವಿಮದಾಂಶ್ಚೈವ ದೈತ್ಯಸಂಘಾನ್ಮಹಾಹವೇ ॥ ೧೩೬ ॥

ತಥಾ ಹಿಮಕರೋತ್ಸೃಷ್ಟಾಃ ಸಮಾಯಾ ಹಿಮವೃಷ್ಟಯಃ ।
ವೇಷ್ಟಯಂತಿ ಚ ತಾನ್ಘೋರಾನ್ದೈತ್ಯಾನ್ಮೇಘಗಣಾ ಇವ ॥ ೧೩೭ ॥

ತೌ ಪಾಶಶೀತಾಂಶುಧರೌ ವರುಣೇಂದೂ ಮಹಾಬಲೌ ।
ಜಘ್ನತುರ್ಹಿಮಪಾತೈಶ್ಚ ಪಾಶಪಾತೈಶ್ಚ ದಾನವಾನ್ ॥ ೧೩೮ ॥

ದ್ವಾವಂಬುನಾಥೌ ಸಮರೇ ತೌ ಪಾಶಹಿಮಯೋಧಿನೌ ।
ಮೃಧೇ ಚೇರತುರಂಭೋಭಿಃ ಕ್ಷುಬ್ಧಾವಿವ ಮಹಾರ್ಣವೌ ॥ ೧೩೯ ॥

---

೧೩೫. ಸೋಮನು ಹೇಳಿದನು- ಎಲೈ ವರವನ್ನು ಕೊಡುವ ದೇವರಾಜನೆ! ನೀನು ನನ್ನನ್ನು ಯುದ್ಧಕ್ಕೆ ಹೋಗುವಂತೆ ಹೇಳುವ ಪಕ್ಷದಲ್ಲಿ ಇಗೋ ಈ ನಾನು ಹೋಗಿ ದೈತ್ಯ ಮಾಯೆಯನ್ನು ನಾಶಮಾಡುವ ಮಂಜನ್ನು ಸುರಿಸುತ್ತೇನೆ.

೧೩೬. ಎಲೈ ಇಂದ್ರನೇ! ನನ್ನ ಈ ಶೀತದಿಂದ ಕೂಡಿರುವ, ಹಿಮದಿಂದ ಒದ್ದೆಯಾಗಿರುವ ಕಿರಣಗಳನ್ನು ನೋಡು. ದೈತ್ಯರ ಸಮೂಹವು ಮದವನ್ನು ಬಿಡುವಂತೆಯೂ, ಮಾಯೆಯನ್ನು ಬಿಡುವಂತೆಯೂ ಸಹ ಮಾಡುತ್ತೇನೆ.

೧೩೭. ಹಿಮಕಿರಣಗಳಿಂದ ಬಿಡಲ್ಪಟ್ಟ ಮಾಯೆಯಿಂದ ಕೂಡಿದ ಹಿಮದ ಮಳೆಯು ಆ ದೈತ್ಯರನ್ನು ಮೇಘಗಳು ಮುಚ್ಚಿಕೊಳ್ಳುವಂತೆ ಮುಚ್ಚಿಕೊಳ್ಳುತ್ತವೆ.

೧೩೮. ಮಹಾಬಲಿಷ್ಠರಾದ ಆ ಚಂದ್ರವರುಣರು ಹಿಮಪಾಶದಿಂದಲೂ, ವರುಣಪಾಶದಿಂದಲೂ, ಆ ದಾನವರನ್ನು ಕೊಂದರು.

೧೩೯. ಹಿಮದಿಂದಲೂ, ಪಾಶದಿಂದಲೂ, ಯುದ್ಧಮಾಡುವ, ನೀರಿಗೆ ಒಡೆಯರಾದ, ಚಂದ್ರ ವರುಣರು ಕೋಪಗೊಂಡು ಸಮುದ್ರಗಳಂತೆ ಯುದ್ಧದಲ್ಲಿ ಉಕ್ಕುಸುತ್ತುತ್ತಿದ್ದರು.

ತಾಭ್ಯಾಮಾಪ್ಲಾವಿತಂ ಸರ್ವಂ ತದ್ದಾನವಬಲಂ ಮಹತ್ ।
ಜಗತ್ಸಂವರ್ತಕಾಂಭೋದೈಃ ಪ್ರಾವೃಷ್ಯೈರಿವ ಸಂವೃತಂ ॥ ೧೪೦ ॥

ತಾವುದ್ಯತಾಂಬುನಾಥೌ ತು ಶಶಾಂಕವರುಣಾವುಭೌ ।
ಶಮಯಾಮಾಸತುಸ್ತಾಂ ತು ಮಾಯಾಂ ದೈತ್ಯೇಂದ್ರನಿರ್ಮಿತಾಂ ॥ ೧೪೧ ॥

ಶೀತಾಂಶುಜಾಲನಿರ್ದಗ್ಧಾಃ ಪಾಶೈರಸ್ಪಂದಿತಾ ರಣೇ ।
ನ ಶೇಕುಶ್ಚಲಿತುಂ ದೈತ್ಯಾ ವಿಶಿರಸ್ಕಾ ಇವಾದ್ರಯಃ ॥ ೧೪೨ ॥

ಶೀತಾಂಶುನಾ ಹತಾಸ್ತೇ ತು ದೈತ್ಯಾಸ್ಸರ್ವೇ ಹಿಮಾರ್ದಿತಾಃ ।
ಹಿಮಪ್ಲಾವಿತಸರ್ವಾಂಗಾ ನಿರೂಷ್ಮಾಣ ಇವಾಗ್ನಯಃ ॥ ೧೪೩ ॥

ತೇಷಾಂ ತು ದಿವಿ ದೈತ್ಯಾನಾಂ ನಿಪತಂತಿ ಪ್ರಭಾಣಿ ವೈ ।
ಖಗಮಾನಿ ವಿಮಾನಾನಿ ನಿಪತಂತ್ಯುತ್ಪತಂತಿ ಚ ॥ ೧೪೪ ॥

ತಾನ್ಪಾಶಹಸ್ತವ್ಯಥಿತಾನ್ ಛಾದಿತಾನ್ ಶೀತರಶ್ಮಿನಾ ।
ಮಯೋ ದದರ್ಶ ಮಾಯಾವೀ ದಾನವಾನ್ದಿವಿ ದಾನವಃ ॥ ೧೪೫ ॥

---

೧೪೦. ಆ ದಾನವರ ಸೈನ್ಯವನ್ನು ಅವರಿಬ್ಬರೂ, ನೆನೆಸಿ ಶೀತವಾಗುವಂತೆ ಮಾಡುತ್ತ ಪ್ರಪಂಚವನ್ನು ನಾಶಮಾಡಲು ಎದ್ದಿರುವ ಮೇಘಗಳ ಮಳೆಯಂತೆ ಎಲ್ಲಾ ಕಡೆಯಲ್ಲೂ ಆವರಿಸಿಕೊಂಡರು.

೧೪೧. ಯುದ್ಧಕ್ಕೋಸ್ಕರ ಹೊರಟ ಚಂದ್ರ ವರುಣರು ಆ ದೈತ್ಯನಿಂದ ನಿರ್ಮಿಸಲ್ಪಟ್ಟ ಮಾಯೆಯನ್ನು ನಾಶಮಾಡಿದರು.

೧೪೨. ಚಂದ್ರನ ತಣ್ಣಗಿರುವ ಕಿರಣದಿಂದ ಶೀತವೇರಿದ, ವರುಣನ ಪಾಶದಿಂದ ಕಟ್ಟಲ್ಪಟ್ಟ ಆ ದೈತ್ಯರು ಶಿಖರವಿಲ್ಲದ ಬೆಟ್ಟಗಳಂತೆ ಚಲಿಸಲಾರದಿದ್ದರು.

೧೪೩. ಶೀತಕಿರಣಗಳಿಂದ ಚಂದ್ರನು ಹೊಡೆಯಲು ಶೀತವೇರಿ ಹಿಮದಿಂದ ನೆನೆದ ಆ ದೈತ್ಯರು ಬಿಸಿಯಿಲ್ಲದ ಬೆಂಕಿಯಂತಾದರು.

೧೪೪. ಆ ಅಂತರಿಕ್ಷದಲ್ಲಿ ಓಡಾಡುತ್ತಿದ್ದ ದೈತ್ಯರ ಕಾಂತಿಯೆಲ್ಲವೂ ಕುಂದಿದುವು. ಅಂತರಿಕ್ಷದಲ್ಲಿ ಓಡಾಡುತ್ತಿದ್ದ ಅವರ ವಿಮಾನಗಳು ಬಿದ್ದು ಬಿದ್ದು ಏಳುತ್ತಿದ್ದುವು

೧೪೫. ಮಾಯಾವಿಯಾದ ಮಯನು ಪಾಶಾಯುಧದಿಂದ ಕಟ್ಟಲ್ಪಟ್ಟು ಶೀತದಿಂದ ತೊಂದರೆಗಡುತ್ತಿರುವ ಆ ದಾನವರನ್ನು ಅಂತರಿಕ್ಷದಲ್ಲಿ ನಿಂತು ನೋಡಿದನು.

ಸಶೈಲಜಾಲವಿತತಾಂ ಖಡ್ಗ ಪಟ್ಟಿಸಹಾಸಿನೀಂ ।
ಪಾದಪೋತ್ಕಟಕೂಟಾಗ್ರಾಂ ಕಂದರಾಕೀರ್ಣ ಕಾನನಾಂ ॥ ೧೪೬ ॥

ಸಿಂಹವ್ಯಾಘ್ರಗಣಾಕೀರ್ಣಾಂ ನದದ್ಭಿರ್ದೇವಯೂಥಪೈಃ ।
ಈಹಾಮೃಗಗಣಾಕೀರ್ಣಾಂ ಪವನಾಘೂರ್ಣಿತದ್ರುಮಾಂ ॥ ೧೪೭ ॥

ನಿರ್ಮಿತಾಂ ಸ್ವೇನ ಪುತ್ರೇಣ ಕೂಜಂತೀಂ ದಿವಿ ಕಾಮಗಾಂ ।
ಪ್ರಥಿತಾಂ ಪಾರ್ವತೀಂ ಮಾಯಾಂ ಸಸೃಜೇ ಚ ಸಮಂತತಃ ॥ ೧೪೮ ॥

ಸಾಸಿಸರ್ಪೋಪಲಗಣೈಃ ಸಂಪತದ್ಭಿಶ್ಚ ಪಾವಕೈಃ ।
ನಿರ್ಜಘ್ನೇ ದೇವಸಂಘಾಂಸ್ತಾನ್ದಾನವಾನಭ್ಯಜೀವಯತ್ ॥ ೧೪೯ ॥

ನೈಶಾಕರೀ ವಾರುಣೀ ಚ ಮಾಯಾ ಸಾನ್ತರ್ದಧೇ ತತಃ ।
ಅಶ್ಮಭಿಸ್ತಾಪಸಂಘಾತೈಃ ಕಿರನ್ದೇವಗಣಾನ್ರಣೇ ॥ ೧೫೦ ॥

ಸಾಶ್ಮಯಂತ್ರಾಯುಧಘನದ್ರುಮಪರ್ವತ ಸಂಕಟಾ ।
ಅಭವದ್ಘೋರಸಂಚಾರಾ ಪೃಥಿವೀ ಪರ್ವತೈರಿವ ॥ ೧೫೧ ॥

---

೧೪೬-೧೪೮. ಬೆಟ್ಟಗಳ ಗುಂಪಿನಿಂದ ಕೂಡಿದ, ಖಡ್ಗ, ಪಟ್ಟಿಸ, ಶೂಲ ಇವುಗಳಿಂದ ಪ್ರಕಾಶಿತವಾದ, ಮರಗಳ ಗುಂಪುಗುಂಪಿನಿಂದ ಒತ್ತಾದ, ಗುಹೆಗಳಿರುವ ಕಾಡಾಗಿರುವ, ಸಿಂಹ, ಹುಲಿಗಳ ಗುಂಪಿನಿಂದ ಕೂಡಿದ, ಆಕಾಶದಲ್ಲಿ ಗರ್ಜಿಸುತ್ತಿರುವ, ತನ್ನ ಮಗನು ಮೊದಲು ಕಂಡುಹಿಡಿದು ನಿರ್ಮಿಸಿದ ಪಾರ್ವತಿಯ ಮಾಯೆಯನ್ನು ಎಲ್ಲಾ ಕಡೆಯಲ್ಲಿಯೂ ಆ ಮಯನು ಸೃಷ್ಟಿಸಿದನು.

೧೪೯. ಕತ್ತಿ, ಕಲ್ಲುಗಳನ್ನೂ, ಮರಗಳನ್ನೂ ಎಲ್ಲಾ ಕಡೆಯಲ್ಲಿಯೂ ಸುರಿಸುತ್ತ ಆ ದೇವಸಂಘವನ್ನು ಹೊಡೆದು ದಾನವರನ್ನು ಬದುಕಿಸಿದನು.

೧೫೦-೧೫೧. ಚಂದ್ರ ವರುಣರ ಮಾಯೆಯು ನಾಶವಾದುವು ದಾನವರು ಮಾಯೆಯಿಂದ ಅನಂತರ ಕಲ್ಲು ಬೆಟ್ಟಗಳ ಗುಂಪಿನಿಂದ ಯುದ್ಧದಲ್ಲಿ ದೇವತೆಗಳನ್ನು ಹೊಡೆಯುತ್ತಾ ಇದ್ದರು. ಕಲ್ಲಿನ ಯಂತ್ರ, ದೊಡ್ಡ ಮರ, ಪರ್ವತಗಳಿಂದ ಭೂಮಿಯು ನಿಬಿಡವಾಗಿ ದೇವತೆಗಳು ತಿರುಗಾಡಲಸಾಧ್ಯವಾಯಿತು.

ಅಶ್ಮಪ್ರಹರಣೇನಾಪಿ ನ ಶಿಲಾಭಿರ್ವಶೀಕೃತಃ ।
ನ ಚ ರುದ್ಧೋ ದ್ರುಮಗಣೈರ್ದೇವೋ ದೃಶ್ಯತ ಕಶ್ಚನ　　॥ ೧೫೨ ॥

ತದಪಧ್ವಸ್ತಧಾನುಷ್ಕಂ ಭಗ್ನಪ್ರಹರಣಾವಿಲಂ ।
ನಿಷ್ಪ್ರಯತ್ನಂ ಸುರಾನೀಕಂ ವರ್ಜಯಿತ್ವಾ ಗದಾಧರಂ　　॥ ೧೫೩ ॥

ಸಹಿಯುದ್ಧಗತಶ್ಶ್ರೀಮಾನೀಶೋ ನ ಸ್ಮ ವ್ಯಕಂಪತ ।
ಸಹಿಷ್ಣುತ್ವಾಜ್ಜಗತ್ಸ್ವಾಮೀ ನ ಚುಕ್ರೋಧ ಗದಾಧರಃ　　॥ ೧೫೪ ॥

ಕಾಲಜ್ಞಃ ಕಾಲಮೇಘಾಭಃ ಸಮೀಕ್ಷನ್ಕಾಲಮಾಹವೇ ।
ದೇವಾಸುರವಿಮರ್ದಂ ತು ದ್ರಷ್ಟುಕಾಮಸ್ತದಾ ಹರಿಃ　　॥ ೧೫೫ ॥

ತತೋ ಭಗವದಾದಿಷ್ಟೌ ರಣೇ ಪಾವಕ ಮಾರುತೌ ।
ಚೋದಿತೌ ವಿಷ್ಣುವಾಕ್ಯೇನ ತೌ ಮಾಯಾಂ ವಿಚಕರ್ಷತುಃ　　॥ ೧೫೬ ॥

---

೧೫೨. ಕಲ್ಲಿನೇಟುಗಳು ಬಂಡೆಗಳ ಹೊಡೆತಗಳು, ಮರಗಳ ಬೀಳುವಿಕೆಗಳು ಇವುಗಳಿಗೆ ಒಳಗಾಗದ ಒಬ್ಬ ದೇವನೂ ಇರಲಿಲ್ಲ.

೧೫೩. ಆಗ ವಿಷ್ಣು ಒಬ್ಬನು ಹೊರತಾಗಿ ದೇವತೆಗಳು ಅವರ ಸೈನ್ಯಗಳ ಧನುಸ್ಸುಗಳು ಕೈಯಿಂದ ಜಾರಿದುವು. ಉಳಿದ ಆಯುಧಗಳೂ ಉಪಯೋಗವಿಲ್ಲವಾದುವು. ಇವರ ಯುದ್ಧಪ್ರಯತ್ನವೇ ನಿಂತುಹೋಯಿತು.

೧೫೪. ಯುದ್ಧದಲ್ಲಿದ್ದ ಶಕ್ತನಾದ ಈಶ್ವರನು ಅಲುಗಾಡಲಿಲ್ಲ. ಜಗತ್ತಿಗೆಲ್ಲಾ ಒಡೆಯನಾದ ಶ್ರೀವಿಷ್ಣುವು ಕೋಪಿಸಿಕೊಳ್ಳದೆ ಸಹನೆಯಿಂದಿದ್ದನು.

೧೫೫. ಕಾಲವನ್ನು ಬಲ್ಲ ನೀಲಮೇಘಶ್ಯಾಮನಾದ ವಿಷ್ಣುವು ಯುದ್ಧದಲ್ಲಿ ಕಾಲವನ್ನು ನಿರೀಕ್ಷಿಸುತ್ತ ಆ ದೇವಾಸುರರ ಕೋಲಾಹಲವನ್ನು ನೋಡಲು ಹೊರಟನು.

೧೫೬. ಆಗ ಯುದ್ಧದಲ್ಲಿ ಅಗ್ನಿ ವಾಯುಗಳು ವಿಷ್ಣುವಿನ ಅಪ್ಪಣೆಯ ಮೇರೆ ಅವನ ಮಾತಿನಂತೆ ಆ ಮಾಯೆಯನ್ನು ನಾಶಮಾಡಿದರು.

ತಾಭ್ಯಾಮುದ್ಭ್ರಾಂತವೇಗಾಭ್ಯಾಂ ಪ್ರವೃದ್ಧಾಭ್ಯಾಂ ಮಹಾಹವೇ ।
ದಗ್ಧಾ ಸಾ ಪಾರ್ವತೀ ಮಾಯಾ ಭಸ್ಮಭೂತಾ ನನಾಶ ಹ ॥ ೧೫೭ ॥

ಸೋನಲೋಽನಿಲಸಂಯುಕ್ತಃ ಸೋಽನಿಲಶ್ಚಾನಲಾಕುಲಃ ।
ದೈತ್ಯಸೇನಾಂ ದದಹತುರ್ಯುಗಾಂತೇಷ್ವಿವ ಮೂರ್ಛಿತೌ ॥ ೧೫೮ ॥

ವಾಯುಃ ಪ್ರಧಾವಿತಸ್ತತ್ರ ಪಶ್ಚಾದಗ್ನಿಶ್ಚ ಮಾರುತಾತ್ ।
ಚೇರತುರ್ದಾನವಾನೀಕೇ ಕ್ರೀಡಂತಾವನಲಾನಿಲೌ ॥ ೧೫೯ ॥

ಭಸ್ಮಾವಯವಭೂತೇಷು ಪ್ರಪತತ್ಸೂತ್ಪತತ್ಸು ಚ ।
ದಾನಾವಾನಾಂ ವಿಮಾನೇಷು ನಿಪತತ್ಸು ಸಮಂತತಃ ॥ ೧೬೦ ॥

ವಾತಸ್ಕಂಧಾಪವಿದ್ಧೇಷು ಕೃತಕರ್ಮಣಿ ಪಾವಕೇ ।
ಮಾಯಾವಧೇ ಪ್ರವೃತ್ತೇ ತು ಸ್ತೂಯಮಾನೇ ಗದಾಧರೇ ॥ ೧೬೧ ॥

---

೧೫೭. ಆ ಯುದ್ಧದಲ್ಲಿ ಆ ವಾಯ್ವಗ್ನಿಗಳು ಬಹು ಉಗ್ರವಾಗಿ ಸಂಚರಿಸಲು ಆ ಪಾರ್ವತೀ ಮಾಯೆಯು ನಾಶವಾಯಿತು.

೧೫೮. ಬೆಂಕಿಯೂ ಗಾಳಿಯೂ, ಜೊತೆಯಾಗಿ ಗಾಳಿಯಿಂದ ಬೆಂಕಿಯು ವೃದ್ಧಿಪಡಿಸಲ್ಪಟ್ಟವನಾಗಿ ಯುಗಾಂತ ಕಾಲದಲ್ಲಿ ವೃದ್ಧಿ ಹೊಂದುವ ಹಾಗೆ ವೃದ್ಧಿ ಹೊಂದಿ ದೈತ್ಯ ಸೇನೆಯನ್ನು ಸುಟ್ಟರು.

೧೫೯. ಮೊದಲು ವಾಯುವು ಓಡುತ್ತಲೂ, ಅನಂತರ ಬೆಂಕಿಯು ಗಾಳಿಯಿಂದ ಕೂಡಿ ಉರಿಸಲ್ಪಡುತ್ತಲೂ, ಹೀಗೆ ಅವರಿಬ್ಬರೂ, ಆ ಯುದ್ಧರಂಗದಲ್ಲಿ ಆಟವಾಡಿದರು.

೧೬೦. ಆ ದೈತ್ಯರೆಲ್ಲರೂ ಭಸ್ಮವಾಗುತ್ತ ಬಂದರು ಮತ್ತು ಆ ದಾನವರ ವಿಮಾನಗಳು ಮುಂತಾದುವು ಭಸ್ಮವಾಗುತ್ತ ಬಂದುವು. ಇಂತಹವುಗಳನ್ನು ಈ ವಾಯ್ವಗ್ನಿಗಳು ಬೀಳಿಸುತ್ತ ಆಟವಾಡುತ್ತ ಬಂದರು.

೧೬೧–೧೬೨. ಆ ಮಾಯೆಯನ್ನು ಅಗ್ನಿಯು ಸುಡುತ್ತಿರಲು ಗಾಳಿಯು ಹಾರಿಸಿಕೊಂಡು ಹೋಗುತ್ತಿದ್ದನು. ಈ ರೀತಿ ಮಾಯೆಯು ನಾಶವಾಗಲು ದೇವತೆಗಳು ವಿಷ್ಣುವನ್ನು ಸ್ತುತಿಸುತ್ತಿದ್ದರು. ದೈತ್ಯರು ಪ್ರಯತ್ನವಿಲ್ಲದವರಾದರು.

ನಿಷ್ಪ್ರಯತ್ನೇಷು ದೈತ್ಯೇಷು ತ್ರೈಲೋಕ್ಯೇ ಮುಕ್ತಬಂಧನೇ ।
ಸಂಪ್ರಹೃಷ್ಟೇಷು ದೇವೇಷು ಸಾಧುಸಾಧ್ವಿತಿ ಜಲ್ಪಿಷು ॥ ೧೬೨ ॥

ಜಯೇ ದಶಶತಾಕ್ಷಸ್ಯ ದೈತ್ಯಾನಾಂ ಚ ಪರಾಜಯೇ ।
ದಿಕ್ಷು ಸರ್ವಾಸು ಶುದ್ಧಾಸು ಪ್ರವೃತ್ತೇ ಧರ್ಮವಿಸ್ತರೇ ॥ ೧೬೩ ॥

ಅಪಾವೃತ್ತೇ ಚಂದ್ರಪಥಿ ಸ್ವಸ್ಥಾನಸ್ಥೇ ದಿವಾಕರೇ ।
ಪ್ರವೃತ್ತಿಸ್ಥೇಷು ಲೋಕೇಷು ತ್ರಿಷು ಚಾರಿತ್ರಬಂಧುಷು ॥ ೧೬೪ ॥

ಅಭಿನ್ನಬಂಧನೇ ಮೃತ್ಯೌ ಹೂಯಮಾನೇ ಹುತಾಶನೇ ।
ಯಜ್ಞಶೋಭಿಷು ದೇವೇಷು ಸ್ವರ್ಗಾರ್ಥಂ ದರ್ಶಯುತ್ಸು ಚ ॥ ೧೬೫ ॥

ಲೋಕಪಾಲೇಷು ಸರ್ವೇಷು ದಿಕ್ಷು ಸಂಪಾತವರ್ತಿಷು ।
ಭಾವೇ ತಪಸಿ ಸಿದ್ಧಾನಾಮಭಾವೇ ಪಾಪಕರ್ಮಣಾಂ ॥ ೧೬೬ ॥

ದೇವಪಕ್ಷೇ ಪ್ರಮುದಿತೇ ದೈತ್ಯಪಕ್ಷೇ ವಿಷೀದತಿ ।
ತ್ರಿಪಾದವಿಗ್ರಹೇ ಧರ್ಮೇ ಅಧರ್ಮೇ ಪಾದವಿಗ್ರಹೇ ॥ ೧೬೭ ॥

---

ಮತ್ತು ಮೂರು ಲೋಕವೂ ಬಂಧನದಿಂದ ಬಿಡಲ್ಪಟ್ಟಿತು. ದೇವತೆಗಳೆಲ್ಲರೂ ಸಾಧು ಸಾಧು ಎಂಬುದಾಗಿ ಹೇಳುತ್ತ ಸಂತೋಷಪಟ್ಟರು.

೧೬೩-೧೬೫. ಸಹಸ್ರಾಕ್ಷನಾದ ಇಂದ್ರನಿಗೆ ಜಯವಾಯಿತು. ದೈತ್ಯರಿಗೆ ಸೋಲಾಯಿತು. ದಿಕ್ಕುಗಳೆಲ್ಲವೂ ಶುದ್ಧವಾದುದು. ಧರ್ಮದ ಕೆಲಸಗಳು ಹೆಚ್ಚಿದುವು. ಚಂದ್ರನ ದಾರಿಯು ಮೊದಲಿನಂತಾಯಿತು. ಸೂರ್ಯನು ತನ್ನ ಜಾಗದಲ್ಲಿದ್ದನು. ಲೋಕವೆಲ್ಲವೂ ತಮ್ಮತಮ್ಮ ಕೆಲಸದಲ್ಲಿ ಕೈಹಾಕಿತು. ಧರ್ಮಾರ್ಥಕಾಮಗಳು ಒಂದಕ್ಕೊಂದು ನೆರವಾದುವು. ಮೃತ್ಯುವು ತನ್ನ ಕೆಲಸದಲ್ಲಿ ನಿರತನಾದನು. ಬ್ರಾಹ್ಮಣರೆಲ್ಲರೂ ಹೋಮಮಾಡಿದರು. ದೇವತೆಗಳು ಯಜ್ಞದಲ್ಲಿ ಭಾಗವಹಿಸಿದರು. ಸ್ವರ್ಗದ ರೀತಿಯನ್ನು ತೋರಿಸುತ್ತಿದ್ದರು.

೧೬೬-೧೬೮. ಲೋಕಪಾಲಕರೆಲ್ಲರೂ ದಿಕ್ಕುಗಳನ್ನು ಕಾಪಾಡುತ್ತಿದ್ದರು. ಸಿದ್ಧರು ತಪಸ್ಸಿನಲ್ಲಿ ಮನಸ್ಸನ್ನಿಟ್ಟರು. ಪಾಪಿಗಳೆಲ್ಲರೂ ನಾಶರಾದರು. ದೇವತೆಗಳೂ ಅವರ ಕಡೆಯವರೂ ಸಂತೋಷಪಡುತ್ತಿದ್ದರು. ದೈತ್ಯರೂ ಅವರ ಪಕ್ಷದವರೂ ದುಃಖಿಸುತ್ತಿದ್ದರು. ಧರ್ಮವು ಮೂರು ಕಾಲಿನಲ್ಲಿಯೂ, ಅಧರ್ಮವು ಒಂದು ಕಾಲಿ

ಅಸಾವೃತ್ತೇಮಹಾದ್ವಾರೇ ವರ್ತಮಾನೇ ಮಹೋತ್ಸವೇ ।
ಲೋಕೆಪ್ರವೃತ್ತಧರ್ಮೇಷು ಸ್ವಧರ್ಮೇಷ್ವಾ ಶ್ರಮೇಷು ಚ ॥ ೧೬೮ ॥

ಪ್ರಜಾರಕ್ಷಣಯುಕ್ತೇಷು ಭ್ರಾಜಮಾನೇಷು ರಾಜಸು ।
ಪ್ರಶಾಸ್ತ ಸರ್ವಲೋಕೇಷು ಶಾಂತೇ ತಮಸಿ ದಾನವೇ ॥ ೧೬೯ ॥

ಅಗ್ನಿ ಮಾರುತಯೋಸ್ತಸ್ಮಿನ್ವೃತ್ತೇ ಸಂಗ್ರಾಮಕರ್ಮಣಿ ।
ತನ್ಮಯಾ ವಿಮಲಾ ಲೋಕಾಸ್ತಾಭ್ಯಾಂ ಜಯಧೃತಕ್ರಿಯಾಃ ॥ ೧೭೦ ॥

ಪೂರ್ವಂ ದೈತ್ಯಭಯಂ ಶ್ರುತ್ವಾ ಮಾರುತಾಗ್ನಿ ಕೃತಂ ಮಹತ್ ।
ಕಾಲನೇಮಿರಿತಿ ಖ್ಯಾತೋ ದಾನವಃ ಪ್ರತ್ಯದೃಶ್ಯತ ॥ ೧೭೧ ॥

ಭಾಸ್ಕರಾಕಾರಮುಕುಟಃ ಶಿಂಜಿತಾಭರಣಾಂಗದಃ ।
ಮಂದರಾದ್ರಿಪ್ರತೀಕಾಶೋ ಮಹಾರಜತಸಂವೃತಃ ॥ ೧೭೨ ॥

---

ನಲ್ಲಿಯೂ, ನಿಂತುವು- ಹೆಬ್ಬಾಗಿಲನ್ನು ತೆಗೆದರು. ಉತ್ಸವವು ಎಲ್ಲಾ ಕಡೆಯಲ್ಲಿಯೂ ಜರುಗಿತು. ಜನಗಳೆಲ್ಲರೂ ತಮ್ಮ ತಮ್ಮ ಧರ್ಮದಲ್ಲಿ ನಿರತರಾದರು. ಆಶ್ರಮಿಗಳು ಅವರವರ ಧರ್ಮದಲ್ಲಿಯೂ ಉದ್ಯುಕ್ತರಾದರು.

೧೬೯-೧೭೦ ರಾಜರೆಲ್ಲರೂ ಪ್ರಜೆಗಳನ್ನು ಕಾಪಾಡುತ್ತ ಸುಖಿಸುತ್ತಿದ್ದರು. ಆ ದಾನವನ ಮಾಯೆಯು ಶಾಂತವಾಗಲು ಲೋಕವೆಲ್ಲವೂ ಶಾಂತವಾದುವು. ಈ ರೀತಿಯಾಗಿ ಅಗ್ನಿ ವಾಯುಗಳ ಯುದ್ಧವು ಆ ದಾನವನ ಮಾಯೆಯನ್ನು ನಾಶಮಾಡಲು ಎಲ್ಲರೂ ಸುಖಿಸಿದರು. ಲೋಕಗಳೆಲ್ಲವೂ ಅಗ್ನಿ ವಾಯುಗಳಿಂದಲೇ ತುಂಬಿದುವು. ಎಲ್ಲರೂ ಅವರನ್ನೇ ಹೊಗಳುತ್ತಿದ್ದರು.

೧೭೧. ಅಗ್ನಿ ವಾಯುಗಳಿಂದ ಬಂದ ಭಯವನ್ನು ಕಾಲನೇಮಿಯೆಂಬ ಪ್ರಸಿದ್ಧನಾದ ದೈತ್ಯನು ನೋಡಿದನು.

೧೭೨. ಅವನು ಸೂರ್ಯನಂತೆ ಇರುವ ಕಿರೀಟವನ್ನು ಹಾಕಿಕೊಂಡಿದ್ದನು. ಭುಜಕೀರ್ತಿಗಳನ್ನು ಧರಿಸಿ ಸದ್ದು ಮಾಡುತ್ತಿದ್ದನು. ಮಂದರ ಪರ್ವತದಂತಿದ್ದನು. ಚಿನ್ನದ ಒಡವೆಗಳನ್ನು ತೊಟ್ಟಿದ್ದನು.

**ಶತಪ್ರಹರಣೋದಗ್ರಃ ಶತಬಾಹುಶ್ಶತಾನನಃ ।**
**ಶತಶೀರ್ಷಸ್ಸ್ಥಿತಶ್ಶ್ರೀಮಾಞ್ಛತಶೃಂಗ ಇವಾಚಲಃ ॥ ೧೭೩ ॥**

**ಕಕ್ಷೇ ಮಹತಿ ಸಂವೃದ್ಧೋ ನಿದಾಘ ಇವ ಪಾವಕಃ ।**
**ಧೂಮ್ರಕೇಶೋ ಹರಿಚ್ಛ್ಮಶ್ರುಃ ಸಂದಷ್ಟೌಷ್ಟಪುಟಾನನಃ ॥ ೧೭೪ ॥**

**ತ್ರೈಲೋಕ್ಯಾಂತರವಿಸ್ತಾರಂ ಧಾರಯನ್ವಿಪುಲಂ ವಪುಃ ।**
**ಬಾಹುಭಿಸ್ತುಲಯನ್ವ್ಯೋಮ ಕ್ಷಿಪನ್ಪದ್ಭ್ಯಾಂ ಮಹೀಧರಾನ್ ॥ ೧೭೫ ॥**

**ಈರಯನ್ಮುಖನಿಶ್ವಾಸೈರ್ವೃಷ್ಟಿಮಂತೋ ಬಲಾಹಕಾನ್ ।**
**ತಿರ್ಯಗಾಯತರಕ್ತಾಕ್ಷಂ ಮಂದರೋದಗ್ರ ವರ್ಚಸಂ ॥ ೧೭೬ ॥**

**ದಿಧಕ್ಷಂತಮಿವಾಯಾಂತಂ ಸರ್ವಾನ್ದೇವಗಣಾನ್ಮೃಧೇ ।**
**ತರ್ಜಯಂತಂ ಸುರಗಣಾನ್ ಛಾದಯಂತಂ ದಿಶೋ ದಶ ॥ ೧೭೭ ॥**

---

೧೭೩. ನೂರು ಆಯುಧಗಳನ್ನು ಧರಿಸಿದ್ದನು. ನೂರು ತೋಳುಗಳೂ, ನೂರು ತಲೆಗಳೂ ಇದ್ದುವು. ನೂರು ಮುಖವಿದ್ದಿತು. ಇವನನ್ನು ನೋಡಿದರೆ ನೂರು ಶಿಖರಗಳುಳ್ಳ ಬೆಟ್ಟದಂತಿದ್ದನು.

೧೭೪. ಮಳೆಗಾಲದಲ್ಲಿ ದೊಡ್ಡದಾದ ಪೊದರುಗಳನ್ನು ಹತ್ತಿಸಿಕೊಂಡು ಉರಿಯುತ್ತಿರುವ ಬೆಂಕಿಯಂತಿದ್ದನು. ಹೊಗೆಯಂತಿರುವ ಕೇತುವನ್ನು ಹೊಂದಿದ್ದನು. ಮೀಶೆಗಳು ಹಸುರಾಗಿದ್ದುವು. ಹಲ್ಲುಮುಡಿ ಕಚ್ಚಿಕೊಂಡಿದ್ದನು.

೧೭೫–೧೭೬. ಮೂರು ಲೋಕದಷ್ಟು ವಿಸ್ತಾರವಾದ ದೇಹವನ್ನು ಧರಿಸಿದ್ದನು. ತೋಳುಗಳಿಂದ ಆಕಾಶವನ್ನು ಅಳೆಯುವವನಂತಿದ್ದನು ಕಾಲುಗಳಿಂದ ಪರ್ವತಗಳನ್ನು ಎಸೆಯುವವನಂತಿದ್ದನು. ಬಾಯಿನ ಉಸಿರು ಬಿಡುವಿಕೆಯಿಂದ ಮಳೆ ಸುರಿಸುತ್ತಿರುವ ಮೋಡಗಳನ್ನು ಓಡಾಡಿಸುತ್ತಿದ್ದನು. ಕಣ್ಣುಗಳು ಕೆಂಪಗೆ ಅಡ್ಡಡ್ಡಲಾಗಿದ್ದುವು. ಮಂದರದಂತೆ ಶಕ್ತಿಯನ್ನು ಹೊಂದಿದ್ದನು.

೧೭೭-೧೮೦. ಎದುರಿಗೆ ಬಂದವನನ್ನು ಸುಡುತ್ತಿರುವವನಂತೆ ಇದ್ದನು. ದೇವತೆಗಳೆಲ್ಲರನ್ನೂ ಸುಡುವಂತಿದ್ದನು. ದೇವತೆಗಳನ್ನು ಹೆದರಿಸುವಂತಿದ್ದನು. ಹತ್ತು ದಿಕ್ಕುಗಳನ್ನೂ ಮುಚ್ಚುವಂತಿದ್ದನು. ಪ್ರಳಯಕಾಲದಲ್ಲಿ ಹಸಿವುಗೊಂಡ

ಸಂವರ್ತಕಾಲೇ ತೃಷಿತಂ ದೃಷ್ಟಂ ಮೃತ್ಯುಮಿವೋತ್ಥಿತಂ ।
ಸುತಲೇನೋಚ್ಛ್ರಯವತಾ ವಿಪುಲಾಂಗುಲಿರ್ವ್ರಣಾ ॥ ೧೭೮ ॥

ಲಂಬಾಭರಣಪೂರ್ಣೇನ ಕಿಂಚಿಚ್ಚಲಿತ ಕರ್ಮಣಾ ।
ಉಚ್ಛ್ರಿತೇನಾಗ್ರಹಸ್ತೇನ ದಕ್ಷಿಣೇನ ವಪುಷ್ಮತಾ ॥ ೧೭೯ ॥

ಬ್ರುವಂತಮುತ್ತಿಷ್ಠತೇತಿ ದಾನವಾನ್ನಿಹತಾನ್ಸುರೈಃ ।
ತಂ ಕಾಲನೇಮಿಂ ಸಮರೇ ದ್ವಿಷತಾಂ ಕಾಲನೇಮಿನಂ ॥ ೧೮೦ ॥

ವೀಕ್ಷಂತಿ ಸ್ಮ ಸುರಾಸ್ಸರ್ವೇ ಭಯವಿಹ್ವಲಲೋಚನಾಃ ।
ತಂ ವೀಕ್ಷಂತಿ ಸ್ಮ ಭೂತಾನಿ ತ್ರಸಂತಂ ಕಾಲನೇಮಿನಂ ॥ ೧೮೧ ॥

ತ್ರಿವಿಕ್ರಮಂ ವಿಕ್ರಮಂತಂ ನಾರಾಯಣಮಿವಾಮರಂ ।
ಸೋಭ್ಯುಚ್ಚ್ರಯಂ ಪುನಃ ಸ್ಪ್ರಾಪ್ತೋ ಮಾರುತಾ ಪೂರಿತಾಂಬರಃ ॥ ೧೮೨ ॥

ಪ್ರಾಕ್ರಾಮದಸುರೋ ಯೋದ್ಧುಂ ತ್ರಾಸಯನ್ಸರ್ವದೇವತಾಃ ।
ಸಮೇಯಿವಾನ್ಸುರೇಂದ್ರೇಣ ಪರಿವ್ಯಕ್ತಕ್ರಮೋ ರಣೇ ॥ ೧೮೩ ॥

---

ಮೃತ್ಯುವಿನಂತೆ ಕಂಡುಬಂದನು. ಕೈಗಳು ಮೇಲಕ್ಕೆದ್ದುಕೊಂಡು ಬೆರಳುಗಳು ಉದ್ದವಾದ ಗಿಣ್ಣುಗಳಿಂದ ಕೂಡಿದ್ದುವು. ಮೈಮೇಲೆ ನೇತಾಡುವಂತೆ ಹಾಕಿಕೊಂಡಿದ್ದ ಒಡವೆಗಳು ಸ್ವಲ್ಪ ಸ್ವಲ್ಪವಾಗಿ ಅಲ್ಲಾಡುತ್ತಿದ್ದುವು. ದಪ್ಪವಾದ ಬಲಗೈಯನ್ನು ಮೇಲಕ್ಕೆತ್ತಿಕೊಂಡು ದೇವತೆಗಳಿಂದ ಕೊಲ್ಲಲ್ಪಟ್ಟ ದೈತ್ಯರನ್ನೂ ಮೇಲಕ್ಕೇಳಿರೆಂದು ಕೂಗುತ್ತಿರುವ ಶತ್ರುಗಳನ್ನು ಯಮನ ಅಪ್ಪಣೆಗೆ ಗುರಿಮಾಡುವ ಕಾಲನೇಮಿಯನ್ನು ದೇವತೆಗಳು ಯುದ್ಧದಲ್ಲಿ ಕಂಡರು.

೧೮೧. ಅಂತಹ ಕಾಲನೇಮಿಯನ್ನು ದೇವತೆಗಳು ನೋಡಿ ಹೆದರುತ್ತಿದ್ದರು. ಎಲ್ಲಾ ಪ್ರಾಣಿಗಳೂ ಕೂಡ, ಕೋಪದಿಂದ ಹೆದರಿಸುತ್ತಿರುವ ಕಾಲನೇಮಿಯನ್ನು ನೋಡಿದುವು.

೧೮೨. ಅವನು ತ್ರಿವಿಕ್ರಮಾವತಾರವನ್ನು ಮಾಡಿದ ನಾರಾಯಣನಂತೆ ಬೆಳೆದು ಆಕಾಶವೆಲ್ಲವನ್ನೂ ನಿಟ್ಟುಸಿರಿನಿಂದ ತುಂಬಿದನು.

೧೮೩. ಈ ಕಾಲನೇಮಿಯು ಎಲ್ಲರನ್ನೂ ಭಯಪಡಿಸುತ್ತ ಯುದ್ಧಕ್ಕೆ ಸಿದ್ಧವಾಗಿ ಆ ರಣರಂಗದಲ್ಲಿ ದೇವೇಂದ್ರನೊಡನೆ ಎದುರಾಗಿ ನಿಂತನು.

ಕಾಲನೇಮಿರ್ಬಭೌ ದೈತ್ಯಃ ಸ್ಥವಿಷ್ಣುರಿವ ಮಂದರಃ ।
ಅಥ ವಿವ್ಯಥಿರೇ ದೇವಾಃ ಸರ್ವೇ ಶಕ್ರಪುರೋಗಮಾಃ ॥ ೧೮೪ ॥

ಕಾಲನೇಮಿನಮಾಯಾನ್ತಂ ದೃಷ್ಟ್ವಾ ಕಾಲಮಿವಾಪರಂ ।
ದಾನವಾನಾಂ ಪ್ರಿಯಂ ಪ್ರೇಪ್ಸುಃ ಕಾಲನೇಮಿರ್ಮಹಾಸುರಃ ॥ ೧೮೫ ॥

ವ್ಯವರ್ಧತ ಮಹಾತೇಜಾಸ್ತಪಾಂತೇ ಜಲದೋ ಯಥಾ ।
ತಂ ತ್ರೈಲೋಕ್ಯಾಂತರಗತಂ ದೃಷ್ಟ್ವಾ ತೇ ದಾನವೇಶ್ವರಾಃ ॥ ೧೮೬ ॥

ಉತ್ತಸ್ಥುಸ್ತೇ ಪರಿಶ್ರಾಂತಾಃ ಪೀತ್ವಾಮೃತಮನುತ್ತಮಂ ।
ತೇ ವೀತಭಯಸಂತ್ರಸ್ತಾ ಮಯತಾರಪುರೋಗಮಾಃ ॥ ೧೮೭ ॥

ತಾರಕಾಮಯಸಂಗ್ರಾಮೇ ಸತತಂ ಜಿತಕಾಶಿನಃ ।
ರೇಜುರಾಯೋಧನಗತಾ ದಾನವಾ ಯುದ್ಧಕಾಂಕ್ಷಿಣಃ ॥ ೧೮೮ ॥

---

೧೮೪. ಈ ಕಾಲನೇಮಿಯು ದೊಡ್ಡದಾಗಿ ಬೆಳೆದು ಅಲ್ಲಾಡದೆ ಇರುವ ಮಂದರಪರ್ವತದಂತಿದ್ದನು. ಇವನನ್ನು ನೋಡಿ ಇಂದ್ರನೇ ಮುಂತಾದ ದೇವತೆಗಳೆಲ್ಲರೂ ಹೆದರಿದರು.

೧೮೫–೧೮೭. ದಾನವರಿಗೆ ಒಳ್ಳೆಯದನ್ನು ಮಾಡಲು ಬರುತ್ತಿರುವ ಆ ಕಾಲನೇಮಿಯು ಮಳೆಗಾಲದಾದಿಯ ಮೋಡದಂತೆ ವೃದ್ಧಿಯಾಗುತ್ತಿರುವುದನ್ನು ಅಲ್ಲಿದ್ದವರೆಲ್ಲರೂ ನೋಡಿದರು. ಮೂರು ಲೋಕದ ಮಧ್ಯವೂ ಅಡಗುವಂತೆ ಬೆಳೆದಿರುವ ಆ ಕಾಲನೇಮಿಯನ್ನು ನೋಡಿ ಆ ದಾನರೆಲ್ಲರೂ ಅಮೃತವನ್ನು ಕುಡಿದವರಂತೆ ಮೇಲಕ್ಕೆ ಎದ್ದರು. ಮಯ, ತಾರ ಮುಂತಾದವರೂ ಕೂಡ ಭಯವನ್ನು ಬಿಟ್ಟು ಯುದ್ಧದಲ್ಲಿ ಪ್ರಕಾಶಿಸಿದರು.

೧೮೮. ತಾರಕನೇ ಎಲ್ಲ ಕಡೆಯಲ್ಲಿಯೂ ಸಂಚರಿಸುತ್ತಿರುವ ಆ ಯುದ್ಧಭೂಮಿಯಲ್ಲಿ ಜಯವನ್ನೇ ಹೊಂದುತ್ತ ಆ ದಾನವರು ಯುದ್ಧವನ್ನೇ ಅಪೇಕ್ಷಿಸುತ್ತಿದ್ದರು.

ಮಂತ್ರಮಭ್ಯಸತಾಂ ತೇಷಾಂ ವ್ಯೂಹಂ ಚ ಪರಿಧಾವತಾಂ ।
ಪ್ರೇಕ್ಷತಾಂ ಚಾಭವತ್ಪ್ರೀತಿರ್ದಾನವಂ ಕಾಲನೇಮಿನಂ ॥ ೧೮೯ ॥

ಯೇ ತು ತತ್ರ ಮಯಸ್ಯಾಸನ್ಪ್ರವ್ಯಾ ಯುದ್ಧಪುರಸ್ಸರಾಃ ।
ತೇ ತು ಸರ್ವೇ ಭಯಂ ಮುಕ್ತ್ವಾ ಹೃಷ್ಟಾ ಯೋದ್ಧುಮುಪಾಗತಾಃ ॥ ೧೯೦ ॥

ಮಯಸ್ತಾರೋ ವರಾಹಶ್ಚ ಹಯಗ್ರೀವಶ್ಚ ವೀರ್ಯವಾನ್ ।
ವಿಪ್ರಚಿತ್ತಿಸುತಶ್ಶ್ವೇತಃ ಖರಲಂಬಾವುಭಾವಪಿ ॥ ೧೯೧ ॥

ಅರಿಷ್ಟೋ ಬಲಿಪುತ್ರಶ್ಚ ಕಿಶೋರಾಖ್ಯಸ್ತಥೈವ ಚ ।
ಸ್ವರ್ಭಾನುಶ್ಚಾಮರಪ್ರಖ್ಯೋ ವಕ್ತ್ರಯೋಧೋ ಮಹಾಸುರಃ ॥ ೧೯೨ ॥

ಏತೇಸ್ತ್ರವೇದಿನಸ್ಸರ್ವೇ ಸರ್ವೇ ತಪಸಿ ಸುಸ್ಥಿರಾಃ ।
ದಾನವಾಃ ಕೃತಿನೋ ಜಗ್ಮುಃ ಕಾಲನೇಮಿಂ ಸಮುದ್ಧತಂ ॥ ೧೯೩ ॥

ತೇ ಗದಾಭಿಸ್ಸುಗುರ್ವೀಭಿಶ್ಚಕ್ರೈ ರಥ ಪರಶ್ವಥೈಃ ।
ಕಾಲಕಲ್ಪೈಶ್ಚ ಮುಸಲೈಃ ಕ್ಷೇಪಣೀಯೈಶ್ಚ ಮುದ್ಗರೈಃ ॥ ೧೯೪ ॥

---

೧೮೯. ಮಂತ್ರವನ್ನು ಪುನಶ್ಚರಣೆಮಾಡುತ್ತ, ಮಂತ್ರಾಲೋಚನೆಯನ್ನು ಮಾಡುತ್ತ, ವ್ಯೂಹವನ್ನೂ ಮಾಡುತ್ತ, ಇರುವ ಆ ಕಾಲನೇಮಿಯನ್ನು ನೋಡಿ ಅವರೆಲ್ಲರಿಗೂ ಸಂತೋಷವಾಯಿತು.

೧೯೦. ಮಯನೊಡನೆ ಮುಂದಾಳಾಗಿ ಯುದ್ಧಕ್ಕೆ ಬಂದಿದ್ದವರೆಲ್ಲರೂ ಭಯವನ್ನು ಬಿಟ್ಟು ಸಂತೋಷದಿಂದ ಯುದ್ಧಕ್ಕೆ ಬಂದರು

೧೯೧–೧೯೩. ಮಯ, ತಾರ, ವರಾಹ, ಬಲಿಷ್ಠನಾದ ಹಯಗ್ರೀವ, ವಿಪ್ರಚಿತ್ತಿಯ ಮಗನಾದ ಶ್ವೇತ, ಖಲ, ಲಂಬಿ, ಅರಿಷ್ಟು, ಬಲಿಯ ಮಗನಾದ ಕಿಶೋರ, ಸ್ವರ್ಭಾನು, ವಕ್ತ್ರಯೋಧ, ಇವರು ಆ ತಾರಕನ ಜೊತೆಗೆ ಬಂದರು. ಇವರೆಲ್ಲರೂ ಅಸ್ತ್ರವನ್ನು ಬಲ್ಲವರು. ಎಲ್ಲರೂ ತಪಸ್ವಿಗಳು. ಕೆಲಸದಲ್ಲಿ ಕುಶಲರು. ಇವರೂ ಕಾಲನೇಮಿಯನ್ನನುಸರಿಸಿದರು-

೧೯೪-೨೦೦. ಆ ಸೈನಿಕರೆಲ್ಲರೂ ದಪ್ಪವಾದ ಗದೆಗಳನ್ನೂ, ಚಕ್ರಗಳನ್ನೂ, ಕೊಡಲಿಗಳನ್ನೂ, ಭಯಂಕರವಾದ ಮುಸಲಾಯುಧವನ್ನೂ, ಎಸೆಯುವ ಕ್ಷೇಪಣಿ

ಅಶ್ಮಭಿಶ್ಚಾದ್ರಿಸದೃಶೈಸ್ತಥಾ ಶೈಲೈಶ್ಚ ದಾರುಣೈಃ ।
ಪಟ್ಟಿಶೈರ್ಭಿಂಡಿವಾಳೈಶ್ಚ ಪರಿಘೈಶ್ಚೋತ್ತಮಾಯಸೈಃ ॥ ೧೯೫ ॥

ಘಾತನೀಯೈಶ್ಚ ಗುರ್ವೀಭಿರ್ಗದಾಭಿಶ್ಚ ತಥೈವ ಚ ।
ಯುಗ್ಯೈರ್ಯಂತ್ರೈಶ್ಚ ನಿರ್ಮುಕ್ತೈರ್ಮಾರ್ಗಣೈರುಗ್ರತಾಡಿತೈಃ ॥ ೧೯೬ ॥

ದೋರ್ಭಿಶ್ಚಾಯತಮಾನಾಭಿಃ ಪ್ರಾಸೈಃ ಪಾಶೈಃ ಸಮುತ್ಥಿತೈಃ ।
ಭುಜಂಗವಕ್ತ್ರೈರ್ಲೇಲಿಹಾನೈರ್ವಿಸರ್ಪದ್ಭಿಶ್ಚ ಸಾಯಕೈಃ ॥ ೧೯೭ ॥

ವಜ್ರೈಃ ಪ್ರಹರಣೀಯೈಶ್ಚ ದೀಪ್ಯಮಾನೈಶ್ಚ ತೋಮರೈಃ ।
ವಿಕೋಶೈರತಿತೀಕ್ಷ್ಣೈಶ್ಚ ಶೂಲೈಶ್ಚ ಶಿತನಿರ್ಮಲೈಃ ॥ ೧೯೮ ॥

ದೈತ್ಯೇಸ್ಸಂದೀಪ್ಯಮಾನೈಶ್ಚ ಪ್ರಗೃಹೀತಶರಾಸನೈಃ ।
ತತಃ ಪುರಸ್ಕೃತ್ಯ ತದಾ ಕಾಲನೇಮಿನಮಾಹವೇ ॥ ೧೯೯ ॥

ಸಾ ದೀಪ್ತಶಸ್ತ್ರಪ್ರವರಾ ದೈತ್ಯಾನಾಂ ರುರುಚೇ ಚಮೂ ।
ದ್ಯೌರ್ನಿಮೀಲಿತಸರ್ವಾಂಗಾ ನಿದಾಘೇವಾಂಬುದಾಗಮೇ ॥ ೨೦೦ ॥

---

ಎಂಬ ಆಯುಧಗಳನ್ನೂ, ಮುದ್ಗರಗಳನ್ನೂ, ಬೆಟ್ಟದಂತಿರುವ ಕಲ್ಲುಗಳನ್ನೂ, ಬೆಟ್ಟಗಳನ್ನೂ, ಪಟ್ಟಿಶಗಳನ್ನೂ, ಭಿಂಡಿವಾಳಗಳನ್ನೂ, ಪರಿಘಗಳನ್ನೂ, ಘಾತಿನಿಗಳನ್ನೂ, ಧರಿಸಿದ್ದರು. ಯಂತ್ರಗಳಿಂದ ಹೊರಡುವ ಉಗ್ರವಾಗಿ ಏಟು ಬೀಳುವ ಬಾಣಗಳನ್ನು ಧರಿಸಿದ್ದರು. ತೋಳುಗಳೆಲ್ಲವೂ ಉದ್ದವಾಗಿದ್ದುವು. ಆ ತೋಳುಗಳಿಂದ ಪ್ರಾಸ, ಪಾಶಗಳನ್ನು ಎತ್ತಿ ಹಿಡಿದಿದ್ದರು. ಸರ್ಪದಂತೆ ಬಾಯುಳ್ಳ ನಾಲಗೆಯಿಂದ ನೆಕ್ಕುತ್ತಿರುವಂತಹ ಬಾಣಗಳನ್ನೂ ಧರಿಸಿದ್ದರು. ಹೊಡೆಯಲು ವಜ್ರಾಯುಧದಂತಿರುವ ಆಯುಧವನ್ನು ಹಿಡಿದಿದ್ದರು. ತೋಮರಗಳನ್ನು ಹಿಡಿದು ಪ್ರಕಾಶಿಸುತ್ತಿದ್ದರು. ಒರೆಯಿಂದ ಎಳೆದು ತೀಕ್ಷ್ಣವಾಗಿ ನಿರ್ಮಲವಾಗಿಯೂ, ಇರುವ ಶೂಲಗಳನ್ನು ಹಿಡಿದಿದ್ದರು. ಮತ್ತು ಬಿಲ್ಲುಗಳನ್ನೂ ಹಿಡಿದಿದ್ದರು. ಅಂತಹ ದೈತ್ಯದಿಂದ ಗೌರವಿಸಿ ಮುಂದುಮಾಡಲ್ಪಟ್ಟವನಾಗಿ ಆ ಕಾಲನೇಮಿಯು ಅವರಿಂದ ಕೂಡಿಕೊಂಡು ಹೊರಟನು. ಮಳೆಗಾಲದಲ್ಲಿ ಮೋಡಗಳು ಬಂದಾಗ ಎಲ್ಲ ಕಡೆಯಲ್ಲೂ ಮುಚ್ಚಿಕೊಂಡಿರುವ ಅಂತರಿಕ್ಷದಂತೆ ಆ ರಾಕ್ಷಸಸೇನೆಯು ಪ್ರಕಾಶಿಸಿತು.

ದೇವತಾನಾಮಪಿ ಚಮೂರ್ನುಮುದೇ ಶಕ್ರಪಾಲಿತಾ ।
ಉಪೇತಾ ಶಶಿಶಕ್ರಾಭ್ಯಾಂ ತಾರಾಭ್ಯಾಂ ಸೂರ್ಯಚಂದ್ರಯೋಃ ॥ ೨೦೧ ॥

ವಾಯುವೇಗವತೀ ಸೌಮ್ಯಾ ತಾರಾಗಣಪತಾಕಿನೀ ।
ತೋಯದಾಬದ್ಧವಸನಾ ಗ್ರಹನಕ್ಷತ್ರಹಾಸಿನೀ ॥ ೨೦೨ ॥

ಯಮೇಂದ್ರವರುಣೈರ್ಗುಪ್ತಾ ಧನದೇನ ಚ ಧೀಮತಾ ।
ಸಾ ಪ್ರದೀಪ್ತಾಗ್ನಿವದನಾ ನಾರಾಯಣಪರಾಯಣಾ ॥ ೨೦೩ ॥

ಸಾ ಸಮುದ್ರೌಘಸದೃಶೀ ದಿವ್ಯಾ ದೇವಮಹಾಚಮೂಃ ।
ರರಾಜಾಸ್ತ್ರವತೀ ಭೀಮಾ ಯಕ್ಷಗಂಧರ್ವಶಾಲಿನೀ ॥ ೨೦೪ ॥

---

೨೦೧. ಇಂದ್ರ ಚಂದ್ರಗಿಂದ ಕೂಡಿದ ಆ ದೇವಸೇನೆಯು ಇಂದ್ರನಿಂದ ಕಾಪಾಡಲ್ಪಟ್ಟು ಸೂರ್ಯಚಂದ್ರರನ್ನು ಅನುಸರಿಸಿದ ತಾರೆಯಂತೆ ಪ್ರಕಾಶಿಸಿತು

೨೦೨-೨೦೪. ಆ ದೇವತೆಗಳ ಸೈನ್ಯವನ್ನು ನೋಡಿದರೆ ಸಮುದ್ರದಂತೆ ಪ್ರಕಾಶಿಸಿದ್ದಿತು. ಸಮುದ್ರವು ವಾಯುವಿನ ವೇಗದಿಂದ ಕೂಡಿರುವಂತೆ. ಸೇನೆಯು ವೇಗವನ್ನು ಹೊಂದಿದ ವಾಯುವನ್ನು ಹೊಂದಿದ್ದಿತು. ಸಮುದ್ರವು ಚಂದ್ರ ಹುಟ್ಟಿದುದರಿಂದ ಸೌಮ್ಯವಾಗಿರುವಂತೆ ಸೇನೆಯು ಚಂದ್ರನಿದ್ದುದರಿಂದ ಸೌಮ್ಯವಾಗಿದ್ದಿತು. ಸಮುದ್ರವು ಮುತ್ತಿನ ಗುಂಪನ್ನು ಹೊಂದಿ ಅದರಿಂದ ಉತ್ಕೃಷ್ಟವಾಗಿರುವಂತೆ ಸೇನೆಯು ನಕ್ಷತ್ರಮಂಡಲವನ್ನು ಮುಟ್ಟುವ ಧ್ವಜವನ್ನು ಹೊಂದಿದ್ದಿತು. ಸಮುದ್ರವು ಮೋಡಗಳನ್ನು ಬಟ್ಟೆಯನ್ನಾಗಿ ಕಟ್ಟಿಕೊಂಡಿರುವಂತೆ ಸೇನೆಯು ಮೋಡದಂತಿರುವ ಬಟ್ಟೆಗಳನ್ನು ಹೊಂದಿದ್ದಿತು. ಸಮುದ್ರವು ಮೊಸಳೆ, ನಕ್ಷತ್ರದಂತಿರುವ ಮುತ್ತು ರತ್ನಗಳಿಂದ ಕೂಡಿರುವಂತೆ ಸೇನೆಯು ಯುದ್ಧಕ್ಕೆ ಬಂದಿರುವ ಗ್ರಹಗಳು, ನಕ್ಷತ್ರಗಳು ಇವುಗಳಿಂದ ಪ್ರಕಾಶಿಸುತ್ತಿತ್ತು. ಸಮುದ್ರವು ನಾಲ್ಕು ದಿಕ್ಕುಗಳಿಗೂ ಅಧಿಪತಿಗಳಾದ ಯಮ, ಇಂದ್ರ, ವರುಣ, ಕುಬೇರರಿಂದ ಕಾಪಾಡಲ್ಪಟ್ಟಿರುವಂತೆ ಸೇನೆಯು ಯಮ, ಇಂದ್ರ, ವರುಣ, ಕುಬೇರರಿಂದ ಕಾಪಾಡಲ್ಪಟ್ಟದ್ದಿತು ಸಮುದ್ರವು ಬಡಬಾಗ್ನಿಯಿಂದ ಕೂಡಿ ಜ್ವಲಿಸುತ್ತಿರುವಂತೆ ಸೇನೆಯ ಮುಂಭಾಗದಲ್ಲಿ ಅಗ್ನಿಯು ಜ್ವಲಿಸುತ್ತಿದ್ದನು. ಸಮುದ್ರವು ನಾರಾಯಣನಿಗೆ ಸ್ಥಾನವಾಗಿರುವಂತ ಸೇನೆಯು ನಾರಾಯಣನಿಗೆ ಸ್ಥಾನವಾಗಿದ್ದಿತು. ಈ ರೀತಿ ಸಮುದ್ರದಂತೆ ಆ ದೇವತೆಗಳ ದೊಡ್ಡ ಸೈನ್ಯವು ಅಸ್ತ್ರಗಳನ್ನು ಹಿಡಿದು ಭಯಂಕರವಾಗಿ ಯಕ್ಷ, ಗಂಧರ್ವರಿಂದ ಕೂಡಿಕೊಂಡು ಪ್ರಕಾಶಿಸಿತು.

ತಯೋಃಶ್ಚ ಸೈನ್ಯೋಸ್ತದಾನೀಂ ತು ಬಭೂವ ಸಸಮಾಗಮಃ ।
ದ್ಯಾವಾಪೃಥಿವ್ಯೋಃಶ್ಚ ಯಥಾ ಯೋಗಸ್ಯಾದ್ಯುಗಪರ್ಯಯೇ ॥ ೨೦೫ ॥

ತದ್ಯುದ್ಧಮಭವದ್ಘೋರಂ ದೇವದಾನವಸಂಕುಲಂ ।
ಕ್ಷಮಾಪರಾಕ್ರಮಪರಾ ಸದರ್ಪಂ ವಿನಯಸ್ಯ ಚ ॥ ೨೦೬ ॥

ನಿಶ್ಚಕ್ರಮುರ್ಬಲಾಭ್ಯಾಂ ತು ಭೀಮಾಭ್ಯಾಂ ತು ಸುರಾಸುರಾಃ ।
ಪೂರ್ವಾಪರಾಭ್ಯಾಂ ಸಂರಬ್ಧಾಃ ಸಾಗರಾಭ್ಯಾಮಿವಾಂಬುದಾಃ ॥ ೨೦೭ ॥

ತಾಭ್ಯಾಂ ಬಲಾಭ್ಯಾಂ ಸಂಹೃಷ್ಟಾಶ್ಚೇರುಸ್ತೇ ದೇವದಾನವಾಃ ।
ವನಾಭ್ಯಾಂ ಪಾರ್ವತೀಯಾಭ್ಯಾಂ ಪುಷ್ಪಿತಾಭ್ಯಾಂ ಯಥಾ ನಗಾಃ ॥ ೨೦೮ ॥

ಸಮಾಜಘ್ನುಸ್ತತೋ ಭೇರೀಃ ಶಂಖಾನ್ದಧ್ಮುಸ್ತ್ವನೇಕಶಃ ।
ಸರ್ವಾಂ ಭುವಂ ಚ ಖಂ ಚೈವ ದಿಶಶ್ಚ ಸಮಪೂರಯನ್ ॥ ೨೦೯ ॥

ಜ್ಯಾಘಾತತಳನಿರ್ಘೋಷೋ ಧನುಷಾಂ ಕೂಜಿತಾನಿ ಚ ।
ದುಂದುಭೀನಾಂ ಚ ನಿನದೋ ದೈತ್ಯಮನ್ತರ್ದಧುಃ ಸ್ವನಂ ॥ ೨೧೦ ॥

---

೨೦೫. ಆಗ ಆ ಎರಡು ಸೈನ್ಯಗಳಿಗೂ ಯುಗಾಂತಕಾಲದಲ್ಲಿ ಆಕಾಶ ಭೂಮಿಗಳು ಒಂದಾಗುವಂತೆ ಕೂಡಿಕೆಯಾಯಿತು.

೨೦೬. ದೇವತೆಗಳು ದಾನವರಿಂದ ಕೂಡಿದ ಈ ಯುದ್ಧವು ಕ್ಷಮೆ, ಪರಾಕ್ರಮ, ವಿನಯಗಳಿಂದ ಕೂಡಿಕೊಂಡು ಘೋರವಾಗಿ ನಡೆಯಿತು.

೨೦೭. ಪೂರ್ವ ಪಶ್ಚಿಮ ಸಮುದ್ರಗಳಿಂದ ಕೋಪಗೊಂಡ ಮೇಘಗಳು ಹೊರಗೆ ಬರುವಂತೆ ಆ ಎರಡು ಸೇನೆಗಳಿಂದಲೂ ಶೂರರಾದ ದೇವದಾನವರು ಯುದ್ಧಕ್ಕೆ ಹೊರಹೊರಟರು.

೨೦೮. ಹೂ ಬಿಟ್ಟಿರುವ ಪರ್ವತ ಪ್ರದೇಶದ ಕಾಡುಗಳಿಂದ ಮರಗಳು ಹೊರಹೊರಟಂತೆ ಆ ಎರಡು ಸೇನೆಗಳಿಂದಲೂ ದೇವದಾನವರು ಹೊರಹೊರಟರು.

೨೦೯. ಅನಂತರ ಭೇರಿಗಳನ್ನು ಮೊಳಗಿಸಿದರು. ಶಂಖಗಳನ್ನು ಊದಿದರು. ಈ ಧ್ವನಿಗಳು ಭೂಮ್ಯಾಕಾಶಗಳನ್ನೆಲ್ಲಾ ತುಂಬಿದುವು.

೨೧೦. ಧನುಸ್ಸಿನ ಬಡಿತದ ಧ್ವನಿಯೂ, ಅದರ ಮಿಡಿತದ ಶಬ್ದವೂ, ದುಂದುಭಿ ಧ್ವನಿಯೂ ಆ ದಾನವರ ಸೈನ್ಯದ ಧ್ವನಿಯನ್ನು ಮುಚ್ಚಿತು.

ತೇನ್ಯೋನ್ಯಮಭಿಸಂಪೇತುಸ್ತರ್ಜಯಂತಃ ಪರಸ್ಪರಂ ।
ಬಭಂಜುರ್ಬಾಹುಭಿರ್ಬಾಹುಂ ದ್ವಂದ್ವಮನ್ಯೇ ಯುಯುತ್ಸವಃ ॥ ೨೧೧ ॥

ದೇವಾನಾಮಶನಿಘೋರಾನ್ಪರಿಘಾಂಶ್ಚೋತ್ತಮಾಯುಧಾಃ ।
ನಿಸ್ತ್ರಿಂಶಾನ್ಸಸೃಜುಸ್ಸಂಖ್ಯೇ ತದಾ ಗುರ್ವೀಶ್ಚ ದಾನವಾಃ ॥ ೨೧೨ ॥

ಗದಾನಿಪಾತೈರ್ಭಗ್ನಾಂಗಾ ಬಾಣೈಶ್ಚ ಶಕಲೀಕೃತಾಃ ।
ಪರಿಪೇತುರ್ಭೃಶಂ ಕೇಚಿತ್ಪುನಃ ಕೇಚಿತ್ತು ಜಘ್ನಿರೇ ॥ ೨೧೩ ॥

ತತೋ ರಥೈಸ್ಸತುರಗೈರ್ವಿಮಾನೈಶ್ಚ ಗಜಾದಿಭಿಃ ।
ಸಮೇಯುಸ್ತೇಽಪಿ ಸಂರಬ್ಧಾ ರೋಷಾದನ್ಯೋನ್ಯಮಾಹವೇ ॥ ೨೧೪ ॥

ಸಂವರ್ತಮಾನಾಸ್ಸಮರೇ ಸಂದಷ್ಟೋಷ್ಠಪುಟಾನನಾಃ ।
ರಥಾ ರಥೈರ್ನಿರುಧ್ಯಂತೇ ಪದಾತಾಶ್ಚ ಪದಾತಿಭಿಃ ॥ ೨೧೫ ॥

---

೨೧೧. ಒಬ್ಬರಿಗೊಬ್ಬರು ಹೆದರಿಸಿ ಕೂಗುತ್ತಾ ಎದುರಿಸುತ್ತಿದ್ದರು. ಮತ್ತೆ ಕೆಲವರು ಬಾಹು ಯುದ್ಧವನ್ನೂ ಅಪೇಕ್ಷಿಸಿ ಭುಜಗಳನ್ನು ತಟ್ಟಿಕೊಳ್ಳುತ್ತಿದ್ದರು

೨೧೨. ಆಗ ದಾನವರು ದೇವತೆಗಳ ಮೇಲೆ ಘೋರವಾದ ಸಿಡಿಲಿನಂತೆ ಉಗ್ರವಾದ ಪರಿಘಗಳನ್ನೂ, ಕತ್ತಿಗಳನ್ನೂ ಬಹು ಘೋರವಾಗಿ ಬಿಡುತ್ತ ಬಂದರು.

೨೧೩. ಕೆಲವರು ಗದೆಗಳ ಏಟಿನಿಂದ ಕೈಕಾಲುಗಳಲ್ಲಿ ಗಾಯ ಹೊಂದಿದರು. ಮತ್ತೆ ಕೆಲವರು ಬಾಣದ ಪೆಟ್ಟಿನಿಂದ ಚೂರುಚೂರಾದರು. ಕೆಲವರು ಬಿದ್ದುಹೋದರು. ಮತ್ತೆ ಕೆಲವರು ಹೊಡೆದರು.

೨೧೪. ಆಗ ಕೆಲವರು ರಥಗಳಿಂದಲೂ, ಕೆಲವರು ವಿಮಾನಗಳಿಂದಲೂ ಕೆಲವರು ಆನೆ ಮುಂತಾದುವುಗಳಿಂದಲೂ ಕೋಪದಿಂದ ಆ ಯುದ್ಧದಲ್ಲಿ ಒಬ್ಬರನ್ನೊಬ್ಬರು ಎದುರಿಸಿದರು.

೨೧೫. ಅವರು ಆ ಯುದ್ಧದಲ್ಲಿ ತುಟಿಯನ್ನು ಕಚ್ಚಿಕೊಂಡು ತಿರುಗುತ್ತಾ ರಥಿಕರು ರಥಗಳನ್ನೂ ಕಾಲಾಳುಗಳು ಕಾಲಾಳುಗಳನ್ನೂ ಎದುರಿಸಿ ನಿಂತರು.

ಏಷಾಂ ರಥಾನಾಂ ತುಮುಲಃ ಸ ಶಬ್ದಶ್ಶಬ್ದವಾಹಿನಾಂ ।
ನಭೋ ನಭಸ್ವಾನ್ಸ್ಥಿ ಯಥಾ ನಭಸ್ಯೇ ಜಲದಸ್ವನೈಃ ॥ ೨೧೬ ॥

ಬಭಂಜಿರೇ ರಥಾನ್ಕೇಚಿತ್ಕೇಚಿತ್ಸಂಮೃದಿತಾ ರಥೈಃ ।
ಸಂಬಾಧಮನ್ಯೇ ಸಂಪ್ರಾಪ್ಯ ನ ಶೇಕುಶ್ಚಲಿತುಂ ರಥಾಃ ॥ ೨೧೭ ॥

ಅನ್ಯೋನ್ಯಮನ್ಯೇ ಸಮರೇ ದೋರ್ಭ್ಯಾಮುತ್ಕ್ಷಿಪ್ಯ ದಂಶಿತಾಃ ।
ಸಂಹ್ಲಾದಮಾನಾಸ್ಸಬಲಾ ಜಘ್ನುಸ್ತತ್ರಾಸಿ ಚರ್ಮಿಣಃ ॥ ೨೧೮ ॥

ಅಸ್ತ್ರೈರನ್ಯೇ ವಿನಿರ್ಭಿನ್ನಾ ರಕ್ತಂ ವೇಮುರ್ಹತಾ ಯುಧಿ ।
ಕ್ಷರಜ್ಜಲಾನಾಂ ಸದೃಶಾ ಜಲದಾನಾಂ ಸಮಾಗಮೇ ॥ ೨೧೯ ॥

ತದಸ್ತ್ರಶಸ್ತ್ರಪ್ರಥಿತಂ ಕ್ಷಿಪ್ತಾ ಕ್ಷಿಪ್ತಗದಾವಿಲಂ ।
ದೇವದಾನವಸಂಘುಷ್ಟಂ ಸಂಕುಲಂ ಯುದ್ಧಮಾಬಭೌ ॥ ೨೨೦ ॥

---

೨೧೬. ಶಬ್ದವನ್ನುಂಟುಮಾಡುವ ಈ ರಥಗಳ ಧ್ವನಿಯು ಭಾದ್ರಪದ ಮಾಸದಲ್ಲಿ ಗಾಳಿಯು ಮೇಘಗಳನ್ನು ಶಬ್ದಮಾಡಿಸುತ್ತ ಹೇಗೆ ಆಕಾಶವನ್ನು ತುಂಬುತ್ತದೆಯೋ ಹಾಗೆ ಆಕಾಶವನ್ನು ತುಂಬಿತು.

೨೧೭. ಕೆಲವರು ರಥಗಳನ್ನು ಹೊಡೆದು ಮತ್ತೆ ಕೆಲವರು ರಥಗಳಿಂದ ರಥಗಳನ್ನು ಹೊಡೆದು ಮುರಿದರು. ಕೆಲವರು ರಥಕ್ಕೆ ದಾರಿ ಸಿಕ್ಕದೆ ಇಕ್ಕಟ್ಟಾಗಿ ಅಲ್ಲಾಡಿಸಲಾಗದಂತೆ ಮಾಡಿದರು.

೨೧೮. ಕೆಲವರು ಕವಚಗಳನ್ನು ತೊಟ್ಟು ಕೈಯಲ್ಲಿ ಆಯುಧವನ್ನು ಹಿಡಿದು ಅವನ್ನು ಮೇಲಕ್ಕೆತ್ತಿ ಕೂಗುತ್ತ ಕತ್ತಿಯನ್ನೂ ಗುರಾಣಿಯನ್ನೂ ಹಿಡಿದು ಬಲದಿಂದ ಯುದ್ಧಮಾಡಿದರು.

೨೧೯. ಕೆಲವರು ಅಸ್ತ್ರಗಳಿಂದ ಏಟುಗಳನ್ನು ತಿಂದು ಯುದ್ಧದಲ್ಲಿ ರಕ್ತವನ್ನು ಕಕ್ಕುತ್ತಿದ್ದರು. ಅದನ್ನು ನೋಡಿದರೆ ಮಳೆಗಾಲದಲ್ಲಿ ಮಳೆ ಸುರಿಯುವಂತಿದ್ದಿತು.

೨೨೦. ಅಸ್ತ್ರಗಳು, ಶಸ್ತ್ರಗಳು ಇವುಗಳ ಹೊಡೆತವುಳ್ಳ, ಹೊಡೆಯುತ್ತಲೂ ತಪ್ಪಿಸಿಕೊಳ್ಳುತ್ತಲೂ ಇರುವ ಗದೆಯ ಏಟುಳ್ಳ, ದೇವದಾನವರ ಕೂಗುಳ್ಳ ಸಂಕುಲವಾದ ಆ ಯುದ್ಧವು ಪ್ರಕಾಶಿಸಿತು.

ತದ್ದಾನವಮಹಾಮೇಘಂ ದೇವಾಯುಧವಿರಾಜಿತಂ ।
ಅನ್ಯೋನ್ಯಬಾಣವರ್ಷೇಣ ಯುದ್ಧದುರ್ದಿನಮಾಬಭೌ ॥ ೨೨೧ ॥

ಏತಸ್ಮಿನ್ನಂತರೇ ಕ್ರುದ್ಧಃ ಕಾಲನೇಮಿಸ್ಸದಾನವಃ ।
ವ್ಯವರ್ಧತ ಸಮುದ್ರೌಘೈಃ ಪೂರ್ಯಮಾಣ ಇವಾಂಬುದಃ ॥ ೨೨೨ ॥

ತಸ್ಯ ವಿದ್ಯುದ್ಘನಾಪೀಡಾಃ ಪ್ರದೀಪ್ತಾಶನಿವರ್ಷಿಣಃ ।
ಗಾತ್ರೈರ್ನಾಗಗಿರಿಪ್ರಖ್ಯೈಃ ವಿನಿಪೇತುರ್ಬಲಾಹಕಾಃ ॥ ೨೨೩ ॥

ಕ್ರೋಧಾನ್ನಿಶ್ವಸತಸ್ತಸ್ಯ ಭ್ರೂಭೇದಸ್ವೇದವರ್ಷಿಣಃ ।
ಸಾಗ್ನಿಸ್ಫುಲಿಂಗಾ ಪೃತನಾ ಮುಖಾನ್ನಿಷ್ಪೇತುರರ್ಚಿಷಃ ॥ ೨೨೪ ॥

ತಿರ್ಯಗೂರ್ಧ್ವಂ ಚ ಗಗನೇ ವವೃಧುಸ್ತಸ್ಯಬಾಹವಃ ।
ಪರ್ವತಾದಿವ ನಿಷ್ಕ್ರಾಂತಾಃ ಪಂಚಾಸ್ಯಾ ಇವ ಪನ್ನಗಾಃ ॥ ೨೨೫ ॥

---

೨೨೧. ಆ ದಾನವರೆಂಬ ದೊಡ್ಡ ಮೇಘಗಳುಳ್ಳ ದೇವತೆಗಳ ಆಯುಧವೆಂಬ ಕಾಮನ ಬಿಲ್ಲುಳ್ಳ ಆಯುದ್ಧವೆಂಬ ಮಳೆಗಾಲದ ದಿನವು ಒಬ್ಬರಿಗೊಬ್ಬರು ಹೊಡೆಯುತ್ತಿರುವ ಬಾಣದ ಮಳೆಯೆಂಬ ಮಳೆಯನ್ನು ಸುರಿಸಿತು.

೨೨೨. ಇಷ್ಟರಲ್ಲಿ ಆ ಕಾಲನೇಮಿಯೆಂಬ ದಾನವನು ಕೋಪದಿಂದ ಸಮುದ್ರದ ನೀರನ್ನು ತುಂಬಿಕೊಂಡು ವೃದ್ಧಿಹೊಂದುವ ಮೇಘದಂತೆ ವೃದ್ಧಿ ಹೊಂದಿದನು.

೨೨೩. ಆಗ ಆ ಕಾಲನೇಮಿಯು ದೊಡ್ಡದಾದ ಶರೀರದಿಂದ ಮಿಂಚುಗಳಿಂದ ಕೂಡಿದ, ಶಿಡಿಲನ್ನು ಸುರಿಸುತ್ತಿರುವ ಮೋಡಗಳು ಹೊರಸೂಸಿದುವು.

೨೨೪. ಕೋಪದಿಂದ ನಿಟ್ಟುಸಿರುಬಿಡುತ್ತಾ ಹುಬ್ಬು ಗಂಟಿಟ್ಟುಕೊಂಡು ಬೆವರನ್ನು ಸುರಿಸುತ್ತಿರುವ ಆತನ ಬಾಯಿಂದ ಬೆಂಕಿಯ ಕಿಡಿಗಳಿಂದ ಕೂಡಿದ ಜ್ವಾಲೆಗಳು ಬಂದುವು.

೨೨೫. ಅವನ ತೋಳುಗಳು ಮೇಲಕ್ಕೂ ಕೆಳಕ್ಕೂ ಪರ್ವತದಂತೆ ಹೊರಹೊರಟ ಐದು ಮುಖವುಳ್ಳ ಸರ್ಪಗಳಂತೆ ಕಂಡುಬಂದುವು.

ಸೋಽಸ್ತ್ರಜಾಲೈರ್ಬಹುವಿಧೈರ್ಧನುಭಿಃ ಪರಿಘೈರಿವ ।
ದಿವ್ಯಮಾಕಾಶಮಾವವ್ರೇ ಪರ್ವತೈರುಚ್ಛ್ರಿತೈರಿವ　　　　॥ ೨೨೬ ॥

ಸೋಽನಿಲೋದ್ಧೂತಪವನಸ್ತಸ್ಥೌ ಸಂಗ್ರಾಮಲಾಲಸಃ ।
ಸಂಧ್ಯಾತಪಗ್ರಸ್ತಲೀಲಃ ಸಾಕ್ಷಾನ್ಮೇರುರಿವಾಚಲಃ　　　　॥ ೨೨೭ ॥

ಉರುವೇಗಪ್ರಮಥಿತೈಃ ಶೃಂಗಶೈಲಾಗ್ರಪಾದಪೈಃ ।
ಅಪಾತಯದ್ದೇವಗಣಾನ್ವಜ್ರೇಣೇವ ಮಹಾಗಿರೀನ್　　　　॥ ೨೨೮ ॥

ಬಹುದಿವ್ಯಾಸ್ತ್ರನಿಸ್ತ್ರಿಂಶೈಶ್ಛಿನ್ನಭಿನ್ನಶಿರೋರುಹಾಃ ।
ನಶೇಕುಶ್ಚಲಿತುಂ ದೇವಾಃ ಕಾಲನೇಮಿ ಹತಾ ಯುಧಿ　　　　॥ ೨೨೯ ॥

ಮುಷ್ಟಿಭಿರ್ನಿಹತಾಃ ಕೇಚಿತ್ಕೇಚಿಚ್ಚ ದ್ವಿದಳೀ ಕೃತಾಃ ।
ಯಕ್ಷಗಂಧರ್ವಪತಗೈಃ ಸ್ಪಂದಿತಾಶ್ಶರಬಂಧನೈಃ　　　　॥ ೨೩೦ ॥

---

೨೨೬. ಅವನು ಅಸ್ತ್ರಗಳನ್ನು ಧರಿಸಿ ಧನುಸ್ಸನ್ನು ಹಿಡಿದು ಶಿಖರಗಳಿಂದ ಕೂಡಿದ ಬೆಟ್ಟಗಳಂತೆ ಆಕಾಶವನ್ನೆಲ್ಲಾ ಆವರಿಸಿಕೊಂಡನು.

೨೨೭ ಅವನು ಗಾಳಿಯಿಂದ ಬಟ್ಟೆಯನ್ನಳ್ಳಾಡಿಸಿಕೊಂಡು ಯುದ್ಧದಲ್ಲಿ ಆಸೆಯುಳ್ಳವನಾಗಿದ್ದರೆ ಸಂಧ್ಯಾಕಾಲದ ಬಿಸಿಲನ್ನು ಹೊಂದಿರುವ ಮೇರುವಿನಂತಿದ್ದನು.

೨೨೮. ಅವನು ವೇಗದಿಂದ ಬೆಟ್ಟದ ತುದಿಯಲ್ಲಿರುವ ಮರಗಳನ್ನು ಕಿತ್ತು ಕೊಂಡು ದೇವತೆಗಳ ಗುಂಪನ್ನು ವಜ್ರಾಯುಧದಿಂದ ಬೆಟ್ಟಗಳನ್ನು ಕೆಡವಿದಂತೆ ಕೆಡವಿದನು.

೨೨೯. ಅನೇಕವಾದ ದಿವ್ಯಾಸ್ತ್ರಗಳಿಂದಲೂ, ಕತ್ತಿಗಳಿಂದಲೂ, ತಲೆಯಲ್ಲಿ ಹೊಡೆತವನ್ನು ತಿಂದ ದೇವತೆಗಳು ಅಲುಗಾಡಲಾರದೆ ಹೋದರು.

೨೩೦. ಮುಷ್ಟಿಗಳಿಂದ ಕೆಲವರನ್ನು ಹೊಡೆದನು. ಕೆಲವರನ್ನು ಎರಡೆರಡಾಗಿ ಶೀಳಿದನು. ಯಕ್ಷರು, ಗಂಧರ್ವರು, ಪಕ್ಷಿಗಳು, ಅಸ್ತ್ರಗಳ ಕಟ್ಟನ್ನು ಹೊಂದಿ ಅಲ್ಲಾಡದಂತಾದರು.

ತೇನ ವಿತ್ರಾಸಿತಾ ದೇವಾಃ ಸಮರೇ ಕಾಲನೇಮಿನಾ ।
ನ ಶೇಕುರ್ಯತ್ನವಂತೋಽಪಿ ಯತ್ನಂ ಕರ್ತುಂ ವಿಚೇತಸಃ ॥ ೨೩೦ ॥

ತೇನ ಶಕ್ರಸ್ಸಹಸ್ರಾಕ್ಷಃ ಸ್ಪಂದಿತಶ್ಶರಬಂಧನೈಃ ।
ನಿಷ್ಪ್ರಯತ್ನಃ ಕೃತಸ್ಸಂಖ್ಯೇ ಚಲಿತುಂ ನ ಶಶಾಕ ಹ ॥ ೨೩೨ ॥

ನಿರ್ಜಲಾಂಭೋದಸದೃಶೋ ಜಲಾರ್ಣವಸಮಪ್ರಭಃ ।
ನಿರ್ವ್ಯಾಪಾರಃ ಕೃತಸ್ತೇನ ವಿಪಾಶೋ ವರುಣೋ ಮೃಧೇ ॥ ೨೩೩ ॥

ರಣೇ ವೈಶ್ರವಣಸ್ತೇನ ಪರಿಘೈಃ ಕಾಲನೇಮಿನಾ ।
ವಿಲಪಂಲ್ಲೋಕಪಾಲೇಶಃ ತ್ಯಾಜಿತೋ ಧನದಕ್ರಿಯಾಂ ॥ ೨೩೪ ॥

ಯಮಸ್ಸರ್ವಹರಸ್ತೇನ ಮೃತ್ಯುಪ್ರಹರಣೋ ರಣೇ ।
ಯಾಮ್ಯಾಮವಸ್ಥಾಂ ಸಂತ್ಯಜ್ಯ ಭೀತಸ್ಸ್ವಾಂ ದಿಶಮಾವಿಶತ್ ॥ ೨೩೫ ॥

---

೨೩೦. ಆ ಕಾಲನೇಮಿಯಿಂದ ಬಾಧೆಪಡಿಸಲ್ಪಟ್ಟ ದೇವತೆಗಳು ಪ್ರತೀಕಾರಕ್ಕೆ ಪ್ರಯತ್ನಪಟ್ಟರೂ ಜ್ಞಾನವಿಲ್ಲದುದರಿಂದ ಯತ್ನ ಮಾಡಲಾಗಲಿಲ್ಲ.

೨೩೨. ಆಗ ಇಂದ್ರನು ಶರದ ಕಟ್ಟಿನಿಂದ ಸ್ವಲ್ಪ ಅಲುಗಾಡಲು ಮತ್ತೆ ಕಾಲನೇಮಿಯು ಕಟ್ಟಿ ಅಲುಗಾಡಲು ಕೂಡ ಆಗದಂತೆ ಮಾಡಿದನು.

೨೩೩. ತುಂಬಿದ ಸಮುದ್ರದಂತೆ ಶೌರ್ಯವುಳ್ಳ ವರುಣನನ್ನು ನೀರಿಲ್ಲದ ಸಮುದ್ರದಂತೆಯೂ, ಪಾಶಾಯುಧವನ್ನು ಬಿಸಾಡುವಂತೆಯೂ, ಮಾಡಿ ಅಲ್ಲಾಡದಂತೆ ಆ ಕಾಲನೇಮಿಯು ಮಾಡಿದನು.

೨೩೪. ಕಾಲನೇಮಿಯು ಪರಿಘಾಯುಧವನ್ನು ತೆಗೆದುಕೊಂಡು ಲೋಕಪಾಲನಾದ ಕುಬೇರನು ತನ್ನ ಕೆಲಸವನ್ನು ಬಿಟ್ಟು ಅಳುವಂತೆ ಮಾಡಿದನು.

೨೩೫. ಎಲ್ಲರನ್ನೂ ನಾಶಮಾಡುವ ಕೊನೆಗೆ ಮೃತ್ಯುವಿಗೂ ನಾಶಕನಾದ ಯಮನನ್ನು ತನ್ನ ಕೆಲಸವನ್ನು ಬಿಟ್ಟು ದಕ್ಷಿಣ ದಿಕ್ಕಿಗೆ ಹೆದರಿಕೊಂಡು ಓಡುವಂತೆ ಮಾಡಿದನು.

ಸ ಲೋಕಪಾಲಾನುತ್ಸಾರ್ಯ ಹೃತ್ವಾ ತೇಷಾಂ ಚ ಕರ್ಮ ತತ್ ।
ದಿಕ್ಷು ಸರ್ವಾಸು ದೇಹಂ ಸ್ವಂ ಚತುರ್ಧಾ ವಿದಧೇ ತದಾ ॥ ೨೩೬ ॥

ಸ ನಕ್ಷತ್ರ ಪಥಂ ಗತ್ವಾ ದಿವ್ಯಂ ಸ್ವರ್ಭಾನುದರ್ಶಿತಂ ।
ಜಹಾರ ಲಕ್ಷ್ಮೀಂ ಸೋಮಸ್ಯ ತಚ್ಚಾಸ್ಯ ವಿಷಯಂ ಮಹತ್ ॥ ೨೩೭ ॥

ಚಾಲಯಾಮಾಸ ದೀಪ್ತಾಂಶುಂ ಧರ್ಮದ್ವಾರಾ ಸ ಭಾಸ್ಕರಂ ।
ಶಾಸನಂ ಚಾಸ್ಯ ವಿಷಯಂ ಜಹಾರ ದಿನಕರ್ಮ ಚ ॥ ೨೩೮ ॥

ಸೋಗ್ನಿಂ ದೇವಮುಖಂ ಜಿತ್ವಾ ಚಕಾರಾತ್ಮಸುಖಾಶ್ರಯಂ ।
ವಾಯುಂ ಚ ತಪಸಾ ಜಿತ್ವಾ ಚಕಾರಾತ್ಮ ವಶಾನುಗಂ ॥ ೨೩೯ ॥

ಸಮುದ್ರಾಂಸ್ತಸ್ಸಮಾನೀಯ ಸರ್ವಾಶ್ಚ ಸರಿತೋ ಬಲಾತ್ ।
ಚಕಾರಾಭಿಮುಖಂ ವೀರ್ಯಾದ್ದೇಹಭೂತಾಶ್ಚ ಸಿಂಧವಃ ॥ ೨೪೦ ॥

---

೨೩೬. ಈ ರೀತಿ ಕಾಲನೇಮಿಯು ಲೋಕಪಾಲಕರನ್ನೆಲ್ಲಾ ಓಡಿಸಿ ಅವರ ಕೆಲಸಗಳನ್ನು ಕಿತ್ತುಕೊಂಡು ನಾಲ್ಕು ದಿಕ್ಕುಗಳಲ್ಲಿಯೂ ತನ್ನ ದೇಹವನ್ನೇ ನಾಲ್ಕಾಗಿ ವಿಭಾಗಿಸಿ ರಕ್ಷಕರನ್ನಾಗಿ ಇಟ್ಟನು.

೨೩೭. ರಾಹುವು ತೋರಿಸಿದ ನಕ್ಷತ್ರಗಳ ಜಾಗಕ್ಕೆ ಹೋಗಿ ಚಂದ್ರನ ಲಕ್ಷ್ಮಿಯನ್ನು ಅಪಹರಿಸಿದನು. ಅವನ ರಾಜ್ಯವನ್ನು ಕಿತ್ತುಕೊಂಡನು.

೨೩೮. ಉರಿಯುತ್ತಿರುವ ಆ ಸೂರ್ಯನನ್ನು ಧರ್ಮದಿಂದಲೇ ಚ್ಯುತನನ್ನಾಗಿ ಮಾಡಿದನು. ಅವನ ಅಪ್ಪಣೆಗಳನ್ನು ನಾಶಮಾಡಿ ಅವನ ದೇಶ ಮತ್ತು ದಿನಕರ್ಮಗಳನ್ನು ಅಪಹರಿಸಿದನು.

೨೩೯. ದೇವತೆಗಳಿಗೆ ಮುಖನಾದ ಅಗ್ನಿಯನ್ನು ಜಯಿಸಿ ತನಗೆ ಸುಖಕರನನ್ನಾಗಿಯೂ, ವಾಯುವನ್ನು ಜಯಿಸಿ ತನಗೆ ಅನುಕೂಲವಾಗಿರುವಂತೆಯೂ ಮಾಡಿಕೊಂಡನು.

೨೪೦. ಸಮುದ್ರದೊಳಕ್ಕೆ ಹೋಗಿ ಎಲ್ಲಾ ನದಿಗಳೂ ತನಗೆ ಅಭಿಮುಖವಾಗಿ ಇರುವಂತೆಯೂ, ಸಮುದ್ರವೇ ತನ್ನ ದೇಹವಾಗುವಂತೆಯೂ ಮಾಡಿಕೊಂಡನು.

ಆಪಸ್ಸ್ವವಶಗಾಃ ಕೃತ್ವಾ ದಿವಿ ಜಾತಶ್ಚ ಭೂಮಿಜಾಃ ।
ಛಾದಯಾಮಾಸ ಜಗತೀಂ ಸುಗುಪ್ತಾಂ ಧರಣೀಧರೈಃ ॥ ೨೪೧ ॥

ಸ ಸ್ವಯಂಭೂರಿವಾಭಾತಿ ಮಹಾಭೂತಪತಿರ್ಮಹಾನ್ ।
ಸರ್ವಲೋಕಮಯೋ ದೈತ್ಯಃ ಸರ್ವಲೋಕಭಯಾವಹಃ ॥ ೨೪೨ ॥

ಸಲೋಕಪಾಲೈಕವಪುಃ ಚಂದ್ರಸೂರ್ಯಗ್ರಹಾತ್ಮವಾನ್ ।
ಪಾವಕಾನಿಲಸಂಜಾತೋ ರರಾಜ ಯುಧಿ ದಾನವಃ ॥ ೨೪೩ ॥

ಪಾರಮೇಷ್ಠ್ಯೇ ಸ್ಥಿತಃ ಸ್ಥಾನೇ ಲೋಕಾನಾಂ ಪ್ರಭವೋಪಮೇ ।
ತಂ ತುಷ್ಟುವುರ್ದೈತ್ಯಗಣಾ ದೇವಾ ಇವ ಪಿತಾಮಹಂ ॥ ೨೪೪ ॥

ಪಂಚ ತಂ ನಾಭ್ಯವರ್ತಂತ ವಿಪರೀತೇನ ಕರ್ಮಣಾ ।
ವೇದೋ ಧರ್ಮಃ ಕ್ಷಮಾ ಸತ್ಯಂ ಶ್ರೀಶ್ಚ ನಾರಾಯಣಾಶ್ರಯಾ ॥ ೨೪೫ ॥

---

೨೪೧. ನೀರೆಲ್ಲವನ್ನೂ ತನ್ನ ಅಧೀನವನ್ನಾಗಿ ಮಾಡಿಕೊಂಡು ದೇವಲೋಕದ ಮರಗಳೂ ತನ್ನ ವಶವಾಗುವಂತೆ ಮಾಡಿಕೊಂಡು ಬೆಟ್ಟಗಳಿಂದ ಕೂಡಿದ ಭೂಮಿಗಳನ್ನೆಲ್ಲಾ ಆವರಿಸಿಕೊಂಡನು.

೨೪೨. ಆ ಕಾಲನೇಮಿಯು ಬ್ರಹ್ಮನಂತೆ ಪ್ರಕಾಶಿಸುವನು. ಮಹಾಭೂತಗಳಿಗೆ ಒಡೆಯನಾಗಿ ಕಾಣುವನು. ಎಲ್ಲಾ ಲೋಕಸ್ವರೂಪನಾಗಿ ಕಾಣುವನು. ಎಲ್ಲರಿಗೂ ಭಯವನ್ನುಂಟುಮಾಡುವನು.

೨೪೩. ಅವನೇ ಲೋಕಪಾಲಕರಂತಾದನು. ಚಂದ್ರ ಸೂರ್ಯರಂತೆಯೂ ಗ್ರಹಗಳಂತೆಯೂ, ಆದನು. ವಾಯು ಅಗ್ನಿಗಳೂ ಆದನು. ಹೀಗೆ ಯುದ್ಧದಲ್ಲಿ ನಾನಾ ಬಗೆಯಾಗಿ ಪ್ರಕಾಶಿಸಿದನು.

೨೪೪. ಲೋಕಗಳನ್ನು ಸೃಷ್ಟಿಮಾಡುವ ಉತ್ತಮೋತ್ತಮಸ್ಥಾನದಲ್ಲಿ ನಿಂತನು. ಆಗ ದೈತ್ಯರೆಲ್ಲರೂ, ದೇವತೆಗಳು ಬ್ರಹ್ಮನನ್ನು ಸ್ತುತಿಸುವಂತೆ ಅವನನ್ನು ಸ್ತುತಿಸಿದರು.

೨೪೫. ಇವನು ಕೆಟ್ಟ ಕೆಲಸದಲ್ಲಿ ನಿರತನಾದುದರಿಂದ ವೇದ, ಧರ್ಮ, ಕ್ಷಮೆ ಸತ್ಯ, ನಾರಾಯಣನಲ್ಲಿರುವ ಲಕ್ಷ್ಮಿ ಈ ಐದೂ ಅವನನ್ನು ಅನುಸರಿಸಲಿಲ್ಲ.

ಸ ತೇಷಾಮನುಪಸ್ಥಾನಾತ್ಸಕ್ರೋಧೋ ದಾನವೇಶ್ವರಃ ।
ವೈಷ್ಣವಂ ಪದಮನ್ವಿಚ್ಛನ್ಸಗತೋ ದೇವಮನ್ಯತಃ ॥ ೨೪೬ ॥

ಸ ದದರ್ಶ ಸುಪರ್ಣಸ್ಥಂ ಶಂಖಚಕ್ರಗದಾಧರಂ ।
ದಾನವಾನಾಂ ವಿನಾಶಾಯ ಧಾರಯಂತಂ ಗದಾಂ ಶುಭಾಂ ॥ ೨೪೭ ॥

ಸಜಲಾಂಭೋದಸದೃಶಂ ವಿದ್ಯುತ್ಸದೃಶವರ್ಚಸಂ ।
ಆರೂಢಂ ಸ್ವರ್ಣಪತ್ರಾಢ್ಯಂ ಶಿಖಿನಂ ಕಾಶ್ಯಪಂ ಖಗಂ ॥ ೨೪೮ ॥

ದೃಷ್ಟ್ವಾ ದೈತ್ಯವಿನಾಶಾಯ ದೇವಂ ಸ್ವಸ್ಥಮಿವ ಸ್ಥಿತಂ ।
ದಾನವೋ ವಿಷ್ಣುಮಕ್ಷೋಭ್ಯಂ ಬಭಾಷೇ ಕ್ಷುಬ್ಧ ಮಾನಸಃ ॥ ೨೪೯ ॥

॥ ಕಾಲನೇಮಿರುವಾಚ ॥

ಅಯಂ ಸ ರಿಪುರಸ್ಮಾಕಂ ಪೂರ್ವೇಷಾಂ ಪ್ರಾಣನಾಶನಃ ।
ಆರ್ಣವಾವಾಸಿನೋಶ್ಚೈವ ಮಧೋರ್ವೈ ಕೈಟಭಸ್ಯ ಚ ॥ ೨೫೦ ॥

---

೨೪೬. ಅವು ಇವನನ್ನು ಹೊಂದದಿರುವುದರಿಂದ ಆ ಕಾಲನೇಮಿಯು ಕೋಪಗೊಂಡು ವಿಷ್ಣುವಿನ ಸ್ಥಾನವನ್ನು ಹೊಂದಲು ಬೇರೆ ಕಡೆಯಲ್ಲಿದ್ದ ಆ ವಿಷ್ಣುವನ್ನು ಹೊಂದಿದನು.

೨೪೭. ಗರುಡನ ಮೇಲೆ ಕುಳಿತ ಶಂಖ ಚಕ್ರ ಗದೆಗಳನ್ನು ಧರಿಸಿ ದಾನವರ ನಾಶಕ್ಕೋಸ್ಕರ ಗದೆಯನ್ನು ಎತ್ತಿ ಹಿಡಿದಿರುವ ಆ ವಿಷ್ಣುವನ್ನು ನೋಡಿದನು

೨೪೮. ಮಿಂಚಿನಂತೆ ಪ್ರಕಾಶವುಳ್ಳ, ಚಿನ್ನದ ಗರಿಯಿಂದ ಕೂಡಿದ, ಕಶ್ಯಪನ ಮಗನಾದ, ಆಕಾಶದಲ್ಲಿ ಹಾರುತ್ತಿರುವ ಗರುಡನನ್ನೂ, ಅವನ ಮೇಲೆ ಕುಳಿತಿರುವ ನೀಲಮೇಘಶ್ಯಾಮನಾದ ಆ ವಿಷ್ಣುವನ್ನೂ ನೋಡಿದನು.

೨೪೯ ದೈತ್ಯರನ್ನು ನಾಶಮಾಡಲು ಉದ್ಯುಕ್ತನಾಗಿರುವ, ಯಾರ ತಂಟೆಗೂ ಹೋಗದೆ ಸುಮ್ಮನಿರುವವನಂತಿರುವ, ಅಲ್ಲಾಡಿಸಲು ಅಸಾಧ್ಯವಾದ ಮನಸ್ಸಿನಲ್ಲಿ ವಿಕಾರಗಳನ್ನು ಹೊಂದದಿರುವ, ಆ ವಿಷ್ಣುವನ್ನು ನೋಡಿ ಕೋಪಗೊಂಡು ಕಾಲನೇಮಿಯು ಇಂತೆಂದನು.

೨೫೦. ಇವನೇ ನಮಗೆ ಶತ್ರುವು ನಮ್ಮ ಪೂರ್ವಿಕರನ್ನು ಕೊಂದವನು. ಇವನೇನೆ. ಸಮುದ್ರದಲ್ಲಿ ವಾಸಿಸುತ್ತಿದ್ದ ಮಧುಕೈಟಭರನ್ನು ನಾಶಮಾಡಿದವನೂ ಇವನೇನೆ.

ಅಯಂ ಸವಿಗ್ರಹೋಸ್ಮಾಕಮನ್ಯಾಯಃ ಕಿಲ ಕಥ್ಯತೇ ।
ಯೇನ ಸಸ್ಸಂಯುಗೇಷ್ವತ್ರ ದಾನವಾ ಬಹವೋ ಹತಾಃ ॥ ೨೫೧ ॥

ಅಯಂ ಸ ನಿರ್ಘೃಣೋ ಲೋಕೇ ಸ್ತ್ರೀಬಾಲನಿರಪತ್ರಪಃ ।
ಯೇನ ದಾನವನಾರೀಣಾಂ ಸೀಮಂತೋದ್ಧರಣಂ ಕೃತಂ ॥ ೨೫೨ ॥

ಅಯಂ ಸ ವಿಷ್ಣುರ್ದೇವಾನಾಂ ವೈಕುಂಠಶ್ಚ ದಿವೌಕಸಾಂ ।
ಅನಂತೋ ಭೋಗಿನಾಂ ಮಧ್ಯೇ ಸ್ವಯಂಭೂಶ್ಚ ಸ್ವಯಂಭುವಃ ॥ ೨೫೩ ॥

ಅಯಂ ಸ ನಾಥೋ ದೇವಾನಾಂ ಅಸ್ಮಾಭಿರ್ವಿಪ್ರಕೃಷ್ಯತೇ ।
ಅಸ್ಯ ಕ್ರೋಧಂ ಸಮಾಸಾದ್ಯ ಹಿರಣ್ಯಕಶಿಪುರ್ಹತಃ ॥ ೨೫೪ ॥

ಅಸ್ಯಚ್ಛಾಯಾಮುಪಾಶ್ರಿತ್ಯ ದೇವಾ ಮಖಮುಖೇ ಸ್ಥಿತಾಃ ।
ಆಜ್ಯಂ ಮಹರ್ಷಿಭಿರ್ದತ್ತಮಶ್ನುವಂತಿ ತ್ರಿಧಾ ಹುತಂ ॥ ೨೫೫ ॥

---

೨೫೧. ಇವನೇ ನಮ್ಮಗಳಿಗೆ ಅನ್ಯಾಯದ ಮೂರ್ತಿಯೆಂದೆನಿಸಿಕೊಂಡಿರುವನು. ಇವನಿಂದಲೇ ಯುದ್ಧದಲ್ಲಿ ಬಹುಜನ ನಮ್ಮ ದಾನವರು ಹತರಾದರು.

೨೫೨ ಇವನು ಲೋಕದಲ್ಲಿ ದಯೆಯಿಲ್ಲದವನು. ಹೆಂಗಸರು ಹುಡುಗರಂತೆ ಲಜ್ಜೆಯಿಲ್ಲದವನು. ಹೆಂಗಸರ ಬೈತಲೆಗಳನ್ನು ನಾಶಮಾಡಿದವನು.

೨೫೩. ಈತನು ದೇವತೆಗಳಿಗೆ ವಿಷ್ಣುವು. ದೇವಲೋಕದಲ್ಲಿರುವವರಿಗೆ ವೈಕುಂಠನು. ಸರ್ಪಗಳಿಗೆಲ್ಲಾ ಅನಂತನು. ಬ್ರಹ್ಮರಿಗೆಲ್ಲಾ ಬ್ರಹ್ಮನು.

೨೫೪. ಈತನು ದೇವತೆಗಳಿಗೆ ಒಡೆಯನು. ಈತನನ್ನು ನಾನು ಸ್ವಾಧೀನಪಡಿಸಿಕೊಳ್ಳುತ್ತೇನೆ. ಈತನ ಶಕ್ತಿಯೆಲ್ಲವನ್ನೂ ಎಳೆದುಕೊಳ್ಳುತ್ತೇನೆ. ಇವನ ಕೋಪಕ್ಕೆ ಗುರಿಯಾಗಿಯೇ ಹಿರಣ್ಯಕಶಿಪುವು ನಾಶವಾದನು.

೨೫೫. ಇವನ ಆಶ್ರಯವನ್ನು ಹೊಂದಿ ದೇವತೆಗಳು ಯಜ್ಞದಲ್ಲಿದ್ದುಕೊಂಡು ಮಹರ್ಷಿಗಳು ಕೊಟ್ಟ ಮೂರು ಅಗ್ನಿಗಳಲ್ಲಿಯೂ ಹೋಮ ಮಾಡಿದ ತುಪ್ಪವನ್ನು ತಿನ್ನುತ್ತಾರೆ.

ಅಯಂ ಸ ನಿಧನೇ ಹೇತುಃ ಸರ್ವೇಷಾಮಮರದ್ವಿಷಾಂ ।
ಯಸ್ಯ ಚಕ್ರೇ ಪ್ರವಿಷ್ಟಾನಿ ಕುಲಾನ್ಯಸ್ಮಾಕಮಾಹವೇ ॥ ೨೫೬ ॥

ಅಯಂ ಸ ಕಿಲ ಯುದ್ಧೇಷು ಸುರಾರ್ಥೇ ತ್ಯಕ್ತಜೀವಿತಃ ।
ಮತ್ಪಿತುಸ್ತೇಜಸಾ ತುಲ್ಯಂ ಚಕ್ರಂ ಕ್ಷಿಪತಿ ಶತ್ರುಷು ॥ ೨೫೭ ॥

ಅಯಂ ಸ ಕಾಲೋ ದೈತ್ಯಾನಾಂ ಕಾಲಭೂತೇ ಮಯಿ ಸ್ಥಿತೇ ।
ಅತಿಕ್ರಾನ್ತಸ್ಯ ಕಾಲಸ್ಯ ಫಲಂ ಪ್ರಾಪ್ಸ್ಯತಿ ಕೇಶವಃ ॥ ೨೫೮ ॥

ದಿಷ್ಟ್ಯೇದಾನೀಂ ಸಮಕ್ಷಂ ಮೇ ವಿಷ್ಣುರೇಷ ಸಮಾಗತಃ ।
ಅದ್ಯ ಮದ್ಬಾಣನಿಷ್ಪಿಷ್ಟೋ ಮಯ್ಯೇವ ಪ್ರಣಮಿಷ್ಯತಿ ॥ ೨೫೯ ॥

ಯಾಸ್ಯಾಮ್ಯಪಚಿತಿಂ ದಿಷ್ಟ್ಯಾ ಪೂರ್ವೇಷಾಮದ್ಯ ಸಂಯುಗೇ ।
ಇಮಂ ನಾರಾಯಣಂ ಹತ್ವಾ ದಾನವಾನಾಂ ಭಯಾವಹಂ ॥ ೨೬೦ ॥

---

೨೫೬. ದೇವತೆಗಳನ್ನು ದ್ವೇಷಿಸುವವರ ನಾಶಕ್ಕೆಲ್ಲಾ ಇವನೇ ಕಾರಣನು. ಇವನ ಚಕ್ರವನ್ನೇ ಹೊಂದಿ ಯುದ್ಧದಲ್ಲಿ ನಮ್ಮಗಳ ವಂಶವೆಲ್ಲವೂ ನಾಶವಾದುವು.

೨೫೭. ಈ ವಿಷ್ಣುವು ಯುದ್ಧದಲ್ಲಿ ದೇವತೆಗಳಿಗೋಸ್ಕರವಾಗಿ ಪ್ರಾಣವನ್ನೇ ಕೊಡುತ್ತಾನೆ. ನನ್ನ ತಂದೆಯಾದ ಹಿರಣ್ಯಕಶಿಪುವಿಗೆ ಸಮವಾದ ಶಕ್ತಿಯುಳ್ಳ ಚಕ್ರವನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಾನೆ.

೨೫೮. ಇವನೇ ದೈತ್ಯರಿಗೆಲ್ಲರಿಗೂ ಯಮನು. ಅವನಿಗೂ ಯಮನಾದ ನಾನಿರುವಾಗ ಹಿಂದೆ ಮಾಡಿದ ಕೆಟ್ಟಕೆಲಸಗಳಿಗೆಲ್ಲಾ ಈಗ ಈ ಕೇಶವನು ಫಲವನ್ನು ಅನುಭವಿಸುತ್ತಾನೆ

೨೫೯. ಬಹು ಸಂತೋಷವಾಯಿತು. ಅಕಸ್ಮಾತ್ತಾಗಿ ವಿಷ್ಣುವು ನನ್ನ ಎದುರಿಗೆ ಸಿಕ್ಕಿದನು. ಈಗ ನನ್ನ ಬಾಣದಿಂದ ಕಿವಿಚಲ್ಪಟ್ಟ ಈತನು ನನ್ನಲ್ಲಿಯೇ ಸೇರಿ ಹೋಗುತ್ತಾನೆ.

೨೬೦. ದಾನವರಿಗೆಲ್ಲಾ ಭಯವನ್ನುಂಟುಮಾಡುವ ಈ ನಾರಾಯಣನನ್ನು ಈಗ ಯುದ್ಧದಲ್ಲಿ ಕೊಂದು ಪೂರ್ವದಲ್ಲಿ ಸತ್ತವರ ಗೌರವಕ್ಕೆ ಪಾತ್ರನಾಗುತ್ತೇನೆ.

ಕ್ಷಿಪ್ರಮೇವ ಹನಿಷ್ಯಾಮಿ ರಣೇ ನಾರಾಯಣಾನುಗಾನ್ ।
ಜಾತ್ಯಂತರಗತೋಽಪ್ಯೇಷಃ ಬಾಧತೇ ದಾನವಾನ್ಮೃಧೇ ॥ ೯೬೧ ॥

ಏಷೋಽನನ್ತಃ ಪುರಾ ಭೂತ್ವಾ ಪದ್ಮನಾಭ ಇತಿ ಶ್ರುತಃ ।
ಜಘಾನೈಕಾರ್ಣವೇ ಘೋರೇ ತಾವುಭೌ ಮಧುಕೈಟಭೌ ॥ ೨೬೨ ॥

ದ್ವಿಧಾಭೂತಂ ವಪುಃಕೃತ್ವಾ ಸಿಂಹಸ್ಯಾರ್ಧಂ ನರಸ್ಯ ಚ ।
ಪಿತರಂ ಮೇ ಜಘಾನೈಕೋ ಹಿರಣ್ಯಕಶಿಪುಂ ಪುರಾ ॥ ೨೬೩ ॥

ಯಂ ಸುತಂ ಗರ್ಭಮಾಧತ್ತ ಅದಿತಿರ್ದೇವತಾರಣಿಃ ।
ತ್ರೀಂಲ್ಲೋಕಾನಾಜಹಾರೈಕಃ ಕ್ರಮಮಾಣಸ್ತ್ರಿಭಿಃ ಕ್ರಮೈಃ ॥ ೨೬೪ ॥

ಭೂಯಸ್ತ್ವಿದಾನೀಂ ಸಂಪ್ರಾಪ್ತೇ ಸಂಗ್ರಾಮೇ ತಾರಕಾಮಯೇ ।
ಮಯಾ ಸಹ ಸಮಾಗಮ್ಯ ಸ ದೇವೋ ವಿನಶಿಷ್ಯತಿ ॥ ೨೬೫ ॥

---

೨೬೧. ಈ ನಾರಾಯಣನನ್ನು ಅನುಸರಿಸುವವರನ್ನೆಲ್ಲಾ ಜಾಗ್ರತೆಯಾಗಿಯೇ ಕೊಂದುಹಾಕುತ್ತೇನೆ. ಈತನು ಬೇರೆ ಜಾತಿಗೆ (ಜನ್ಮಕ್ಕೆ) ಹೋದರೂ ಯುದ್ಧದಲ್ಲಿ ದಾನವರನ್ನು ಬಾಧಿಸುವನು.

೨೬೨. ಈತನೇ ಪೂರ್ವದಲ್ಲಿ ಅನಂತನಾಗಿದ್ದವನು ಪದ್ಮನಾಭನೆಂದೂ ಹೆಸರನ್ನು ಹೊಂದಿದನು. ಘೋರವಾದ ಸಮುದ್ರದಲ್ಲಿ ವಾಸವಾಗಿದ್ದ ಮಧುಕೈಟಭರನ್ನು ಈತನೇ ಕೊಂದವನು.

೨೬೩. ಈತನು ಅರ್ಧ ಸಿಂಹದ ಶರೀರವನ್ನೂ, ಅರ್ಧ ಮನುಷ್ಯನ ಶರೀರವನ್ನೂ ಹೊಂದಿ ನನ್ನ ತಂದೆಯಾದ ಹಿರಣ್ಯಕಶಿಪುವನ್ನು ಹಿಂದೆ ಕೊಂದನು.

೨೬೪. ಅದಿತಿಯು ಈತನನ್ನೇ ಮಗನನ್ನಾಗಿ ಹೊಂದಿದ್ದಳು. ಈತನು ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ಆಕ್ರಮಿಸಿದನು.

೨೬೫. ಈಗ ಒದಗಿರುವ ಈ ತಾರಕನ ಯುದ್ಧದಲ್ಲಿ ನನ್ನೊಡನೆ ಯುದ್ಧಕ್ಕೆ ಸಿಕ್ಕಿ ಈತನು ಈಗ ಸಾಯುತ್ತಾನೆ.

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ಬಹುವಿಧಂ ಕ್ಷಿಪ್ರಂ ನಾರಾಯಣಂ ರಣೇ ।
ವಾಗ್ಭಿರಪ್ರತಿರೂಪಾಭಿರ್ಯುದ್ಧಮೇವಾಭ್ಯರೋಚಯತ್ ॥ ೨೬೬ ॥

ಕ್ಷಿಪ್ಯಮಾಣೋಽಸುರೇಂದ್ರೇಣ ನ ಚುಕೋಪ ಗದಾಧರಃ ।
ಕ್ಷಮಾಬಲೇನ ಮಹತಾ ಸಸ್ಮಿತಂ ಚೇದಮಬ್ರವೀತ್ ॥ ೨೬೭ ॥

॥ ನಾರಾಯಣ ಉವಾಚ ॥

ಅಲ್ಪಂ ದರ್ಪಬಲಂ ದೈತ್ಯ ಸ್ಥಿರಮಕ್ರೋಧಜಂ ಬಲಂ ।
ಹತಸ್ತ್ವಂ ದರ್ಪಜೈರ್ದೋಷೈರ್ಹಿತ್ವಾ ಯೋ ಭಾಷಸೇ ಕ್ಷಮಾಂ ॥ ೨೬೮ ॥

ಅಧರ್ಮಸ್ತ್ವಂ ಮಮ ಮತೋ ಧಿಗೇತತ್ತವ ವಾಗ್ಬಲಂ ।
ಕೇ ತತ್ರ ಪುರುಷಾಸ್ಸನ್ತಿ ಯತ್ರ ಗರ್ಜನ್ತಿ ಯೋಷಿತಃ ॥ ೨೬೯ ॥

---

೨೬೬. ಪುಲಸ್ತ್ಯನು ಹೇಳಿದನು– ಈ ರೀತಿಯಾಗಿ ನಾನಾ ಬಗೆಯಾಗಿ ನಾರಾಯಣನನ್ನು ತಿರಸ್ಕರಿಸುತ್ತ ಯುದ್ಧಮಾಡುವುದಕ್ಕೆ ಇಷ್ಟಪಟ್ಟನು.

೨೬೭. ಈ ರೀತಿ ದೈತ್ಯನಾಥನಾದ ಕಾಲನೇಮಿಯು ತಿರಸ್ಕರಿಸಿ ಮಾತಾಡುತ್ತಿದ್ದರೂ ವಿಷ್ಣುವು ಕೋಪಿಸಿಕೊಳ್ಳಲೇ ಇಲ್ಲ. ಮತ್ತು ಅತಿಯಾದ ಕ್ಷಮಾಗುಣದಿಂದ ನಗುತ್ತ ಇಂತೆಂದನು.

೨೬೮. ನಾರಾಯಣನು ಹೇಳಿದನು—ಎಲೈ ದೈತ್ಯನೇ! ನಿನ್ನ ಈ ದರ್ಪದ ಬಲವು ಅಸದೃಶವಾದುದು. ನೀನು ಕೋಪದಿಂದಲ್ಲದ ಸರಿಯಾದ ಬಲವನ್ನೇ ಹೊಂದಿದ್ದೀಯೆ. ಇಂತಹ ನೀನು ಕ್ಷಮೆಯನ್ನು ಬಿಟ್ಟು ಮಾತನಾಡುತ್ತಿರುವುದರಿಂದ ಈ ಕೊಬ್ಬಿನ ದೋಷದಿಂದಲೇ ನಾಶವಾಗಿದ್ದೀಯೆ.

೨೬೯. ನೀನು ಅಧರ್ಮವುಳ್ಳವನೆಂದು ನನಗೆ ತೋರುತ್ತಿದೆ ನಿನ್ನ ಈ ಹರಟೆಯ ಬಲಕ್ಕೆ ಧಿಕ್ಕಾರವಿರಲಿ. ಹೆಂಗಸರಿಗೆ ಆಶ್ರಯವಾಗಿ ಅವರು ಬೈಯ್ಯುವುದಕ್ಕೆ ಆಶ್ರಯವಾಗಿರುವ ಈ ವಾಗ್ಬಲವನ್ನು ಆಶ್ರಯಿಸಿರುವವರು ಪುರುಷರಾಗಬಲ್ಲರೇ ?

ಅಹಂ ತ್ವಾಂ ದೈತ್ಯ ಪಶ್ಯಾಮಿ ಪೂರ್ವೇಷಾಂ ಮಾರ್ಗಗಾಮಿನಂ ।
ಪ್ರಜಾಪತಿಕೃತಂ ಸೇತುಂ ತ್ಯಕ್ತ್ವಾ ಕಃ ಸ್ವಸ್ತಿಮಾನ್ಭವೇತ್ ॥ ೨೭೦ ॥

ಅದ್ಯ ತ್ವಾಂ ನಾಶಯಿಷ್ಯಾಮಿ ದೇವವ್ಯಾಪಾರಘಾತಕಂ ।
ಸ್ವೇಷು ಸ್ವೇಷು ಚ ಸ್ಥಾನೇಷು ಸ್ಥಾಪಯಿಷ್ಯಾಮಿ ದೇವತಾಃ ॥ ೨೭೧ ॥

॥ ಪುಲಸ್ತ್ಯ ಉವಾಚ ॥

ಏವಂ ಬ್ರುವತಿ ವಾಕ್ಯೇ ತು ಮೃಧೇ ಶ್ರೀವತ್ಸಧಾರಿಣಿ ।
ಜಹಾಸ ದಾನವಃ ಕ್ರೋಧಾದ್ಧಸ್ತಾಂಶ್ಚಕ್ರೇ ಚ ಸಾಯುಧಾನ್ ॥ ೨೭೨ ॥

ಸ ಬಾಹುಶತಮುದ್ಯಮ್ಯ ಸರ್ವಾಸ್ತ್ರಘಗಣಾನ್ರಣೇ ।
ಕ್ರೋಧಾದ್ದ್ವಿಗುಣರಕ್ತಾಕ್ಷೋ ವಿಷ್ಣೋರ್ವಕ್ಷಸ್ಯತಾಡಯತ್ ॥ ೨೭೩ ॥

ದಾನವಾಶ್ಚಾಪಿ ಸಮರೇ ಮಯತಾರಪುರೋಗಮಾಃ ।
ಉದ್ಯತಾಯುಧನಿಸ್ತ್ರಿಂಶಾ ವಿಷ್ಣುಮಭ್ಯದ್ರವನ್ರಣೇ ॥ ೨೭೪ ॥

---

೨೭೦. ಎಲೈ ದೈತ್ಯನೇ! ನೀನು ಹಿಂದಿನವರ ದಾರಿಯನ್ನು ಅನುಸರಿಸುತ್ತೀಯೆ. ಎಂದು ನನಗೆ ತೋರುತ್ತದೆ. ಬ್ರಹ್ಮನು ಮಾಡಿದ ನಿಯಮವನ್ನು ಮೀರಿ ಯಾವನು ತಾನೇ ಮಂಗಳವನ್ನು ಹೊಂದಿಯಾನು?

೨೭೧. ದೇವತೆಗಳ ವ್ಯಾಪಾರವನ್ನು ನಾಶಮಾಡಿದ ನಿನ್ನನ್ನು ಈಗಲೇ ಕೊಲ್ಲುತ್ತೇನೆ. ದೇವತೆಗಳನ್ನು ಅವರವರ ಸ್ಥಾನಗಳಲ್ಲಿ ಮತ್ತೆ ಇಡುತ್ತೇನೆ.

೨೭೨. ಪುಲಸ್ತ್ಯನು ಹೇಳಿದನು—ಶ್ರೀವತ್ಸಧಾರಿಯಾದ ಶ್ರೀಕೃಷ್ಣನು ಈ ರೀತಿ ಯುದ್ಧದಲ್ಲಿ ಹೇಳುತ್ತಿರಲಾಗಿ ಆ ಕಾಲನೇಮಿಯು ಕೋಪದಿಂದ ನಗುತ್ತಾ ಕೈಗೆ ಆಯುಧಗಳನ್ನು ತೆಗೆದುಕೊಂಡನು.

೨೭೩. ಆಗ ಆ ದಾನವನು ನೂರು ತೋಳುಗಳನ್ನೂ ಮೇಲಕ್ಕೆತ್ತಿ ರಥಗಳೆಲ್ಲವನ್ನೂ ನಾಶಮಾಡುತ್ತಾ ಕೋಪದಿಂದ ಕಣ್ಣುಗಳನ್ನು ಮತ್ತೂ ಕೆಂಪಗೆ ಮಾಡಿಕೊಂಡು ಈ ವಿಷ್ಣುವಿಗೆ ಎದೆಯಮೇಲೆ ಹೊಡೆದನು.

೨೭೪. ಮಯತಾರನೇ ಮುಂತಾದ ದಾನವರೂ ಕೂಡ ಆಯುಧಗಳನ್ನು ಮೇಲಕ್ಕೆತ್ತಿಕೊಂಡು ಯುದ್ಧದಲ್ಲಿ ವಿಷ್ಣುವನ್ನು ಎದುರಿಸಿದರು.

ಸ ತಾಡ್ಯಮಾನೋತಿಬಲೈರ್ದೈತ್ಯೈಃ ಸರ್ವಾಯುಧೋದ್ಯತೈಃ ।
ನ ಚಚಾಲ ತತೋ ಯುದ್ಧೇ ಕಂಪ್ಯಮಾನ ಇವಾಚಲಃ ॥ ೨೭೫ ॥

ಸಂಯುಕ್ತಶ್ಚ ಸುಪರ್ಣೇನ ಕಾಲನೇಮಿರ್ಮಹಾಸುರಃ ।
ಸರ್ವಪ್ರಾಣೇನ ಮಹತೀಂ ಗದಾಮುದ್ಯಮ್ಯ ಬಾಹುಭಿಃ ॥ ೨೭೬ ॥

ಘೋರಾಂ ಜ್ವಲಂತೀ ಮುಮುಚೇ ಸಂರಬ್ಧೋ ಗರುಡೋಪರಿ ।
ಕರ್ಮಣಾ ತೇನ ದೈತ್ಯಸ್ಯ ವಿಷ್ಣುರ್ವಿಸ್ಮಯಮಾಗಮತ್ ॥ ೨೭೭ ॥

ಯದಾ ತೇನ ಸುಪರ್ಣಸ್ಯ ಪತಿತಾ ಮೂರ್ಧ್ನಿ ಸಾ ಗದಾ ।
ಸುಪರ್ಣಂ ವ್ಯಥಿತಂ ದೃಷ್ಟ್ವಾ ಕ್ಷತಂ ಚ ವಪುರಾತ್ಮನಃ ॥ ೨೭೮ ॥

ಕ್ರೋಧಸಂರಕ್ತನಯನೋ ವೈಕುಂಠಶ್ಚಕ್ರಮಾದದೇ ।
ವ್ಯವರ್ಧತ ಚ ವೇಗೇನ ಸುಪರ್ಣೇನ ಸಮಂ ವಿಭುಃ ॥ ೨೭೯ ॥

ಭುಜಾಶ್ಚಾಸ್ಯ ವ್ಯವರ್ಧಂತ ಪ್ರಾಪ್ತವಂತೋ ದಿಶೋ ದಶ ।
ವಿದಿಶಶ್ಚೈವ ಖಂ ಚಾಪಿ ಗಾಂ ಚೈವ ಪ್ರತ್ಯಪೂರಯನ್ ॥ ೨೮೦ ॥

---

೨೭೫. ಅತಿ ಬಲಿಷ್ಠರಾದ ಆ ದಾನವರು ಎಷ್ಟು ಆಯುಧಗಳಿಂದ ಹೊಡೆದರೂ ಪರ್ವತದಂತೆ ಅಲ್ಲಾಡದೆ ಯುದ್ಧದಲ್ಲಿ ನಿಂತನು.

೨೭೬-೨೭೭. ಆಗ ಕಾಲನೇಮಿಯು ಗರುಡನಿಗೆ ಎದುರಾಗಿ ಬಂದು ತನ್ನ ಶಕ್ತಿಯೆಲ್ಲವನ್ನೂ ತೆಗೆದುಕೊಂಡು ತೋಳುಗಳಿಂದ ಗದೆಯನ್ನು ಎತ್ತಿ ಜ್ವಲಿಸುತ್ತಿರುವ ಆ ಗದೆಯನ್ನು ಗರುಡನ ಮೇಲೆ ಬಿಟ್ಟನು. ಇದರಿಂದ ವಿಷ್ಣುವು ಆಶ್ಚರ್ಯಪಟ್ಟು ಬೆರಗಾದನು.

೨೭೮-೨೭೯. ಕಾಲನೇಮಿಯು ಎಸೆದ ಆ ಗದೆಯು ಗರುಡನ ಮೇಲೆ ಬೀಳಲು ಅವನು ವ್ಯಥೆಪಟ್ಟನು. ಮತ್ತು ತನ್ನ ದೇಹಕ್ಕೂ ಘಾಯವಾಯಿತು. ಅದನ್ನು ನೋಡಿ ವಿಷ್ಣುವು ಕೋಪಗೊಂಡು ಕಣ್ಣನ್ನು ಕೆಂಪಗೆ ಮಾಡಿಕೊಂಡು ಚಕ್ರವನ್ನು ಹಿಡಿದನು. ಆಗ ಆ ಗರುಡ ವಿಷ್ಣುಗಳಿಬ್ಬರೂ ವೇಗದಿಂದ ಉಬ್ಬಿ ದೊಡ್ಡವರಾದರು.

೨೮೦. ಆಗ ಆ ವಿಷ್ಣುವಿನ ಭುಜಗಳು ಬೆಳೆದು ಹತ್ತು ದಿಕ್ಕುಗಳನ್ನೂ ವ್ಯಾಪಿಸಿಕೊಂಡುವು. ಮತ್ತು ಭೂಮ್ಯಾಕಾಶಗಳನ್ನೂ ತುಂಬಿದುವು.

ವವೃಧೇ ಸ ಪುನರ್ಲೋಕಾನ್ಕ್ರಾಂತುಕಾಮ ಇವೌಜಸಾ ।
ಜಯಶಬ್ದೋ ಸುರೇಂದ್ರಾಣಾಂ ವರ್ಧಮಾನೇ ನಭಸ್ಥಲೇ ॥ ೨೮೧ ॥

ಋಷಯಸ್ಸಹಗಂಧರ್ವಾಸ್ತುಷ್ಟುವುರ್ಮಧುಸೂದನಂ ।
ಸ ದ್ಯಾಂ ಕಿರೀಟೇನ ಲಿಖನ್ ಶಿರಸಾ ಭಾಸುರೇಣ ಚ ॥ ೨೮೨ ॥

ಪದ್ಭ್ಯಾಮಾಕ್ರಮ್ಯ ವಸುಧಾಂ ದಿಶಃ ಪ್ರಚ್ಛಾದ್ಯ ಬಾಹುಭಿಃ ।
ಸ ಸೂರ್ಯಕರತುಲ್ಯಾಭಂ ಸಹಸ್ರಾರಮರಿಕ್ಷಯಂ ॥ ೨೮೩ ॥

ದೀಪ್ತಾಗ್ನಿ ಸದೃಶಂ ಘೋರಂ ದರ್ಶನೇನ ಸುದರ್ಶನಂ ।
ಸ್ವರ್ಣರೇಣುಪರ್ಯಂತಂ ವಜ್ರನ್ಯಾಸಭಯಾವಹಂ ॥ ೨೮೪ ॥

ಮೇದೋಽಸ್ಥಿಮಜ್ಜಾರುಧಿರೈಃ ಸಿಕ್ತಂ ದಾನವಸಂಭವೈಃ ।
ಅದ್ವಿತೀಯಪ್ರಹರಣಂ ಕ್ಷುರಪರ್ಯಂತಮಂಡಲಂ ॥ ೨೮೫ ॥

ಸುಗ್ದಾಮಮಾಲಾನಿಚಿತಂ ಕಾಮಗಂ ಕಾಮರೂಪಿ ಚ ।
ಸ್ವಯಂ ಸ್ವಯಂಭುವಾ ಸೃಷ್ಟಂ ಭಯದಂ ಸರ್ವವಿದ್ವಿಷಾಂ ॥ ೨೮೬ ॥

---

೨೮೧-೨೮೩. ಆಗ ಲೋಕಗಳನ್ನು ತನ್ನ ತೇಜಸ್ಸಿನಿಂದ ಆಕ್ರಮಿಸುವವನಂತೆ ಬೆಳೆದನು. ಅಂತರಿಕ್ಷದಲ್ಲಿ ದೇವತೆಗಳು ಜಯಜಯ ಎಂಬ ಶಬ್ದವನ್ನು ಹೆಚ್ಚು ಹೆಚ್ಚಾಗಿ ಮಾಡಿದರು. ಋಷಿಗಳೂ, ಗಂಧರ್ವರೂ, ಆ ವಿಷ್ಣುವನ್ನು ಸ್ತುತಿಸಿದರು. ಹೀಗೆ ಆತನು ಬೆಳೆಯುತ್ತಾ ಕಿರೀಟದಿಂದಲೂ, ತಲೆಯಿಂದಲೂ, ಅಂತರಿಕ್ಷವನ್ನು ಚುಚ್ಚುತ್ತಾ, ಕಾಲುಗಳಿಂದ ಭೂಮಿಯನ್ನಾಕ್ರಮಿಸಿ ದಿಕ್ಕುಗಳನ್ನು ತೋಳುಗಳಿಂದ ಮುಚ್ಚುವಂತೆ ಬೆಳೆದನು. ಹೀಗೆ ಬೆಳೆದ ಆತನು ಸೂರ್ಯನ ತೇಜಸ್ಸಿನಂತೆ ತೇಜಸ್ಸುಳ್ಳ, ಸಾವಿರ ಹಾರೆಕಾಲುಗಳುಳ್ಳ, ಅರಿಯನ್ನು ನಾಶಮಾಡುವ, ಉರಿಯುತ್ತಿರುವ ಬೆಂಕಿಯಂತಿರುವ, ಘೋರವಾದ, ನೋಡಲು ಚೆನ್ನಾಗಿರುವ, ಚಕ್ರವನ್ನು ಹಿಡಿದನು

೨೮೪-೨೮೬. ಚಿನ್ನದ ರೇಣುಗಳೇ ಕೊನೆಯಲ್ಲಿ ಉಳ್ಳ, ವಜ್ರದ ಪೆಟ್ಟಿನಂತೆ ಭಯಂಕರವಾದ ಪೆಟ್ಟುಳ್ಳ, ದಾನವರಿಂದ ಹೊರಟ ಕೊಬ್ಬು, ಮೂಳೆ, ಮೇದಸ್ಸು ರಕ್ತಗಳಿಂದ ನನೆದಿರುವ, ಉತ್ತಮೋತ್ತಮವಾದ ಹೊಡೆತವುಳ್ಳ, ಆಯುಧವಾದ, ಹರಿತವಾಗಿರುವ ಅಂಚುಗಳುಳ್ಳ, ಹೂಮಾಲೆಗಳಿಂದ ಕೂಡಿರುವ, ಯಥೇಚ್ಛವಾಗಿ ಹೋಗತಕ್ಕ, ಇಷ್ಟಬಂದ ರೂಪವನ್ನು ಹೊಂದುವ, ಬ್ರಹ್ಮನು ತಾನಾಗಿಯೇ ಸೃಷ್ಟಿಸಿರುವ, ಶತ್ರುಗಳಿಗೆಲ್ಲಾ ಭಯಂಕರವಾದ, ಮಹರ್ಷಿಗಳ ಕೋಪದಿಂದ ಕೂಡಿದ, ಯುದ್ಧದಲ್ಲಿ ಕೊಬ್ಬಿರುವ, ಆ ಸುದರ್ಶನವನ್ನು ಹಿಡಿದನು.

ಮಹರ್ಷಿರೋಷ್ಯೈರಾವಿಷ್ಟಂ ನಿತ್ಯಮಾಹವದರ್ಪಿತಂ ।
ಕ್ಷೇಪಣಾದ್ಯಸ್ಯ ಮುಹ್ಯಂತಿ ಲೋಕಸ್ಸಸ್ಥಾವರಂಗಮಾಃ ॥ ೨೮೭ ॥

ಕ್ರವ್ಯಾದಾನಿ ಚ ಭೂತಾನಿ ತೃಪ್ತಿಂ ಯಾಂತಿ ಮಹಾಮೃಥೇ ।
ತದಪ್ರತಿಮಕರ್ಮಾಣಂ ಸಮಾನಂ ಸೂರ್ಯವರ್ಚಸಾ ॥ ೨೮೮ ॥

ಚಕ್ರಮುದ್ಯಮ್ಯ ಸಮರೇ ಕೋಪದೀಪ್ತೋ ಗದಾಧರಃ ।
ನಷ್ಟದಾನವತೇಜಾಸ್ಸಃ ಸಮರೇ ಸ್ವೇನ ತೇಜಸಾ ॥ ೨೮೯ ॥

ಚಿಚ್ಛೇದ ಬಾಹೂಂಶ್ಚಕ್ರೇಣ ಸಮರೇ ಕಾಲನೇಮಿನಃ ।
ತಚ್ಚ ವಕ್ತ್ರಶತಂ ಘೋರಂ ಸಾಗ್ನಿಚೂರ್ಣಾಟ್ಟಹಾಸಿ ವೈ ॥ ೨೯೦ ॥

ತಸ್ಯ ದೈತ್ಯಸ್ಯ ಚಕ್ರೇಣ ಪ್ರಮಮಾಥ ಬಲಾದ್ಧರಿಃ ।
ಸಚ್ಛಿನ್ನಬಾಹುರ್ವಿಶಿರಾ ನ ಪ್ರಕಾಶತ ದಾನವಃ ॥ ೨೯೧ ॥

ಕಬಂಧಾವಸ್ಥಿತಸ್ಸಂಖ್ಯೇ ವಿಶಾಖ ಇವ ಪಾದಪಃ ।
ತಂ ದೈತ್ಯೇಯಮಹಾಪ್ಲಕ್ಷಂ ವಾಯೋಃ ಕೃತ್ವಾ ಸಮಂ ಜವಂ ॥ ೨೯೨ ॥

---

೨೮೭–೨೮೮. ಯಾವ ಚಕ್ರವನ್ನು ಬಿಡುವುದರಿಂದ ಸ್ಥಾವರ ಜಂಗಮಾತ್ಮಕವಾದ ಲೋಕವೆಲ್ಲವೂ ಮೂರ್ಛೆಹೊಂದುತ್ತವೆಯೋ ಮತ್ತು ರಾಕ್ಷಸರು ಭೂತಗಳು ಕೂಡ ಯಾವುದರಿಂದ (ಯಾವುದರ ಯುದ್ಧದಿಂದ) ತೃಪ್ತಿಹೊಂದುತ್ತವೆಯೋ ಅಂತಹ ಅಸಾಧ್ಯ ಕೆಲಸವನ್ನು ಮಾಡುವ, ಸೂರ್ಯನ ತೇಜಸ್ಸಿನಂತಿರುವ ಚಕ್ರವನ್ನು ಕೋಪದಿಂದ ಕೂಡಿ ವಿಷ್ಣುವು ಎತ್ತಿ ಹಿಡಿದನು.

೨೮೯. ಹೀಗೆ ಎತ್ತಿಹಿಡಿದು ತನ್ನ ಶಕ್ತಿಯಿಂದ ದಾನವರ ಶಕ್ತಿಯನ್ನೆಲ್ಲಾ ಕುಂದಿಸಿ ಆ ಚಕ್ರದಿಂದ ಕಾಲನೇಮಿಯ ತೋಳುಗಳನ್ನು ಕತ್ತರಿಸಿದನು.

೨೯೦–೨೯೧. ಅಗ್ನಿಯನ್ನುಗುಳುತ್ತಿರುವ ನಗುವಿಕೆಯುಳ್ಳ. ಆ ಕಾಲನೇಮಿಯ ನೂರು ಮುಖಗಳನ್ನು ವಿಷ್ಣುವು ಕತ್ತರಿಸಿದನು. ಆ ರೀತಿ ಕತ್ತರಿಸಲ್ಪಟ್ಟ ತೋಳು ತಲೆಗಳುಳ್ಳ ಆ ದಾನವನು ಕಳೆಗುಂದಿದನು.

೨೯೨–೨೯೩. ಈ ರೀತಿಯಾದ ಕಾಲನೇಮಿಯು ಬರಿಯ ಮುಂಡವುಳ್ಳವನಾಗಿ ಕೊಂಬೆಗಳಿಲ್ಲದ ಮರದಂತಿದ್ದನು. ಆ ದಾನವನೆಂಬ ದೊಡ್ಡ ಬಸುರಿಯ ಮರ

ಉರಸಾ ತಾಡಯಾಮಾಸ ಗರುಡಃ ಕಾಲನೇಮಿನಂ ।
ಸ ತಸ್ಯ ದೇಹೋ ವಿಮುಖೋ ವಿಬಾಹುಃ ಖಾತ್ಪರಿಭ್ರಮನ್ ॥ ೨೯೩ ॥

ನಿಪಪಾತ ದಿವಂ ತ್ಯಕ್ತ್ವಾ ಕ್ಷೋಭಯನ್ಧರಣೀತಲಂ ।
ತಸ್ಮಿನ್ನಿಪತಿತೇ ದೈತ್ಯೇ ದೇವಾಸ್ಸರ್ಷಿಗಣಾಸ್ತಥಾ ॥ ೨೯೪ ॥

ಸಾಧುಸಾಧ್ವಿತಿ ವೈಕುಂಠಂ ಸಮೇತಾಃ ಪ್ರತ್ಯಪೂಜಯನ್ ।
ಅಪರೇ ಯೇ ತು ದೈತ್ಯಾ ವೈ ಯುದ್ಧೇ ದೃಷ್ಟಪರಾಕ್ರಮಾಃ ॥ ೨೯೫ ॥

ತೇ ಸರ್ವೇ ಬಾಹುಭಿರ್ವ್ಯಾಪ್ತಾ ನ ಶೇಕುಶ್ಚಲಿತುಂ ರಣೇ ।
ಕಾಂಶ್ಚಿತ್ಕೇಶೇಷು ಜಗ್ರಾಹ ಕಾಂಶ್ಚಿತ್ಕಂಠೇಷ್ವಪೀಡಯತ್ ॥ ೨೯೬ ॥

ಚಕರ್ತ ಕಸ್ಯಚಿದ್ವಕ್ತ್ರಮುಭ್ಯೇಗೃಹ್ಣಾದಥಾಪರಂ ।
ತೇ ಗದಾಚಕ್ರನಿರ್ದಗ್ಧಾ ಗತಸತ್ವಾ ಗತಾಸವಃ ॥ ೨೯೭ ॥

ಗಗನಾದ್ಭ್ರಷ್ಟಸರ್ವಾಂಗಾ ನಿಪೇತುರ್ಧರಣೀತಲೇ ।
ತೇಷು ಸರ್ವೇಷು ದೈತ್ಯೇಶಃ ಹತೇಷು ಪುರುಷೋತ್ತಮಃ ॥ ೨೯೮ ॥

---

ವನ್ನು ವಾಯುವಿನ ವೇಗವನ್ನು ಹೊಂದಿ ಗರುಡನು ಎದೆಗೆ ಹೊಡೆದನು. ಆಗ ಮೋರೆಯಿಲ್ಲದ ಆ ದೈತ್ಯನ ದೇಹವು ಅಂತರಿಕ್ಷದಿಂದಲೇ ಸುತ್ತುತ್ತ ಅಂತರಿಕ್ಷವನ್ನು ಬಿಟ್ಟು ಭೂಮಿಯಲ್ಲಿ ಬಿದ್ದು ಭೂಮಿಯನ್ನು ನಡುಗಿಸಿತು.

೨೯೪. ಈ ರೀತಿ ಆ ಕಾಲನೇಮಿಯು ಬೀಳಲು, ದೇವತೆಗಳು, ಋಷಿಗಳು ಕೂಡಿಕೊಂಡು ಒಟ್ಟಿಗೆ ಸಾಧು ಸಾಧು ಎಂದು ಆ ವಿಷ್ಣುವನ್ನು ಅಭಿನಂದಿಸಿದರು.

೨೯೫. ಯುದ್ಧದಲ್ಲಿ ಪರಾಕ್ರಮಿಗಳಾದ ಉಳಿದ ದೈತ್ಯರು ಆ ವಿಷ್ಣುವಿನ ಬಾಹುಗಳೊಳಗೆ ಸಿಕ್ಕಿಬಿದ್ದು ಯುದ್ಧದಿಂದ ಹೊರಗೆ ಹೋಗಲಾರದವರಾದರು.

೨೯೬-೨೯೭. ವಿಷ್ಣುವು ಕೆಲವರ ಜುಟ್ಟನ್ನು ಹಿಡಿದು ಕೊಂದನು. ಕೆಲವರ ಕತ್ತನ್ನು ಹಿಡಿದು ಹಿಸುಕಿ ಕೊಂದನು ಕೆಲವರ ಕತ್ತನ್ನು ಕತ್ತರಿಸಿದನು. ಕೆಲವರನ್ನು ಸೊಂಟದಲ್ಲಿ ಹಿಡಿದು ಕೊಂದನು. ಇವರೆಲ್ಲರನ್ನೂ ಗದೆ ಚಕ್ರಗಳಿಂದ ಹೊಡೆದನು. ಅವರು ಬಲ ಪ್ರಾಣಗಳನ್ನೂ ಕಳೆದುಕೊಂಡು, ಅವಯವಗಳನ್ನೂ ಕಳೆದುಕೊಂಡು ಅಂತರಿಕ್ಷದಿಂದ ಭೂಮಿಗೆ ಬಿದ್ದರು.

೨೯೮. ಈ ರೀತಿ ಆ ದೈತ್ಯರೆಲ್ಲರೂ ನಾಶವಾಗಲು ವಿಷ್ಣುವು ಇಂದ್ರನಿಗೆ ಹಿತವನ್ನು ಮಾಡಿ ಕೃತಾರ್ಥನಾದನು.

ಶಕ್ರಪ್ರಿಯಂ ತತಃ ಕೃತ್ವಾ ಕೃತಕರ್ಮಾ ಗದಾಧರಃ ।
ತಸ್ಮಿನ್ನಿಮರ್ದೇ ಸಂವೃತ್ತೇ ಸಂಗ್ರಾಮೇ ತಾರಕಾಮಯೇ ॥ ೨೯೯ ॥

ತಂ ಚ ದೇಶಂ ಜಗಾಮಾಶು ಬ್ರಹ್ಮಾ ಲೋಕಪಿತಾಮಹಃ ।
ಸರ್ವೈರ್ಬ್ರಹ್ಮರ್ಷಿಭಿಸ್ಸಾರ್ಧಂ ಗಂಧರ್ವಾಪ್ಸರಸಾಂ ಗಣೈಃ ॥
ದೇವದೇವಂ ಹರಿಂ ದೇವಃ ಪೂಜಯನ್ವಾಕ್ಯಮಬ್ರವೀತ್ ॥ ೩೦೦ ॥

॥ ಬ್ರಹ್ಮೋವಾಚ ॥

ಕೃತಂ ದೇವ ಮಹತ್ಕರ್ಮ ಸುರಾಣಾಂ ಶಲ್ಯಮುದ್ಧೃತಂ ।
ನಿಧನೇನ ಚ ದೈತ್ಯಾನಾಂ ವಯಂ ಚ ಪರಿತೋಷಿತಾಃ ॥ ೩೦೧ ॥

ಯೋಽಯಂ ತ್ವಯಾ ಹತೋ ವಿಷ್ಣೋ ಕಾಲನೇಮಿರ್ಮಹಾಸುರಃ ।
ತ್ವಮೇತಸ್ಯ ಋತೇಽಹ್ಯಸ್ಮಿನ್ನಾಪಿಸ್ತಾ ಕಶ್ಚಿನ್ನ ವಿದ್ಯತೇ ॥ ೩೦೨ ॥

ಏಷ ದೇವಾನ್ಪರಿಭವನ್ ಲೋಕಾಂಶ್ಚ ಸಚರಾಚರಾನ್ ।
ಋಷೀಣಾಂ ಕದನಂ ಕೃತ್ವಾ ಮಾಮಪಿ ಪ್ರತಿಗರ್ಜತಿ ॥ ೩೦೩ ॥

---

೨೯೯-೩೦೦. ಈ ರೀತಿ ತಾರಕನ ಯುದ್ಧವು ಘೋರವಾಗಿ ನಡೆದ ಮೇಲೆ ಲೋಕಪಿತಾಮಹನಾದ ಬ್ರಹ್ಮನು ಬ್ರಹ್ಮರ್ಷಿಗಳು, ಗಂಧರ್ವರು, ಅಪ್ಸರಸ್ಸುಗಳೊಡನೆ ಈ ಸ್ವಾಮಿಯಾದ ಹರಿಯ ಬಳಿಗೆ ಬಂದು ಅವನನ್ನು ಪೂಜಿಸಿ ಗೌರವಿಸಿ ಇಂತೆಂದನು.

೩೦೧. ಬ್ರಹ್ಮನು ಹೇಳಿದನು—ಎಲೈ ಸ್ವಾಮಿಯೇ! ದೊಡ್ಡ ಕೆಲಸವನ್ನು ಮಾಡಿದೆ. ದೇವತೆಗಳ ತೊಂದರೆಯನ್ನು ತಪ್ಪಿಸಿದೆ ಆ ದೈತ್ಯರು ಸತ್ತುದರಿಂದ ನಾನೂ ಸಂತೋಷಗೊಂಡೆನು

೩೦೨. ಎಲೈ ವಿಷ್ಣುವೇ! ನೀನು ಈ ಕಾಲನೇಮಿಯನ್ನು ಕೊಂದುಹಾಕಿದೆ ಯಷ್ಟೆ! ನಿನ್ನ ಹೊರತಾಗಿ ಈತನನ್ನು ಕೊಲ್ಲುವವನು ಮತ್ತೊಬ್ಬನಿಲ್ಲ.

೩೦೩. ಈತನು ದೇವತೆಗಳನ್ನೂ, ಚರಾಚರಾತ್ಮಕವಾದ ಲೋಕವನ್ನೂ, ತಿರಸ್ಕರಿಸಿ ಸೋಲಿಸುತ್ತ ಋಷಿಗಳೊಡನೆಯೂ, ಯುದ್ಧಮಾಡುತ್ತ ನನಗೂ ಎದುರು ವಾದಿಸುತ್ತಿದ್ದನು.

ತದನೇನ ತ್ವದೀಯೇನ ಪರಿತುಷ್ಟಾಸ್ಮ ಕರ್ಮಣಾ ।
ಯದಯಂ ಕಾಲಕಲ್ಪಸ್ತೇ ಕಾಲನೇಮಿರ್ನಿಪಾತಿತಃ ॥ ೩೦೪ ॥

ತದಾಗಚ್ಛಸ್ವ ಭದ್ರಂ ತೇ ಗಚ್ಛಾಮಿ ದಿವಮುತ್ತಮಾಂ ।
ಬ್ರಹ್ಮರ್ಷಯಸ್ತ್ವಾಂ ತತ್ರಸ್ಥಾ ಪ್ರತೀಕ್ಷಂತೇ ಸದೋಗತಾಃ ॥ ೩೦೫ ॥

ಕಂ ಚಾಹಂ ತವ ದಾಸ್ಯಾಮಿ ವರಂ ವರಭೃತಾಂ ವರ ।
ಸ್ವಸ್ಥಾನಸ್ಥೇಷು ದೇವೇಷು ತೇಷಾಂ ಚ ವರದೋ ಭವಾನ್ ॥ ೩೦೬ ॥

ನಿರ್ಯಾತಮೇತತ್ತ್ರೈಲೋಕ್ಯಂ ಸ್ಥಿತಂ ನಿಹತಕಂಟಕಂ ।
ಅಸ್ಮಿನ್ನೇವಮ್ಮೃಧೇ ವಿಷ್ಣೋ ಶಕ್ರಾಯ ಸುಮಹಾತ್ಮನೇ ॥ ೩೦೭ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೋ ಭಗವತಾ ಬ್ರಹ್ಮಣಾ ಹರಿರವ್ಯಯಃ ।
ದೇವಾನ್ಶಕ್ರ ಮುಖಾನ್ಸರ್ವಾನುವಾಚ ಶುಭಯಾ ಗಿರಾ ॥ ೩೦೮ ॥

---

೩೦೪. ನಿನಗೂ ಕೂಡ ಯಮನಂತಿದ್ದ ಕಾಲನೇಮಿಯನ್ನು ಕೊಂದೆಯಲ್ಲ! ಈ ನಿನ್ನ ಕೆಲಸದಿಂದ ನಾವು ಸಂತೋಷಪಟ್ಟೆವು.

೩೦೫. ನಾನು ಸ್ವರ್ಗಕ್ಕೆ ಹೋಗುತ್ತೇನೆ. ನೀನೂ ಅಲ್ಲಿಗೆ ಬಾ. ಅಲ್ಲಿದ್ದುಕೊಂಡು ಬ್ರಹ್ಮರ್ಷಿಗಳು ಸಭೆಯಲ್ಲಿ ನಿನ್ನನ್ನು ನಿರೀಕ್ಷಿಸುತ್ತಿದ್ದಾರೆ.

೩೦೬. ವರವನ್ನು ಕೊಡುವವರಲ್ಲಿ ಅಗ್ರಗಣ್ಯನೇ! ನಿನಗೆ ನಾನು ಯಾವ ವರವನ್ನು ಕೊಡಲಿ? ದೇವತೆಗಳನ್ನು ಅವರವರ ಜಾಗಗಳಲ್ಲಿ ಮತ್ತೆ ಇಟ್ಟು ಅವರಿಗೆ ವರವನ್ನು ಕೊಡುವವನಾಗಿದ್ದೀಯೆ.

೩೦೭. ಎಲೈ ವಿಷ್ಣುವೇ! ಈ ಯುದ್ಧದಲ್ಲಿ ಮಹಾತ್ಮನಾದ ಇಂದ್ರನಿಗೆ ಈ ಮೂರು ಲೋಕವನ್ನೂ ಶತ್ರುಗಳಿಲ್ಲದ್ದನ್ನಾಗಿ ಮಾಡಿ ಮತ್ತೆ ಕೊಟ್ಟಿದ್ದೀಯೆ

೩೦೮. ಪುಲಸ್ತ್ಯನು ಹೇಳಿದನು—ಬ್ರಹ್ಮನು ಹೀಗೆಂದು ಹೇಳುತ್ತಲೂ, ಅವ್ಯಯನಾದ ಹರಿಯು ಇಂದ್ರನೇ ಮುಂತಾದ ದೇವತೆಗಳನ್ನು ಕುರಿತು ಇಂತೆಂದನು.

॥ ವಿಷ್ಣುರುವಾಚ ॥

ಶ್ರೂಯತಾಂ ತ್ರಿದಶಾಸ್ಸರ್ವೇ ಯಾವಂತೋಽತ್ರಸಮಾಗತಾಃ
ಶ್ರವಣಾವಹಿತೈಶ್ಶ್ರೋತ್ರೈಃ ಪುರಸ್ಕೃತ್ಯ ಪುರಂದರಂ ॥ ೩೦೯ ॥

ಅಸ್ಮಾಭಿಸ್ಸಮರೇ ಸರ್ವೇ ಕಾಲನೇಮಿಮುಖಾ ಹತಾಃ ।
ದಾನವಾ ವಿಕ್ರಮೋಪೇತಾಶ್ಶಕ್ರಾದಪಿ ಮಹತ್ತರಾಃ ॥ ೩೧೦ ॥

ಅಸ್ಮಿನ್ಮಹತಿ ಸಂಗ್ರಾಮೇ ದ್ವಾವೇವ ತು ವಿನಿಸ್ಸೃತೌ ।
ವಿರೋಚನಸ್ತು ದೈತೇಯಃ ಸ್ವರ್ಭಾನುಶ್ಚ ಮಹಾಬಲಃ ॥ ೩೧೧ ॥

ಸ್ವಾಂ ದಿಶಂ ಭಜತಾಂ ಶಕ್ರೋ ದಿಶಂ ವರುಣ ಏವ ಚ ।
ಯಾಮ್ಯಾಂ ಯಮಃ ಪಾಲಯತಾಮುತ್ತರಾಂ ಚ ಧನಾಧಿಪಃ ॥ ೩೧೨ ॥

ಆಜ್ಯಭಾಗಾಃ ಪ್ರವರ್ತಂತಾಂ ಸದಸ್ಯೈರಭಿ ಪೂಜಿತಾಃ ।
ಹೂಯಂತಾಮಗ್ನಯೋಽವಿಪ್ರೈರ್ವೇದದೃಷ್ಟೇನ ಕರ್ಮಣಾ ॥ ೩೧೩ ॥

---

೩೦೯-೩೧೦. ವಿಷ್ಣುವು ಹೇಳಿದನು—ಇಲ್ಲಿ ಬಂದಿರುವ ದೇವತೆಗಳೆಲ್ಲರೂ ಇಂದ್ರನನ್ನು ಮುಂದುಮಾಡಿಕೊಂಡು ಕಿವಿಗೊಟ್ಟು ಕೇಳಿರಿ. ಪರಾಕ್ರಮವುಳ್ಳ ಇಂದ್ರನಿಗಿಂತಲೂ ಶೂರರಾದ ಕಾಲನೇಮಿ ಮುಂತಾದವರನ್ನು ಯುದ್ಧದಲ್ಲಿ ಕೊಂದೆನು.

೩೧೧. ಈ ದೊಡ್ಡ ಯುದ್ಧದಲ್ಲಿ ಮಹಾಬಲಿಷ್ಠರಾದ ವಿರೋಚನ ಸ್ವರ್ಭಾನು ಗಳಿಬ್ಬರೂ ಉಳಿದಿದ್ದಾರೆ.

೩೧೨. ಇಂದ್ರನು ತನ್ನ ದಿಕ್ಕನ್ನು ಹೊಂದಲಿ. ವರುಣನು ತನ್ನ ದಿಕ್ಕಾದ ಪಶ್ಚಿಮವನ್ನೂ, ಯಮನು ದಕ್ಷಿಣವನ್ನೂ, ಕುಬೇರನು ಉತ್ತರವನ್ನೂ ಸಹ ಹೊಂದಲಿ.

೩೧೩. ಸದಸ್ಯರಿಂದ ಅನುಮತಿಯನ್ನು ಹೊಂದಿ ಆಜ್ಯದ ಹೋಮಗಳು ನಡೆಯಲಿ. ವೇದೋಕ್ತವಾದ ಕರ್ಮಗಳಿಂದ ವಿಪ್ರರು ಅಗ್ನಿಗಳಲ್ಲಿ ಹೋಮ ಮಾಡಲಿ.

ದೇಶಾಶ್ಚ ಕ್ರತುಹೋಮೇನ ಸ್ವಾಧ್ಯಾಯೇನ ಮಹರ್ಷಯಃ ।
ಶ್ರಾದ್ಧೇನ ಪಿತರಶ್ಚೈವ ತುಷ್ಟಿಂ ಯಾಂತು ಸದಾ ಸುಖಂ ॥ ೩೧೪ ॥

ವಾಯುಶ್ಚರತು ಮಾರ್ಗಸ್ಥಸ್ತ್ರಿಧಾ ದೀಪ್ಯ ತು ಪಾವಕಃ ।
ತ್ರಯೋ ವರ್ಣಾಶ್ಚ ಲೋಕಾಂಸ್ತ್ರೀಸ್ತರ್ಪಯನ್ತ್ವಾತ್ಮಜೈರ್ಗುಣೈಃ॥೩೧೫॥

ಕ್ರತವಸ್ಸಂಪ್ರವರ್ತಂತಾಂ ದೀಕ್ಷಣೀಯೈರ್ದ್ವಿಜಾತಿಭಿಃ ।
ದಕ್ಷಿಣಾಶ್ಚೋಪಪದ್ಯಂತಾಂ ಯಾಜ್ಞಿಕೈಶ್ಚ ಪೃಥಕ್ಪೃಥಕ್ ॥ ೩೧೬ ॥

ಗಾಂ ಚ ಸೂರ್ಯೋ ರಸಾನ್ಸೋಮೋ ವಾಯುಃ ಪ್ರಾಣಾಂಶ್ಚ ಪ್ರಾಣಿಷು ।
ತರ್ಪಯನ್ತಃ ಪ್ರವರ್ತಂತಾಮೇತೈಸ್ಸೌಮ್ಯೈಃ ಸ್ವಕರ್ಮಭಿಃ ॥ ೩೧೭ ॥

ಯಥಾವದನುಪೂರ್ವೇಣ ಮಹೇಂದ್ರಮಲಯೋದ್ಭವಾಃ ।
ತ್ರೈಲೋಕ್ಯಮಾತರಸ್ಸರ್ವಾಃ ಸಮುದ್ರಂ ಯಾನ್ತು ಸಿಂಧವಃ ॥ ೩೧೮ ॥

ದೈತ್ಯೇಭ್ಯಸ್ತ್ಯಜ್ಯತಾಂ ಭೀಶ್ಚ ಶಾಂತಿಂ ವ್ರಜತ ದೇವತಾಃ ।
ಸ್ವಸ್ತಿ ವೋಸ್ತು ಗಮಿಷ್ಯಾಮಿ ಬ್ರಹ್ಮಲೋಕಂ ಸನಾತನಂ ॥ ೩೧೯ ॥

---

೩೧೪-೩೧೫. ಯಾಗ ಮಾಡುವುದರಿಂದ ದೇಶವೆಲ್ಲವೂ, ಅಧ್ಯಯನಮಾಡುವುದರಿಂದ ಋಷಿಗಳೆಲ್ಲರೂ, ಶ್ರಾದ್ಧದಿಂದ ಪಿತೃಗಳೂ, ತೃಪ್ತಿಯನ್ನು ಪಡೆಯಲಿ. ಯಾವಾಗಲೂ ಸುಖವಾಗಿರಲಿ. ವಾಯುವು ಸರಿಯಾದ ರೀತಿಯಲ್ಲಿ ಬೀಸಲಿ. ಅಗ್ನಿಯು ಮೂರು ರೀತಿಯಲ್ಲಿ ಪ್ರಕಾಶಿಸಲಿ. ಮೂರು ವರ್ಣಗಳೂ ಮೂರು ಲೋಕಗಳನ್ನು ತಮ್ಮ ಗುಣಗಳಿಂದ ತೃಪ್ತಿಪಡಿಸಲಿ.

೩೧೬-೩೧೭. ದೀಕ್ಷಿತರಾದ ಬ್ರಾಹ್ಮಣರು ಯಾಗಗಳನ್ನು ಮಾಡಲಿ. ಯಜ್ಞದವರು ಬೇರೆಬೇರೆಯಾಗಿ ತಮ್ಮ ತಮ್ಮ ದಕ್ಷಿಣೆಗಳನ್ನ ಹೊಂದಲಿ. ಸೂರ್ಯನು ತನ್ನ ಕಿರಣಗಳನ್ನೂ, ಸೋಮನು ರಸಗಳನ್ನೂ, ವಾಯುವು ಪ್ರಾಣಿಗಳಲ್ಲಿ ಪ್ರಾಣಗಳನ್ನೂ, ತೃಪ್ತಿಪಡಿಸುತ್ತಾ ಸೌಮ್ಯವಾದ ಗುಣಗಳಿಂದ ಇರುತ್ತಿರಲಿ.

೩೧೮-೩೧೯. ಮಹೇಂದ್ರಮಲಯಗಳಲ್ಲಿ ಹುಟ್ಟಿದ, ಮೂರು ಲೋಕವನ್ನೂ ಕಾಪಾಡುವ, ನದಿಗಳೆಲ್ಲವೂ ಕ್ರಮವಾಗಿ ಸಮುದ್ರವನ್ನು ಹೊಂದಲಿ. ದೈತ್ಯರಿಂದ ಹೆದರಿಕೆಯನ್ನು ಬಿಡಿರಿ. ಎಲೈ ದೇವತೆಗಳಿರಾ! ಶಾಂತರಾಗಿರಿ. ನಿಮಗೆ ಒಳ್ಳೆಯದಾಗಲಿ. ಸನಾತನವಾದ ಬ್ರಹ್ಮಲೋಕಕ್ಕೆ ಹೋಗುತ್ತೇನೆ.

ಸ್ವ ಗೃಹೇ ಸ್ವರ್ಗಲೋಕೇ ವಾ ಸಂಗ್ರಾಮೇ ವಾ ವಿಶೇಷತಃ ।
ವಿಶ್ವಸ್ತೈರ್ವಾ ನ ಗಂತವ್ಯಾ ನಿತ್ಯಂ ಕ್ಷುದ್ರಾ ಹಿ ದಾನವಾಃ ॥ ೩೨೦ ॥

ಛಿದ್ರೇಷು ಪ್ರಹರಂತ್ಯೇತೇ ನ ತೇಷಾಂ ಸಂಸ್ಥಿತಿರ್ಧ್ರುವಾ ।
ಸೌಮ್ಯಾನಾಂ ನಿಜಭಾವಾನಾಂ ಭವತಾಮಾರ್ಜವಂ ಮನಃ ॥ ೩೨೧ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ಸುರಗಣಾನ್ವಿಷ್ಣುಃ ಸತ್ಯಪರಾಕ್ರಮಃ ।
ಜಗಾಮ ಬ್ರಹ್ಮಣಾ ಸಾರ್ಧಂ ಬ್ರಹ್ಮಲೋಕಂ ಮಹಾಯಶಾಃ ॥ ೩೨೨ ॥

ದೇವಾನಾಂ ಮಹತೀಂ ಪ್ರೀತಿಮುತ್ಪಾದ್ಯ ಭಗವಾನ್ಪ್ರಭುಃ ।
ಏತದಾಶ್ಚರ್ಯಮಭವತ್ಸಂಗ್ರಾಮೇ ತಾರಕಾಮಯೇ ।
ದಾನವಾನಾಂ ಚ ವಿಷ್ಣೋಶ್ಚ ಯಸ್ಮಾತ್ ತ್ವಂ ಪರಿಪೃಚ್ಛಸಿ ॥ ೩೨೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪದ್ಮಪ್ರಾದುರ್ಭಾವೋ
॥ ನಾಮ ಅಷ್ಟಾತ್ರಿಂಶೋಽಧ್ಯಾಯಃ ॥

---

೩೨೦. ನಿಮ್ಮ ಮನೆಯಲ್ಲಾಗಲಿ ಸ್ವರ್ಗದಲ್ಲಿಯಾಗಲಿ ಹಳ್ಳಿಗಳಲ್ಲಿಯಾಗಲಿ ವಿಶ್ವಾಸವನ್ನು ಹೊಂದಿರಬೇಡಿ. ದಾನವರು ಯಾವಾಗಲೂ ನೀಚರಷ್ಟೆ!

೩೨೧. ಈ ದಾನವರು ಸಮಯವನ್ನು ನೋಡಿ ಹೊಡೆಯುತ್ತಾರೆ. ಅವರು ಒಂದು ಜಾಗದಲ್ಲಿರುವುದಿಲ್ಲ. ಸೌಮ್ಯರಾಗಿಯೂ ಋಜುವಾಗಿಯೂ ಇರುವ ನಿಮ್ಮಗಳ ಮನಸ್ಸಿನ ಕಪಟವನ್ನರಿಯರು.

೩೨೨. ಪುಲಸ್ತ್ಯನು ಹೇಳಿದನು—ನಿಜವಾದ ಪರಾಕ್ರಮವುಳ್ಳ ವಿಷ್ಣುವು ಇಂತು ಸುರರಿಗೆ ಬುದ್ಧಿಯನ್ನು ಹೇಳಿ ಬ್ರಹ್ಮನೊಡನೆ ಬ್ರಹ್ಮಲೋಕಕ್ಕೆ ಹೋದನು.

೩೨೩. ಹೀಗೆ ಸ್ವಾಮಿಯಾದ ವಿಷ್ಣುವು ದೇವತೆಗಳಿಗೆ ಹೆಚ್ಚು ಸಂತೋಷವನ್ನುಂಟುಮಾಡಿದನು. ತಾರಕಾಸುರನ ಯುದ್ಧದಲ್ಲಿ ಇದು ಆಶ್ಚರ್ಯವಾದುದಾಯಿತು ದಾನವರಿಗೂ ವಿಷ್ಣುವಿಗೂ ಇರುವ ಸ್ಥಿತಿಯನ್ನು ನನ್ನನ್ನು ಕೇಳಿದೆಯಲ್ಲ! ಅದನ್ನು ಹೇಳಿದೆನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪದ್ಮಪ್ರಾದುರ್ಭಾವವೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-×-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಏಕೋನಚತ್ವಾರಿಂಶೋऽಧ್ಯಾಯಃ ॥



॥ ಭೀಷ್ಮ ಉವಾಚ ॥

ಶ್ರುತಃ ಪದ್ಮೋದ್ಭವೋ ಬ್ರಹ್ಮನ್ವಿಸ್ತರೇಣ ತ್ವಯೇರಿತಃ ।
ಸಮಾಸಾದ್ಭವಮಾಹತ್ಮ್ಯಂ ಉತ್ಪತ್ತಿಂ ಚ ಗುಹಸ್ಯ ಚ ॥ ೧ ॥

ಶ್ರೋತುಮಿಚ್ಛಾಮಿ ತೇ ಬ್ರಹ್ಮನ್ಯಥಾಭೂತಃ ಕೃತಂ ಚ ಯತ್ ।
ತಾರಕಶ್ಚ ಕಥಂಭೂತೋ ದಾನವೋ ಬಲವತ್ತರಃ ॥ ೨ ॥

ಕಾರ್ತಿಕೇಯೇನ ಸ ಬ್ರಹ್ಮನ್ಕಥಂ ಧ್ವಸ್ತೋ ಮಹಾಸುರಃ ।
ಕಥಂ ರುದ್ರೇಣ ಮುನಯಃ ಪ್ರೇಷಿತಾ ಮಂದರಂ ಗಿರಿಂ ॥ ೩ ॥

ಕಥಂ ಲಬ್ಧಾ ಉಮಾ ತತ್ರ ರುದ್ರೇಣ ಪರಮೇಷ್ಠಿನಾ ।
ಏತದಾಖ್ಯಾಹಿ ಮೇ ಸರ್ವಂ ಯಥಾಭೂತಂ ಮಹಾಮುನೇ ॥ ೪ ॥

---

### ಮೂವತ್ತೊಂಭತ್ತನೆಯ ಅಧ್ಯಾಯವು

೧-೪. ಭೀಷ್ಮನು ಹೇಳಿದನು–ಎಲೈ ಪುಲಸ್ತ್ಯನೇ ! ಪದ್ಮವು ಹುಟ್ಟಿದುದನ್ನು ವಿಸ್ತಾರವಾಗಿ ಹೇಳಿದೆ. ತಿಳಿಯಿತು. ಈಶ್ವರನ ಮಹಿಮೆಯನ್ನೂ ಗುಹನ ಉತ್ಪತ್ತಿಯನ್ನೂ ಕೇಳಬೇಕೆಂದಿದ್ದೇನೆ. ಮತ್ತು ಅವನು ಮಾಡಿದ ಕೆಲಸಗಳೇನು ? ತಾರಕಾಸುರನುಬಲಿಷ್ಠನಾಗಿ ಹೇಗೆ ಆದನು ? ಗುಹನು ಅವನನ್ನು ಹೇಗೆ ಕೊಂದನು ? ರುದ್ರನುಮಂದರಪರ್ವತಕ್ಕೆ ಋಷಿಗಳನ್ನು ಹೇಗೆ ಕಳುಹಿಸಿದನು? ರುದ್ರನಿಗೆ ಉಮೆಯು ಸಿಕ್ಕಿದುದು ಹೇಗೆ ? ಇದೆಲ್ಲವನ್ನೂ ನನಗೆ ಹೇಳು.

॥ ಪುಲಸ್ತ್ಯ ಉವಾಚ ॥

ಕಶ್ಯಪೇನ ಪುರಾ ಪ್ರೋಕ್ತಾ ದಿತಿರ್ದೈತ್ಯಾರಣಿಃ ಶುಭಾ ।
ವಜ್ರಸಾರಮಯ್ಯೆಶ್ಚಾಂಗೈಃ ಪುತ್ರೋ ದೇವಿ ಭವಿಷ್ಯತಿ ॥ ೫ ॥

ವಜ್ರಾಂಗೋ ನಾಮ ಪುತ್ರಸ್ತು ಭವಿತಾ ಧರ್ಮವತ್ಸಲಃ ।
ಸಾ ಚ ಲಬ್ಧವರಾ ದೇವೀ ಸುಷುವೇ ವಜ್ರದುಶ್ಛಿದಂ ॥ ೬ ॥

ಸ ಜಾತ ಮಾತ್ರ ಏವಾಭೂತ್ಸರ್ವಶಾಸ್ತ್ರಾರ್ಥಪಾರಗಃ ।
ಉವಾಚ ಮಾತರಂ ಭಕ್ತ್ಯಾ ಮಾತಃ ಕಿಂ ಕರವಾಣ್ಯಹಂ ॥ ೭ ॥

ತಸ್ಯೋವಾಚ ತತೋ ಹೃಷ್ಟಾ ದಿತಿರ್ದೈತ್ಯಾಧಿಪಸ್ಯ ತು ।
ಬಹವೋ ಮೇ ಹತಾಃ ಪುತ್ರಾಃ ಸಹಸ್ರಾಕ್ಷೇಣ ಪುತ್ರಕ ॥ ೮ ॥

ತೇಷಾಮುಪಚಿತಿಂ ಕರ್ತುಂ ಗಚ್ಛ ಶಕ್ರವಧಾಯ ತು ।
ಬಾಢಮಿತ್ಯೇವ ತಾಂ ಚೋಕ್ತ್ವಾ ಜಗಾಮ ತ್ರಿದಿವಂ ಬಲೀ ॥ ೯ ॥

---

೫-೭. ಪುಲಸ್ತ್ಯನು ಹೇಳಿದನು—ಪೂರ್ವದಲ್ಲಿ ದೈತ್ಯರಿಗೆಲ್ಲ ತಾಯಿಯಾದ ದಿತಿಯು ಕಶ್ಯಪನನ್ನು ಕೇಳಿಕೊಳ್ಳಲು ಆತನು ಎಲೈ ದೇವಿಯೇ ! ನಿನಗೆ ವಜ್ರದಂತೆ ಗಟ್ಟಿಯಾದ ಶರೀರವುಳ್ಳ ಮಗನಾಗುವನು. ಅವನ ಹೆಸರೂ ವಜ್ರಾಂಗನೆಂದೇ ಅವನು ಧರ್ಮದಲ್ಲಿ ಆಸಕ್ತನಾಗಿ ಆಗುತ್ತಾನೆ. ಈ ರೀತಿ ಕಶ್ಯಪನಿಂದ ವರವನ್ನು ಹೊಂದಿದ ದಿತಿಯು ವಜ್ರಾಯುಧದಿಂದಲೂ ಕಡಿಯಲಸಾಧ್ಯನಾದ ಮಗನನ್ನು ಹೆತ್ತಳು ಅವನು ಹುಟ್ಟಿದೊಡನೆಯೇ ಸರ್ವ ಶಾಸ್ತ್ರಗಳನ್ನೂ ತಿಳಿದೇ ಇದ್ದನು. ಆತನು ತಾಯಿಯನ್ನು ಕುರಿತು ಅಮ್ಮಾ ! ನಿನಗೇನು ಮಾಡಿಕೊಡಬೇಕೆಂದನು.

೮-೯. ಆಗ ಸಂತೋಷಗೊಂಡ ದಿತಿಯು ಆತನನ್ನು ಕುರಿತು ಸಹಸ್ರಾಕ್ಷನಾದ ಇಂದ್ರನು ನನ್ನ ಬಹುಜನ ಮಕ್ಕಳನ್ನು ಕೊಂದು ಹಾಕಿರುವನು. ಅವರಿಗೆ ಪ್ರತೀಕಾರವನ್ನು ಮಾಡಲು ಶಕ್ರವಧೆಯಾಗಬೇಕು. ಅದಕ್ಕೆ ಹೊರಡು ಎನ್ನಲು ಹಾಗೆ ಆಗಲೆಂದು ಹೇಳಿ ಆ ಬಲಿಷ್ಠನು ಸ್ವರ್ಗಕ್ಕೆ ಹೋದನು.

ಬಧ್ವಾ ತತಸ್ಸಹಸ್ರಾಕ್ಷಂ ಪಾಶೇನಾಮೋಘವರ್ಚಸಾ ।
ಮಾತುರಂತಿಕಮಾಗಚ್ಛದ್ವ್ಯಾಧಃ ಕ್ಷುದ್ರಮೃಗಂ ಯಥಾ ॥ ೧೦ ॥

ಏತಸ್ಮಿನ್ನಂತರೇಬ್ರಹ್ಮಾ ಕಶ್ಯಪಶ್ಚ ಮಹಾತಪಃ ।
ಆಗತೌ ತತ್ರ ಯತ್ರಾಸ್ತಾಂ ಮಾತಾಪುತ್ರಾವಭೀತಕೌ ॥ ೧೧ ॥

ದೃಷ್ಟ್ವಾ ತು ತಾವುವಾಚೇದಂ ಬ್ರಹ್ಮಾ ಕಶ್ಯಪ ಏವ ಚ ।
ಮುಂಚೈನಂ ಪುತ್ರ ದೇವೇದ್ರಂ ಕಿಮನೇನ ಪ್ರಯೋಜನಂ ॥ ೧೨ ॥

ಅವಮಾನೇ ವಧಃ ಪ್ರೋಕ್ತಃ ಪುತ್ರಸಂಭಾವಿತಸ್ಯ ತು ।
ಅಸ್ಮದ್ವಾಕ್ಯೇನ ಯೋ ಮುಕ್ತಃ ತ್ವದ್ಧಸ್ತಾನ್ಮೃತ ಏವ ಸಃ ॥ ೧೩ ॥

ಪರಸ್ಯ ಗೌರವಾನ್ಮುಕ್ತಃ ಶತ್ರುಣಾ ಶತ್ರುರಾಹವೇ ।
ಸ ಜೀವನ್ನೇವ ಹಿ ಮೃತೋ ದಿವಸೇ ದಿವಸೇ ಪುನಃ ॥ ೧೪ ॥

---

೧೦. ಅಲ್ಲಿಗೆ ಹೋಗಿ ಆ ಇಂದ್ರನು ಹಗ್ಗದಿಂದ ಕಟ್ಟಿ ಬೇಡನು ಸಣ್ಣ ಮೃಗವನ್ನು ಹೇಗೆ ಹಿಡಿದುಕೊಂಡು ಬರುವನೋ ಹಾಗೆ ತಾಯಿಯ ಬಳಿಗೆ ಹಿಡಿದು ತಂದನು.

೧೧. ಇಷ್ಟರೊಳಗೆ ಕಶ್ಯಪನೂ, ಬ್ರಹ್ಮನೂ, ದೇವೇಂದ್ರನನ್ನು ತಂದು ಕಟ್ಟಿ ಹೆದರಿಕೆಯನ್ನು ಬಿಟ್ಟಿರುವ ಆ ತಾಯಿ ಮಕ್ಕಳಾದ ದಿತಿ ವಜ್ರಾಂಗರಿರುವಲ್ಲಿಗೆ ಬಂದರು.

೧೨. ಆಗ ಬ್ರಹ್ಮನು ಇವರನ್ನು ನೋಡಿ ಎಲೈ ಮಗನೇ ! ದೇವೇಂದ್ರನನ್ನು ಬಿಟ್ಟುಬಿಡು. ಇವನಿಂದ ಪ್ರಯೋಜನವೇನಿದೆ ?

೧೩. ಎಲೈ ಮಗನೇ ! ಗೌರವಸ್ಥನಿಗೆ ಅವಮಾನವೇ ವಧೆಯೆಂದು ಹೇಳಲ್ಪಟ್ಟಿದೆ. ನನ್ನ ಮಾತಿನಿಂದ ನಿನ್ನ ಕೈಯಿಂದ ಬಿಡಿಸಿಕೊಂಡರೆ ಅವನು ಸತ್ತವನಂತೆಯೇ.

೧೪. ಯುದ್ಧದಲ್ಲಿ ಶತ್ರುವಿನ ಕೈಯಿಂದ ಮತ್ತೊಬ್ಬನು ತನ್ನ ಗೌರವದಿಂದ ಬಿಡಿಸಿದರೆ ಅವನು ಬದುಕಿದ್ದರೂ ಸತ್ತವನಂತೆಯೇ, ದಿನದಿನಕ್ಕೂ ಸತ್ತಂತೆಯೇ ಸಂದೇಹವಿಲ್ಲ.

ಏತಚ್ಛ್ರುತ್ವಾ ತು ವಜ್ರಾಂಗಃ ಪ್ರಣತೋ ವಾಕ್ಯಮಬ್ರವೀತ್ ।
ನ ಮೇ ಕೃತ್ಯಂ ಮನಾಗಸ್ತಿ ಮಾತುರಾಜ್ಞಾ ಕೃತಾ ಹಿ ಮೇ　　॥ ೧೫ ॥

ತ್ವಂ ಸುರಾಸುರನಾಥೋ ವೈ ಮಾನ್ಯಶ್ಚ ಪ್ರಪಿತಾಮಹಃ ।
ಕರಿಷ್ಯೇ ತ್ವದ್ವಚೋ ದೇವ ಏವಮುಕ್ತಶ್ಶತಕ್ರತುಃ　　॥ ೧೬ ॥

ತಪಸೇ ಮೇ ರತಿರ್ದೇವ ನಿರ್ವಿಘ್ನಂ ತಚ್ಚ ಮೇ ಭವೇತ್ ।
ತ್ವತ್ಪ್ರಸಾದೇನ ಭಗವನ್ನಿತ್ಯುಕ್ತ್ವಾ ವಿರರಾಮ ಹ ॥
ತಸ್ಮಿಂಸ್ತೂಷ್ಣೀಂ ಸ್ಥಿತೇ ದೈತ್ಯೇ ಪ್ರೋವಾಚೇದಂ ಪಿತಾಮಹಃ　　॥ ೧೭ ॥

॥ ಬ್ರಹ್ಮೋವಾಚ ॥

ತಪಸ್ತ್ವಂ ಕುರು ಮಾಽಽಪನ್ನೋ ಸೋಸ್ಮಚ್ಛಾಸನ ಸಂಸ್ಥಿತಃ ।
ಅನಯಾ ಚಿತ್ತಶುದ್ಧ್ಯಾ ಹಿ ಪರ್ಯಾಪ್ತಂ ಜನ್ಮನಃ ಫಲಂ　　॥ ೧೮ ॥

ಇತ್ಯುಕ್ತ್ವಾ ಪದ್ಮಜಃ ತಸ್ಯಾಂ ಸಸರ್ಜಾಯತಲೋಚನಾಂ ।
ತಾಮಸ್ಮೈ ಪ್ರದದೌ ದೇವಃ ಪತ್ನ್ಯರ್ಥಂ ಪದ್ಮಸಂಭವಃ　　॥ ೧೯ ॥

---

೧೫. ವಜ್ರಾಂಗನು ಇದನ್ನು ಕೇಳಿ ನಮಸ್ಕರಿಸಿ ಇಂತೆಂದನು. ಎಲೈ ತಂದೆಯೆ ಇವನಿಂದ ನನಗೆ ಪ್ರಯೋಜನ ಇಲ್ಲ. ತಾಯಿಯ ಅಪ್ಪಣೆಯಿಂದ ಕಟ್ಟಿಹಾಕಿದ್ದೇನೆ.

೧೬. ಎಲೈ ಬ್ರಹ್ಮನೇ ! ನೀನು ಸುರರಿಗೂ, ಅಸುರರಿಗೂ ಒಡೆಯನಾಗಿಯೂ ಗೌರವಸ್ಥನಾಗಿಯೂ, ಆಗಿದ್ದೀಯೆ. ನಿನ್ನ ಮಾತನ್ನು ನಡೆಸುತ್ತೇನೆ. ಇಗೋ ಈ ಇಂದ್ರನನ್ನು ಬಿಟ್ಟಿದ್ದೇನೆ

೧೭. ಎಲೈ ದೇವನೇ ! ನನಗೆ ತಪಸ್ಸು ಮಾಡಬೇಕೆಂಬಾಸೆಯಿದೆ. ಅದು ವಿಘ್ನವಿಲ್ಲದಂತೆ ನಡೆಯಬೇಕು. ಅದಕ್ಕೆ ನಿನ್ನ ಅನುಗ್ರಹಬೇಕು. ಎಂದು ಹೇಳಿ ಸುಮ್ಮನಾದನು. ಆ ದೈತ್ಯನು ಹೀಗೆ ಹೇಳಿ ಸುಮ್ಮನಾಗಲು ಪಿತಾಮಹನಾದ ಬ್ರಹ್ಮನು ಇಂತೆಂದನು.

೧೮. ಬ್ರಹ್ಮನು ಹೇಳಿದನು- ತೊಂದರೆ ಬರದಂತೆ ನಿರ್ವಿಘ್ನವಾಗಿ ತಪಸ್ಸನ್ನು ಮಾಡು. ಈ ಚಿತ್ತಶುದ್ಧಿಯಿಂದಲೇ ನೀನು ಜನ್ಮ ಹೊಂದಿದದಕ್ಕೆ ಸಾರ್ಥಕವಾಗುತ್ತದೆ.

೧೯. ಬ್ರಹ್ಮನು ಹೀಗೆಂದು ಹೇಳಿ ಸುಂದರಿಯಾದವಳೊಬ್ಬಳು ಕನ್ಯೆಯನ್ನು ಸೃಷ್ಟಿಸಿ ಆ ವಜ್ರಾಂಗನಿಗೆ ಹೆಂಡತಿಯನ್ನಾಗಿ ಕೊಟ್ಟನು.

ವರಾಂಗೀತಿ ಚ ನಾಮಾಸ್ಯಾಃ ಕೃತ್ವಾ ಯಾತಃ ಪಿತಾಮಹಃ ।
ವಜ್ರಾಂಗೋಽಪಿ ತಯಾ ಸಾರ್ಧಂ ಜಗಾಮ ತಪಸೇ ವನಂ ॥ ೨೦ ॥

ಊರ್ಧ್ವಬಾಹುಸ್ಸದೈತ್ಯೇಂದ್ರೋಽಚರದ್ವರ್ಷಸಹಸ್ರಕಂ ।
ಕಾಲಂ ಕಮಲಪತ್ರಾಕ್ಷಃ ಶುದ್ಧಬುದ್ಧಿರ್ಮಹಾತಪಾಃ ॥ ೨೧ ॥

ತಾವಚ್ಚಾಧೋಮುಖಃ ಕಾಲಂ ತಾವತ್ಪಂಚಾಗ್ನಿಮಧ್ಯಗಃ ।
ನಿರಾಹಾರೋ ಘೋರತಪಾಃ ತಪೋರಾಶಿರಜಾಯತ ॥ ೨೨ ॥

ತತಸ್ಸೋಽಂತರ್ಜಲಂ ಚಕ್ರೇ ವಾಸಂ ವರ್ಷಸಹಸ್ರಕಂ ।
ಜಲಾಂತರಂ ಪ್ರವಿಷ್ಟಸ್ಯ ತಸ್ಯ ಪತ್ನೀ ಮಹಾವ್ರತಾ ॥ ೨೩ ॥

ತಸ್ಯೈವ ತೀರೇ ಸರಸಃ ಸ್ಥಿತಾಸೌ ಮೌನಮಾಶ್ರಿತಾ ।
ನಿರಾಹಾರಂ ತಪೋಘೋರಂ ಪ್ರವಿವೇಶ ಮಹಾದ್ಯುತಿಃ ॥ ೨೪ ॥

---

೨೦. ಬ್ರಹ್ಮನು ಆಕೆಗೆ ವರಾಂಗಿ ಎಂದು ಹೆಸರಿಟ್ಟು ಹೊರಟುಹೋದನು. ಇತ್ತ ಈ ವಜ್ರಾಂಗನು ಹೆಂಡತಿಯೊಡನೆ ತಪಸ್ಸಿಗೆ ಹೋದನು.

೨೧. ಆ ವಜ್ರಾಂಗನು ತೋಳುಗಳನ್ನು ಮೇಲಕ್ಕೆತ್ತಿಕೊಂಡು ಸಾವಿರ ವರ್ಷಗಳವರೆಗೂ ಶುದ್ಧವಾದ ಬುದ್ಧಿಯಿಂದ ತಪಸ್ಸನ್ನು ಮಾಡಿದನು.

೨೨. ಸಾವಿರ ವರ್ಷಗಳವರೆಗೂ ತಲೆಕೆಳಗಾಗಿಯೂ ಸಾವಿರ ವರ್ಷಗಳು ಪಂಚಾಗ್ನಿಯ ಮಧ್ಯದಲ್ಲಿಯೂ ಸಾವಿರ ವರ್ಷಗಳು ಆಹಾರವಿಲ್ಲದೆಯೂ, ತಪಸ್ಸು ಮಾಡಿ ತಪೋರಾಶಿಯೇ ಆಗಿಹೋದನು.

೨೩-೨೪. ಅನಂತರ ಅವನು ಸಾವಿರ ವರ್ಷಗಳವರೆಗೂ, ನೀರಿನೊಳಗಿದ್ದನು. ಈತನು ನೀರಿನೊಳಗಿರಲು ಆತನ ಹೆಂಡತಿಯೂ ಆ ಸರೋವರದ ದಡದಲ್ಲಿ ಮೌನ ವನ್ನು ಧರಿಸಿದ್ದಳು. ಈ ರೀತಿಯಾಗಿ ಆಹಾರವಿಲ್ಲದೆ ಘೋರವಾದ ತಪಸ್ಸನ್ನೂ ಮಾಡಿದಳು.

ತಸ್ಯಾಂ ತಪಸಿ ವರ್ತನ್ತ್ಯಾಮಿಂದ್ರಶ್ಚಕ್ರೇ ಬಿಭೀಷಿಕಾಂ ।
ಗತ್ವಾ ತು ಮರ್ಕಟಾಕಾರಃ ತದಾಶ್ರಮಪದಂ ಮಹತ್ ॥ ೨೫ ॥

ಬೃಸೀಂ ಚಕರ್ಷ ಬಲವಾನ್ಸ್ಕಂಧಾದ್ಯರ್ಚಾಕರಂಡಕಂ ।
ತತಸ್ತು ಸಿಂಹರೂಪೇಣ ಭೀಷಯಾಮಾಸ ಭಾಮಿನೀಂ ॥ ೨೬ ॥

ತತೋ ಭುಜಂಗರೂಪೇಣಾಪ್ಯದಶಚ್ಚರಣದ್ವಯೇ ।
ತಪೋಬಲವಶಾತ್ಸಾ ತು ನ ವಧ್ಯತ್ವಂ ಜಗಾಮಹ ॥ ೨೬ ॥

ಬಿಭೀಷಾಭಿರನೇಕಾಭಿಃ ಕ್ಲೇಶಯನ್ಪಾಕಶಾಸನಃ ।
ವಿರರಾಮ ಯದಾ ನೈವ ವಜ್ರಾಂಗಮಹಿಷೀ ತದಾ ॥ ೨೮ ॥

ಶೈಲಸ್ಯ.ದುಷ್ಟತಾಂ ಮತ್ವಾ ಶಾಪಂ ದಾತುಂ ಸಮುದ್ಯತಾ ।
ತಾಂ ಶಾಪಾಭಿಮುಖೀಂ ದೃಷ್ಟ್ವಾ ಶೈಲಃ ಪುರುಷವಿಗ್ರಹಃ ।
ಉವಾಚ ತಾಂ ವರಾರೋಹಾಂ ವರಾಂಗೀಂ ಭೀತಲೋಚನಃ ॥ ೨೯ ॥

---

೨೫. ಹೀಗೆ ಆಕೆಯು ತಪಸ್ಸನ್ನು ಮಾಡುತ್ತಿರಲು ಇಂದ್ರನು ಬಹುವಾಗಿ ಆಕೆಯನ್ನು ಹೆದರಿಸಿದನು. ಒಂದಾವರ್ತಿ ಕಪಿಯ ಆಕಾರವನ್ನು ಹೊಂದಿ ಆವಳಿರುವ ಆಶ್ರಮಕ್ಕೆ ಹೋದನು.

೨೬–೨೭. ಕಪಿಯಾಗಿ ಅಲ್ಲಿಗೆ ಹೋಗಿ ಆಸನವನ್ನು ಹಿಡಿದೆಳೆದನು. ಗಂಧ ಅಕ್ಷತೆ ಮುಂತಾದುವುಗಳನ್ನಿಟ್ಟಿದ್ದ ಪಾತ್ರೆಗಳನ್ನು ಎಳೆದಾಡಿದನು. ಅನಂತರ ಸಿಂಹದ ಆಕಾರವನ್ನು ಹೊಂದಿ ಆಕೆಯನ್ನು ಹೆದರಿಸಿದನು. ಅನಂತರ ಹಾವಾಗಿ ಬಂದು ಆಕೆಯ ಎರಡು ಕಾಲುಗಳನ್ನೂ ಕಚ್ಚಿದನು. ತಪೋಬಲದಿಂದ ಆಕೆಯು ಸಾಯಲಿಲ್ಲ

೨೮-೨೯. ಆ ವರಾಂಗಿಗೆ ಅನೇಕ ರೀತಿಯಲ್ಲಿ ತೊಂದರೆಗಳನ್ನು ಕೊಟ್ಟೂ ಕೂಡ ಈ ಇಂದ್ರನು ತೃಪ್ತನಾಗಲಿಲ್ಲ. ಮತ್ತೂ ಕೊಡುತ್ತಲೇ ಬಂದನು. ಇದನ್ನು ನೋಡಿದ ಆಕೆಯು ಇದು ಈ ಪರ್ವತದ ದುಷ್ಟತನವಿರಬೇಕೆಂದು ಶಾಪವನ್ನು ಕೊಡಲು ಉದ್ಯುಕ್ತಳಾದಳು ಶಾಪವನ್ನು ಕೊಡಲುದ್ಯುಕ್ತಳಾದ ಈಕೆಯನ್ನು ನೋಡಿ ಆ ಪರ್ವತನು ಹೆದರಿ ಪುರುಷನ ಆಕಾರವನ್ನು ಹೊಂದಿ ಆ ಹೆಂಗಸನ್ನು ಕುರಿತು ಹೆದರಿಕೆಯಿಂದ ಇಂತೆಂದನು.

॥ ಶೈಲ ಉವಾಚ ॥

ನಾಹಂ ಮಹಾವ್ರತೇ ದುಷ್ಟಃ ಸೇವ್ಯೋಽಹಂ ಸರ್ವದೇಹಿನಾಂ ।
ವಿಪ್ರಿಯಂ ತೇ ಕರೋತ್ಯೇಷಃ ರುಷಿತಃ ಪಾಕಶಾಸನಃ ॥ ೩೦ ॥

ಏತಸ್ಮಿನ್ನಂತರೇ ಜಾತಃ ಕಾಲೋ ವರ್ಷಸಹಸ್ರಕಃ ।
ತಸ್ಮಿನ್ ಜ್ಞಾತ್ವಾ ತು ಭಗವಾನ್ಕಾಲೇ ಕಮಲಸಂಭವಃ ।
ತುಷ್ಟಃ ಪ್ರೋವಾಚ ವಜ್ರಾಂಗಂ ತದಾಗತ್ಯ ಜಲಾಶಯಂ ॥ ೩೧ ॥

॥ ಬ್ರಹ್ಮೋವಾಚ ॥

ದದಾಮಿ ಸರ್ವಕಾಮಂ ತ ಉತ್ತಿಷ್ಠ ದಿತಿನಂದನ ।
ಏವಮುಕ್ತಸ್ತದಾಖ್ಯಾಯ ಸ ದೈತ್ಯೇಂದ್ರಸ್ತಪೋನಿಧಿಃ ।
ಉವಾಚ ಪ್ರಾಂಜಲಿರ್ವಾಕ್ಯಂ ಸರ್ವಲೋಕಪಿತಾಮಹಂ ॥ ೩೨ ॥

॥ ವಜ್ರಾಂಗ ಉವಾಚ ॥

ಆಸುರೋ ಮಾಸ್ತು ಮೇ ಭಾವಃ ಸಂತು ಲೋಕಾ ಮಮಾಕ್ಷಯಾಃ ।
ತಪಸ್ಯಭಿರತಿರ್ಮೇಽಸ್ತು ಶರೀರಸ್ಯಾಸ್ಯ ವರ್ತಿನಃ ॥ ೩೩ ॥

---

೩೦. ಶೈಲನು ಹೇಳಿದನು- ಎಲೈ ತಪಸ್ವಿನಿಯೇ ! ನಾನು ದುಷ್ಟನಲ್ಲ. ಎಲ್ಲ ಪ್ರಾಣಿಗಳೂ, ನನ್ನಲ್ಲಿದ್ದುಕೊಂಡು ಸುಖಪಡಬೇಕು. ಕೋಪಗೊಂಡ ಈ ಇಂದ್ರನು ನಿನಗೆ ಕೆಟ್ಟದ್ದನ್ನು ಮಾಡುತ್ತಿರುತ್ತಾನೆ.

೩೧. ಇಷ್ಟರೊಳಗೆ ಸಾವಿರ ವರ್ಷಗಳು ಕಳೆದುವು. ಇಷ್ಟರೊಳಗೆ ಈತನ ತಪಸ್ಸನ್ನು ತಿಳಿದು ಬ್ರಹ್ಮನು ಸಂತೋಷಗೊಂಡು ಆ ಕೊಳದ ಬಳಿಗೆ ಬಂದು ವಜ್ರಾಂಗನನ್ನು ಕುರಿತು ಇಂತೆಂದನು.

೩೨. ಬ್ರಹ್ಮನು ಹೇಳಿದನು– ದಿತಿಯ ಮಗನಾದ ಎಲೈ ವಜ್ರಾಂಗನೇ ! ಏಳು. ನಿನಗೆ ಬೇಕಾದ್ದುದೆಲ್ಲವನ್ನೂ ಕೊಡುತ್ತೇನೆ. ಎಂದನು. ಆಗ ತಪಸ್ವಿಯಾದ ಆ ದೈತ್ಯೇಂದ್ರನು ಕೈಮುಗಿದುಕೊಂಡು ಬ್ರಹ್ಮನಿಗಿಂತೆಂದನು.

೩೩. ವಜ್ರಾಂಗನು ಹೇಳಿದನು– ಎಲೈ ಬ್ರಹ್ಮನೇ ! ನನಗೆ ಈ ಕ್ರೂರವಾದ ಆಸುರಭಾವವು ಬೇಡ. ನನಗೆ ಉತ್ತಮವಾದ ಲೋಕಗಳು ಶಾಶ್ವತವಾಗಿರಲಿ. ಈ ಶರೀರವಿರುವವರೆಗೂ ನನಗೆ ತಪಸ್ಸಿನಲ್ಲಿ ಆಸೆಯಿರಲಿ.

ಏವಮಸ್ತ್ವಿತಿ ತಂ ದೇವೋ ಜಗಾಮ ಸ್ವಕಮಾಲಯಂ ।
ವಜ್ರಾಂಗೋಽಪಿ ಸಮಾಪ್ತೇ ತು ತಪಸಿ ಸ್ಥಿರಸಂಯಮಃ ॥ ೩೪ ॥

ಆಗನ್ತುಮಿಚ್ಛನ್ಸ್ವಾಂ ಭಾರ್ಯಾಂ ನ ದದರ್ಶಾಶ್ರಮೇ ಸ್ವಕೇ ।
ಕ್ಷುಧಾವಿಷ್ಟಃ ಸಶೈಲಸ್ಯ ಗಹನಂ ಪ್ರವಿವೇಶ ಹ ॥ ೩೫ ॥

ಆದಾತುಂ ಫಲಮೂಲಾನಿ ಸ ಚ ತಸ್ಮಿನ್ವ್ಯಲೋಕಯತ್ ।
ರುದತೀಂ ಸ್ವಾಂ ಪ್ರಿಯಾಂ ದೀನಾಂ ತರುಪ್ರಚ್ಛಾದಿತಾನನಾಂ ।
ತಾಂ ವಿಲೋಕ್ಯ ತತೋ ದೈತ್ಯಃ ಪ್ರೋವಾಚ ಪರಿಸಾಂತ್ವಯನ್ ॥ ೩೬ ॥

॥ ವಜ್ರಾಂಗ ಉವಾಚ ॥

ಕೇನ ತೇಽಪಕೃತಂ ಭದ್ರೇ ಯಮಲೋಕಂ ಯಿಯಾಸುನಾ ।
ಕಂ ವಾ ಕಾಮಂ ಪ್ರಯಚ್ಛಾಮಿ ಶೀಘ್ರಂ ಪ್ರಬ್ರೂಹಿ ಭಾಮಿನಿ ॥ ೩೭ ॥

---

೩೪-೩೫. ಬ್ರಹ್ಮನು ಹಾಗೇ ಆಗಲೆಂದು ಹೇಳಿ ತನ್ನ ಸ್ಥಳಕ್ಕೆ ಹೊರಟುಹೋದನು. ವಜ್ರಾಂಗನೂ ಕೂಡ ತಪಸ್ಸು ಮುಗಿಯಲು ತಪಸ್ಸಿನಲ್ಲೇ ಮನಸ್ಸಿಟ್ಟವನಾಗಿ ತನ್ನ ಹೆಂಡತಿಯನ್ನು ನೋಡಲು ಆಶ್ರಮಕ್ಕೆ ಬಂದನು. ಆ ತನ್ನ ಆಶ್ರಮದಲ್ಲಿ ಆಕೆಯನ್ನು ಕಾಣಲಿಲ್ಲ. ಹಸಿವು ಬಹಳವಾಗಿದ್ದುದರಿಂದ ಆ ಬೆಟ್ಟದ ಕಾಡಿನೊಳಕ್ಕೆ ಹೋದನು.

೩೬. ಹಣ್ಣು ಗೆಡ್ಡೆ ಗೆಣಸುಗಳನ್ನು ತೆಗೆದುಕೊಳ್ಳಬೇಕೆಂದು ಆ ಕಾಡಿಗೆ ಬರಲು ಅಲ್ಲಿ ಮರದ ಮರೆಯಲ್ಲಿ ಅಳುತ್ತಾ ಕಂಗೆಟ್ಟಿರುವ ತನ್ನ ಹೆಂಡತಿಯನ್ನು ಕಂಡನು. ಆಕೆಯನ್ನು ನೋಡಿ ಆ ದೈತ್ಯನು ಸಮಾಧಾನ ಪಡಿಸುತ್ತಾ ಇಂತೆಂದನು.

೩೭. ವಜ್ರಾಂಗನು ಹೇಳಿದನು- ಯಮಲೋಕವನ್ನು ಹೊಂದಬೇಕೆಂಬ ಇಚ್ಛೆಯುಳ್ಳ ಯಾವನು ನಿನಗೆ ಅಪಕಾರ ಮಾಡಿದನು ? ನಿನಗೇನು ಬೇಕು ? ಜಾಗ್ರತೆಯಾಗಿ ಹೇಳು ? ಎಂದನು.

॥ ವರಾಂಗ್ಯುವಾಚ ॥

ತ್ರಾಸಿತಾಸ್ಮ್ಯಪವಿದ್ಧಾಸ್ಮಿ ತಾಡಿತಾ ಪೀಡಿತಾಸ್ಮಿ ಚ ।
ರೌದ್ರೇಣ ದೇವರಾಜೇನ ನಷ್ಟನಾಥೇವ ಭೂರಿಶಃ ॥ ೩೮ ॥

ದುಃಖಸ್ಯಾಂತಮಪಶ್ಯಂತೀ ಪ್ರಾಣಾಂಸ್ತ್ಯಕ್ತುಂ ವ್ಯವಸ್ಥಿತಾ ।
ಪುತ್ರಂ ಮೇ ತಾರಕಂ ದೇಹಿ ತಸ್ಮಾದ್ದುಃಖಮಹಾರ್ಣವಾತ್ ॥ ೩೯ ॥

ಏವಮುಕ್ತಸ್ತು ದೈತ್ಯೇಂದ್ರಃ ಕೋಪವ್ಯಾಕುಲಲೋಚನಃ ।
ಶಕ್ತೋಽಪಿ ದೇವರಾಜಸ್ಯ ಪ್ರತಿಕರ್ತುಂ ಮಹಾಸುರಃ ॥ ೪೦ ॥

ತಪ ಏವ ಪುನಃ ಕರ್ತುಂ ವ್ಯವಸ್ಯತ ಮಹಾಬಲಃ ।
ಜ್ಞಾತ್ವಾ ತಸ್ಯ ತು ಸಂಕಲ್ಪಂ ಬ್ರಹ್ಮಾ ಕ್ರೂರತರಂ ಪುನಃ ।
ಆಜಗಾಮ ತ್ವರಾಯುಕ್ತೋ ಯತ್ರಾಸೌ ದಿತಿನಂದನಃ ॥ ೪೧ ॥

॥ ಬ್ರಹ್ಮೋವಾಚ ॥

ಕಿಮರ್ಥಂ ಪುತ್ರ ಭೂಯಸ್ತ್ವಂ ಕರ್ತುಂ ನಿಯಮಮುದ್ಯತಃ ।
ತದಹಂ ತೇ ಪುನರ್ದದ್ಮಿ ಕಾಂಕ್ಷಿತಂ ಪುತ್ರಮೋಜಸಾ ॥ ೪೨ ॥

---

೩೮-೩೯. ವರಾಂಗಿಯು ಹೇಳಿದಳು–ಕೆಟ್ಟವನಾದ ದೇವರಾಜನಾದ ಇಂದ್ರನು ರಕ್ಷಕರಿಲ್ಲದಿರುವ ಜನರನ್ನು ತೊಂದರೆ ಪಡಿಸುವಂತೆ ಅನೇಕ ಸಾರಿ ಹೆದರಿಸಿದನು. ತಿರಸ್ಕರಿಸಿದನು. ಹೊಡೆದನು. ಪೀಡಿಸಿದನು. ಈ ಕಷ್ಟಗಳಿಗೆ ಕೊನೆಯಿಲ್ಲವೆಂದು ತಿಳಿದು ಪ್ರಾಣಬಿಡಲು ನಿಶ್ಚಯಿಸಿದೆನು. ಈ ದುಃಖ ಸಾಗರದಿಂದ ಪಾರುಮಾಡುವಂತಹ ಮಗನನ್ನು ಕೊಡು.

೪೦-೪೧. ಇದನ್ನು ಕೇಳಿದ ವಜ್ರಾಂಗನು ಕೋಪದಿಂದ ಕೂಡಿದ ಕಣ್ಣುಗಳುಳ್ಳವನಾಗಿ ದೇವರಾಜನಾದ ಇಂದ್ರನಿಗೆ ತಕ್ಕ ಶಾಸನವನ್ನು ಮಾಡಲು ಶಕ್ತನಾಗಿದ್ದಾಗ್ಯೂ ಆ ಬಲಿಷ್ಠನು ಮತ್ತೆ ತಪಸ್ಸನ್ನೇ ಮಾಡಲು ಮೊದಲು ಮಾಡಿದನು. ಬ್ರಹ್ಮನು ಆ ವಜ್ರಾಂಗನ ಕ್ರೂರವಾದ ಸಂಕಲ್ಪವನ್ನು ತಿಳಿದು ಶೀಘ್ರವಾಗಿ ಅವನಿರುವಲ್ಲಿಗೆ ಬಂದನು.

೪೨. ಬ್ರಹ್ಮನು ಹೇಳಿದನು–ಎಲೈ ಮಗನೇ ! ನೀನು ಮತ್ತೇತಕ್ಕೆ ತಪಸ್ಸು ಮಾಡಲು ನಿಯಮವನ್ನು ಹೊಂದಿದೆ. ನಿನಗೆ ಬೇಕಾದ ಮಗನನ್ನು ನಾನೇ ಕೊಡುತ್ತೇನೆ.

॥ ವಜ್ರ ಉವಾಚ ॥

ಉತ್ಥಿತೇನ ಮಯಾ ದೃಷ್ಟ್ವಾ ಸಮಾಧಾನಾತ್ತ್ವದಾಜ್ಞಯಾ ।
ತ್ರಾಸಿತೇಂದ್ರೇಣ ಮಾಮಾಹ ಸಾ ವರಾಂಗೀ ಸುತಾರ್ಥಿನೀ ।
ಪುತ್ರಂ ಮೇ ತಾರಕಂ ದೇಹಿ ತುಷ್ಟೋಽಸಿ ತ್ವಂ ಪಿತಾಮಹ ॥ ೪೩ ॥

॥ ಬ್ರಹ್ಮೋವಾಚ ॥

ಅಲಂ ತೇ ತಪಸಾ ವೀರ ಮಾ ಕ್ಲೇಶೇ ದುಸ್ತರೇ ವಿಶ ।
ಪುತ್ರಸ್ತೇ ತಾರಕೋ ನಾಮ ಭವಿಷ್ಯತಿ ಮಹಾಬಲಃ ॥ ೪೪ ॥

ದೇವಸೀಮಂತಿನೀನಾಂ ತು ಧಮ್ಮಿಲ್ಲಕವಿಮೋಚಕಃ ।
ಇತ್ಯುಕ್ತೋ ದೈತ್ಯನಾಥಸ್ತು ಪ್ರಣಮ್ಯ ಪ್ರಪಿತಾಮಹಂ ॥ ೪೫ ॥

ಗತ್ವಾ ತಾಂ ನಂದಯಾಮಾಸ ಮಹಿಷೀಂ ಕರ್ಷಿತಾಂತರಾಂ ।
ತೌ ದಂಪತೀ ಕೃತಾರ್ಥೌ ತು ಜಗ್ಮತುಃ ಸ್ವಾಶ್ರಮಂ ತದಾ ॥ ೪೬ ॥

ಆಹಿತಂ ತು ತದಾ ಗರ್ಭಂ ವರಾಂಗೀ ವರವರ್ಣಿನೀ ।
ಪೂರ್ಣಂ ವರ್ಷಸಹಸ್ರಂ ತು ದಧಾರೋದರ ಏವ ಹಿ ॥ ೪೭ ॥

---

೪೩. ವಜ್ರನು ಹೇಳಿದನು- ಎಲೈ ಬ್ರಹ್ಮನೇ! ನೀನು ನನಗೆ ಸಮಾಧಾನ ಹೇಳುತ್ತಲೂ ನಾನು ಎದ್ದೆನು. ಒಂದು ನೋಡಲು ನನ್ನ ಹೆಂಡತಿಯನ್ನ ಇಂದ್ರನು ಹೆದರಿಸಿದುದು ತಿಳಿದು ಬಂದಿತು. ಆಗ ಅವಳು ಈ ದುಃಖದಿಂದ ಪಾರುಗಾಣಿಸುವ ಮಗನನ್ನು ಕೊಡೆಂದು ಕೇಳಿದಳು. ನೀನು ಸಂತೋಷಗೊಂಡಿದ್ದರೆ ನನಗೆ ಆ ದುಃಖ ವನ್ನು ನಾಶಮಾಡುವ ಮಗನನ್ನು ಕೊಡು.

೪೪. ಬ್ರಹ್ಮನು ಹೇಳಿದನು- ಎಲೈ ವೀರನೇ! ನಿನ್ನ ತಪಸ್ಸು ಸಾಕು. ಮತ್ತೆ ಕ್ಲೇಶಪಡಬೇಡ. ನಿನಗೆ ತಾರಕನೆಂಬ ಹೆಸರಿನ ಬಲಿಷ್ಠನಾದ ಮಗನಾಗುವನು.

೪೫-೪೬. ದೇವತೆಗಳ ಹೇಗಸರ ಹೆರಳನ್ನು ಬಿಚ್ಚಿಸುವ ಮಗನು ಹುಟ್ಟು ವನು. ಎನ್ನಲು ಆ ವಜ್ರಾಂಗನು ಬ್ರಹ್ಮನಿಗೆ ನಮಸ್ಕರಿಸಿ ಹೆಂಡತಿಯು ಬಳಿಗೆ ಹೋಗಿ ದುಃಖಗೊಂಡ ಆಕೆಯನ್ನು ಸಂತೋಷಪಡಿಸಿದನು. ಆ ದಂಪತಿಗಳು ಇಂತು ಕೃತಾರ್ಥರಾಗಿ ತಮ್ಮ ತಮ್ಮ ಆಶ್ರಮಕ್ಕೆ ಹೋದರು.

೪೭. ಅನಂತರ ಆ ವರಾಂಗಿಯು ಗರ್ಭಿಣಿಯಾದಳು ಆಕೆಯು ಒಂದು ಸಾವಿರ ವರ್ಷಗಳು ಪೂರ್ತಿಯಾಗುವವರೆಗೂ ಹೊಟ್ಟೆಯಲ್ಲಿ ಗರ್ಭವನ್ನು ಧರಿಸಿದ್ದಳು

ತತೋ ವರ್ಷಸಹಸ್ರಾಂತೇ ವರಾಂಗೀ ಸಾತ್ಯಸೂಯತ ।
ಜಾಯಮಾನೇ ತು ದೈತ್ಯೇ ತು ತಸ್ಮಿಂಲ್ಲೋಕಭಯಂಕರೇ ॥ ೪೮ ॥

ಚಚಾಲ ಸರ್ವಾ ಪೃಥಿವೀ ಪ್ರೋದ್ಧೂತಾಶ್ಚ ಮಹಾರ್ಣವಾಃ ।
ಚೇಲುರ್ಧರಾಧರಾಶ್ಚಾಪಿ ವವುರ್ವಾತಾಶ್ಚ ಭೀಷಣಾಃ ॥ ೪೯ ॥

ಜೇಪುರ್ಜಪ್ಯಂ ಮುನಿವರಾ ನೇದುರ್ವ್ಯಾಳಮೃಗಾ ಅಪಿ ।
ಜಹೌ ಕಾಂತಿಶ್ಚಂದ್ರಸೂರ್ಯೌ ನೀಹಾರೈಶ್ಚಾದರ್ಯಯನ್ದಿಶಃ ॥ ೫೦ ॥

ಜಾತೇ ಮಹಾಸುರೇ ತಸ್ಮಿನ್ಸರ್ವೇ ಚಾಪಿ ಮಹಾಸುರಾಃ ।
ಆಜಗ್ಮುರ್ಹರ್ಷಿತಾಸ್ತತ್ರ ತಥಾ ಚಾಸುರಯೋಷಿತಃ ॥ ೫೧ ॥

ಜಗುರ್ಹರ್ಷಸಮಾವಿಷ್ಟಾ ನನೃತುಶ್ಚಾಪ್ಸರೋಗಣಾಃ ।
ತತೋ ಮಹೋತ್ಸವೇ ಜಾತೇ ದಾನವಾನಾಂ ಮಹಾದ್ಯುತೇ ॥ ೫೨ ॥

ವಿಷಣ್ಣಮನಸೋ ದೇವಾಃ ಸಹೇಂದ್ರಾ ಅಭವಂಸ್ತದಾ ।
ವರಾಂಗೀ ತು ಸುತಂ ದೃಷ್ಟ್ವಾ ಹರ್ಷೇಣಾಪೂರಿತಾ ತದಾ ॥ ೫೩ ॥

---

೪೮-೫೦. ಅನಂತರ ಸಾವಿರ ವರ್ಷಗಳಾದ ಮೇಲೆ ಆಕೆಯು ಹೆತ್ತಳು. ಲೋಕ ಭಯಂಕರನಾದ ಆ ದೈತ್ಯನು ಹುಟ್ಟಲು ಭೂಮಿಯೆಲ್ಲವೂ ನಡುಗಿತು. ಸಮುದ್ರಗಳು ಅಲ್ಲೋಲಕಲ್ಲೋಲವಾದುವು. ಪರ್ವತಗಳು ಅಲ್ಲಾಡಿದುವು. ಗಾಳಿಯು ಭಯಂಕರವಾಗಿ ಬೀಸಿತು. ಮುನಿಗಳು ಮಂತ್ರಗಳನ್ನು ಜಪಿಸಿದರು. ಕ್ರೂರ ಮೃಗಗಳು ಕೂಗಿದುವು. ಕಾಂತಿಯು ಚಂದ್ರಸೂರ್ಯರನ್ನು ಬಿಟ್ಟಿತು. ಹಿಮದಿಂದ ದಿಕ್ಕುಗಳೆಲ್ಲವೂ ಮುಚ್ಚಿಕೊಂಡುವು.

೫೧ ಆ ಮಹಾಸುರನು ಹುಟ್ಟಲು ಅಲ್ಲಿಗೆ ಮಿಕ್ಕ ದೊಡ್ಡ ದೈತ್ಯರೆಲ್ಲರೂ ಬಂದರು. ಅಂತೆಯೇ ಆ ಸುರರ ಹೆಂಗಸರು ಸಂತೋಷದಿಂದ ಬಂದರು.

೫೨-೫೩. ಅವರೆಲ್ಲರೂ ಹರ್ಷದಿಂದ ಹಾಡಿದರು. ಅಪ್ಸರರು ಕುಣಿದರು. ದಾನವರಿಗೆ ಈ ಮಹೋತ್ಸವವಾಯಿತು. ಆಗ ದೇವೇಂದ್ರನೇ ಮೊದಲಾದ ದೇವತೆಗಳು/ ದುಃಖಗೊಂಡರು. ವರಾಂಗಿಯು ಈ ಮಗನನ್ನು ನೋಡಿ ಹರ್ಷದಿಂದ ಕೂಡಿಕೊಂಡಳು.

ಬಹುಮೇನೇ ಚ ದೈತ್ಯೇಂದ್ರೋ ವಿಜಾತಂ ತಂ ತದಾ ತು ಸಾ ।
ಜಾತಮಾತ್ರಸ್ತು ದೈತ್ಯೇಂದ್ರಃ ತಾರಕಶ್ಚೋಗ್ರವಿಕ್ರಮಃ ॥ ೫೪ ॥

ಅಭಿಷಿಕ್ತೋಸುರೈರ್ಮುಖ್ಯೈಃ ಕುಜಂಭಮಹಿಷಾದಿಭಿಃ ।
ಸರ್ವಾಸುರಮಹಾರಾಜ್ಯೇ ಪೃಥಿವೀತುಲನಕ್ಷಮೈಃ ॥ ೫೫ ॥

ಸ ತು ಪ್ರಾಪ್ತಮಹಾರಾಜ್ಯಸ್ತಾರಕೋ ನೃಪಸತ್ತಮ ।
ಉವಾಚ ದಾನವಶ್ರೇಷ್ಠೋ ಯುಕ್ತಿಯುಕ್ತಮಿದಂ ವಚಃ ॥ ೫೬ ॥

॥ ತಾರಕ ಉವಾಚ ॥

ಶೃಣುಧ್ವಮಸುರಾಸ್ಸರ್ವೇ ವಾಕ್ಯಂ ಮಮ ಮಹಾಬಲಾಃ ।
ವಂಶಕ್ಷಯಕರಾ ದೇವಾಃ ಸರ್ವೇಷಾಮೇವ ದಾನವಾಃ ॥ ೫೭ ॥

ಅಸ್ಮಾಕಂ ಜ್ಞಾತಿಧರ್ಮೇಣ ವಿರೂಢಂ ವೈರಮಕ್ಷಯಂ ।
ವಯಂ ತಪಶ್ಚರಿಷ್ಯಾಮಃ ಸುರಾಣಾಂ ನಿಗ್ರಹಾಯ ತು ॥ ೫೮ ॥

ಸ್ವಬಾಹುಬಲಮಾಶ್ರಿತ್ಯ ಸರ್ವ ಏವ ನ ಸಂಶಯಃ ॥ ೫೯ ॥

---

೫೪-೫೫. ಆಗ ದೈತ್ಯೇಂದ್ರನಾದ ವಜ್ರಾಂಗನೂ, ಆ ವರಾಂಗಿಯೂ ಬಹು ವಾಗಿ ಸಂತೋಷಿಸಿದರು. ಆ ಬಲಶಾಲಿಯಾದ ತಾರಕನು ಹುಟ್ಟಿದೊಡನೆಯೇ ಕುಜಂಭ, ಮಹಿಷ, ಮುಂತಾದ, ಭೂಮಿಯನ್ನು ತೂಕಮಾಡುವಷ್ಟು ಶಕ್ತರಾದ ಅಸುರರು ಅಸುರರಾಜ್ಯದಲ್ಲಿ ಅವನನ್ನು ಅಭಿಷೇಕಿಸಿದರು.

೫೬. ಆಗ ಆ ಅಸುರ ರಾಜ್ಯವನ್ನು ಹೊಂದಿದ ಬಲಿಷ್ಠನಾದ ಆ ತಾರಕನು ಕಾರಣಸಹಿತವಾದ ಈ ಮಾತನ್ನು ಹೇಳಿದನು.

೫೭. ತಾರಕನು ಹೇಳಿದನು– ಎಲೈ ಅಸುರರಿರಾ ! ನನ್ನ ಮಾತನ್ನು ಕೇಳಿರಿ ದೇವತೆಗಳು ನಮ್ಮ ವಂಶವನ್ನು ನಾಶಮಾಡತಕ್ಕವರು.

೫೮-೫೯. ನಮ್ಮಗಳ ಜ್ಞಾತಿಧರ್ಮದಿಂದ ನಮಗೂ, ಅವರಿಗೂ ನಾಶವಾಗದ ವೈರವುಂಟಾಯಿತು ಆದ್ದರಿಂದ ದೇವತೆಗಳ ನಿಗ್ರಹಕ್ಕೋಸ್ಕರ ನಾವು ತಪಸ್ಸನ್ನು ಮಾಡೋಣ. ನಾವು ತಪಸ್ಸು ಮಾಡಿ ಬಾಹುಬಲವನ್ನು ಹೊಂದಿ ನಮ್ಮ ಬಾಹು ಬಲದಿಂದಲೇ ಆ ದೇವತೆಗಳನ್ನು ನಾಶಮಾಡೋಣ.

॥ ಪುಲಸ್ತ್ಯ ಉವಾಚ ॥

ತಚ್ಛ್ರುತ್ವಾ ಸಮ್ಮತಂ ಕೃತ್ವಾ ಪಾರಿಯಾತ್ರಾಂ ಯಯೌ ಗಿರಿಂ ।
ನಿರಾಹಾರಃ ಪಂಚತಪಾಃ ಪತ್ರಭುಗ್ವಾರಿಭೋಜನಃ ॥ ೬೦ ॥

ಶತಂ ಶತಂ ಸಮಾನಾಂ ತು ತಪಾಂಸ್ಯೇತಾನ್ಯಥಾಕರೋತ್ ।
ಏವಂ ತು ಕರ್ಷಿತೇ ದೇಹೇ ತಪೋರಾಶಿತ್ವಮಾಗತೇ ॥ ೬೧ ॥

ಬ್ರಹ್ಮಾಗತ್ಯಾಹ ದೈತ್ಯೇಂದ್ರಂ ವರಂ ವರಯ ಸುವ್ರತ ।
ಸ ವವ್ರೇ ಸರ್ವಭೂತೇಭ್ಯೋ ನ ಮೇ ಮೃತ್ಯುರ್ಭವೇದಿತಿ ॥ ೬೨ ॥

ತಮುವಾಚ ತತೋ ಬ್ರಹ್ಮಾ ದೇಹಿನಾಂ ಮರಣಂ ಧ್ರುವಂ ।
ಯತಸ್ತತೋಽಪಿ ವರಯ ಮೃತ್ಯುಂ ಯಸ್ಮಾನ್ನ ಶಂಕಸೇ ॥ ೬೩ ॥

ತತಸ್ಸಂಚಿಂತ್ಯ ದೈತ್ಯೇಂದ್ರಃ ಶಿಶೋರ್ವೈ ಸಪ್ತವಾಸರಾತ್ ।
ವವ್ರೇ ಮಹಾಸುರೋ ಮೃತ್ಯುಂ ಮೋಹಿತೋ ಹ್ಯವಲೇಪತಃ ॥ ೬೪ ॥

---

೬೦. ಪುಲಸ್ತ್ಯನು ಹೇಳಿದನು- ಇದನ್ನು ಹೇಳಿ ಅವರನ್ನು ಒಪ್ಪಿಸಿ ಪಾರಿಯಾತ್ರವೆಂಬ ಬೆಟ್ಟಕ್ಕೆ ತಪಸ್ಸಿಗೆ ಹೋದನು. ಅಲ್ಲಿ ಆಹಾರವನ್ನು ತೆಗೆದುಕೊಳ್ಳದೆ ಎಲೆಗಳನ್ನು ತಿನ್ನುತ್ತಾ ನೀರನ್ನು ಕುಡಿಯುತ್ತಾ ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸನ್ನು ಮಾಡಿದನು.

೬೧-೬೩. ಹತ್ತು ಸಾವಿರ ವರ್ಷಗಳವರೆಗೂ ಈ ರೀತಿ ತಪಸ್ಸನ್ನು ಮಾಡಿದನು. ಈ ರೀತಿ ದೇಹವನ್ನು ಶೋಷಿಸಿ ತಪಸ್ಸಿನ ರಾಶಿಯೇ ಆದನು. ಆಗ ಬ್ರಹ್ಮನು ಬಂದು ಎಲೈ ದೈತ್ಯೇಂದ್ರನೇ ! ವರವನ್ನು ಕೇಳು, ಎಂದನು. ಆಗ ಆ ತಾರಕನು ಒಂದು ಪ್ರಾಣಿಯಿಂದಲೂ ನನಗೆ ಮರಣವಾಗಬೇಡವೆಂದನು. ಆಗ ಬ್ರಹ್ಮನು ಎಲೈ ತಾರಕನೇ ! ದೇಹಿಗಳಿಗೆ ಸಾವು ಯಾವಾಗಲೂ ಖಂಡಿತವು. ಯಾರಿಂದ ಮೃತ್ಯುವು ಬೇಡವೋ ಅವರಿಂದ ಬೇಡವೆಂದು ಕೇಳು.

೬೪. ಆಗ ರಾಕ್ಷಸನು ಯೋಚಿಸಿ ಹೆಮ್ಮೆಯಿಂದ ಬುದ್ಧಿಗೆಟ್ಟು ಏಳುವಾರಗಳೊಳಗಿರುವ ಮಗುವಿನಿಂದ ಮರಣವಾಗಲೆಂದು ಕೇಳಿಕೊಂಡನು.

ಜಗಾಮೋಮಿತ್ಯುದಾಹೃತ್ಯ ಬ್ರಹ್ಮಾ ದೈತ್ಯೋ ನಿಜಂ ಗೃಹಂ ।
ಅಥಾಹ ಮಂತ್ರಿಣಸ್ತೂರ್ಣಂ ಬಲಂ ಮೇ ಸಂಪ್ರಯುಜ್ಯತಾಂ ॥ ೬೫ ॥

ಯದಿ ವೋ ಮತ್ಪ್ರಿಯಂ ಕಾರ್ಯಂ ನಿಗ್ರಾಹ್ಯಾಸ್ಸುರಸತ್ತಮಾಃ ।
ನಿಗೃಹೀತೇಷು ಮೇ ಪ್ರೀತಿರ್ಜಾಯತೇ ಚಾತುಲಾಸ್ಸುರಾಃ ॥ ೬೬ ॥

ತಾರಕಸ್ಯ ವಚಶ್ಶ್ರುತ್ವಾ ಗ್ರಸನೋ ನಾಮ ದಾನವಃ ।
ಸೇನಾನೀರ್ದೈತ್ಯರಾಜಸ್ಯ ಸಜ್ಜಂ ಚಕ್ರೇ ಬಲಂ ಚ ತತ್ ॥ ೬೭ ॥

ಆಹತ್ಯ ಭೇರೀಂ ಗಂಭೀರಾಂ ದೈತ್ಯಾನಾಹೂಯ ಸತ್ವರಃ ।
ದಶಕೋಟೀಶ್ವರಾ ದೈತ್ಯಾ ದೈತ್ಯಾನಾಂ ಚಂಡವಿಕ್ರಮಾಃ ॥ ೬೮ ॥

ತೇಷಾಮಗ್ರೇಸರೋ ಜಂಭಂ ಕುಜಂಭೋನಂತರೋ ಸುರಃ ।
ಮಹಿಷಃ ಕುಂಜರೋ ಮೇಘಃ ಕಾಲನೇಮಿರ್ನಿಮಿಸ್ತಥಾ ॥ ೬೯ ॥

ಮಂಥನೋ ಜಂಭಕಶ್ಶುಂಭೋ ದೈತ್ಯೇಂದ್ರಾಃ ದಶ ನಾಯಕಾಃ ।
ಅನ್ಯೇ ಚ ಶತಶಸ್ತತ್ರ ಪೃಥಿವೀತುಲನಕ್ರಮಾಃ ॥ ೭೦ ॥

---

೬೫. ಆಗ ಬ್ರಹ್ಮನು ಹಾಗೆ ಆಗಲೆಂದನು. ಇತ್ತ ದೈತ್ಯನು ತನ್ನ ಮನೆಗೆ ಬಂದು ಮಂತ್ರಿಗಳನ್ನು ಕುರಿತು ನನ್ನ ಸೈನ್ಯವನ್ನು ಸಿದ್ಧಪಡಿಸಿರೆಂದನು.

೬೬. ನನಗೆ ನೀವು ಸಂತೋಷವನ್ನುಂಟುಮಾಡಬೇಕೆಂದಿದ್ದರೆ ದೇವತೆಗಳನ್ನು ನಿಗ್ರಹಿಸಬೇಕು. ಅವರ ನಿಗ್ರಹವಾದ ಮೇಲೆ ನನಗೆ ಬಹಳ ಸಂತೋಷವುಂಟಾಗುತ್ತದೆ.

೬೭. ತಾರಕನ ಆ ಮಾತನ್ನು ಕೇಳಿ ಗ್ರಸನನೆಂಬ ದಾನವನು ಆ ದಾನವನ ಸೇನಾಪತಿಯಾಗಿ ಅವನ ಸೈನ್ಯವನ್ನು ಸಿದ್ಧಮಾಡಿದನು.

೬೮. ಆಗ ರಣಭೇರಿಯನ್ನು ಹೊಡೆದು ಜಾಗ್ರತೆಯಾಗಿ ದೈತ್ಯರೆಲ್ಲರನ್ನೂ ಕರೆಸಿದನು. ಹತ್ತುಕೋಟಿ ಜನ ದೈತ್ಯರು ಅವರ ಯಜಮಾನರೂ ಸಿದ್ಧರಾದರು. ಅವರೆಲ್ಲರೂ ಚಂಡವಿಕ್ರಮರು.

೬೯–೭೦. ಆ ಸೈನ್ಯಗಳಿಗೆಲ್ಲಾ ಜಂಭ, ಕುಜಂಭ, ಮಹಿಷ, ಕುಂಜರ, ಮೇಘ, ಕಾಲನೇಮಿ, ನಿಮಿ, ಮಂಥನ, ಜಂಭಕ, ಶುಂಭ ಎಂಬ ಹತ್ತು ಜನರು ನಾಯಕರಾದರು. ಇವರಲ್ಲದೆ ಭೂಮಿಯನ್ನು ತೂಗುವಷ್ಟು ಯೋಗ್ಯತೆಯುಳ್ಳ ಇನ್ನೂ ಅನೇಕರೂ ಸಿದ್ಧರಾದರು.

ಗರುಡಾನಾಂ ಸಹಸ್ರೇಣ ಚಕ್ರಾಷ್ಟಕವಿಭೂಷಿತಃ ।
ಸಕೂವರಪರೀವಾರಶ್ಚತುರ್ಯೋಜನವಿಸ್ತೃತಃ ॥ ೭೦ ॥

ಸ್ಯಂದನಸ್ತಾರಕಸ್ಯಾಸೀದ್ವ್ಯಾಘ್ರಸಿಂಹಖರಾರ್ವಭಿಃ ।
ಯುಕ್ತಾ ರಥಾಸ್ತು ಗ್ರಸನ ಜಂಭಕೌ ಜಂಭಕುಂಭಿನಾಂ ॥ ೭೨ ॥

ಮೇಘಸ್ಯ ದ್ವೀಪಿಭಿರ್ಯುಕ್ತಃ ಕೂಷ್ಮಾಂಡೈಃ ಕಾಲನೇಮಿನಃ ।
ಪರ್ವತಾಭಶ್ಚತುರ್ದಂಷ್ಟ್ರೋ ನಿಮಿಶ್ಚೈವ ಮಹಾಗಜಃ ॥ ೭೩ ॥

ಶತಹಸ್ತತುರಂಗಸ್ಥಂ ಮಂಥನೋ ನಾಮ ದೈತ್ಯರಾಟ್ ।
ಜಂಭಕಸ್ತೂಷ್ಟ್ರಮಾರೂಢೋ ಗಿರೀಂದ್ರಾಭಂ ಮಹಾಬಲಃ ॥ ೭೪ ॥

ಶಂಭೋ ಮೇಷಂ ಸಮಾರೂಢೋಽನ್ಯೇಷ್ಯೇವಂ ಚಿತ್ರವಾಹನಾಃ ।
ಪ್ರಚಂಡಾಶ್ಚಿತ್ರವರ್ಮಾಣಃ ಕುಂಡಲೋಷ್ಣೀಷಭೂಷಿತಾಃ ॥ ೭೫ ॥

ತದ್ಬಲಂ ದೈತ್ಯಸಿಂಹಸ್ಯ ಭೀಮರೂಪಂ ವ್ಯಜಾಯತ ।
ಪ್ರಮತ್ತಮತ್ತಮಾತಂಗ ತುರಂಗರಥಸಂಕುಲಂ ॥ ೭೬ ॥

---

೭೧-೭೨. ತಾರಕನು ಸಾವಿರ ಗರುಡರುಗಳನ್ನು ಹಾಕಿದ್ದ ರಥದಲ್ಲಿ ಕುಳಿತು ಬಂದನು. ಮತ್ತು ಅದಕ್ಕೆ ಎಂಟು ಚಕ್ರಗಳಿದ್ದುವು. ಅದಕ್ಕೆ ಬೇಕಾದಷ್ಟು ನೊಗಗಳೂ ಬುರುಕೆಗಳೂ ಇದ್ದುವು. ಆ ರಥವು ನಾಲ್ಕು ಯೋಜನದಷ್ಟು ವಿಸ್ತಾರವಾಗಿದ್ದತು. ಗ್ರಸನನು ಹುಲಿಗಳನ್ನೂ, ಜಂಭನು ಸಿಂಹಗಳನ್ನೂ, ಕೌಜಂಭನು ಕತ್ತೆಗಳನ್ನೂ, ಕುಂಭಿಯು ಕುದುರೆಯನ್ನೂ ಕಟ್ಟಿಕೊಂಡು ತಮ್ಮ ತಮ್ಮ ರಥಗಳಲ್ಲಿ ಸಿದ್ಧರಾದರು.

೭೩-೭೫. ಮೇಘನು ಹುಲಿಯನ್ನು ಕಟ್ಟಿಕೊಂಡೂ, ಕಾಲನೇಮಿಯು ಕೂಷ್ಮಾಂಡಗಳನ್ನು ಕಟ್ಟಿಕೊಂಡೂ ಹೊರಟರು. ನಿಮಿಯು ನಾಲ್ಕು ಕೊಂಬುಳ್ಳ ಐರಾವತದಂತಹ ಆನೆಯ ಮೇಲೂ, ನೂರು ಕೈಯುಳ್ಳ ಮಂಥನನೆಂಬುವನು ಕುದುರೆಯ ಮೇಲೂ, ಮಹಾಬಲಿಷ್ಠನಾದ ಜಂಭಕನು ದೊಡ್ಡ ಒಂಟೆಯ ಮೇಲೂ, ಕುಳಿತು ಯುದ್ಧಕ್ಕೆ ಹೊರಟರು. ಇವರೆಲ್ಲರೂ ಗಟ್ಟಿಗರು. ನಾನಾ ಬಗೆಯಾದ ಕವಚವನ್ನೂ ತೊಟ್ಟಿದ್ದರು. ಕಿವಿಗೆ ಕುಂಡಲಗಳನ್ನೂ, ತಲೆಗೆ ರುಮಾಲುಗಳನ್ನೂ ಹಾಕಿಕೊಂಡು ಅಲಂಕರಿಸಿಕೊಂಡಿದ್ದರು.

೭೬-೮೦. ಮದಿಸಿದ ಆನೆಗಳು, ಕುದುರೆಗಳು, ಒಳ್ಳೆಯ ರಥಗಳೂ ಉಳ್ಳ, ಆ ದೈತ್ಯಶ್ರೇಷ್ಠನ ಸೈನ್ಯವು ಭಯಂಕರವಾಗಿ ಕಂಗೊಳಿಸಿತು. ಈ ರೀತಿ ಬಹಳವಾಗಿ

ಪ್ರತಸ್ಥೇಮರಯುದ್ಧಾಯ ಬಹುಪತ್ತಿಪತಾಕಿಕಂ ।
ಏತಸ್ಮಿನ್ನಂತರೇವಾಯುರ್ದೇವದೂತೋ ಸುರಾಲಯೇ ॥ ೭೭ ॥

ದೃಷ್ಟ್ವಾ ತು ದಾನವಬಲಂ ಜಗಾಮೇಂದ್ರಸ್ಯ ಶಂಸಿತುಂ ।
ಸ ಗತ್ವಾ ತು ಸಭಾಂ ದಿವ್ಯಾಂ ಮಹೇಂದ್ರಸ್ಯ ಮಹಾತ್ಮನಃ ॥ ೭೮ ॥

ಶಶಂಸ ಮಧ್ಯೇ ದೇವಾನಾಮಿದಂ ಕಾರ್ಯಮುಪಸ್ಥಿತಂ ।
ತಚ್ಛ್ರುತ್ವಾ ದೇವರಾಜಸ್ತು ನಿಮೀಲಿತವಿಲೋಚನಃ ॥ ೭೯ ॥

ಬೃಹಸ್ಪತಿಮುವಾಚೇದಂ ವಾಕ್ಯಂ ಕಾಲೇ ಮಹಾಭುಜಃ । ॥ ೮೦ ॥

॥ ಇಂದ್ರ ಉವಾಚ ॥

ಸಂಪ್ರಾಪ್ತೋಽತಿವಿಮರ್ದೋಽಯಂ ದೇವಾನಾಂ ದಾನವೈಸಹ ।
ಕಾರ್ಯಂ ಕಿಮತ್ರ ತದ್ಬ್ರೂಹಿ ನೀತ್ಯುಪಾಯೋಪಬೃಂಹಿತಂ ॥ ೮೧ ॥

ಏತಚ್ಛ್ರುತ್ವಾ ತು ವಚನಂ ಮಹೇಂದ್ರಸ್ಯ ಗಿರಾಂ ಪತಿಃ ।
ಇತ್ಯುವಾಚ ಮಹಾಭಾಗೋ ಬೃಹಸ್ಪತಿರುದಾರಧೀಃ ॥ ೮೨ ॥

---

ಪತಾಕೆಗಳನ್ನೂ ಹೊಂದಿದ ಆ ದೈತ್ಯರ ಸೈನ್ಯವು ದೇವತೆಗಳ ಮೇಲೆ ಯುದ್ಧಕ್ಕೆ ಹೊರಟಿತು. ಇಷ್ಟರೊಳಗೆ ದೇವದೂತನಾದ ವಾಯುವು ದಾನವರ ಪಟ್ಟಣದಲ್ಲಿ ಅವರ ಸೈನ್ಯವನ್ನು ನೋಡಿ ಅದನ್ನು ಇಂದ್ರನಿಗೆ ಹೇಳಲು ಹೊರಟನು. ಆ ವಾಯುವು ಮಹಾತ್ಮನಾದ ದೇವೇಂದ್ರನ ಸಭೆಗೆ ಹೋಗಿ ದೇವತೆಗಳ ಮಧ್ಯದಲ್ಲಿ ಈಗ ಪ್ರಾಪ್ತನಾಗಿರುವ ಈ ಯುದ್ಧದ ವಿಷಯವನ್ನು ತಿಳಿಸಿದನು. ಅದನ್ನು ಕೇಳಿ ದೇವರಾಜನಾದ ಇಂದ್ರನು ಕಣ್ಣನ್ನು ಮುಚ್ಚಿಕೊಂಡು ಕೊಂಚಹೊತ್ತು ಯೋಚಿಸಿ ಸರಿಯಾದ ಸಮಯದಲ್ಲಿ ಬೃಹಸ್ಪತಿಯನ್ನು ಕುರಿತು ಇಂತೆಂದನು.

೮೧. ಇಂದ್ರನು ಹೇಳಿದನು– ಎಲೈ ಬೃಹಸ್ಪತಿಯೇ ! ಈಗ ದೇವತೆಗಳಿಗೂ, ದಾನವರಿಗೂ, ಯುದ್ಧವು ಸಂಭವಿಸುತ್ತದೆ. ಈಗ ನೀತಿಯಿಂದ ಕೂಡಿದ ಯಾವ ಕೆಲಸವನ್ನು ಮಾಡಬೇಕು ಎಂಬುದನ್ನು ತಿಳಿಸು.

೮೨. ಬೃಹಸ್ಪತಿಯು ಮಹೇಂದ್ರನ ಈ ಮಾತನ್ನು ಕೇಳಿ ಬುದ್ಧಿವಂತಿಕೆಯಿಂದ ಇಂತೆಂದನು.

॥ ಬೃಹಸ್ಪತಿರುವಾಚ ॥

ಸಾಮಪೂರ್ವಾ ಶ್ರುತಾ ನೀತಿಶ್ಚತುರಂಗಾ ಪತಾಕಿನೀ ।
ಜಿಗೀಷತಾಂ ಸುರಶ್ರೇಷ್ಠ ಸ್ಥಿತಿರೇಷಾ ಸನಾತನೀ ॥ ೮೩ ॥

ಸಾಮಭೇದಸ್ತಥಾದಾನಂ ದಂಡಶ್ಚಾಂಗಚತುಷ್ಟಯಂ ।
ನ ಸಾಂತ್ವಗೋಚರೇ ಲುಬ್ಧಾ ನ ಭೇದ್ಯಾಸ್ತ್ವೇಕಧರ್ಮಿಣಃ ॥ ೮೪ ॥

ನ ದಾನಮಾತ್ರ ಸಂಸಿಧ್ಯೈ ಪ್ರಸಹ್ಯೈವಾಪಹಾರಿಣಾಂ ।
ಏಕೋಽಭ್ಯುಪಾಯೋ ದಂಡೋತ್ರ ಭವತಾಂ ಯದಿ ರೋಚತೇ ॥ ೮೫ ॥

ಏವಮುಕ್ತಃ ಸಹಸ್ರಾಕ್ಷಃ ಏವಮೇತದುವಾಚ ಹ ।
ಕರ್ತವ್ಯತಾಂ ಚ ಸಂಚಿಂತ್ಯ ಪ್ರೋವಾಚಾಮರಸಂಸದಿ ॥ ೮೬ ॥

॥ ಇಂದ್ರ ಉವಾಚ ॥

ಅವಧಾನೇನ ಮೇ ವಾಚಂ ಶೃಣುಧ್ವಂ ನಾಕವಾಸಿನಃ ।
ಭವಂತೋ ಯಜ್ಞಭೋಕ್ತಾರೋ ದಿವ್ಯಾತ್ಮಾನೋ ಹಿ ಸಾತ್ವಯಾಃ ॥ ೮೭ ॥

---

೮೩. ಬೃಹಸ್ಪತಿಯು ಹೇಳಿದನು- ಎಲೈ ಸುರಶ್ರೇಷ್ಠನೇ! ನೀತಿಯು ಸಾಮ ನೀತಿಯನ್ನೇ ಮುಂದುಮಾಡಿಕೊಂಡಿರುವುದೆಂದೂ, ಸೈನ್ಯವು ಆನೆ, ಕುದುರೆ, ರಥ, ಕಾಲಾಳುಗಳೆಂಬ ನಾಲ್ಕು ಅಂಗವುಳ್ಳದ್ದೆಂದೂ ಪ್ರಸಿದ್ಧವಾಗಿದೆ. ಜಯಿಸುವವನಿಗೆ ಹಿಂದಿನಿಂದಲೂ ಬಂದಿರುವ ರೀತಿಯೇ ಇದು.

೮೪. ಸಾಮ, ಭೇದ, ದಾನ, ದಂಡಗಳೆಂಬ ನಾಲ್ಕು ವಿಧವು ನೀತಿಯಲ್ಲುಂಟು. ಇವುಗಳಲ್ಲಿ ಒಂದೇ ರೀತಿಯಾದ ಸ್ಥಿತಿಯನ್ನು ಹೊಂದಿರುವ ಶತ್ರುವು ಸಾಮಕ್ಕೆ ಆಸೆ ಪಟ್ಟು ಒಳಗಾಗನು. ಭೇದೋಪಾಯವೂ ನಡಿಯುವಂತಿಲ್ಲ.

೮೫. ಇವರ ವಿಷಯದಲ್ಲಿ ದಾನವು ಸಿದ್ಧಿಸುವುದಿಲ್ಲ. ಅವರು ಬಲಾತ್ಕಾರದಿಂದಲೇ ಕಸಿದುಕೊಳ್ಳುವವರಾಗಿದ್ದಾರೆ. ಆದ್ದರಿಂದ ನಿಮ್ಮಗಳಿಗೆ ಇಷ್ಟವಾದರೆ ದಂಡೋಪಾಯವೊಂದೇ ಸರಿಯಾದುದು.

೮೬. ಇಂದ್ರನು ಇದನ್ನು ಕೇಳಿ ನೀನು ಹೇಳಿದುದು ಸರಿ, ಎಂದನು. ಅಲ್ಲದೆ ಆ ದೇವತೆಗಳ ಸಭೆಯಲ್ಲಿ ಏನು ಮಾಡಬೇಕೆಂಬುದನ್ನೂ ಯೋಚಿಸಿ ಇಂತೆಂದನು.

೮೭-೮೭. ಇಂದ್ರನು ಹೇಳಿದನು- ಎಲೈ ದೇವತೆಗಳಿರಾ! ನೀವೆಲ್ಲರೂ ನನ್ನ ಮಾತನ್ನು ಗಮನಿಸಿ ಕೇಳಿರಿ. ನೀವೆಲ್ಲರೂ ಯಜ್ಞದ ಭಾಗವನ್ನು ತಿನ್ನುವವರು.

ಸ್ವೇ ಮಹಿಮ್ನಿ ಸ್ಥಿತಾ ನಿತ್ಯಂ ಜಗತಃ ಪಾಲನೇ ರತಾಃ ।
ಕ್ರಿಯತಾಂ ಸಮರೋದ್ಯೋಗಃ ಸೈನ್ಯಂ ಸಂಯೋಜ್ಯತಾಂ ಮಮ ॥ ೮೮ ॥

ಆಧ್ರಿಯಂತಾಂ ಚ ಶಸ್ತ್ರಾಣಿ ಪೂಜ್ಯಂತಾಂ ಶಸ್ತ್ರದೇವತಾಃ ।
ವಾಹನಾನಿ ವಿಮಾನಾನಿ ಯೋಜಯಧ್ವಂ ಮಮೇಶ್ವರಾಃ ॥ ೮೯ ॥

ಯಮಂ ಸೇನಾಪತಿಂ ಕೃತ್ವಾ ಶೀಘ್ರಮೇವ ದಿವೌಕಸಃ ॥ ೯೦ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾಸ್ಸಮನಹ್ಯಂತ ದೇವಾನಾಂ ಯೇ ಪ್ರಧಾನತಃ ।
ವಾಜಿನಾಮಯುತೇನಾಜೌ ಹೇಮಘಂಟಾಪರಿಷ್ಕೃತಂ ॥ ೯೧ ॥

ನಾನಾಶ್ಚರ್ಯಗುಣೋಪೇತಂ ಸಂಪ್ರಾಪ್ತಂ ದೇವದಾನವೈಃ ।
ರಥಂ ಮಾತಲಿನಾ ಯುಕ್ತಂ ದೇವರಾಜಸ್ಯ ದುರ್ಜಯಂ ॥ ೯೨ ॥

ಯಮೋ ಮಹಿಷಮಾಸ್ಥಾಯ ಸೇನಾಗ್ರೇಸಮವರ್ತತ ।
ಚಂಡಕಿಂಕರವೃಂದೇನ ಸರ್ವತಃ ಪರಿವಾರತಃ ॥ ೯೩ ॥

---

ಉತ್ತಮವಾದ ಶರೀರವುಳ್ಳವರು, ಮಕ್ಕಳುಮರಿಗಳುಳ್ಳವರು ನಿಮ್ಮ ನಿಮ್ಮ ಮಹಿಮೆಯಲ್ಲಿರುವವರು. ಯಾವಾಗಲೂ ಪ್ರಪಂಚದ ರಕ್ಷಣೆಯಲ್ಲಿಯೇ ನಿರತರಾಗಿದ್ದೀರಿ ನೀವೆಲ್ಲರೂ ಯುದ್ಧೋದ್ಯಮಕ್ಕೆ ಸಿದ್ಧರಾಗಿರಿ. ನನ್ನ ಸೈನ್ಯವೆಲ್ಲವನ್ನೂ ಸಿದ್ಧಮಾಡಿರಿ

೮೯-೯೦. ಶಸ್ತ್ರಗಳೆಲ್ಲವನ್ನೂ ತನ್ನಿರಿ ಶಸ್ತ್ರದೇವತೆಗಳನ್ನು ಪೂಜಿಸಿರಿ. ವಾಹನಗಳನ್ನೂ ವಿಮಾನಗಳನ್ನೂ ಒಂದೆಡೆಗೆ ತಂದು ಸೇರಿಸಿರಿ ಯಮನನ್ನ ಸೇನಾಧಿಪತಿಯನ್ನಾಗಿ ಮಾಡಿರಿ. ಇವೆಲ್ಲವನ್ನೂ ಶೀಘ್ರವಾಗಿ ಮಾಡಿರಿ.

೯೧-೯೨. ಪುಲಸ್ತ್ಯನು ಹೇಳಿದನು- ಇಂದ್ರನು ಹೀಗೆ ಹೇಳುತ್ತಲೂ, ದೇವತೆಗಳಲ್ಲಿ ಪ್ರಧಾನರಾದವರು ಎಲ್ಲವನ್ನೂ ಸಿದ್ಧಮಾಡಿದರು. ಹತ್ತು ಸಾವಿರ ಕುದುರೆಗಳಿಂದಲೂ, ಚಿನ್ನದ ಗೆಜ್ಜೆ ಗಂಟೆಗಳಿಂದಲೂ, ಅನೇಕ ಆಶ್ಚರ್ಯಗಳಿಂದಲೂ, ಕೂಡಿದ ದೇವದಾನವರೊಡನೆ ಅನೇಕಬಾರಿ ಎದುರಿಸಿದ, ಇಂದ್ರನ ರಥವು ಮಾತಳಿ ಎಂಬ ಸಾರಥಿಯೊಡನೆ ಕೂಡಿ ದುರ್ಜಯವಾಗಿ ಕಾಣುತ್ತ ಪ್ರಕಾಶಿಸಿತು.

೯೩. ಯಮನು ಕೋಣನ ಮೇಲೆ ಕುಳಿತು ಕ್ರೂರವಾದ ಸೇವಕರೊಡನೆ ಕೂಡಿ ಸೇನೆಯ ಮುಂಭಾಗದಲ್ಲಿ ನಿಂತನು.

ಕಲ್ಪಕಾಲೋದ್ಧತಜ್ವಾಲಾಪೂರಿತಾಂಬರಗೋಚರಃ ।
ಹುತಾಶನಸ್ತ್ವಜಾರೂಢಃ ಶಕ್ತಿಹಸ್ತೋ ವ್ಯವಸ್ಥಿತಃ ॥ ೯೪ ॥

ಪವನೋಂಕುಶಹಸ್ತಶ್ಚ ವಿಸ್ಫಾರಿತ ಮಹಾಜವಃ ।
ಭುಜಗೇಂದ್ರಸಮಾರೂಢೋ ಜಲೇಶೋ ಭಗವಾನ್ಸ್ವಯಂ ॥ ೯೫ ॥

ನರಯುಕ್ತೇ ರಥೇ ದೇವೋ ರಾಕ್ಷಸೇಶೋ ವಿಯಚ್ಚರಃ ।
ತೀಕ್ಷ್ಣಬಾಹುಯುತೋ ಭೀಮಃ ಸಮರೇ ಸಮವಸ್ಥಿತಃ ॥ ೯೬ ॥

ಮಹಾಸಿಂಹ ರಥೇ ದೇವೋ ಧನಾಧ್ಯಕ್ಷೋ ಗದಾಯುಧಃ ।
ಚಂದ್ರಾದಿತ್ಯಾವಶ್ವಿನೌ ಚ ಚತುರಂಗಬಲಾನ್ವಿತಾಃ ॥ ೯೭ ॥

ಸೇನಾ ಸಾ ದೇವರಾಜಸ್ಯ ದುರ್ಜಯಾಭುವನತ್ರಯೇ ।
ಕೋಟಯಸ್ತಾಸ್ತ್ರಯಸ್ತ್ರಿಂಶದ್ದೇವದೇವನಿಕಾಯಿನಾಂ ॥ ೯೮ ॥

---

೯೪. ಅಗ್ನಿಯು ಪ್ರಳಯಕಾಲದ ಜ್ವಾಲೆಯಿಂದ ಆಕಾಶವೆಲ್ಲವನ್ನೂ ತುಂಬುತ್ತ ಟಗರಿನ ಮೇಲೆ ಕುಳಿತು ಶಕ್ತ್ಯಾಯುಧವನ್ನು ಹಿಡಿದು ಸಿದ್ಧನಾದನು.

೯೫-೯೬. ವಾಯುವು ಅಂಕುಶವನ್ನು ಹಿಡಿದು ತನ್ನ ವೇಗವೆಲ್ಲವನ್ನೂ ಹೊಂದಿ ಸಿದ್ಧನಾದನು. ನೀರಿಗೆ ಒಡೆಯನಾದ ವರುಣನು ಸರ್ಪರಾಜನ ಮೇಲೆ ಕುಳಿತು ಸಿದ್ಧನಾದನು. ರಾಕ್ಷಸರಿಗೆ ಒಡೆಯನಾದ ನಿರ್ಋತಿಯು ನರರಿಂದ ಎಳೆಯಲ್ಪಡುವ ತೇರಿನಲ್ಲಿ ಕುಳಿತನು.

೯೭ ಕುಬೇರನು ದೊಡ್ಡ ಸಿಂಹವನ್ನು ಕಟ್ಟಿರುವ ರಥದಲ್ಲಿ ಗದೆಯನ್ನು ಹಿಡಿದು ಕುಳಿತನು. ಚಂದ್ರ, ಸೂರ್ಯ, ಅಶ್ವಿನೀ ದೇವತೆಗಳೂ, ಚತುರಂಗ ಸೇನೆ ಜೊತೆಗೂಡಿ ಹೊರಟರು.

೯೮. ಆ ದೇವತೆಗಳ ಮೂವತ್ತುಮೂರು ಕೋಟಿ ಸೇನೆಯೂ ಸೇರಿತು. ಮತ್ತು ಈ ರೀತಿಯಾದ ಇಂದ್ರನ ಸೇನೆಯು ಮೂರು ಲೋಕದಲ್ಲಿಯೂ, ಜಯಿಸಲಸಾಧ್ಯವೆಂದು ಕಂಡುಬಂದಿತು.

ಹಿಮಾಚಲಾಭೇ ಸಿತಚಾರುಚಾಮರೇ
ಸುವರ್ಣಪದ್ಮಾಮಲಸುಂದರಸ್ರಜಿ ।
ಕೃತಾಭಿರಾಮೋಜ್ಜ್ವಲಕುಂಕುಮಾಂಕುಶೇ
ಕಪೋಲಲೀಲಾಲಿಕದಂಬಸಂಕುಲೇ　॥ ೯೯ ॥

ಸ್ಥಿತಸ್ತ್ವದೈರಾವಣನಾಕಕುಂಜರೇ ।
ಮಹಾಬಲಶ್ಚಿತ್ರವಿಭೂಷಣಾಂಬರಃ ॥
ವಿಶಾಲವಜ್ರಾಂಶುವಿತಾನಭೂಷಿತಃ ।
ಪ್ರಕೀರ್ಣಕೇಯೂರಭುಜಂಗಮಂಡಲಃ　॥ ೧೦೦ ॥

ಸಹಸ್ರದೃಗ್ವಂದಿತಪಾದಪಲ್ಲವ ।
ಸ್ತ್ರಿವಿಷ್ಟಪೇಽಶೋಭತ ಪಾಕಶಾಸನಃ ॥
ತುರಂಗಮಾತಂಗಕುಲೌಘಸಂಕಲೋ ।
ಸಿತಾತಪತ್ರಧ್ವಜಶಾಲಿನೀ ಚ　॥ ೧೦೧ ॥

ಬಭೂವ ಸಾ ದುರ್ಜಯಪತ್ತಿಸಂತತಿ ।
ರ್ವಿಭಾತಿ ನಾನಾಯುಧಯೋಧದುಸ್ತರಾ　॥ ೧೦೨ ॥

ತತೋಽಶ್ವಿನೌ ಚ ಮರುತಃ ಸಸಾಧ್ಯಾಸ್ಸಪುರಂದರಾಃ ।
ಯಕ್ಷರಾಕ್ಷಸಗಂಧರ್ವಾ ದಿವ್ಯನಾನಾಸ್ತ್ರಪಾಣಯಃ　॥ ೧೦೩ ॥

---

೯೯-೧೦೨. ಹಿಮವತ್ಪರ್ವತದಂತಿರುವ, ಕಿವಿಯ ಪಕ್ಕಗಳಲ್ಲಿ ಚಾಮರಗಳನ್ನು ಕಟ್ಟಿರುವ, ಚಿನ್ನದ ಕಮಲಗಳ ಮಾಲೆಯನ್ನು ಹಾಕಿರುವ, ಚೆನ್ನಾಗಿ ಕಾಣುವಂತೆ ಕುಂಕುಮದಿಂದ ಮೈಮೇಲೆ ಬಳ್ಳಿಗಳನ್ನು ಬರೆದಿರುವ, ಕಪೋಲದಲ್ಲಿ ಮದದ ವಾಸನೆಗೆ ದುಂದುಬಿಗಳು ಓಡಾಡುತ್ತಿರುವ, ಸ್ವರ್ಗದ ಆನೆಯಾದ ಐರಾವತದ ಮೇಲೆ ಒಲಿಷ್ಠನಾದ, ಭುಜಕೀರ್ತಿಗಳಿಂದ ಪ್ರಕಾಶಿಸುತ್ತಿರುವ ಭುಜಗಳುಳ್ಳ, ಸಾವಿರ ಕಣ್ಣುಗಳುಳ್ಳ ಪಾಕನನ್ನು ಕೊಂದ ಎಲ್ಲರಿಂದಲೂ ನಮಸ್ಕರಿಸಲ್ಪಡುವ ಪಾದಗಳುಳ್ಳ ಇಂದ್ರನು ಕುಳಿತನು. ಆನೆ ಕುದುರೆಗಳಿಂದ ಕೂಡಿದ, ಬೆಳ್ಳಗಿರುವ ಛತ್ರಿ ಧ್ವಜಗಳಿಂದ ಶೋಭಿಸುವ, ಬಗೆಬಗೆಯ ಆಯುಧಗಳಿಂದ ಜಯಿಸಲಸಾಧ್ಯವಾದ ಆ ಸೇನೆಯು ಜಯಿಸಲಸಾಧ್ಯವಾಗಿ ತೋರುತ್ತ ಪ್ರಕಾಶಿಸಿತು.

೧೦೩-೧೦೪. ಅನಂತರ ಅಶ್ವಿನೀ ದೇವತೆಗಳು, ಮರುತ್ತುಗಳು. ಸಾಧ್ಯರು, ಯಕ್ಷರು, ರಾಕ್ಷಸರು, ಗಂಧರ್ವರು, ಇಂದ್ರನು, ಇವರೆಲ್ಲರೂ ನಾನಾ ಬಗೆಯಾದ

ಜಘ್ನುರ್ದೈತ್ಯೇಶ್ವರಂ ಸರ್ವೇ ಸಂಭೂಯ ತು ಮಹಾಬಲಾಃ ।
ನ ಚಾಸ್ತ್ರಾಣ್ಯಸ್ಯ ಸಜ್ಜಂತೇ ಗಾತ್ರೇ ವಜ್ರಾಚಲೋಪಮೇ ॥ ೧೦೪ ॥

ಅಥೋ ರಥಾದವಪ್ಲುತ್ಯ ತಾರಕೋ ದಾನವಾಧಿಪಃ ।
ಜಘಾನ ಕೋಟಿಶೋ ದೇವಾನ್ಕರಪಾರ್ಷ್ಣಿಭಿರೇವ ಚ ॥ ೧೦೫ ॥

ಹತಶೇಷಾಣಿ ಸೈನ್ಯಾನಿ ದೇವಾನಾಂ ವಿಪ್ರದುದ್ರುವುಃ ।
ದಿಶೋ ಭೀತಾನಿ ಸಂತ್ಯಜ್ಯ ರಣೋಪಕರಣಾನಿ ಚ ।
ದೃಷ್ಟ್ವಾ ತಾನ್ವಿದ್ರುತಾನ್ದೇವಾನ್ತಾರಕೋ ವಾಕ್ಯಮಬ್ರವೀತ್ ॥ ೧೦೬ ॥

॥ ತಾರಕ ಉವಾಚ ॥

ಮಾವಧೀರ್ಭೋಃ ಸುರಾನ್ದೈತ್ಯಾ ವಜ್ರಾಂಗಾಯ ಚ ಮಂದಿರೇ ।
ಆನೀಯ ದೃಶ್ಯತಾಂ ಶೀಘ್ರಂ ಬದ್ಧಾನ್ಪಶ್ಯತಿ ವೈ ಸುರಾನ್ ॥ ೧೦೭ ॥

---

ಆಯುಧಗಳನ್ನು ಹಿಡಿದು ಸಮೂಹವಾಗಿ ಸೇರಿಕೊಂಡು ಆ ತಾರಕಾಸುರನನ್ನು ಹೊಡೆದರು. ವಜ್ರಪರ್ವತದಂತಿರುವ ಇವನ ದೇಹದಲ್ಲಿ ಆ ಅಸ್ತ್ರಗಳು, ನಾಟುವುದೇ ಇಲ್ಲವು.

೧೦೫. ಆಗ ದಾನವಾಧಿಪನಾದ ತಾರಕನು ರಥದಿಂದ ಕೆಳಕ್ಕೆ ಧುಮುಕಿ ಕೈಯಿಂದಲೂ ಹಿಂಗೈನ ಗುದ್ದಿನಿಂದಲೂ ದೇವತೆಗಳನ್ನು ಕೋಟಿಗಟ್ಟಲೆಯಾಗಿ ಹೊಡೆದನು.

೧೦೬. ದೇವತೆಗಳಲ್ಲಿ ಸತ್ತು ಉಳಿದವರು ಯುದ್ಧದ ಉಪಕರಣಗಳನ್ನು ಬಿಟ್ಟು ಬಿಟ್ಟು ದಿಕ್ಕುಗಳಿಗೆ ಓಡಿದರು. ದೇವತೆಗಳೆಲ್ಲರೂ ಹೆದರಿ ಓಡಿಹೋಗಲು ಆಗ ತಾರಕನು ಇಂತೆಂದನು.

೧೦೭. ತಾರಕನು ಹೇಳಿದನು- ಎಲೈ ದೈತ್ಯರಿರ ! ದೇವತೆಗಳನ್ನು ಕೊಂದು ಹಾಕಬೇಡಿರಿ· ಅವರನ್ನು ಹಿಡಿದು ವಜ್ರಾಂಗನಿಗೆ ಮನೆಯಲ್ಲಿ ತೋರಿಸಿರಿ.

॥ ಪುಲಸ್ತ್ಯ ಉವಾಚ ॥

ಲೋಕಪಾಲಾಂಸ್ತತೋ ದೈತ್ಯೋ ಬದ್ಧ್ವಾ ಚೇಂದ್ರಮುಖಾನ್ರಣೇ ।
ಸಕೇಶವಾನ್ದೃಢೈಃ ಪಾಶೈಃ ಪಶುಪಾಲಃ ಪಶೂನಿವ ॥ ೧೦೮ ॥

ಸ ಭೂಯೋ ರಥಮಾದಾಯ ಜಗಾಮ ಸ್ವಕಮಾಲಯಂ ।
ಸಿದ್ಧಗಂಧರ್ವಸಂಘುಷ್ಟಂ ವಿಪುಲಾಚಲಮಸ್ತಕಂ ॥ ೧೦೯ ॥

ಸ್ತೂಯಮಾನೋ ದಿತಿಸುತೈರಪ್ಸರೋಭಿಃ ಸುಸೇವಿತಃ ॥ ೧೧೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಸುರತಾರಕಸಂಗ್ರಾಮೇ
॥ ತಾರಕಜಯೋ ನಾಮ ಏಕೋನಚತ್ವಾರಿಂಶೋಽಧ್ಯಾಯಃ ॥

---

೧೦೮. ಪುಲಸ್ತ್ಯನು ಹೇಳಿದನು- ಆಗ ಲೋಕಪಾಲಕರನ್ನೂ, ಕೇಶವನನ್ನೂ ಹಗ್ಗಗಳಿಂದ ಬಲವಾಗಿ ಕಟ್ಟಿ ಹಸುಕಾಯುವವನು ಹಸುಗಳನ್ನು ಎಳೆದುಕೊಂಡು ಬರುವಂತೆ ದೈತ್ಯರು ಎಳೆದು ತಂದರು.

೧೦೯-೧೧೦. ಆ ತಾರಕನು ರಥದಲ್ಲಿ ಕುಳಿತು ಸಿದ್ಧರೂ, ಗಂಧರ್ವರೂ ವಾಸವಾಗಿರುವ ವಿಪ್ರಾಂಗನು ತಪಸ್ಸುಮಾಡುತ್ತಿರುವ ಆ ಪರ್ವತದ ತುದಿಗೆ ದೈತ್ಯರಿಂದಲೂ ಅಪ್ಸರರಿಂದಲೂ, ಸ್ತುತಿಸಲ್ಪಡುತ್ತ ಬಂದನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ದೇವದಾನವಯುದ್ಧದಲ್ಲಿ ತಾರಕಜಯವೆಂಬ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—४—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಚತ್ವಾರಿಂಶೋಽಧ್ಯಾಯಃ ॥



॥ ಪುಲಸ್ತ್ಯ ಉವಾಚ ॥

ಪ್ರಾದುರಾಸೀತ್ಪ್ರತೀಹಾರಃ ಶುಭ್ರಚೀನಾಂಶುಕಾಂಬರಃ ।
ಸ ಜಾನುಭ್ಯಾಂ ಮಹೀಂ ಗತ್ವಾ ಪಿಹಿತಾಸ್ಯಶ್ಚ ಪಾಣಿನಾ ॥ ೧ ॥

ಉವಾಚಾನಾವಿಲಂ ವಾಕ್ಯಮಲ್ಪಾಕ್ಷರಪರಿಷ್ಕೃತಂ ।
ದೈತ್ಯೇಂದ್ರಮರ್ಕವೃಂದಾಭಂ ಬಿಭ್ರತಂ ಭಾಸ್ವರಂ ವಪುಃ ॥ ೨ ॥

॥ ಪ್ರತೀಹಾರ ಉವಾಚ ॥

ಕಾಲನೇಮಿಃ ಸುರಾನ್ಬಧ್ವಾ ಪ್ರಾದಾಯ ದ್ವಾರಿ ತಿಷ್ಠತಿ ।
ಸ ವಿಜ್ಞಾಪಯತಿ ಸ್ಥೇಯಂ ಕ್ವ ಬಂದಿನಿ ಮಯಾ ಪ್ರಭೋ ॥ ೩ ॥

---

## ನಲವತ್ತನೆಯ ಅಧ್ಯಾಯವು

೧-೨. ಪುಲಸ್ತ್ಯನು ಹೇಳಿದನು- ಅನಂತರ ತಾರಕಾಸುರನು ಒಳಗೆ ಒಡ್ಡೋಲಗದಲ್ಲಿರಲು ಚೀನಾ ದೇಶದ ಬಟ್ಟೆಯನ್ನುಟ್ಟ ಬಾಗಿಲು ಕಾಯುವವನು ಒಳಗೆ ಬಂದು ಮೊಣಕಾಲುಗಳನ್ನು ನೆಲಕ್ಕೆ ಊರಿಕೊಂಡು ಕೈಯಿಂದ ಬಾಯನ್ನು ಮುಚ್ಚಿಕೊಂಡು ಸೂರ್ಯನಂತೆ ಪ್ರಕಾಶಮಾನವಾದ ತೇಜೋಮಯವಾದ ದೇಹವುಳ್ಳ ತಾರಕಾಸುರನನ್ನು ಕುರಿತು ಸ್ವಲ್ಪವೇ ಮಾತುಳ್ಳ ನಿರ್ದುಷ್ಟವಾಗಿರುವ ಮಾತುಗಳನ್ನಾಡಿದನು.

೩. ದ್ವಾರಪಾಲಕನು ಹೇಳಿದನು- ಕಾಲನೇಮಿಯು ದೇವತೆಗಳನ್ನು ಕಟ್ಟಿ ತಂದು ಬಾಗಿಲಲ್ಲಿದ್ದಾನೆ. ಈ ಬಂದಿಗಳನ್ನು ಎಲ್ಲಿಡಬೇಕೆಂದು ವಿಜ್ಞಾಪನೆ ಮಾಡಿಕೊಳ್ಳುತ್ತಾನೆ.

॥ ಪುಲಸ್ತ್ಯ ಉವಾಚ ॥

ತನ್ನಿಶಮ್ಯಾಬ್ರವೀದ್ದೈತ್ಯಃ ಪ್ರತೀಹಾರಸ್ಯ ಭಾಷಿತಂ ॥ ೪ ॥

॥ ದೈತ್ಯೇಂದ್ರ ಉವಾಚ ॥

ಯಥೇಷ್ಟಂ ಸ್ಥೀಯತಾಮೇಭಿರ್ಗೃಹಂ ಮೇ ಭುವನತ್ರಯಂ ।
ಕೇವಲಂ ವಾಸವಂ ತ್ವೇಕಂ ಮುಂಡಯಿತ್ವಾ ವಿಮುಚ್ಯತಾಂ ॥ ೫ ॥

ಸಿತವಸ್ತ್ರಪರಿಚ್ಛನ್ನಂ ಶುನಃ ಪಾದೇನ ಚಿಹ್ನಿತಂ ।
ಕೃತ್ವಾಽಂಗಂ ಖರಪಾದೇನ ಗ್ರೀವಾಯಾಂ ಕ್ಷಿಪ್ಯತಾಂ ಬಹಿಃ ॥ ೬ ॥

॥ ಪುಲಸ್ತ್ಯ ಉವಾಚ ॥

ಏವಂ ಕೃತೇ ತತೋ ದೇವಾ ದೂಯಮಾನೇನ ಚೇತಸಾ ।
ಜಗ್ಮುರ್ಜಗದ್ಗುರುಂ ದ್ರಷ್ಟುಂ ಶರಣಂ ಕಮಲೋದ್ಭವಂ ॥ ೭ ॥

ವಿನಿರ್ವಿಣ್ಣಾಸ್ತಮಾಸಾದ್ಯ ಶಿರೋಭಿರ್ಧರಣೀಂ ಗತಾಃ ।
ತುಷ್ಟುವುಃ ಸುಷ್ಟುವರ್ಣಾಢ್ಯೈರ್ವಚೋಭಿಃ ಕಮಲಾಸನಂ ॥ ೮ ॥

---

೪. ಪುಲಸ್ತ್ಯನು ಹೇಳಿದನು-ಆಗ ದಾನವೇಂದ್ರನು ಪ್ರತೀಹಾರನ ಮಾತನ್ನು ಕೇಳಿ ಇಂತೆಂದನು.

೫-೬ ದೈತ್ಯೇಂದ್ರನು ಹೇಳಿದನು- ಮೂರು ಲೋಕವು ನನ್ನ ಮನೆಯೇ ಆಗಿದೆ. ಅವರೆಲ್ಲರೂ ಸ್ವತಂತ್ರರಾಗಿ ಎಲ್ಲಿ ಬೇಕಾದರೂ ಇರಲಿ. ಆದರೆ ಇಂದ್ರನೊಬ್ಬನಿಗೆ ಮಾತ್ರ ತಲೆಯನ್ನು ಬೋಳಿಸಿಬಿಡಿರಿ. ಬಿಳಿಯ ಬಟ್ಟೆಯನ್ನು ಹೊದ್ದಿಸಿರಿ. ನಾಯಿಯ ಕಾಲಿನಂತೆ ಬರೆಯನ್ನು ಹಾಕಿರಿ. ಕತ್ತಿನಲ್ಲಿ ಕತ್ತೆಯ ಕಾಲಿನಿಂದ ಗುರುತನ್ನು ಮಾಡಿ ಹೊರಗೋಡಿಸಿರಿ.

೭. ಪುಲಸ್ತ್ಯನು ಹೇಳಿದನು-ಆ ತಾರಕನು ಹೀಗೆ ಮಾಡಲು ದೇವತೆಗಳು ದುಃಖಗೊಂಡವರಾಗಿ ಜಗತ್ತಿಗೆ ಗುರುವೂ, ರಕ್ಷಕನೂ ಆದ ಬ್ರಹ್ಮನನ್ನು ನೋಡಲು ಹೊರಟರು.

೮. ಬಹು ದುಃಖಪಟ್ಟು ಆ ಬ್ರಹ್ಮನ ಬಳಿಗೆ ಹೋಗಿ ಸಾಷ್ಟಾಂಗವಾಗಿ ನಮಸ್ಕರಿಸಿ, ಒಳ್ಳೆಯ ಅಕ್ಷರಗಳುಳ್ಳ ಮಾತುಗಳಿಂದ ಬ್ರಹ್ಮನನ್ನು ಸ್ತೋತ್ರ ಮಾಡಿದರು.

॥ ದೇವಾ ಊಚುಃ ॥

ನಮ ಓಂಕಾರಾಂಕುರಾದಗ್ರಸೂತ್ಯೈ ।
ವಿಶ್ವಸ್ಥಾನಾನಂತಭೇದಸ್ಯ ಪೂರ್ವಂ ॥
ಸಂಭೂತಸ್ಯಾನಂತರಂ ಸತ್ತ್ವಮೂಲೇ ।
ಸಂಹಾರೇಚ್ಛೋಃಸ್ತೇ ನಮಃ ಸತ್ತ್ವಮೂರ್ತೇ ॥ ೯ ॥

ವ್ಯಕ್ತೀನಾಂ ತ್ವಾಮಾದಿಭೂತಂ ಮಹಿಮ್ನಾ ।
ಚಾಸ್ಮಾದಸ್ಮಾನಭಿಧಾನಾದ್ವಿಚಿಂತ್ಯ ॥
ದ್ಯಾವಾಪೃಥ್ವ್ಯೋರೂರ್ಧ್ವಲೋಕಾಂಸ್ತಥಾಽಧ ।
ಶ್ಚಂಡಾದಸ್ಮಾತ್ತ್ವಂ ವಿಭಾಗಂ ಚಕಾರ ॥ ೧೦ ॥

ವ್ಯಕ್ತಂ ಚೈತದ್ಯಜ್ಜರಾಯುಸ್ತ್ವಮಾಭೂದೇವಂ ।
ವಿದ್ಮಸ್ತ್ವತ್ಪ್ರಾಣಿಕೋಽವಕಾಶಃ ॥
ವ್ಯಕ್ತಂ ದೇವಾ ಜಜ್ಞಿರೇ ಯಸ್ಯ ದೇಹಾ ।
ದ್ದೇಹಸ್ಯಾಂತಶ್ಚಾರಿಣೋ ದೇಹಭಾಜಃ ॥ ೧೧ ॥

---

೯. ದೇವತೆಗಳು ಹೇಳಿದರು- ಓಂಕಾರ ಹುಟ್ಟುವುದಕ್ಕೆ ಮೊದಲನೆಯ ಸ್ಥಾನನಾದ ಮೊದಲು ಪ್ರಪಂಚದ ಅನೇಕ ಭೇದ ರೂಪನಾದ ನಿನಗೆ ನಮಸ್ಕಾರವು. ಹುಟ್ಟಿದ ಮೇಲೆ ಸತ್ವಗುಣಕ್ಕೆ ಮೂಲಭೂತನಾದ, ಅನಂತರ ಸಂಹಾರ ಮಾಡಲು ಇಚ್ಛೆಯುಳ್ಳ ನಿನಗೆ ನಮಸ್ಕಾರವು.

೧೦. ಎಲೈ ಬ್ರಹ್ಮನೇ ! ಪ್ರಪಂಚದಲ್ಲಿ ಕಾಣುವ ವಸ್ತುಗಳಿಗೆಲ್ಲಾ ಮೊದಲನೆಯವನಾದ ನಿನಗೆ ನಮಸ್ಕಾರವು. ಎಲ್ಲರಿಗಿಂತಲೂ ಹೆಚ್ಚು ಮಹಿಮೆಯುಳ್ಳ ನಿನಗೆ ನಮಸ್ಕಾರವು. ನಮ್ಮಗಳನ್ನು ನಾವು ಮಾಡುವ ಕೆಲಸದಿಂದಲೂ ನಮ್ಮ ಹೆಸರಿನಿಂದಲೂ ಯೋಚಿಸಿ ಹೆಸರಿಗನುಸಾರವಾಗಿ ಮಾಡಿದ್ದೀಯೆ. ಸ್ವರ್ಗ, ಮರ್ತ್ಯ ಪಾತಾಳ ಲೋಕಗಳನ್ನು ಒಟ್ಟಿಯಾಗಿಯೂ ಬೇರೆಬೇರೆಯೂ ಆಗಿರುವಂತೆ ವಿಭಾಗಿಸಿದ್ದೀಯೇ ನಮ್ಮನ್ನೂ ನಮ್ಮ ಹೆಸರನ್ನೂ ಯೋಚಿಸಿ ಅದಕ್ಕೆ ಅನುಸಾರವಾಗಿ ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳನ್ನು ಬೇರೆ ಬೇರೆ ಹಂತ ರೂಪವಾಗಿಯೂ ವಿಭಾಗಿಸಿದ್ದೀಯೆ

೧೧. ನೀನೇ ಈ ಜರೆಯೆಂಬ ಚೀಲವನ್ನು ಮಾಡಿ ಅದರಿಂದ ಪ್ರಾಣಿಗಳನ್ನೂ ಸೃಷ್ಟಿಸಿದ್ದೀಯೇ. ಮತ್ತು ಈ ಆಕಾಶವನ್ನು ನೀನೇ ಮಾಡಿದವನು. ಮತ್ತು ನೀನೇ ನಿನ್ನ ದೇಹದಿಂದ ದೇವತೆಗಳನ್ನು ಸೃಷ್ಟಿಸಿ ಅವರು ಮತ್ತೊಂದು ದೇಹದಲ್ಲಿ ಸಂಚರಿಸುವಂತೆ ಮಾಡಿದ್ದೀಯೆ.

ದ್ಯೌಸ್ತೇ ಮೂರ್ಧಾ ಲೋಚನೇ ಚಂದ್ರಸೂರ್ಯೌ ॥
ವ್ಯಾಲಾಃ ಕೇಶಾಃ ಶ್ರೋತ್ರರಂಧ್ರೇ ದಿಶಸ್ತೇ ।
ಗಾತ್ರಂ ಯಜ್ಞಾಃ ಸಿಂಧವಃ ಸಂಧಯೋ ವೈ ।
ಪಾದೌ ಭೂಮಿಸ್ತೂದರಂ ತೇ ಸಮುದ್ರಾಃ ॥ ೧೨ ॥

ಮಾಯಾಕಾರಃ ಕಾರಣಂ ತ್ವಂ ಪ್ರಸಿದ್ಧೋ ।
ವೇದೈಃ ಶಾಂತೋ ಜ್ಯೋತಿರರ್ಕಸ್ತ್ವಮುಕ್ತಃ ॥
ವೇದಾರ್ಥೇನ ತ್ವಾಂ ವಿವೃಣ್ವಂತಿ ಬುದ್ಧ್ಯಾ ।
ಹೃತ್ಪದ್ಮಾಂತಃ ಸನ್ನಿವಿಷ್ಟಂ ಪುರಾಣಂ ॥ ೧೩ ॥

ತ್ವಾಂ ಚಾತ್ಮಾನಂ ಲಬ್ಧಯೋಗಾ ಗೃಣಂತಿ ।
ಸಾಂಖ್ಯೈರ್ಯಾಸ್ತಾಃ ಸಪ್ತ ಸೂಕ್ಷ್ಮಾಃ ಪ್ರಣೀತಾಃ ॥
ತಾಸಾಂ ಹೇತುರ್ಯಾಷ್ಟಮೀ ಚಾಪಿ ಗೀತಾ ।
ತಾಸ್ವಂತಸ್ಥೋ ಜೀವಭೂತಸ್ತ್ವಮೇವ ॥ ೧೪ ॥

---

೧೨. ಅಂತರಿಕ್ಷವೇ ನಿನ್ನ ತಲೆಯು, ಚಂದ್ರ ಸೂರ್ಯರೇ ಕಣ್ಣುಗಳು, ಸರ್ಪಗಳೇ ಕೂದಲುಗಳು, ದಿಕ್ಕುಗಳೇ ಕಿವಿಯ ರಂಧ್ರಗಳು, ಯಜ್ಞವೇ ದೇಹವು, ನಿನ್ನ ಸಂಧಿಪ್ರದೇಶಗಳೇ ನದಿಗಳು, ಪಾದವೇ ಭೂಮಿಯು, ನಿನ್ನ ಹೊಟ್ಟೆಯೇ ಸಮುದ್ರಗಳು.

೧೩. ನೀನು ಮಾಯೆಯ ಆಕಾರವುಳ್ಳವನು. ನೀನೇ ವೇದದಲ್ಲಿ ಹೇಳಿರುವ ಪ್ರಸಿದ್ಧವಾದ ಮುಖ್ಯ ಕಾರಣವು ನೀನು ಶಾಂತನು. ಜ್ಯೋತಿಸ್ಸಿನ ರೂಪವಾದ ಸೂರ್ಯನೇ ನೀನು. ನಿನ್ನನ್ನು ವೇದಾರ್ಥವನ್ನು ನೋಡಿಕೊಂಡು ಅದಕ್ಕನುಗುಣವಾಗಿ ಬುದ್ಧಿಯಿಂದ ವಿವರಿಸುತ್ತಾರೆ. ನೀನು ಹೃದಯವೆಂಬ ಪದ್ಮದಲ್ಲಿ ಕುಳಿತಿರುವ ಪುರಾಣ ಪುರುಷನು.

೧೪. ಆತ್ಮಸ್ವರೂಪನಾದ ನಿನ್ನನ್ನು ಯೋಗಿಗಳು ಮಾತ್ರ ತಿಳಿಯುತ್ತಾರೆ. ಸಾಂಖ್ಯರು, ಪ್ರಕೃತಿ ವಿಕೃತಿ ಮುಂತಾದ ರೂಪವಾದ ಏಳು ಸೂಕ್ಷ್ಮ ರೂಪಗಳನ್ನು ವಿಂಗಡಿಸಿ ಅವುಗಳಿಗೆಲ್ಲಾ ನೀನು ಕಾರಣನೆಂದೂ ನೀನೇ ಎಂಟನೆಯವನಾದ ಆತ್ಮನೆಂದೂ ಹೇಳಿದ್ದಾರೆ. ಅಲ್ಲದೆ ಆ ಏಳು ಪದಾರ್ಥಗಳ ಒಳಗಿರುವ ಜೀವಭೂತನೆಂದೂ ನಿನ್ನನ್ನೂ ಹೇಳಿದ್ದಾರೆ.

ದೃಷ್ಟ್ವಾ ಮೂರ್ತಿಂ ಸ್ಥೂಲಸೂಕ್ಷ್ಮಾಂ ಚಕಾರ ।
ಯೇ ವೈ ಭಾವಾಃ ಕಾರಣೇ ಕೇಚಿದುಕ್ತಾಃ ॥
ಸಂಭೂತಾಸ್ತೇ ತ್ವತ್ತ ಏವಾಽದಿಸರ್ಗೇ ।
ಭೂಯಸ್ತಾಸ್ತ್ವಂ ವಾಸನಾಂತೇಽಭ್ಯುಪೇಯಾಃ ॥ ೧೫ ॥

ತ್ವತ್ಸಂಕೇತಸ್ತ್ವಂತರಾ ಯೋ ನಿಗೂಢಃ ।
ಕಾಲೋಽಮೇಯೋ ಧ್ವಸ್ತಸಂಖ್ಯಾವಿಕಲ್ಪಃ ॥
ಭಾವಾಭಾವವ್ಯಕ್ತಿಸಂಹಾರಹೇತುಃ ।
ಸೋಽನಂತಸ್ತ್ವಂ ತಸ್ಯ ಕರ್ತಾ ನಿದಾನಂ ॥ ೧೬ ॥

ಸ್ಥೂಲಃ ಸರ್ವಾನರ್ಥಭೂತಸ್ತತೋಽನ್ಯಃ ।
ಸೋಽರ್ಥಃ ಸೂಕ್ಷ್ಮೋ ಯೋ ಹಿ ತೇಭ್ಯೋಽಪಿ ಗೀತಃ ॥
ಸ್ಥೂಲಾ ಭಾವಾಶ್ಚಾವೃತಾರಶ್ಚ ತೇಷಾಂ ।
ತೇಭ್ಯಃ ಸ್ಥೂಲಸ್ತ್ವಂ ಪುರಾಣೇ ಪ್ರಣೀತಃ ॥ ೧೭ ॥

---

೧೫. ಸ್ಥೂಲವೂ, ಸೂಕ್ಷ್ಮವೂ, ಆಗಿರುವ ಆಕಾರಗಳನ್ನು ನೋಡಿಕೊಂಡು ಆವಶ್ಯಕಾನುಸಾರವಾಗಿ ಕಾರಣಗಳನ್ನು ಕಲ್ಪಿಸಿಕೊಂಡು ವಿಂಗಡಿಸಿದ್ದಾನೆಂದು ಕೆಲವರು ಹೇಳುತ್ತಾರೆ. ಎಲ್ಲವೂ ನಿನ್ನಿಂದಲೇ ಹುಟ್ಟಿದುವು. ಮೊದಲು ಇವೆಲ್ಲಲ್ಲನ್ನೂ ಸೃಷ್ಟಿ ಮಾಡುವಾಗ ನೀನು ಹಿಂದಿನ ವಾಸನೆಯಿಂದ ಅವೆಲ್ಲವನ್ನೂ ಸೃಷ್ಟಿಸುತ್ತೀಯೆ.

೧೬. ಎಲ್ಲವೂ ನಿನ್ನ ಸಂಕೇತಗಳೇ. ಎಲ್ಲವೂ ನಿನ್ನೊಳಗೆಯೇ ಅಡಗಿವೆ. ಅಳೆಯುವುದಕ್ಕೆ ಆಗದ, ಲೆಕ್ಕ ಮಾಡಲು ಸಿಕ್ಕದ, ಕಾಣುವ, ಕಾಣದ ಪದಾರ್ಥಗಳ ನಾಶಕ್ಕೆ ಕಾರಣವಾದ, ಆ ಕಾಲರೂಪನೇ ನೀನು. ನೀನೇ ಆ ಕಾಲಕ್ಕೆ ಕರ್ತೃವು. ನೀನೇ ಕಾರಣನು.

ನಿನ್ನನ್ನು ಸ್ಥೂಲನೆಂದೂ, ನಾಶಕನೆಂದೂ, ಉತ್ಪತ್ತಿ ಕರ್ತನೆಂದೂ ಹೇಳುತ್ತಾರೆ ಸ್ಥೂಲವಾದ ಭಾವವೂ, ಅದನ್ನು ಆದರಿಸುವವನೂ, ನೀನೇ ಎಂದೆನ್ನುತ್ತಾರೆ. ಇದರಿಂದ ಪುರಾಣದಲ್ಲಿ ನಿನ್ನನ್ನೂ ಸ್ಥೂಲನೆಂದೇ ಹೇಳಿದ್ದಾರೆ.

ಭೂತಂ ಭೂತಂ ಭೂತಿಮದ್ಭೂತಿಭಾವಂ ।
ಭಾವೇ ಭಾವೇ ಭಾವಿತಂ ತ್ವಂ ಯುನಕ್ಷಿ ।
ಯುಕ್ತಂ ಯುಕ್ತಂ ವ್ಯಕ್ತಿಭಾವಾನ್ನಿರಸ್ಯ ॥
ಸ್ಥಾನೇ ಸ್ಥಾನೇ ವ್ಯಕ್ತಿವೃತ್ತಿಂ ಕರೋಷಿ ।
ಇತ್ಥಂ ದೇವೋ ಭಕ್ತಿಭಾಜಾಂ ಶರಣ್ಯ ।
ಸ್ರಾತಾ ಗೋಪ್ತಾ ಭಾವಿತೋಽನಂತಮೂರ್ತಿಃ ॥ ೧೮ ॥

॥ ಪುಲಸ್ತ್ಯ ಉವಾಚ ॥

ವಿರೇಮುರಮರಾಃ ಸ್ತುತ್ವಾ ಬ್ರಹ್ಮಾಣಮಿತಿ ಕಾರಣಂ ।
ತಸ್ಥುರ್ಮನೋಭಿರಿಷ್ಟಾರ್ಥಸಂಪ್ರಾಪ್ತಿಪ್ರಾರ್ಥನಾಸ್ತತಃ ॥ ೧೯ ॥

ಏವಂ ಸ್ತುತೋ ವಿರಿಂಚಿಸ್ತು ಪ್ರಸಾದಂ ಪರಮಂ ಗತಃ ।
ಅಮರಾನ್ವರದೋಽಸ್ಯಾಹ ವಾಮಹಸ್ತೇನ ನಿರ್ದಿಶನ್ ॥ ೨೦ ॥

---

೧೮. ಪ್ರತಿಯೊಂದು ಪ್ರಾಣಿಯಲ್ಲಿಯೂ ಉತ್ತಮವಾದ ಸ್ಥಿತಿಯನ್ನೇ ಇಟ್ಟಿದ್ದೀಯೇ. ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಇದ್ದು ಅವರಿಗೆ ಬೇಕಾದುದನ್ನು ನೀನೇ ಕೊಡುತ್ತೀಯೆ. ಪ್ರತಿಯೊಂದು ಪದಾರ್ಥದಲ್ಲಿಯೂ ಆ ಪದಾರ್ಥದ, ಆ ಸ್ವಭಾವವನ್ನು ಹೊರದೂಡಿ ಬೇರೆ ಗುಣವನ್ನಿಡುತ್ತೀಯೆ. ಆಯಾಯ ಜಾಗದಲ್ಲಿ ಆಯಾ ಪದಾರ್ಥಗಳು ಅವುಗಳ ಕೆಲಸವನ್ನು ನಡೆಸುವಂತೆಯೂ ಮಾಡುತ್ತೀಯೆ. ಈ ರೀತಿಯಾಗಿ ಸ್ವಾಮಿಯಾದ ನೀನು ನಿನ್ನಲ್ಲಿ ಭಕ್ತಿಯಿಟ್ಟಿರುವವರಿಗೆ ರಕ್ಷಕನಾಗಿದ್ದೀಯೆ. ಕಷ್ಟದಿಂದ ಪಾರುಮಾಡುವವನೂ, ಕಾಪಾಡುವವನೂ ಆಗಿದ್ದೀಯೆ ಈ ರೀತಿ ನೀನು ಆನಂದಮೂರ್ತಿಯೆಂದು ನಮಗೆ ತಿಳಿದು ಬಂದಿರುತ್ತಿಯೆ.

೧೯. ಪುಲಸ್ತ್ಯನು ಹೇಳಿದನು—ಈ ರೀತಿ ದೇವತೆಗಳು ಕಾರಣಗಳನ್ನು ಹೇಳುತ್ತ ಬ್ರಹ್ಮನನ್ನು ಸ್ತುತಿಸಿದರು. ಅನಂತರ ಇಷ್ಟಾರ್ಥವನ್ನು ಕೊಡುವನೆಂಬ ಮನಸ್ಸುಳ್ಳವರಾಗಿ ನಿಂತರು.

೨೦. ದೇವತೆಗಳು ಹೀಗೆ ಸ್ತುತಿಸಲು ಬ್ರಹ್ಮನು ಬಲಗೈಯಿಂದ ಸಂಜ್ಞೆ ಮಾಡುತ್ತ ಅನುಗ್ರಹ ಬುದ್ಧಿಯುಳ್ಳವನಾಗಿ ಅವರನ್ನು ಕುರಿತು ಇಂತೆಂದನು.

॥ ಬ್ರಹ್ಮೋವಾಚ ॥

ನಾರೀವಾಭರ್ತೃಕಾ ಸ್ಮಾದ್ಧಸ್ತಸಂತ್ಯಕ್ತಭೂಷಣಾ ।
ಸ ರಾಜಸೇ ಯಥಾ ಶಕ್ರ ಮ್ಲಾನವಕ್ತ್ರಸರೋರುಹಾ ॥ ೨೧ ॥

ಹುತಾಶನ ವಿಯುಕ್ತೋಽಪಿ ಧೂಮೇನ ನ ವಿರಾಜಸೇ ।
ತೃಣೌಘೇನ ಪ್ರತಿಚ್ಛನ್ನೋ ದಗ್ಧದಾವಶ್ಚಿರೋಷಿತಃ ॥ ೨೨ ॥

ಯಮಾಽಮಯಶರೀರೇಣ ಕ್ಲಿಷ್ಟೋ ನಾದ್ಯ ವಿರಾಜಸೇ ।
ದಂಡೇನಾಽಽಲಂಬನೇನೈವ ಕ್ಲಿಷ್ಟೋ ಯೇನ ಪದೇ ಪದೇ ॥ ೨೩ ॥

ರಜನೀಚರನಾಥ ತ್ವಂ ಕಿಂ ಭೀತ ಇವ ಭಾಷಸೇ ।
ರಾಕ್ಷಸೇಂದ್ರ ಕೃತಾದಾನೇ ತ್ವಮರಾತಿಕ್ಷತೋ ಯಥಾ ॥ ೨೪ ॥

ತನುಸ್ತೇ ವರುಣೋಚ್ಛೃಷ್ಕಾ ಪರೀತಸ್ಯೇವ ವಹ್ನಿನಾ ।
ವಿಮುಕ್ತರುಧಿರಂ ಚಾಥ ಪದಂ ತ್ವಂ ಪ್ರವಿಲೋಕಯ ॥ ೨೫ ॥

---

೨೧. ಬ್ರಹ್ಮನು ಹೇಳಿದನು — ಕಾರಣವಿಲ್ಲದೆ ಕೈಯ್ಯಿಂದ ಒಡವೆಗಳನ್ನು ಕಳಚಿ ಬಿಟ್ಟಿರುವ, ಗಂಡನಿಲ್ಲದೆ ಮುಖವನ್ನು ಬಾಡಿಸಿಕೊಂಡಿರುವ ಹೆಂಗಸಿನಂತೆ, ಶಕ್ರ ನಿನ್ನ ಮುಖವೇತಕ್ಕೆ ಪ್ರಕಾಶಿಸುವುದಿಲ್ಲ?

೨೨. ಎಲೈ ಅಗ್ನಿಯೆ! ನೀನು ಹೊಗೆಯಿಂದ ಕೂಡಿಕೊಂಡಿಲ್ಲದಿದ್ದರೂ ಪ್ರಕಾಶಿಸದಿರುವೆಯಲ್ಲ! ನೀನು ಕಾಡನ್ನು ಸುಟ್ಟು ಅಲ್ಲಿಯೇ ಹುಲ್ಲುಗಳು ಮೇಲೆ ಬಿದ್ದಿದ್ದರೂ ಪ್ರಕಾಶಿಸದಿರುವೆಯಲ್ಲ! ಕಾರಣವೇನು?

೨೩. ಎಲೈ ಯಮನೇ! ರೋಗ ಬಂದ ಶರೀರದವನಂತೆ ಹೆಜ್ಜೆ ಹೆಜ್ಜೆಗೂ ನಿನ್ನ ಯಮದಂಡವನ್ನು ಊರಿಕೊಳ್ಳುತ್ತ ಕಷ್ಟಪಡುತ್ತಿರುವೆಯಲ್ಲ!

೨೪. ಎಲೈ ನಿಋೃತಿಯೇ? ನೀನೇಕೆ ಹೆದರಿಕೊಂಡವನಂತೆ ಮಾತನಾಡುತ್ತೀಯೆ? ಎಲೈ ರಾಕ್ಷಸೇಂದ್ರನೇ! ಶತ್ರುಗಳಿಂದ ಏಟನ್ನು ತಿಂದು ಎಲ್ಲವನ್ನೂ ಕಳೆದುಕೊಂಡವನಂತೆ ಇದ್ದೀಯೆ? ಕಾರಣವೇನು?

೨೫. ಎಲೈ ವರುಣನೇ! ನಿನ್ನ ಶರೀರವು ಬೆಂಕಿಯಿಂದ ಆವರಿಸಲ್ಪಟ್ಟಂತೆ ಒಣಗಿ ಹೋಗಿದೆ. ನಿನ್ನ ಕಾಲುಗಳಲ್ಲಿ ರಕ್ತವೇ ಇಲ್ಲವಲ್ಲ? ನೋಡು?

ವಾಯೋ ಭವಾನ್ನಿಚೇತಸ್ಕಃ ಖಡ್ಗಾಗ್ರೈರಿವ ನಿಷ್ಕೃತಃ ।
ಕಿಂ ತ್ವಂ ನತೋಽಸಿ ಧನದ ಸಂತ್ಯಜ್ಯೈವ ಕುಬೇರತಾಂ ॥ ೨೬ ॥

ರುದ್ರಾಸ್ತ್ರಿಶೂಲಿನಃ ಸಂತೋಽವದದ್ಧ್ವಂ ಬಹುಶೂರತಾಂ ।
ಭವತಾಂ ಕೇನ ಚಾಽಕ್ಷಿಪ್ತಾ ತೀವ್ರತಾ ನಸ್ತದುಚ್ಯತಾಂ ॥ ೨೭ ॥

ಅಕಿಂಚಿತ್ಕರತಾಂ ಯಾತಾ ಹೃತಾ ಕೇನ ವಿಭಾಸತಾ ।
ವರನೀಲೋತ್ಪಲಾಭೇನ ಚಕ್ರೇಣ ಮಧುಸೂದನ ॥ ೨೮ ॥

ಕಿಂ ಚ ಸ್ಯಾತ್ಸೂದರಾಲೀನಭುವನ ಪ್ರವಿಲೋಕನ ।
ಕಾಯೇಽಸ್ಮಿನ್ನಿರಪೇಕ್ಷೇಣ ಭವತಾ ವಿಶ್ವತೋಮುಖ ॥ ೨೯ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಾಃ ಸುರಾಸ್ತೇನ ಬ್ರಹ್ಮಣಾ ಬ್ರಹ್ಮವರ್ತಿನಾ ।
ವಾಚಾಂ ಪ್ರಧಾನಭೂತತ್ವಾತ್ತೇ ಮಾರುತಮಚೋದಯನ್ ॥ ೩೦ ॥

---

೨೬. ಎಲೈ ವಾಯುವೇ! ನೀನು ಕತ್ತಿಯಿಂದ ಕತ್ತರಿಸಲ್ಪಟ್ಟವನಂತೆ ಜ್ಞಾನವಿಲ್ಲದಿರುವನಾಗಿದ್ದೀಯಲ್ಲ? ಏಕೆ? ಎಲೈ ಧನದನೇ! ನೀನು ನಿನ್ನ ಅಧಿಕಾರವನ್ನು ಬಿಟ್ಟು ಬಗ್ಗಿಕೊಂಡಿರುವೆಯಲ್ಲ, ಕಾರಣವೇನು?

೨೭. ಎಲೈ ರುದ್ರರಿರ! ನೀವು ತ್ರಿಶೂಲವನ್ನು ಹಿಡಿದುಕೊಂಡಿರುವುದನ್ನು ನೋಡಿದರೆ ಬಹು ಶೂರರೆಂಬುದಾಗಿ ಕಾಣುತ್ತಿದ್ದೀರಿ. ಆದರೆ ಹಾಗಿಲ್ಲವಲ್ಲ! ನಿಮ್ಮ ಆ ತೀವ್ರತೆಯನ್ನು ಯಾರು ಅಪಹರಿಸಿದರು? ಅದನ್ನು ನನಗೆ ಹೇಳಿರಿ?

೨೮. ನೀವೆಲ್ಲರೂ ಕೆಲಸಕ್ಕೆ ಬಾರದವರಾಗಿರುತ್ತೀರಲ್ಲ? ನಿಮ್ಮ ಕಾಂತಿಯನ್ನು ಯಾರು ಅಪಹರಿಸಿದರು?

೨೯. ಎಲೈ ಮಧುಸೂದನನೇ! ಹೊಟ್ಟೆಯಲ್ಲಿ ಅಡಗಿರುವ ಲೋಕಗಳುಳ್ಳವನೇ! ಎಲ್ಲಾ ಕಡೆಗೂ ಮುಖಗಳುಳ್ಳವನೇ! ನೀನು ಈ ನೀಲೋತ್ಪಲದಂತಿರುವ ಚಕ್ರದಲ್ಲಿಯೂ, ನಿನ್ನ ದೇಹದಲ್ಲಿಯೂ, ಆಸೆ ಬಿಟ್ಟಿರಲು ಕಾರಣವೇನು?

೩೦. ಪುಲಸ್ತ್ಯನು ಹೇಳಿದನು—ಯಾವಾಗಲೂ ಬ್ರಹ್ಮದಲ್ಲಿಯೇ ಲೀನನಾದ ಬ್ರಹ್ಮನು ಅವರನ್ನು ಹೀಗೆ ಕೇಳಲು ಮಾತುಗಾರರಲ್ಲಿ ಮುಖ್ಯನಾದ ವಾಯುವನ್ನು ಕುರಿತು ಅವರೆಲ್ಲರೂ ಬ್ರಹ್ಮನಿಗೆ ಹೇಳೆಂದು ಹೇಳಿದರು.

ಅಥ ವಿಷ್ಣುಮುಖ್ಯೈರ್ದೇವ್ಯೈಃ ಪವನಃ ಪ್ರತಿಚೋದಿತಃ ।
ಪ್ರಾಹ ದೇವಂ ಚತುರ್ವಕ್ತ್ರಂ ಭವಾನ್ವೇತ್ತಿ ಚರಾಚರಂ ॥ ೩೧ ॥

॥ ವಾಯುರುವಾಚ ॥

ಪುರುಹೂತಮುಖಾಃ ಸಬಲಾನಿಮಿಷಾ ।
ವಿಜಿತಾಃ ಪ್ರಸಭಂ ಕಿಲ ದೈತ್ಯಶತ್ಯೈಃ ॥
ಕ್ರತವೋ ವಿಹಿತಾ ಭವತಾ ಸ್ಥಿತಯೇ ।
ಜಗತಾಂ ಚ ಮಹಾದ್ಭುತಚಿತ್ರಗುಣಾಃ ॥ ೩೨ ॥

ಅಪಿ ಯಜ್ಞಕೃತಃ ಶ್ರುತಕಾಮಫಲಾ ।
ವಿಹಿತಾ ಋಷಯಸ್ತ್ವತ ಏವ ಪುರಃ ॥
ಅಪಿ ನಾಕಮಭೂತ್ಕಿಲ ಯಜ್ಞಭುಜಾಂ ।
ಭವತೋ ವಿನಿಯೋಗ ವಶಾತ್ಸತತಂ ॥ ೩೩ ॥

---

೩೧. ಆನಂತರ ವಿಷ್ಣುವೇ ಮುಂತಾದ ದೇವತೆಗಳಿಂದ ಪ್ರೇರೇಪಿಸಲ್ಪಟ್ಟ ಆ ವಾಯುವು ಬ್ರಹ್ಮನನ್ನು ಕುರಿತು ಎಲೈ ಬ್ರಹ್ಮನೇ! ನೀನು ಪ್ರಪಂಚದ ಚರಾಚರಗಳನ್ನು ಬಲ್ಲೆ. ಎಂದು ಮುಂದೆ ಹೇಳುವಂತೆ ಹೇಳಿದನು.

೩೨. ವಾಯುವು ಹೇಳಿದನು—ಇಂದ್ರನೇ ಮುಂತಾದ ಬಲಿಷ್ಠರಾದ ದೇವತೆಗಳನ್ನು ದೈತ್ಯರೆಲ್ಲರೂ ಸೇರಿ ಬಲಾತ್ಕಾರದಿಂದ ಜಯಿಸಿದರು. ನೀನು ಅದ್ಭುತಗಳಾದ ಯಾಗಗಳನ್ನು ಪ್ರಪಂಚದ ಸ್ಥಿತಿಗೋಸ್ಕರ ಸೃಷ್ಟಿಸಿದ್ದೀಯೆ.

೩೩. ಆದ್ದರಿಂದಲೇ ಯಜ್ಞವನ್ನು ಮಾಡಿದ ಋಷಿಗಳಿಗೆ ಕೇಳಿದ ಇಷ್ಟವನ್ನೆಲ್ಲಾ ಪೂರ್ವದಲ್ಲಿ ಕೊಟ್ಟಿದ್ದೀಯೆ. ಆದ್ದರಿಂದಲೇ ಆ ಹವಿಸ್ಸನ್ನು ಹಂಚಿಕೊಳ್ಳುತ್ತಿರುವ ದೇವತೆಗಳಿಗೆ ನಿನ್ನ ಅಪ್ಪಣೆಯಂತೆ ಯಾವಾಗಲೂ ಸ್ವರ್ಗವೇ ಮನೆಯಾಯಿತು.

ಅಪಹೃತ್ಯ ವಿಮಾನಗಣಂ ಸ ಕೃತೋ ।
ದನುಜೇನ ಮಹಾಕರಭೂಮಿಸಮಃ ॥
ಕೃತವಾನಸಿ ಸರ್ವಗುಣಾತಿಶಯಂ ।
ಯಮಶೇಷಮಹೀಧರರಾಜತಯಾ ॥ ೩೪ ॥

ಮಖಭೂಷಿತಮಂಶುಮತಾಮವಧಿಂ ।
ಸುರಧಾಮಗಿರಿಂ ಗಗನೇಽಪಿ ಸದಾ ॥
ಅಧಿವಾಸವಿಹಾರವಿಧಾವುಚಿತೋ ।
ದನುಜೇನ ಪರಿಷ್ಕೃತಶೃಂಗತಟಃ ॥ ೩೫ ॥

ಪ್ರವಿಲಂಬಿತರತ್ನಗುಹಾನಿವಹೋ ।
ಬಹುದೈತ್ಯಸಮಾಶ್ರಯತಾಂ ಗಮಿತಃ ॥
ಅಸುರಸ್ಯ ಚ ತಸ್ಯ ಭಯೇನ ಗತಂ ।
ಸವಿಷಾದಶರೀರನಿಮಿತ್ತತಯಾ ॥ ೩೬ ॥

---

೩೪. ದೈತ್ಯನು ವಿಮಾನಗಳನ್ನೆಲ್ಲಾ ಅಪಹರಿಸಿ ಆ ಸ್ವರ್ಗವನ್ನು ದೊಡ್ಡದಾಗಿ ಗಣಿಯಿದ್ದ ಸ್ಥಳಕ್ಕೆ ಸಮವಾಗಿ ಬಂದುಮಾಡಿದ್ದಾನೆ. ನೀನು ಯಾವನನ್ನು ಈ ಪ್ರಪಂಚಕ್ಕೆಲ್ಲಾ ರಾಜನನ್ನಾಗಿ ಮಾಡಿದೆಯೋ ಅವನೇ ಈ ರೀತಿ ಮಾಡಿದ್ದಾನೆ.

೩೫. ಯಜ್ಞದಿಂದ ಅಲಂಕೃತವಾದ, ಕಾಂತಿಮತ್ತಾದ, ಮೇರುಪರ್ವತವನ್ನೂ ಅದರ ಶಿಖರಗಳನ್ನೂ ಸರಿಯಾಗಿ ಮಾಡಿಕೊಂಡು ಆ ದನುಜನು ಅವನ್ನು ಆರಾಮಸ್ಥಳವನ್ನಾಗಿ ಮಾಡಿಕೊಂಡಿರುವನು.

೩೬. ಆ ದೈತ್ಯನು ಗುಹೆಯಲ್ಲಿ ಬಹುವಾಗಿ ರತ್ನಗಳಿರುವ ಆ ಮಂದರವನ್ನು ದೈತ್ಯರ ಆಶ್ರಯಕ್ಕೆ ಒಳಗು ಮಾಡಿದನು. ಆ ಅಸುರನ ಭಯದಿಂದ ದುಃಖವುಂಟಾಗಿ ದೇಹವು ಈ ರೀತಿಯಾಯಿತು.

ಉಪಭೋಗ್ಯತಯಾಽಧಿಕೃತಂ ಸುಚಿರಂ ।
ವಿಮಲದ್ಯುತಿಪೂರಿತದಿಗ್ವದನಂ ।
ಭವತೈವ ವಿನಿರ್ಮಿತಮಾದಿಯುಗೇ ॥
ಸುರಹೇತಿಸಮೂಹವರಂ ಕುಲಿಶಂ ।
ದಿತಿಜಸ್ಯ ಶರೀರಮವಾಪ್ಯ ಗತಂ ।
ಶತಧಾ ನ ಬಿಭೇದ ಭವಾನ್ಯದಿದಂ ॥ ೩೭ ॥

ಬಾಣೈಶ್ಚ ಯುಧಿ ವಿದ್ಧಾಂಗಾ ದ್ವಾರಿ ದ್ವಾಸ್ಥೈರ್ನಿದರ್ಶಿತಾಃ ।
ಲಬ್ಧಪ್ರವೇಶಃ ಕೃಚ್ಛ್ರೇಣ ವಯಂ ತಸ್ಯಾಮರದ್ವಿಷಃ ॥ ೩೮ ॥

ಸಭಾಯಾಮಮರಾ ದೇವ ಪ್ರಕೃಷ್ಟೋಪನಿವೇಶಿತಾಃ ।
ವೇತ್ರಹಸ್ತೈರಜಲ್ಪಂತಸ್ತಥೋಪಹಸಿತಾಃ ಪರೈಃ ॥ ೩೯ ॥

ಮಹಾರ್ಥಾಃ ಸಿದ್ಧಸರ್ವಾರ್ಥಾ ಭವಂತಃ ಸ್ವಲ್ಪಭಾಷಿಣಃ ।
ಶಾಸ್ತ್ರಯುಕ್ತಮಥ ಬ್ರೂತ ಮಾಽಮರಾ ಬಹುಭಾಷಿಣಃ ॥ ೪೦ ॥

---

೩೭. ಚೆನ್ನಾಗಿರುವ, ತನ್ನ ಕಾಂತಿಯಿಂದ ಬೆಳಗುವ ದಿಕ್ಕುಗಳುಳ್ಳ, ಆ ಪರ್ವತವನ್ನು ತನ್ನ ಉಪಭೋಗಕ್ಕೆ ಆ ರಾಕ್ಷಸನು ಆವರಿಸಿಕೊಂಡನು. ಮೊದಲನೆಯ ಯುಗದಲ್ಲಿ ದೇವತೆಗಳ ಆಯುಧಗಳಲ್ಲೆಲ್ಲಾ ಶ್ರೇಷ್ಠವಾದ ವಜ್ರಾಯುಧವು ನಿನ್ನಿಂದಲೇ ನಿರ್ಮಿಸಲ್ಪಟ್ಟಿತು. ಅದೂ ಕೂಡ ಆ ದೈತ್ಯನ ಶರೀರದ ಮೇಲೆ ಬಿದ್ದು ನಾಶವಾಯಿತು. ನೀನು ಕೂಡ ಅದನ್ನು ಮುರಿಯಲಾರದೆ ಹೋಗಿದ್ದೆ.

೩೮. ಯುದ್ಧದಲ್ಲಿ ಬಾಣಗಳಿಂದ ಏಟುಗಳನ್ನು ತಿಂದು ಗಾಯ ಹೊಂದಿದ ನಮ್ಮನ್ನು ದ್ವಾರಪಾಲಕರು ಆ ತಾರಕನಿಗೆ ತೋರಿಸಿದರು. ಅನಂತರ ಅವನ ಸಭೆಗೆ ಬಹು ಕಷ್ಟದಿಂದ ಪ್ರವೇಶವು ಸಿಕ್ಕಿತು.

೩೯. ಆ ಸಭೆಯಲ್ಲಿ ಕೋಲನ್ನು ಹಿಡಿದಿರುವ ಆಳುಗಳು ಸಭೆಗೆ ನಮ್ಮನ್ನು ಎಳೆದುಕೊಂಡು ಹೋಗಿ ಕೂರಿಸಿದರು. ಇತರರು ನಮ್ಮನ್ನ ನೋಡಿ ಹಾಸ್ಯಮಾಡಿ ನಕ್ಕರು.

೪೦. ಎಲೈ ಸಭೆಯಲ್ಲಿರುವ ದೈತ್ಯರಿರಾ ! ನೀವು ಹೆಚ್ಚು ಅರ್ಥವನ್ನು ಬಲ್ಲವರು. ಇಷ್ಟವನ್ನು ಪೂರ್ತಿಯಾಗಿ ಹೊಂದಿರುವರು. ಮತ್ತು ಮಿತಭಾಷಿಗಳು. ಶಾಸ್ತ್ರದಲ್ಲಿ ಹೇಳಿರುವುದನ್ನು ಹೇಳಿರಿ. ದೇವತೆಗಳು ಹೇಳಬೇಕಾದುದಿಲ್ಲ. ಅವರು ಬಹಳ ಮಾತಾಡುವರು.

ಸಭೇಯಂ ದೈತ್ಯಸಿಂಹಸ್ಯ ನ ಶಕ್ರಸ್ಯ ವಿಶೃಂಖಲಾ ।
ವದದ್ಭಿರಿತಿ ದೈತ್ಯಸ್ಯ ಪ್ರೇಷ್ಯೈರ್ವಿಹಸಿತಾ ಬಹು ॥ ೪೧ ॥

ಋತವೋ ಮೂರ್ತಿಮಂತ್ರಶ್ಚ ಉಪಾಸತೇ ಅಹರ್ನಿಶಂ ।
ಕೃತಾಪರಾಧಂ ಸತ್ರಾಸಂ ನ ತ್ಯಜಂತಿ ಕಥಂಚನ ॥ ೪೨ ॥

ತಂತ್ರೀಲಯನಯೋಪೇತಂ ಸಿದ್ಧಗಂಧರ್ವಕಿನ್ನರೈಃ ।
ಸುರಾಗಮುಪಧಾವಿಷ್ಟಂ ಗೀಯತೇ ತಸ್ಯ ವೇಶ್ಮಸು ॥ ೪೩ ॥

ಕೃತಾಕೃತೋಪಕರಣೈರ್ಮಿತ್ರಾದಿಗುರುಲಾಘವಃ ।
ಶರಣಾಗತಸಂತ್ಯಾಗೀ ತ್ಯಕ್ತಸತ್ಯಪ್ರತಿಶ್ರಯಃ ॥ ೪೪ ॥

ಇತಿ ನಿಶೇಷಮಥವಾ ನಿಶೇಷಂ ಕೇನ ಶಕ್ಯತೇ ।
ತಸ್ಯಾವಿನಯಮಾಖ್ಯಾತುಂ ಸ್ರಷ್ಟಾ ತತ್ರ ಪರಾಯಣಂ ॥ ೪೫ ॥

---

೪೧. ಈ ಸಭೆಯು ದೈತ್ಯಶ್ರೇಷ್ಠನದು. ದೇವೇಂದ್ರನ ಕಟ್ಟು ಹರಿದ ಸಭೆಯಲ್ಲ ಎಂದು ಹೇಳುತ್ತ ಆ ತಾರಕನ ಆಳುಗಳು ಬಹಳವಾಗಿ ಹಾಸ್ಯಮಾಡುತ್ತಿದ್ದರು.

೪೨. ಋತುಗಳು ಕೈಕಾಲುಗಳುಳ್ಳ ಆಕಾರವನ್ನು ಹೊಂದಿ ಹಗಲು ರಾತ್ರಿಯಲ್ಲಿಯೂ ಅವನನ್ನು ಹೆದರಿಕೊಂಡು ಸೇವಿಸುತ್ತವೆ. ಅವನು ತಪ್ಪು ಮಾಡಿದರೂ ಕೂಡ ಹೆದರಿಕೊಂಡು ಅವನನ್ನು ಹೇಗೂ ಬಿಡುವುದೇ ಇಲ್ಲ.

೪೩. ಸಿದ್ಧರು, ಗಂಧರ್ವರು, ಕಿನ್ನರರುಗಳು ಶ್ರುತಿಗೆ ಬೆರತುಹೋಗುವಂತೆ ಅಷ್ಟು ನಯವಾಗಿ ಒಳ್ಳೆಯ ರಾಗಗಳನ್ನು ಅವನ ಹತ್ತಿರದಲ್ಲಿಯೇ ಕುಳಿತು ಅವನ ಮನೆಯಲ್ಲಿ ಹಾಡುತ್ತಾರೆ.

೪೪. ಉಪಕಾರ ಅಪಕಾರಗಳನ್ನು ನಿಯಮವಿಲ್ಲದೆ ಮಾಡುತ್ತಾನೆ. ಮಿತ್ರರು ಗುರುಗಳು, ಶತ್ರುಗಳು ಇವರಲ್ಲಿ ಹೀಗೆ ಹೀಗೆ ನಡೆಯಬೇಕೆಂಬ ನಿಯಮವೇ ಇಲ್ಲ. ಶರಣಾಗತರನ್ನು ಕಾಪಾಡದೆ ಬಿಟ್ಟು ಬಿಡುವನು. ಸತ್ವಗುಣಕ್ಕಾಗಲೀ, ಸತ್ವಗುಣವುಳ್ಳವರಿಗಾಗಲಿ, ಆಶ್ರಯವನ್ನೇ ಕೊಡುವುದಿಲ್ಲ.

೪೫, ಇಷ್ಟು ಹೇಳಿದುದರಿಂದಲೇ ಅವನ ಗುಣಗಳನ್ನೆಲ್ಲಾ ಪೂರ್ತಿಯಾಗಿ ಹೇಳಿದಂತಾಯಿತು. ಅಥವಾ ಯಾರಿಂದ ತಾನೇ ಅವನ ದುರ್ಗುಣಗಳನ್ನು ಹೇಳಲು ಸಾಧ್ಯವಾದೀತು ? ಸೃಷ್ಟಿಕರ್ತನೇ ಅದನ್ನು ತಿಳಿಯಬೇಕು.

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ವ್ಯರಮದ್ವಾಯುಃ ಶನೈರ್ದೇವವಿಚೇಷ್ಟಿತಂ ।
ಸುರಾನುವಾಚ ಭಗವಾಂಸ್ತತಃ ಸ್ಮಿತಮುಖಾಂಬುಜಃ ॥ ೪೬ ॥

॥ ಬ್ರಹ್ಮೋವಾಚ ॥

ಅವಧ್ಯಸ್ತಾರಕೋ ದೈತ್ಯಃ ಸರ್ವೈರಪಿ ಸುರಾಸುರೈಃ ।
ಯಸ್ಯ ವಧ್ಯಃ ಸ ನಾದ್ಯಾಪಿ ಜಾತಸ್ತ್ರಿಭುವನೇ ಪುಮಾನ್ ॥ ೪೭ ॥

ಮಯಾ ಸ ವರದಾನೇನ ಚ್ಛಂದಯಿತ್ವಾ ನಿವಾರಿತಃ ।
ತಪಸಃ ಸಾಂಪ್ರತಂ ರಾಜಾ ತ್ರೈಲೋಕ್ಯದಹನಾತ್ಮಕಃ ॥ ೪೮ ॥

ಸ ತು ವವ್ರೇ ವಧಂ ದೈತ್ಯಃ ಶಿಶುತಃ ಸಪ್ತವಾಸರಾತ್ ।
ಸ ತು ಸಪ್ತದಿನೋ ಬಾಲಃ ಶಂಕರಾದ್ಯೋ ಭವಿಷ್ಯತಿ ॥ ೪೯ ॥

ತಾರಕಸ್ಯ ನಿಹಂತಾ ಸ ಭಾಸ್ಕರಾಭೋ ಭವಿಷ್ಯತಿ ।
ಸಾಂಪ್ರತಂ ಚಾಪ್ಯಪತ್ನೀಕಃ ಶಂಕರೋ ಭಗವಾನ್ಪ್ರಭುಃ ॥ ೫೦ ॥

---

೪೬. ಪುಲಸ್ತ್ಯನು ಹೇಳಿದನು– ಈ ರೀತಿಯಾಗಿ ವಾಯುವು ದೇವತೆಗಳ ಸ್ಥಿತಿಯನ್ನು ಹೇಳಿ ಸುಮ್ಮನಾಗಲು ಬ್ರಹ್ಮನು ನಗುತ್ತ ದೇವತೆಗಳನ್ನು ಕುರಿತು ಇಂತೆಂದನು.

೪೭. ಬ್ರಹ್ಮನು ಹೇಳಿದನು–ಆ ತಾರಕಾಸುರನನ್ನು ಸುರಾಸುರಲ್ಲಿಯೂ ಕೂಡ ಯಾರೂ ಕೊಲ್ಲಲಾಗುವುದಿಲ್ಲ. ಅವನನ್ನು ಕೊಲ್ಲುವವನು ಮೂರು ಲೋಕಗಳಲ್ಲಿ ಇದುವರೆಗೂ ಯಾವನೂ ಹುಟ್ಟಿಲ್ಲ.

೪೮. ತಪಸ್ಸಿನಿಂದ ಮೂರು ಲೋಕವನ್ನೂ ಸುಡುತ್ತಿತ್ತಿದ್ದ, ಈಗ ರಾಜನಾಗಿರುವ ಆ ತಾರಕಾಸುರನನ್ನು ನಾನು ಅವನಿಗೆ ಬೇಕಾದ ವರವನ್ನು ಕೊಟ್ಟು ಸುಮ್ಮನಿರುವಂತೆ ಮಾಡಿದೆನು.

೪೯. ಆಗ ಆ ದೈತ್ಯನು ಏಳು ದಿನದ ಮಗುವಿನಿಂದ ಸಾವನ್ನು ಕೇಳಿರುವನು. ಆ ಏಳು ದಿನದ ಬಾಲಕನು ಶಂಕರನಿಂದ ಉತ್ಪನ್ನನಾದವನಾಗಿರಬೇಕು.

೫೦. ತಾರಕನನ್ನು ಕೊಲ್ಲುವ ಆ ಮಗುವು ಸೂರ್ಯನಂತೆ ಕಾಂತಿಯುಳ್ಳದ್ದಾಗಿ ಹುಟ್ಟುತ್ತದೆ. ಈಗಲಾದರೋ ಆ ಶಂಕರನು ಹೆಂಡತಿಯಿಲ್ಲದವನಾಗಿದ್ದಾನೆ.

ಹಿಮಾಚಲಸ್ಯ ದುಹಿತಾ ಯಾ ಚ ದೇವೀ ಭವಿಷ್ಯತಿ ।
ತಸ್ಯಾಃ ಸಕಾಶಾದ್ಯಃ ಸೂನುರರಣ್ಯಾಃ ಪಾವಕೋ ಯಥಾ ॥ ೫೧ ॥

ಜನಯಿಷ್ಯತಿ ತಂ ಪ್ರಾಪ್ಯ ತಾರಕೋ ನ ಭವಿಷ್ಯತಿ ।
ಮಯಾಽಭ್ಯುಪಾಯಃ ಕಥಿತೋ ಯಥೈವ ಹಿ ಭವಿಷ್ಯತಿ ॥ ೫೨ ॥

ಶೇಷಂ ಚಾಪ್ಯಸ್ಯ ವಿಭವಂ ವಿಭಜಧ್ವಮನಂತರಂ ।
ಸ್ತೋಕಕಾಲಂ ಪ್ರತೀಕ್ಷಧ್ವಂ ನಿರ್ವಿಶಂಕೇನ ಚೇತಸಾ ॥ ೫೩ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾಸ್ತ್ರಿದಶಾಸ್ತೇನ ಸಾಕ್ಷಾತ್ಕಮಲಯೋನಿನಾ ।
ಜಗ್ಮುಸ್ತೇ ಪ್ರಣಿಪತ್ಯೇಶಂ ಯಥಾಯೋಗಂ ದಿವೌಕಸಃ ॥ ೫೪ ॥

ತತೋ ಯಾತೇಷು ದೇವೇಷು ಬ್ರಹ್ಮಾ ಲೋಕಪಿತಾಮಹಃ ।
ನಿಶಾಂ ಸಸ್ಮಾರ ಭಗವಾಂಸ್ತಾಂ ದೇವೀಂ ಪೂರ್ವಸಂಭವಾಂ ॥ ೫೫ ॥

---

೫೧. ಹಿಮವಂತನ ಮಗಳು ಅವನಿಗೆ ಹೆಂಡತಿಯಾಗುತ್ತಾಳೆ ಅರಣಿಯಲ್ಲಿ ಅಗ್ನಿಯು ಹುಟ್ಟುವಂತೆ ಅವಳಲ್ಲಿ ಆ ಮಗುವು ಹುಟ್ಟುತ್ತದೆ.

೫೨. ಹಾಗೆ ಹುಟ್ಟುವ ಮಗನನ್ನು ತಾರಕನು ಎದುರಿಸಿದರೆ ಆಗ ಅವನು ಜೀವಿಸುವುದಿಲ್ಲ. ಆಗತಕ್ಕ ರೀತಿಯ ಉಪಾಯವನ್ನು ನಿಮಗೆ ಹೇಳಿದ್ದೇನೆ.

೫೩. ಅವನ ಈ ಮಹಿಮೆಯು ಸ್ವಲ್ಪ ಉಳಿದಿದೆ. ಅನಂತರ ನೀವೇ ಅವನ ದೆಲ್ಲವನ್ನೂ ಹಂಚಿಕೊಳ್ಳುವಿರಂತೆ. ಮನಸ್ಸನ್ನು ಸಮಾಧಾನ ಮಾಡಿಕೊಂಡು ಸ್ವಲ್ಪ ಕಾಲ ಕಾದುಕೊಂಡಿರಿ.

೫೪. ಪುಲಸ್ತ್ಯನು ಹೇಳಿದನು- ಬ್ರಹ್ಮನೇ ಪ್ರತ್ಯಕ್ಷನಾಗಿ ಹೀಗೆ ಹೇಳಲು ಆ ದೇವತೆಗಳು ಬ್ರಹ್ಮನಿಗೆ ನಮಸ್ಕರಿಸಿ ಅವರವರ ಸ್ಥಳಕ್ಕೆ ಹೊರಟುಹೋದರು.

೫೫. ದೇವತೆಗಳು ಅತ್ತ ಹೋಗಲು ಪಿತಾಮಹನಾದ ಬ್ರಹ್ಮನು ಮೊದಲೇ ಹುಟ್ಟಿದ ದೇವಿಯಾದ ಆ ನಿಶೆಯನ್ನು ಸ್ಮರಿಸಿದನು.

ತತೋ ಭಗವತೀ ರಾತ್ರಿರುಪತಸ್ಥೇ ಪಿತಾಮಹಂ ।
ತಾಂ ವಿವಿಕ್ತೇ ಸಮಾಲೋಕ್ಯ ಬ್ರಹ್ಮೋವಾಚ ವಿಭಾವರೀಂ ॥ ೫೬ ॥

॥ ಬ್ರಹ್ಮೋವಾಚ ॥

ವಿಭಾವರಿ ಮಹತ್ಕಾರ್ಯಂ ದೇವಾನಾಂ ಸಮುಪಸ್ಥಿತಂ ।
ತತ್ಕರ್ತವ್ಯಂ ತ್ವಯಾ ದೇವೀ ಶೃಣು ಕಾರ್ಯಸ್ಯ ನಿಶ್ಚಯಂ ॥ ೫೭ ॥

ತಾರಕೋ ನಾಮ ದೈತ್ಯೇಂದ್ರಃ ಸುರಕೇತುರನಿರ್ಜಿತಃ ।
ತಸ್ಯಾಭಾವಾಯ ಭಗವಾಂಜನಯಿಷ್ಯತಿ ಚೇಶ್ವರಃ ॥ ೫೮ ॥

ಸುತಂ ಸ ಭವಿತಾ ತಸ್ಯ ತಾರಕಸ್ಯಾಂತಕಃ ಕಿಲ ।
ಶಂಕರಸ್ಯಾಭವತ್ಪತ್ನೀ ಸತೀ ದಕ್ಷಸುತಾ ತು ಯಾ ॥ ೫೯ ॥

ಸಾ ಪಿತುಃ ಕುಪಿತಾ ದೇವೀ ಕಸ್ಮಿಂಶ್ಚಿತ್ಕಾರಣಾಂತರೇ ।
ಭವಿತ್ರೀ ಹಿಮಶೈಲಸ್ಯ ದುಹಿತಾ ಲೋಕಭಾವಿನೀ ॥ ೬೦ ॥

---

೫೬. ಆಗ ಪೂಜ್ಯಳಾದ ನಿಶೆಯು ಬ್ರಹ್ಮನ ಬಳಿಗೆ ಬಂದಳು ಆಗ ಯಾರೂ ಇಲ್ಲದ ಸಮಯವನ್ನು ನೋಡಿ ಆಕೆಯನ್ನು ಕುರಿತು ಇಂತೆಂದನು.

೫೭. ಬ್ರಹ್ಮನು ಹೇಳಿದನು- ಎಲೈ ವಿಭಾವರಿಯೇ ! ದೇವತೆಗಳಿಗೆ ಮಾಡಬೇಕಾದ ಒಂದು ದೊಡ್ಡ ಕೆಲಸವು ಒದಗಿದೆ. ಅದನ್ನು ನೀನು ಮಾಡಬೇಕು. ಆ ಕೆಲಸದ ಸ್ಥಿತಿಯನ್ನು ಕೇಳು.

೫೮-೬೦. ತಾರಕನೆಂಬ ದೈತ್ಯೇಂದ್ರನು ಧೂಮಕೇತುವಂತಿದ್ದಾನೆ. ಜಯಿಸಲಶಕ್ಯನು. ಅವನ ನಾಶಕ್ಕೋಸ್ಕರ ಭಗವಂತನಾದ ಈಶ್ವರನು ಮಗನು ಹುಟ್ಟಿಸುತ್ತಾನೆ. ಅವನು ಆ ತಾರಕನಿಗೆ ನಾಶಕನಾಗುತ್ತಾನೆ. ಶಂಕರನಿಗೆ ಹೆಂಡತಿಯಾಗಿದ್ದ ದಕ್ಷಪ್ರಜಾಪತಿಯ ಮಗಳಾದ ಸತೀ ದೇವಿಯು ಯಾವುದೋ ಕಾರಣದಿಂದ ತಂದೆಯ ಮೇಲೆ ಕೋಪಗೊಂಡು ಆ ದೇಹವನ್ನು ಬಿಟ್ಟು ಪೂಜ್ಯಳಾದ ಆಕೆಯು ಹಿಮವಂತನಿಗೆ ಮಗಳಾಗಿ ಹುಟ್ಟುತ್ತಾಳೆ.

ವಿರಹೇಣ ಹರಸ್ತಸ್ಯಾ ಮತ್ವಾ ಶೂನ್ಯಂ ಜಗತ್ರಯಂ ।
ಸ ತಸ್ಯ ಹಿಮಶ್ಶೈಲಸ್ಯ ಕಂದರೇ ಸಿದ್ಧಸೇವಿತೇ ॥ ೬೧ ॥

ಪ್ರತೀಕ್ಷಮಾಣಸ್ತಜ್ಜನ್ಮ ಕಿಂಚಿತ್ಕಾಲಂ ನಿವತ್ಸ್ಯತಿ ।
ತಯೋಃ ಸುತಪ್ತತಪಸೋರ್ಭವಿತಾ ಯೋ ಮಹಾನ್ಸುತಃ ॥ ೬೨ ॥

ಭವಿಷ್ಯತಿ ಸ ದೈತ್ಯಸ್ಯ ತಾರಕಸ್ಯ ವಿನಾಶಿತಾ ।
ಜಾತಮಾತ್ರಾ ಚ ಸಾ ದೇವೀ ಸ್ವಲ್ಪಸಂಜ್ಞೇವ ಭಾಮಿನೀ ॥ ೬೩ ॥

ವಿರಹೋತ್ಕಂಠಿತಾ ಗಾಢಂ ಹರಸಂಗಮಲಾಲಸಾ ।
ತಯೋಃ ಸುತಪ್ತತಪಸೋಃ ಸಂಯೋಗಃ ಸ್ಯಾಚ್ಛುಭಾವಹಃ ॥ ೬೪ ॥

ತತಸ್ತಾಭ್ಯಾಂ ತು ಜನಿತಃ ಸ್ವಲ್ಪೋ ವಾಕ್ಕಲಹೋ ಭವೇತ್ ।
ತತಸ್ತು ಸಂಶಯೋ ಭೂಯಸ್ತಾರಕಸ್ಯ ಚ ದೃಶ್ಯತೇ ॥ ೬೫ ॥

ತಯೋಃ ಸಂಯುಕ್ತಯೋಸ್ತಸ್ಮಾತ್ಸುರತಾಸಕ್ತಿಕಾರಣೇ ।
ವಿಘ್ನಂ ತ್ವಯಾ ವಿಧಾತವ್ಯಂ ಯಥಾ ತಾಭ್ಯಾಂ ತಥಾ ಶೃಣು ॥ ೬೬ ॥

---

೬೧-೬೪. ಆಕೆಯ ವಿರಹದಿಂದ ಶಿವನು ಮೂರು ಲೋಕವನ್ನೂ ಉಪಯೋಗವಿಲ್ಲದ್ದನ್ನಾಗಿ ಎಣಿಸಿ ಸಿದ್ಧರಿಂದ ಸೇವಿತವಾದ ಆ ಹಿಮವಂತನ ಗುಹೆಯಲ್ಲಿ ಆಕೆಯ ಜನ್ಮವನ್ನು ನಿರೀಕ್ಷಿಸುತ್ತ ಕೆಲವುಕಾಲ ವಾಸಿಸುವನು ಚೆನ್ನಾಗಿ ತಪಸ್ಸು ಮಾಡಿದ ಅವರಿಗೆ ಹುಟ್ಟುವ ಗಟ್ಟಿಗನಾದ ಮಗನು ಆ ದೈತ್ಯನಿಗೆ ನಾಶಕನಾಗಿ ಆಗುವನು. ಆ ಸತೀದೇವಿಯು ಹುಟ್ಟಿದೊಡನೆಯೇ ಬುದ್ಧಿ ಕಡಿಮೆಯಾದವಳಂತಿರುತ್ತಾಳೆ. ಹರನ ಅಗಲುವಿಕೆಯಿಂದ ಹೆಚ್ಚಾಗಿ ದುಃಖಪಡುತ್ತ ಅವನನ್ನು ಸೇರುವುದರಲ್ಲಿ ಆಶೆಯುಳ್ಳವಳಾಗುತ್ತಾಳೆ ಚೆನ್ನಾಗಿ ತಪಸ್ಸು ಮಾಡಿದ ಅವರುಗಳ ಸೇರುವಿಕೆಯು ಶುಭವನ್ನುಂಟುಮಾಡುತ್ತದೆ.

೬೫. ಅನಂತರ ಆ ಈಶ ಸತಿಯರಿಗೆ ಸ್ವಲ್ಪ ಜಗಳವುಂಟಾಗುತ್ತದೆ. ಅನಂತರ ತಾರಕನಿಗೆ ಹೆಚ್ಚಾದ ಸಂಶಯವುಂಟಾಗುತ್ತದೆ.

೬೬. ಅವರಿಬ್ಬರೂ ಸೇರಿದಾಗ ಅವರಿಗೆ ಕ್ರೀಡಿಸುವಿಕೆಯಲ್ಲಿ ಆಸಕ್ತಿಯುಂಟಾದಾಗ ನೀನು ವಿಘ್ನವನ್ನು ಮಾಡಬೇಕು. ಅವರಿಗೆ ವಿಘ್ನವನ್ನು ಹೇಗೆ ಮಾಡಬೇಕೆಂಬುದನ್ನು ಕೇಳು.

ಗರ್ಭಸ್ಥಮೇವ ತನ್ಮಾತುಃ ಸ್ವೇನ ರೂಪೇಣ ಸಂಜ್ಞಯಾ ।
ತತೋ ವಿಹಸ್ಯ ಶರ್ವಸ್ತಾಂ ವಿಷಣ್ಣೋ ನರ್ಮಪೂರ್ವಕಂ ॥ ೬೭ ॥

ಭರ್ತ್ಸಯಿಷ್ಯತಿ ತಾಂ ದೇವೀಂ ತತಃ ಸಾ ಕುಪಿತಾ ಸತೀ ।
ಪ್ರಯಾಸ್ಯತಿ ತಪಶ್ಚರ್ತುಂ ತತಃ ಸಾ ತಪಸಾ ಯುತಾ ॥ ೯೮

ಜನಯಿಷ್ಯತಿ ತಂ ಶರ್ವಾದಮಿತದ್ಯುತಿಮಂಡಲಂ ।
ಸ ಭವಿಷ್ಯತಿ ಹಂತಾಽಸೌ ಸುರಾರೀಣಾಮಸಂಶಯಂ ॥ ೬೯ ॥

ತ್ವಯಾಽಪಿ ದಾನವಾ ದೇವಿ ಹಂತವ್ಯಾ ಲೋಕದುರ್ಜಯಾಃ ।
ಯಾವತ್ಸುರೇಶ್ವರೀದೇಹಸಂಕ್ರಾಂತಗುಣಸಂಚಯಾ ॥ ೭೦ ॥

ತತ್ಸಂಗಮೇನ ತಾವತ್ತ್ವಂ ದೈತ್ಯಾನ್ ಹಂತುಂ ನ ಶಕ್ಯಸೇ ।
ಏವಂ ಕೃತೇ ತಪಸ್ತಪ್ತ್ವಾ ತ್ವಯಾ ಸರ್ವಂ ಕರಿಷ್ಯತಿ ॥ ೭೧ ॥

ಸಮಾಪ್ತನಿಯಮಾ ದೇವೀ ಯದಾ ಚೋಮಾ ಭವಿಷ್ಯತಿ ।
ತದಾ ಸ್ವಮೇವ ಸಾ ರೂಪಂ ಶೈಲಜಾ ಪ್ರತಿಪತ್ಸ್ಯತೇ ॥ ೭೨ ॥

---

೬೭-೬೯. ಆಕೆಯು ತನ್ನ ತಾಯಿಯ ಹೊಟ್ಟೆಯಲ್ಲಿರುವಾಗಲೇ ಈಶ್ವರನು ನಕ್ಕು ದುಃಖಗೊಂಡು ಮನಸ್ಸಿಗೆ ದುಃಖವನ್ನುಂಟುಮಾಡುವ ಮಾತುಗಳಿಂದ ಆಕೆಯನ್ನು ಹೆದರಿಸುತ್ತಾನೆ. ಅನಂತರ ಆಕೆಯು ಕೋಪಗೊಂಡು ತಪಸ್ಸು ಮಾಡುವುದಕ್ಕೆ ಹೊರಟುಹೋಗುತ್ತಾಳೆ. ಆಮೇಲೆ ತಪಸ್ಸಿನಿಂದ ಕೂಡಿದವಳಾಗಿ ಈಶ್ವರನಿಂದ ಉತ್ತಮವಾದ ತೇಜಸ್ಸುಳ್ಳ ಮಗನನ್ನು ಹೆರುತ್ತಾಳೆ. ಅವನೇ ಈ ದೇವತೆಗಳ ಶತ್ರುಗಳನ್ನು ಕೊಲ್ಲುತ್ತಾನೆ

೭೦-೭೧. ಎಲೈ ದೇವಿಯೇ ! ಲೋಕಕ್ಕೇ ದುರ್ಜಯರಾದ ದಾನವರನ್ನು ನೀನು ನಾಶಮಾಡಬೇಕು. ನೀನು ಆ ದೇವತೆಗಳ ಒಡತಿಯಾದ ಆ ಪಾರ್ವತಿಯ ದೇಹದಲ್ಲಿರುವ ಗುಣಗಳನ್ನೂ ಅವಳ ಸಹವಾಸದಿಂದ ಹೊಂದುವ ತನಕ ನೀನು ಆ ದೈತ್ಯರನ್ನು ಕೊಲ್ಲಲಾರೆ, ನೀನು ಹಾಗೆ ಅವಳಲ್ಲಿ ಸೇರಿಕೊಂಡರೆ ಆಕೆಯು ತಪಸ್ಸನ್ನು ಮಾಡಿ ಎಲ್ಲವನ್ನೂ ಮಾಡುತ್ತಾಳೆ.

೭೨. ಉಮೆಯು ತಪಸ್ಸನ್ನು ಮಾಡಿ ನಿಯಮಗಳನ್ನು [ವ್ರತವನ್ನು] ಪೂರ್ತಿ ಮಾಡಿದಮೇಲೆ ಆಗ ಆ ಪಾರ್ವತಿಯು ಸ್ವಂತ ಸ್ಥಿತಿಯನ್ನೂ ರೂಪವನ್ನೂ ಹೊಂದುತ್ತಾಳೆ.

ತದಾ ತ್ವಯೋಽಪಿ ಸಹಿತಾ ಭವಾನೀ ಸಾ ಭವಿಷ್ಯತಿ ।
ರೂಪಾಂಶೇನ ತು ಸಂಯುಕ್ತಾ ಉಮಾಯಾಸ್ತ್ವಂ ಭವಿಷ್ಯಸಿ ॥ ೭೩ ॥

ಏಕಾಽನಂತೇತಿ ಲೋಕಸ್ತ್ವಾಂ ವರದೇ ಪೂಜಯಿಷ್ಯತಿ ।
ಭೇದೈರ್ಬಹುವಿಧಾಕಾರೈಃ ಸರ್ವಗಾಂ ಕಾಮಸಾಧಿನೀಂ ॥ ೭೪ ॥

ಓಂಕಾರವಕ್ತ್ರಾ ಗಾಯಿತ್ರೀ ತ್ವಮಿತಿ ಬ್ರಹ್ಮವಾದಿಭಿಃ ।
ಆಕ್ರಾಂತ್ಯೈರೂರ್ಜಿತಾಕಾರಾ ರಾಜಭಿಶ್ಚ ಮಹಾಭುಜೈಃ ॥ ೭೫ ॥

ತ್ವಂ ಭೂರಿತಿ ವಿಶಾಂ ಮಾತಾ ಶೂದ್ರೈಃ ಶೈವೇತಿ ಪೂಜಿತಾ ।
ಕ್ಷಾಂತಿರ್ಮುನೀನಾಮಕ್ಷೋಭ್ಯಾ ದಯಾ ನಿಯಮಿನಾಮಪಿ ॥ ೭೬ ॥

ತ್ವಂ ಮಹೋಪಾಯಸಂದೇಹಾ ನೀತಿರ್ನಯವಿಸರ್ಪಿಣಾಂ ।
ಪರಿಚಿತಿಸ್ತ್ವಮರ್ಥಾನಾಂ ತ್ವಮೀಹಾ ಪ್ರಾಣಿಹೃಚ್ಛಯಾ ॥ ೭೭ ॥

---

೭೩. ಆ ತಪಸ್ಸು ಮುಗಿಯುವವರೆಗೂ ಆ ಉಮೆಯು ನಿನ್ನಿಂದಲೇ ಕೂಡಿದವಳಾಗಿರತ್ತಾಳೆ. ಅನಂತರ ಆ ಉಮೆಯ ಬೇರೆಯ ರೂಪವನ್ನು ಹೊಂದಿ ನೀನಿರುವಿಯಂತೆ.

೭೪–೭೫. ಆಗ ಲೋಕವು ನೀವಿಬ್ಬರೂ ಒಂದೇ ಎಂದು ಪೂಜಿಸುತ್ತದೆ. ಬಹುವಿಧವಾದ ಆಕಾರ ಭೇದಗಳಿಂದಲೂ ವಿಲ್ಲಾ ಕಡೆಯಲ್ಲೂ ಇರುವ ನಿನ್ನನ್ನು ತಿಳಿದುಕೊಂಡು ಪೂಜಿಸುತ್ತದೆ. ಬ್ರಹ್ಮವಾದಿಗಳು ಓಂಕಾರ ರೂಪಳಾದ ಗಾಯತ್ರಿಯೆಂದೂ ರಾಜರು ದೊಡ್ಡದಾದ ಆಕಾರವುಳ್ಳ ಕಾಳಿ ಮುಂತಾದ ರೂಪಗಳೆಂದೂ ನಿನ್ನನ್ನು ಪೂಜಿಸುತ್ತಾರೆ.

೭೬-೭೭ ನಿನ್ನನ್ನು ವೈಶ್ಯರು ಭೂಮಿಯೆಂದೂ, ಶೂದ್ರರು ಶೈವಮಾತೆಯೆಂದೂ ಪೂಜಿಸುತ್ತಾರೆ. ನೀನೇ ಮುನಿಗಳಲ್ಲಿ ಇರುವ ಕ್ಷಾಂತಿಯು. ನಿಯಮಸ್ಥರಲ್ಲಿರುವ ದಯೆಯೂ ನೀನೇ ಆಗಿರುತ್ತೀಯೆ. ನೀನೇ ಮಹಾ ಉಪಾಯಗಳ ಗುಂಪು. ನಯದಿಂದ ಹೋಗುವವರಿಗೆ ನೀತಿಯಾಗಿರುತ್ತೀಯೆ. ವಿಷಯಗಳನ್ನು ನೀನೇ ಗುರುತು ಮಾಡಿಕೊಡತಕ್ಕವಳು. ನೀನೇ ಪ್ರಾಣಿಗಳ ಮನಸ್ಸಿನಲ್ಲಿರುವ ಆಸೆಯು.

ತ್ವಂ ಮುಕ್ತಿಃ ಸರ್ವಭೂತಾನಾಂ ತ್ವಂ ಗತಿಃ ಸರ್ವದೇಹಿನಾಂ ।
ಸತಿಸ್ತ್ವಂ ರಕ್ತಚಿತ್ತಾನಾಂ ಪ್ರೀತಿಸ್ತ್ವಂ ಹೃದಿ ದೇಹಿನಾಂ ॥ ೭೮ ॥

ತ್ವಂ ಕೀರ್ತಿಃ ಸತ್ಯಭೂತಾನಾಂ ತ್ವಂ ಶಾಂತಿರ್ದುಷ್ಟಕರ್ಮಣಾಂ ।
ತ್ವಂ ಭ್ರಾಂತಿಃ ಸರ್ವಭೂತಾನಾಂ ತ್ವಂ ಗತಿಃ ಕ್ರತುಯಾಜಿನಾಂ ॥ ೭೯ ॥

ಜಲಧೀನಾಂ ಮಹಾವೇಲಾ ತ್ವಂ ಚ ಲೀಲಾ ವಿಲಾಸಿನಾಂ ।
ಸಂಭೂತಿಸ್ತ್ವಂ ಪದಾರ್ಥಾನಾಂ ಸ್ಥಿತಿಸ್ತ್ವಂ ಲೋಕಪಾಲಿನಾಂ ॥ ೮೦ ॥

ತ್ವಂ ಕಾಲರಾತ್ರಿರ್ನಿಃಶ್ಶೇಷಭುವನಾವಲಿವಾಸಿನೀ ।
ಪ್ರಿಯಕಂಠಗ್ರಹಾನಂದದಾಯಿನೀ ತ್ವಂ ವಿಭಾವರೀ ॥ ೮೧ ॥

ಇತ್ಯನೇಕವಿಧೈರ್ದೇವೀ ರೂಪೈರ್ಲೋಕೇ ತ್ವಮರ್ಚಿತಾ ।
ಯೇ ತ್ವಾಂ ಸ್ತೋಷ್ಯಂತಿ ವರದೇ ಪೂಜಯಿಷ್ಯಂತಿ ಚಾಪಿ ಯೇ ॥ ೮೨ ॥

---

೭೮-೭೯. ಸರ್ವ ಪ್ರಾಣಿಗಳಿಗೂ ನೀನೇ ಮುಕ್ತಿಯು. ಎಲ್ಲ ದೇಹಿಗಳಿಗೂ ನೀನೇ ಗತಿಯು ಎಲ್ಲಾ ಚಿತ್ತಗಳಿಗೂ ನೀನೇ ಸುಖವು. ಪ್ರಾಣಿಗಳ ಹೃದಯದಲ್ಲಿರುವ ಪ್ರೀತಿಯು ನೀನೇ. ನೀನೇ ಎಲ್ಲರಿಗೂ ಕೀರ್ತಿಯು. ಕೆಟ್ಟ ಕೆಲಸಗಳಿಗೆಲ್ಲಾ ನೀನೇ ಶಾಂತಿಯು. ಎಲ್ಲಾ ಪ್ರಾಣಿಗಳಿಗೂ ನೀನೇ ಭ್ರಾಂತಿಯು. ಯಜ್ಞ ಮಾಡುವವರಿಗೆ ನೀನೇ ಗತಿಯೂ ಆಗಿದ್ದೀಯೇ.

೮೦-೮೧. ನೀನು ಸಮುದ್ರಗಳಿಗೆ ದಡವಾಗಿಯೂ, ವಿಲಾಸಿಗಳಿಗೆ ಲೀಲೆಯಾಗಿಯೂ, ಪದಾರ್ಥಗಳಿಗೆ ಉತ್ಪತ್ತಿಯಾಗಿಯೂ, ಲೋಕವನ್ನು ಕಾಪಾಡತಕ್ಕವರಿಗೆ ಸ್ಥಿತಿಯಾಗಿಯೂ, ಲೋಕದಲ್ಲಿ ಇರುವವರೆಲ್ಲರಿಗೂ ಕಾಲರಾತ್ರಿಯಾಗಿಯೂ, ಪ್ರಿಯನ ಕತ್ತನ್ನು ತಬ್ಬಿಕೊಂಡು ಆನಂದವನ್ನು ಕೊಡುವ ರಾತ್ರಿಯೂ ನೀನೇ ಆಗಿರುತ್ತೀಯೇ.

೮೨. ಎಲೈ ದೇವಿಯೇ! ಇವೇ ಮುಂತಾದ ರೂಪಗಳಿಂದ ಲೋಕದಲ್ಲಿ ನೀನು ಪೂಜಿಸಿಕೊಳ್ಳುತ್ತೀಯೆ. ಯಾರು ನಿನ್ನನ್ನು ಪೂಜಿಸುತ್ತಾರೆಯೋ, ಯಾರು ಸ್ತೋತ್ರ ಮಾಡುತ್ತಾರೆಯೋ, ಅವರು ಎಲ್ಲಾ ಇಷ್ಟಗಳನ್ನೂ ಹೊಂದುತ್ತಾರೆ. ಖಂಡಿತ. ಸಂಶಯವಿಲ್ಲ.

ತೇ ಸರ್ವಕಾಮಾನಾಪ್ಸ್ಯಂತಿ ನಿಯುತಾ ನಾತ್ರ ಸಂಶಯಃ ।
ಇತ್ಯುಕ್ತ್ವಾ ತು ನಿಶಾ ದೇವೀ ತಥೇತ್ಯುಕ್ತ್ವಾ ಕೃತಾಂಜಲಿಃ ॥ ೮೩ ॥

ಜಗಾಮ ತ್ವರಿತಾ ತೂರ್ಣಂ ಗೃಹಂ ಹಿಮಗಿರೇರ್ಮಹತ್ ।
ತತ್ರಾಸೀನಾಂ ಮಹಾಹರ್ಮ್ಯೇ ರತ್ನಭಿತ್ತಿಸಮಾಶ್ರಯಾಂ ॥ ೮೪ ॥

ದದರ್ಶ ಮೇನಾಮಾಪಾಂಡುಚ್ಛವಿವಕ್ತ್ರಸರೋರುಹಾಂ ।
ಕಿಂಚಿತ್ಕ್ಷಾಮಾಂ ಮುಖೋದಗ್ರಸ್ತನಭಾರಾವನಾಮಿತಾಂ ॥ ೮೫ ॥

ಮಹೌಷಧಿಗಣಾಬದ್ಧಮಂತ್ರರಾಜನಿಷೇವಿತಾಂ ।
ಉದ್ವಹತ್ಕನಕೋನ್ನದ್ಧಜೀವರಕ್ಷಾಂ ಮನೋರಮಾಂ ॥ ೮೬ ॥

ಮಣಿದೀಪಗಣಜ್ಯೋತಿರ್ಮಹಾಲೋಕಪ್ರಕಾಶಿತೇ ।
ಪ್ರಕೀರ್ಣಬಹುಸಿದ್ಧಾರ್ಥಮನೋಜ್ಞಪರಿಚಾರಕೇ ॥ ೮೭ ॥

---

೮೩. ಆ ನಿಶಾದೇವಿಯು ಹಾಗೇ ಆಗಲೆಂದು ಹೇಳಿ ಬ್ರಹ್ಮನಿಗೆ ನಮಸ್ಕರಿಸಿ ಜಾಗ್ರತೆಯಾಗಿ ಹಿಮವಂತನ ಮನೆಗೆ ಹೋದಳು

೮೪–೮೮. ಆ ಹಿಮವಂತನ ದೊಡ್ಡದಾದ ಮನೆಯಲ್ಲಿ ರತ್ನದ ಗೋಡೆಯನ್ನು ಒರಗಿಕೊಂಡು ಕುಳಿತಿರುವ ಮೇನೆಯನ್ನು ಈ ವಿಭಾವರಿಯು ನೋಡಿದಳು. ಆಕೆಯು ಗರ್ಭಿಣಿಯಾಗಿದ್ದುದರಿಂದ ಮುಖವು ಬೆಳ್ಳಗಿದ್ದಿತು. ಸ್ವಲ್ಪ ಬಡವಾಗಿಯೂ ಇದ್ದಳು. ಮುಂಭಾಗದಲ್ಲಿ ಸ್ತನಗಳು ದಪ್ಪವಾಗಿದ್ದುದರಿಂದ ಬಗ್ಗಿದ್ದಳು. ರಕ್ಷಾರ್ಥವಾಗಿ ಮಹೌಷಧಿಗಳನ್ನು ಕಟ್ಟಿದ್ದರು. ಮಂತ್ರಗಳನ್ನು ಬರೆದ ಯಂತ್ರಗಳನ್ನು ಕಟ್ಟಿದ್ದರು. ಚಿನ್ನದಿಂದ ಮಾಡಿದ ಒಂದು ದೊಡ್ಡದಾದ ಜೀವರಕ್ಷೆಯ ತಾಯಿತನ್ನು ಕಟ್ಟಿದ್ದರು. ಮನೋಹರವಾಗಿದ್ದಳು. ಅಲ್ಲಿ ಪ್ರಕಾಶವಾದ ಮಣಿಗಳನ್ನೇ ದೀಪಗಳಿಗೆ ಬದಲಾಗಿ ಇಟ್ಟಿರಲಾಗಿ ಅವುಗಳಿಂದ ಆ ಜಾಗವು ಪ್ರಕಾಶವಾಗಿದ್ದಿತು. ಮಂಗಳಾರ್ಥವಾಗಿ ಅಲ್ಲಲ್ಲಿಯೇ ಬಿಳಿಯ ಸಾಸುವೆಗಳನ್ನು ಚೆಲ್ಲಿದ್ದರು. ಪರಿಚಾರಕರೆಲ್ಲರೂ ಬಹು ಚೆನ್ನಾಗಿದ್ದು ಸೇವಿಸುತ್ತಿದ್ದರು. ಚೆನ್ನಾಗಿರುವ ಚೀನ

ಶುದ್ಧ ಚೀನಾಂಶುಕಚ್ಛತ್ರಭೂಶಯ್ಯಾಸ್ತರಣೋಜ್ಜ್ವಲೇ ।
ಧೂಪಾಮೋದಮನೋರಮ್ಯೇ ಸಜ್ಜಸರ್ವೋಪಯೋಗಿಕೇ ॥ ೮೮ ॥

ತತಃ ಕ್ರಮೇಣ ದಿವಸೇ ಗತೇ ದೂರಂ ವಿಭಾವರೀ ।
ವಿಜೃಂಭಿತಸುಖೋದರ್ಕೇ ತತೋ ಮೇನಾಂ ಮಹಾಗೃಹೇ ॥ ೮೯ ॥

ಪ್ರಸುಪ್ತಪ್ರಾಯಪುರುಷೇ ನಿದ್ರಾ ಭೂತೋಪಚಾರಕೇ ।
ಸ್ಫುಟಾಲೋಕೇ ಶಶಭೃತಿ ಭ್ರಾಂತರಾತ್ರಿವಿಹಂಗಮೇ ॥ ೯೦ ॥

ರಜನೀಚರಸಂಚಾರಭೂತೈರಾವೃತಚತ್ವರೇ ।
ಗಾಢಕಂಠಗ್ರಹಾಲಗ್ನೇ ಶುಭಗೋಷ್ಠಿ ಜನೇ ತತಃ ॥ ೯೧ ॥

ಕಿಂಚಿದಾಕುಲತಾಂ ಪ್ರಾಪ್ತೇ ಮೇನಾನೇತ್ರಾಂಬುಜದ್ವಯೇ ।
ಅವಿವೇಶ ಮುಖೇ ರಾತ್ರಿಃ ಮುಖಮುದ್ಭೂತಸಂಗಮಾ ॥ ೯೨ ॥

---

ದೇಶದ ಮಲ್ಲಿನ ಬಟ್ಟೆಯ ಛತ್ರಿಯನ್ನು ಇಟ್ಟದ್ದರು. ಅಂತಹ ಬಟ್ಟೆಗಳನ್ನೇ ನೆಲಕ್ಕೂ ಹಾಸಿದ್ದರು. ಧೂಪ ಮುಂತಾದ ವಾಸನೆಯ ಪದಾರ್ಥಗಳಿಂದಲೂ, ಸಜ್ಜರಸ ದಿಂದಲೂ, ವಾಸನೆಯುಳ್ಳದ್ದಾಗಿದ್ದಿತು. ಇಂತಹ ಮನೆಯಲ್ಲಿ ಆ ಮೇನೆಯು ಇದ್ದಳು

೮೯-೯೨. ಆಕೆಯ ಮನೆಗೆ ಹೋಗಿ ನಿಶೆಯು ಕೆಲವು ದಿವಸಗಳು ಅಲ್ಲಿಯೇ ಇದ್ದುಕೊಂಡಿದ್ದಳು. ಒಂದು ಸಾರಿ ಮೇನೆಯ ಮುಂದಿನ ಸುಖವು ವಿಕಸಿತ ವಾಗಲು ಆ ದೊಡ್ಡ ಮನೆಯಲ್ಲಿ ಪುರುಷರೆಲ್ಲರೂ ಸಾಧಾರಣವಾಗಿ ಮಲಗಿರಲು, ಉಪಚಾರ ಮಾಡುವವರೆಲ್ಲರೂ ನಿದ್ದೆ ಮಾಡುತ್ತಿರಲು, ಚಂದ್ರನ ಚಂದ್ರಿಕೆಯು ಬೆಳಗುತ್ತಿರಲು, ರಾತ್ರಿಯ ಪಕ್ಷಿಗಳು ಸಂಚರಿಸುತ್ತಿರಲು, ರಾಕ್ಷಸರ ಸಂಚಾರದಿಂದ ದಾರಿಗಳು ಕೂಡಿಕೊಂಡಿರಲು, ಚೌಕಗಳಲ್ಲಿಯೂ ಆ ರಾಕ್ಷಸರೇ ಕೂಡಿಕೊಂಡಿರಲು, ಮಂಗಳಕರವಾದ ಗೋಷ್ಠಿಗಳಲ್ಲಿ ಜನಗಳಿರುತ್ತಿರಲು, ಮತ್ತು ದಂಪತಿಗಳು ಗಾಢವಾಗಿ ಕಂಠವನ್ನು ಹಿಡಿದು ಅಪ್ಪಿಕೊಂಡಿರಲು, ಆಗ ಈ ಮೇನೆಯ ಕಮಲದಂತಿರುವ ಕಣ್ಣುಗಳು ಸ್ವಲ್ಪ ನಿದ್ರೆಯಿಂದ ಪೀಡಿತವಾಗಲು, ಸುಖವಾಗಿ ಮತ್ತೊಬ್ಬರನ್ನು ಹೊಂದಬಲ್ಲ ನಿಶೆಯು ಆ ರಾತ್ರಿಯಲ್ಲಿ ಆ ಮೇನೆಯ ಮುಖದಲ್ಲಿ ಸುಖವಾಗಿ ಪ್ರವೇಶಿಸಿದಳು.

ಉನ್ಮಾದಾಯ ಜಗನ್ಮಾತುಃ ಕ್ರಮೇಣ ಜಠರಾಂತರೇ ।
ಆವಿವೇಶಾತುಲಂ ಜನ್ಮ ಮನ್ಯಮಾನಾ ಕದಾ ತು ವೈ ॥ ೯೩ ॥

ಅರಂಜಯದ್ಗೃಹಂ ದೇವ್ಯಾ ಗುಹಾರಣ್ಯೇ ವಿಭಾವರೀ ।
ತತೋ ಜಗತ್ಯನಿರ್ವಾಣಹೇತುರ್ಹಿಮಗಿರಿಪ್ರಿಯಾ ॥ ೯೪ ॥

ಬ್ರಾಹ್ಮೇ ಮುಹೂರ್ತೇ ಸುಭಗೇ ಪ್ರಾಸೂಯತ ಗುಹಾರಣಿಂ ।
ತಸ್ಯಾಂ ತು ಜಾಯಮಾನಾಯಾಂ ಜಂತವಃ ಸ್ಥಾಣುಜಂಗಮಾಃ ॥ ೯೫ ॥

ಅಭವನ್ಸುಖಿನಃ ಸರ್ವೇ ಸರ್ವಲೋಕನಿವಾಸಿನಃ ।
ನಾರಕಾಣಾಮಪಿ ತದಾ ಸುಖಂ ಸ್ವರ್ಗಸಮಂ ಮಹತ್ ॥ ೯೬ ॥

ಅಭವತ್ಕ್ರೂರಸತ್ವಾನಾಂ ಚೇತಃ ಶಾಂತಂ ಚ ದೇಹಿನಾಂ ।
ಜ್ಯೋತಿಷಾಮಪಿ ತೇಜಸ್ತು ಸುತರಾಂ ಚಾಭವತ್ತದಾ ॥ ೯೭ ॥

ವನಾಶ್ರಿತಾಶ್ಚೌಷಧಯಃ ಸ್ವಾದೂನಿ ಚ ಫಲಾನಿ ಚ ।
ಗಂಧವಂತಿ ಚ ಮಾಲ್ಯಾನಿ ವಿಮಲಂ ಚ ನಭೋಽಭವತ್ ॥ ೯೮ ॥

---

೯೩. ಆ ಜಗನ್ಮಾತೆಯಾದ ಸತೀ ದೇವಿಯನ್ನು ವ್ಯತ್ಯಸ್ತವಾಗಿ ಮಾಡಲು ಆ ಮೇನೆಯ ಹೊಟ್ಟೆಯನ್ನು ಪ್ರವೇಶಿಸಿ ಆ ಗರ್ಭದಲ್ಲಿ ಸೇರಿ ಯಾವಾಗ ಆಕೆಯ ಜನ್ಮವು ಹೊರ ಬೀಳುವುದೆಂದು ನಿರೀಕ್ಷಿಸುತ್ತಿದ್ದಳು ಆ ಗುಹಾರಣ್ಯ (ಹೊಟ್ಟೆಯಲ್ಲಿ) ದಲ್ಲದ್ದುಕೊಂಡು ಆ ಮೇನೆಯ ಮನೆಯನ್ನು ಬೆಳಗುತ್ತಿದ್ದಳು.

೯೪-೯೫. ಆಗ ಪ್ರಪಂಚದ ಉದ್ಧಾರಕ್ಕೆ ಕಾರಣಳಾದ ಮೇನೆಯು ಬ್ರಾಹ್ಮಿ ಮುಹೂರ್ತದಲ್ಲಿ ಗುಹನೆಂಬ ಅಗ್ನಿಯನ್ನು ಹೊರಸೂಸುವ ಅರಣಿಯಾದ ಪಾರ್ವತಿಯನ್ನು ಹೆತ್ತಳು ಆ ಪಾರ್ವತಿಯು ಹುಟ್ಟಲಾಗಿ ಚರಾಚರವಾದ ಪ್ರಾಣಿಗಳು ಎಲ್ಲಾ ಲೋಕದಲ್ಲಿಯೂ ಸುಖವಾಗಿದ್ದುವು

೯೬-೯೭. ಆಗ ನರಕದಲ್ಲಿರುವ ಪ್ರಾಣಿಗಳಿಗೂ ಸ್ವರ್ಗಸಮವಾದ ಸುಖವು ಬಂದಿತು. ಕ್ರೂರವಾದ ಪ್ರಾಣಿಗಳೂ ಶಾಂತವಾದುವು. ಜ್ಯೋತಿಸ್ಸುಗಳ ಕಾಂತಿಯೂ ಆಗ ಹೆಚ್ಚಾಯಿತು.

೯೮. ಆ ಕಾಡುಗಳಲ್ಲಿದ್ದ ಔಷಧಿಗಳು ರುಚಿಯಾಗಿಯೂ ಫಲವುಳ್ಳದ್ದಾಗಿಯೂ ಆದುವು. ಹೂಗಳೆಲ್ಲವೂ ಬಹು ವಾಸನೆಯುಳ್ಳದ್ದಾದುವು. ಆಕಾಶವು ನಿರ್ಮಲವಾಯಿತು.

ಮಾರುತಶ್ಚ ಸುಖಸ್ಪರ್ಶೋ ದಿಶಶ್ಚ ಸುಮನೋಹರಾಃ ।
ಋತೂದ್ಭೂತಫಲಾಯೋಗಪರಿಪಾಕಗುಣೋಜ್ಜ್ವಲಾಃ ॥ ೯೯ ॥

ಅಭವತ್ಪೃಥಿವೀ ದೇವೀ ಶಾಲಿಮಾಲಾಕುಲಾऽಪಿ ಚ ।
ತಪಾಂಸಿ ದೀರ್ಘಚೀರ್ಣಾನಿ ಮುನೀನಾಂ ಭಾವಿತಾತ್ಮನಾಂ ॥ ೧೦೦ ॥

ತಸ್ಮಿನ್ಗತಾನಿ ಸಾಫಲ್ಯಂ ಕಾಲೇ ನಿರ್ಮಲಚೇತಸಾಂ ।
ವಿಸ್ಮೃತಾನಿ ಚ ಶಾಸ್ತ್ರಾಣಿ ಪ್ರಾದುರ್ಭಾವಂ ಪ್ರಪೇದಿರೇ ॥ ೧೦೧ ॥

ಪ್ರಭಾವಸ್ತೀರ್ಥಮುಖ್ಯಾನಾಂ ತದಾ ಪುಣ್ಯತಮಸ್ತ್ವಭೂತ್ ।
ಅಂತರಿಕ್ಷೇऽಮರಾಶ್ಚಾऽಸನ್ವಿಮಾನೇಷು ಸಹಸ್ರಶಃ ॥ ೧೦೨ ॥

ಸಮಹೇಂದ್ರಹರಿಬ್ರಹ್ಮವಾಯುವಹ್ನಿಪುರೋಗಮಾಃ ।
ಪುಷ್ಪವೃಷ್ಟಿಂ ಪ್ರಮುಮುಚುಸ್ತಸ್ಮಿಂಸ್ತುಹಿನಭೂಧರೇ ॥ ೧೦೩ ॥

ಜಗುರ್ಗಂಧರ್ವಮುಖ್ಯಾಶ್ಚ ನನೃತುಶ್ಚಾಪ್ಸರೋಗಣಾಃ ।
ಮೇರುಪ್ರಭೃತಯಶ್ಚಾಪಿ ಮೂರ್ತಿಮಂತೋ ಮಹಾಚಲಾಃ ॥ ೧೦೪ ॥

---

೯೯-೧೦೧. ಗಾಳಿಯು ಸುಖವಾಗಿ ಬೀಸಿತು. ದಿಕ್ಕುಗಳು ಮನೋಹರವಾದುವು. ಆಯಾಯ ಋತುಗಳ ಫಲಗಳು ಆಯಾಯ ಋತುಗಳಲ್ಲಿ ಹುಟ್ಟಿ ರುಚಿಯು ಹಣ್ಣುಗಳಲ್ಲಿ ಹೆಚ್ಚಾಯಿತು. ಭೂಮಿಯು ಭತ್ತ ಮುಂತಾದ ಪೈರುಗಳಿಂದ ಹೆಚ್ಚಾಗಿ ರಂಜಿಸಿತು. ಋಷಿಗಳ ತಪಸ್ಸು ಬಹಳ ದಿನಗಳಿಂದ ಮಾಡಿದಂತೆ ಫಲವನ್ನು ಕೊಡುತ್ತಿದ್ದಿತು. ಶುದ್ಧ ಮನಸ್ಸುಳ್ಳವರಿಗೆ ಮರೆತ ಶಾಸ್ತ್ರಗಳೂ ಆಗ ಜ್ಞಾಪಕಕ್ಕೆ ಬಂದುವು.

೧೦೨-೧೦೩. ಆಗ ಆ ತೀರ್ಥಗಳ ಸ್ವಭಾವವು ಬಹು ಪುಣ್ಯವುಳ್ಳದ್ದಾಯಿತು. ಅಂತರಿಕ್ಷದಲ್ಲಿ ಇಂದ್ರ, ಹರಿ, ಬ್ರಹ್ಮ, ವಾಯು, ವಹ್ನಿ ಮುಂತಾದ ದೇವತೆಗಳು ವಿಮಾನದಲ್ಲಿ ಕುಳಿತು ಆ ಹಿಮವತ್ಪರ್ವತದಲ್ಲಿ ಪುಷ್ಪವೃಷ್ಟಿಯನ್ನು ಸೂಸಿದರು.

೧೦೪-೧೦೫. ಗಂಧರ್ವ ಶ್ರೇಷ್ಠರು ಹಾಡಿದರು. ಅಪ್ಸರ ಸ್ತ್ರೀಯರು ಕುಣಿದರು. ಮೇರುವೇ ಮುಂತಾದ ಪರ್ವತಗಳು ಆಕಾರವನ್ನು ಧರಿಸಿ ಕೈ ಮುಗಿದು

ತಸ್ಮಿನ್ಮಹೋತ್ಸವೇ ಪ್ರಾಪ್ತೇ ದಿವ್ಯಾಃ ಪ್ರಸ್ಯತಸಾಣಯಃ ।
ಸಾಗರಾಃ ಸರಿಶ್ಚೈವ ಸಮಾಜಗ್ಮುಶ್ಚ ಸರ್ವಶಃ ॥ ೧೦೫ ॥

ಹಿಮಶೈಲೋಽಭವಲ್ಲೋಕೇ ತದಾ ಸರ್ವೈಶ್ಚರಾಚರೈಃ ।
ಸಂಸೇವ್ಯಶ್ಚಾಧಿಗಮ್ಯಶ್ಚ ಸಾಶ್ರಯಶ್ಚಾಚಲೋತ್ತಮಃ ॥ ೧೦೬ ॥

ಅನುಭೂತೋತ್ಸವಾ ದೇವಾ ಜಗ್ಮುಃ ಸ್ವಾನಾಲಯಾಂಸ್ತದಾ ।
ದೇವನಾಗೇಂದ್ರಗಂಧರ್ವಶೈಲಲೀಲಾವತೀಗಣೈಃ ॥ ೧೦೭ ॥

ಹಿಮಶೈಲಸುತಾ ದೇವೀ ತ್ವಹಂಪೂರ್ವಿಕಯಾ ತತಃ ।
ಕ್ರಮೇಣ ಬುದ್ಧಿಮಾನೀತಾ ಲಕ್ಷ್ಮೀಶ್ಚಾನಲಸೈರ್ಬುಧೈಃ ॥ ೧೦೮ ॥

ಕ್ರಮೇಣ ರೂಪಸೌಭಾಗ್ಯಪ್ರಬೋಧೈರ್ಭುವನತ್ರಯೇ ।
ಸಂಪೂರ್ಣಲಕ್ಷಣಾ ಜಾತಾ ಹಿಮಾಲಯಸುತಾ ತಥಾ ॥ ೧೦೯ ॥

ಏತಸ್ಮಿನ್ನಂತರೇ ಶಕ್ರೋ ನಾರದಂ ದೇವಸಮ್ಮತಂ ।
ದೇವರ್ಷಿಮಥ ಸಸ್ಮಾರ ಕಾರ್ಯಸಾಧನ ತತ್ಪರಃ ॥ ೧೧೦ ॥

---

ಕೊಂಡು ಅಲ್ಲಿಗೆ ಬಂದುವು. ಸಮುದ್ರಗಳೂ, ನದಿಗಳೂ, ಎಲ್ಲಾ ಕಡೆಯಿಂದಲೂ ಅಲ್ಲಿಗೆ ಬಂದುವು.

೧೦೬-೧೦೭. ಆಗ ಹಿಮವತ್ಪರ್ವತವು ಲೋಕದಲ್ಲಿರುವ ಚರಾಚರಗಳಿಗೆ ಸೇವಿಸುವುದಕ್ಕೂ, ಹೊಂದಿರುವುದಕ್ಕೂ, ಆಶ್ರಯಿಸಿರುವುದಕ್ಕೂ ಉತ್ತಮವಾದುದಾಗಿ ಆಯಿತು. ಆಗ ದೇವತೆಗಳು ಆ ಜನ್ಮೋತ್ಸವವನ್ನು ಅನುಭವಿಸಿ ನಾಗೇಂದ್ರರು, ಗಂಧರ್ವರು, ಶೈಲಗಳು ಅಪ್ಸರರುಗಳೊಡನೆ ಅವರವರ ಸ್ಥಾನಗಳಿಗೆ ಹೋದರು.

೧೦೮-೧೦೯. ಅನಂತರ ಆ ಪಾರ್ವತಿಗೆ ಪಂಡಿತರು ನಾನು ಮುಂದು ತಾನು ಮುಂದೆಂದು ಬೋಧಿಸುತ್ತ ಬರಲು ಬುದ್ಧಿವಂತಳೂ, ಐಶ್ವರ್ಯವಂತಳೂ, ಆದಳು. ಬರಬರುತ್ತ, ರೂಪ, ಸೌಭಾಗ್ಯ, ಜ್ಞಾನಗಳಲ್ಲಿ ಮೂರು ಲೋಕದಲ್ಲಿಯೂ ಆ ಪಾರ್ವತಿಯು ತುಂಬಿ ಲಕ್ಷಣವಂತಳಾದಳು.

೧೧೦. ಈ ಮಧ್ಯೆ ಕಾರ್ಯಸಾಧನೆಯಲ್ಲಿ ಆಸಕ್ತನಾದ ಇಂದ್ರನು ದೇವತೆಗಳಿಗೆ ಇಷ್ಟನಾದ ದೇವರ್ಷಿಯಾದ ನಾರದನನ್ನು ಸ್ಮರಿಸಿದರು.

ಸ ತು ಶಕ್ರಸ್ಯ ವಿಜ್ಞಾಯ ಕಾಂಕ್ಷಿತಂ ಭಗವಾಂಸ್ತದಾ ।
ಆಜಗಾಮ ಮುದಾ ಯುಕ್ತೋ ಮಹೇಂದ್ರಸ್ಯ ನಿವೇಶನಂ ॥ ೧೧೧ ॥

ತಂ ತು ದೃಷ್ಟ್ವಾ ಸಹಸ್ರಾಕ್ಷಃ ಸಮುತ್ಥಾಯ ಮಹಾಸನಾತ್ ।
ಯಥಾರ್ಹೇಣ ತು ಪಾದ್ಯೇನ ಪೂಜಯಾಮಾಸ ವಾಸವಃ ॥ ೧೧೨ ॥

ಶಕ್ರಪ್ರಣಿಹಿತಾಂ ಪೂಜಾಂ ಪ್ರತಿಗೃಹ್ಯ ಯಥಾವಿಧಿ ।
ನಾರದಃ ಕುಶಲಂ ದೇವಮಪೃಚ್ಛತ್ಪಾಕಶಾಸನಂ ॥
ಪೃಷ್ಟೇ ಚ ಕುಶಲೇ ಶಕ್ರಃ ಪ್ರೋವಾಚ ವಚನಂ ಪ್ರಭುಃ ॥ ೧೧೩ ॥

॥ ಇಂದ್ರ ಉವಾಚ ॥

ಕುಶಲಸ್ಯಾಂಕುರಸ್ತಾವತ್ಸಂವೃತ್ತೋ ಭುವನತ್ರಯೇ ।
ತತ್ಫಲೋದ್ಭವಸಂಪತ್ತೌ ತ್ವಂ ಮಯಾ ವಿದಿತೋ ಮುನೇ ॥ ೧೧೪ ॥

ವೇತ್ಸ್ಯೇವ ತತ್ಸಮಸ್ತಂ ತ್ವಂ ತಥಾಽಪಿ ಪರಿಚೋದಿತಃ ।
ನಿರ್ವೃತಿಂ ಪರಮಾಂ ಯಾತಿ ನಿವೇದ್ಯಾರ್ಥಂ ಸುಹೃಜ್ಜನೇ ॥ ೧೧೫ ॥

---

೧೧೧. ಭಗವಂತನಾದ ನಾರದನು ಇಂದ್ರನ ಅಪೇಕ್ಷೆಯನ್ನು ತಿಳಿದು ಸಂತೋಷದಿಂದ ಇಂದ್ರನ ಮನೆಗೆ ಬಂದನು.

೧೧೨. ಇಂದ್ರನು ಆ ನಾರದನನ್ನು ನೋಡಿ ಮೇಲಕ್ಕೆದ್ದು ಯೋಗ್ಯವಾದ ಅರ್ಘ್ಯ ಪಾದ್ಯಗಳಿಂದ ಪೂಜಿಸಿದನು.

೧೧೩. ನಾರದನು ಇಂದ್ರನು ವಿಧಿವತ್ತಾಗಿ ಮಾಡಿದ ಪೂಜೆಯನ್ನು ಸ್ವೀಕರಿಸಿ ಪಾಕಶಾಸನನಾದ ಆತನನ್ನು ಕುಶಲವನ್ನು ಕೇಳಿದನು. ನಾರದನು ಕುಶಲವನ್ನು ಕೇಳಲು ಆ ಇಂದ್ರನು ಇಂತೆಂದನು.

೧೧೪. ಇಂದ್ರನು ಹೇಳಿದನು—ಕುಶಲವು ಮೂರು ಲೋಕದಲ್ಲಿಯೂ ಈಗ ಮೊಳಕೆಯಾಗುತ್ತಲಿರುವುದು. ಅದು ಹೆಚ್ಚಿ ಫಲ ಕೊಡಬೇಕಾದರೆ ನೀನು ಹಾಗೆ ಮಾಡಲು ಸರಿಯಾದವನು ಎಂಬದಾಗಿ ನನಗೆ ಗೊತ್ತಾಯಿತು.

೧೧೫. ಎಲ್ಲ ವಿಷಯುಗಳೂ ನಿನಗೆ ತಿಳಿದೇ ಇವೆ. ಆದರೂ ಕೂಡ ನೀನು ಕೇಳಿದುದರಿಂದ ಹೇಳುತ್ತೇನೆ. ಮನುಷ್ಯನು ತನಗೆ ಆಪ್ತರಾದವರಲ್ಲಿ ಹೇಳಬೇಕಾದ ವಿಷಯವನ್ನು ಹೇಳಿಬಿಟ್ಟರೆ ಹೆಚ್ಚಾದ ಸುಖವನ್ನು ಹೊಂದುತ್ತಾನೆ.

ತದ್ಯಥಾ ಶೈಲಜಾ ದೇವೀ ಯೋಗಂ ಯಾಯಾತ್ಪಿನಾಕಿನಾ ।
ಶೀಘ್ರಂ ತಥೋದ್ಯಮಃ ಸರ್ವೈರಸ್ಮತ್ಪಕ್ಷ್ಯೈರ್ವಿಧೀಯತಾಂ ॥ ೧೧೬ ॥

॥ ಪುಲಸ್ತ್ಯ ಉವಾಚ ॥

ಅವಗಮ್ಯಾರ್ಥಮಖಿಲಂ ತತ ಆಮಂತ್ರ್ಯ ನಾರದಃ ।
ಶೀಘ್ರಂ ಜಗಾಮ ಭಗವಾನ್ಹಿಮಶೈಲನಿಕೇತನಂ ॥ ೧೧೭ ॥

ತತ್ರ ದ್ವಾರೇ ಸ ವಿಪ್ರೇಂದ್ರಶ್ಚಿತ್ರವೇತ್ರಲತಾಕುಲೇ ।
ವಂದಿತೋ ಹಿಮಶೈಲೇನ ನಿರ್ಗತೇನ ಪುರಾ ಮುನಿಃ ॥ ೧೧೮ ॥

ಸಹ ಪ್ರವಿಶ್ಯ ಭವನಂ ಭುವೋ ಭೂಷಣತಾಂ ಗತಂ ।
ನಿವೇದಿತೇ ಸ್ವಯಂ ಹೈಮೇ ಹಿಮಶೈಲೇನ ವಿಸ್ತೃತೇ ॥ ೧೧೯ ॥

ಮಹಾಸನೇ ಮುನಿವರೋ ನಿಷಸಾದಾತುಲದ್ಯುತಿಃ ।
ಯಥಾರ್ಹಮರ್ಘ್ಯಂ ಪಾದ್ಯಂ ಚ ಶೈಲಸ್ತಸ್ಮೈ ನ್ಯವೇದಯತ್ ॥ ೧೨೦ ॥

---

೧೧೬. ಆ ಪರ್ವತರಾಜನ ಮಗಳಾದ ಪಾರ್ವತಿಯು ಈಶ್ವರನೊಡನೆ ಸಂಬಂಧವನ್ನು ಹೊಂದುವಂತೆ ನಮ್ಮ ಕಡೆಯವರೆಲ್ಲರೂ ಜಾಗ್ರತೆಯಾಗಿ ಪ್ರಯತ್ನಪಡಬೇಕು. ಹಾಗೇ ಮಾಡಿರಿ.

೧೧೭. ಪುಲಸ್ತ್ಯನು ಹೇಳಿದನು—ನಾರದನು ವಿಷಯವೆಲ್ಲವನ್ನೂ ತಿಳಿದುಕೊಂಡು ಇಂದ್ರನ ಅಪ್ಪಣೆಯನ್ನು ಪಡೆದು ಹಿಮವಂತನ ಮನೆಗೆ ಜಾಗ್ರತೆಯಾಗಿ ಬಂದನು.

೧೧೮. ಈ ನಾರದನು ಬಂದುದನ್ನು ಆ ಹಿಮವಂತನು ನೋಡಿ ಮೊದಲೇ ಎದ್ದು ಬಂದು ನಾನಾ ಬಗೆಯಾದ ಬೆತ್ತದ ಬಳ್ಳಿಯಿಂದ ಕೂಡಿರುವ ಬಾಗಿಲಿನಲ್ಲಿಯೇ ನಮಸ್ಕರಿಸಿದನು.

೧೧೯–೧೨೦. ಭೂಮಿಗೆ ಅಲಂಕಾರ ಪ್ರಾಯವಾಗಿರುವ ಆ ಹಿಮವಂತನ ಮನೆಗೆ ಜೊತೆಯಲ್ಲಿಯೇ ಹೋಗಿ ತಾನಾಗಿಯೇ ಹಿಮವಂತನು ತೋರಿಸಿದ ಚಿನ್ನದ ದೊಡ್ಡದಾದ ಆಸನದಲ್ಲಿ ಆ ನಾರದನು ಕುಳಿತುಕೊಂಡನು. ಹಿಮವಂತನು ಕುಳಿತುಕೊಂಡ ನಾರದನಿಗೆ ಅರ್ಘ್ಯ ಪಾದ್ಯಗಳನ್ನು ಕೊಟ್ಟನು.

ಸ ಮುನಿಃ ಪ್ರತಿಜಗ್ರಾಹ ತಮರ್ಘ್ಯಂ ವಿಧಿವತ್ತದಾ ।
ಗೃಹೀತಂ ತು ಮುನಿಶ್ರೇಷ್ಠಮಪೃಚ್ಛಚ್ಛ್ಲಕ್ಷ್ಣಯಾ ಗಿರಾ ॥ ೧೨೧ ॥

ಕುಶಲಂ ತಪಸಃ ಶೈಲಃ ಶನೈಃ ಪುಲ್ಲಾನನಾಂಬುಜಃ ।
ಮುನಿರಪ್ಯದ್ರಿರಾಜಾನಮಪೃಚ್ಛತ್ಕುಶಲಂ ತದಾ ॥ ೧೨೨ ॥

॥ ನಾರದ ಉವಾಚ ॥

ಅಹೋ ಧರ್ಮೋಽಚಿತಸ್ಯಾಸ್ಯ ಸಂನಿವೇಶೋ ಮಹಾಗಿರೇಃ
ಪೃಥುತ್ವಂ ಮನಸಾ ತುಲ್ಯಂ ಕಂದರಾಣಾಂ ತವಾನಘ ॥ ೧೨೩ ॥

ಗುರುತ್ವಂ ತೇ ಗುಣೌಘಾನಾಂ ಸ್ಥಾವರಾದತಿರಿಚ್ಯತೇ ।
ಪ್ರಸನ್ನತಾ ಚ ತೋಯಸ್ಯ ಮುನಿಭ್ಯಶ್ಚಾಧಿಕಾ ತವ ॥ ೧೨೪ ॥

ನ ಲಕ್ಷಯಾಮಃ ಶೈಲೇಂದ್ರ ಕುತ್ರಾವಿನಯತಾ ಸ್ಥಿತಾ ।
ನಾನಾತಪೋಽಭಿರ್ಮುನಿಭಿರ್ಜ್ವಲನಾರ್ಕಸಮಪ್ರಭೈಃ ॥ ೧೨೫ ॥

೧೨೧. ಆ ನಾರದ ಮುನಿಯು ಆ ಅರ್ಘ್ಯ ಪಾದ್ಯಗಳನ್ನು ವಿಧಿವತ್ತಾಗಿ ತೆಗೆದುಕೊಂಡನು. ಮುನಿಯು ತೆಗೆದುಕೊಂಡ ಮೇಲೆ ಆತನನ್ನು ಕುರಿತು ಹಿಮವಂತನು ಮೃದುವಾದ ಮಾತಿನಿಂದ ಇಂತೆಂದು ಕೇಳಿದನು.

೧೨೨. ಸಂತೋಷದಿಂದ ಕೂಡಿದ ಮುಖವುಳ್ಳವನಾಗಿ ಹಿಮವಂತನು ಋಷಿಯನ್ನು ತಪಸ್ಸಿನ ಕುಶಲವನ್ನೂ ಕೇಳಿದನು. ಆ ನಾರದನೂ ಕೂಡ ರಾಜನನ್ನು ಕುಶಲವನ್ನು ಕೇಳಿದನು.

೧೨೩. ನಾರದನು ಹೇಳಿದನು– ಧರ್ಮವನ್ನು ಬಿಟ್ಟು ನಡೆಯದ ಈ ಮಹಾ ಪರ್ವತನ ಸ್ಥಿತಿಯು ಆಶ್ಚರ್ಯಕರವಾದುದು. ಈ ಪರ್ವತವೂ ಈ ಗುಹೆಗಳೂ ವಿಸ್ತಾರವಾಗಿರುವಂತೆಯೇ ಈತನ ಮನಸ್ಸೂ ವಿಸ್ತಾರವಾಗಿದೆ.

೧೨೪. ಎಲೈ ಗಿರಿಯೆ ! ನಿನ್ನಲ್ಲಿರುವ ಗೌರವವು ಈ ಜಡ ಶರೀರವಾದ ಪರ್ವತಕ್ಕಿಂತಲೂ ಹೆಚ್ಚಾಗಿದೆ. ನಿನ್ನ ನಿರ್ಮಲತೆಯು ನಿನ್ನಲ್ಲಿರುವ ಋಷಿಗಳು ನದಿಗಳು ಇವರಿಗಿಂತಲೂ ಹೆಚ್ಚು.

೧೨೫-೧೨೭. ಎಲೈ ಪರ್ವತರಾಜನೇ! ನಿನ್ನಲ್ಲಿ ಅವಿನಯವು ಎಲ್ಲಿದೆ ಎಂಬುದೇ ಗೊತ್ತಿಲ್ಲವಲ್ಲ ! ನಾನಾ ಬಗೆಯಾಗಿ ತಪಸ್ಸು ಮಾಡುವ, ಜ್ವಲಿಸುವ ಸೂರ್ಯ. ಅಗ್ನಿ

ಪಾವನೈಃ ಪಾವಿತೋ ನಿತ್ಯಂ ತ್ವಂ ಕಂದರಸಮಾಶ್ರಯೈಃ ।
ಅವಮತ್ಯ ವಿಮಾನಾನಿ ಸ್ವರ್ಗವಾಸವಿರಾಗಿಣಃ ॥ ೧೨೬ ॥

ಪಿತುರ್ಗೃಹಮಿವಾಽಸಂತ ದೇವಗಂಧರ್ವಕಿಂನರಾಃ ।
ಅಹೋ ಧನ್ಯೋಽಸಿ ಶೈಲೇಂದ್ರ ಯಸ್ಯ ತೇ ಕಂದರಂ ಹರಃ ॥
ಅಧ್ಯಾಸ್ತೇ ಲೋಕನಾಥೋ ಹಿ ಶಮಧ್ಯಾನಪರಾಯಣಃ ॥ ೧೨೭ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತವತಿ ದೇವರ್ಷೌ ನಾರದೇ ಸಾದರಂ ಗಿರಾ ।
ಹಿಮಶೈಲಸ್ಯ ಮಹಿಷೀ ಮೇನಾ ಮುನಿದಿದೃಕ್ಷಯಾ ॥ ೧೨೮ ॥

ಅನುಯಾತಾ ದುಹಿತ್ರಾ ತು ಸ್ವಲ್ಪಾಲಿಪರಿಚಾರಿಕಾ ।
ಲಜ್ಜಾಪ್ರಣಯನಮ್ರಾಂಗೀ ಪ್ರವಿವೇಶ ನಿಕೇತನಂ ॥ ೧೨೯ ॥

ಯತ್ರ ಸ್ಥಿತೋ ಮುನಿವರಃ ಶೈಲೇನ ಸಹಿತೋ ವಶೀ ।
ತಂ ದೃಷ್ಟ್ವಾ ತೇಜಸೋ ರಾಶಿಂ ಮುನಿಂ ಶೈಲಪ್ರಿಯಾ ತದಾ ॥ ೧೩೦ ॥

ವವಂದೇಽ ಗೂಢವದನಾ ಪಾಣಿಪದ್ಮಕೃತಾಂಜಲಿಃ ।
ತಾಂ ವಿಲೋಕ್ಯ ಮಹಾಭಾಗಾಂ ದೇವರ್ಷಿರಮಿತದ್ಯುತಿಃ ॥ ೧೩೧ ॥

---

ಗಳಂತಿರುವ, ಪಾವನರಾದ, ನಿನ್ನ ಗುಹೆಯನ್ನು ಆಶ್ರಯಿಸಿರುವ, ಋಷಿಗಳಿಂದ ಯಾವಾಗಲೂ ನೀನು ಶುದ್ಧನಾಗಿರುತ್ತಲಿದ್ದೀಯೆ. ದೇವತೆಗಳು ಗಂಧರ್ವರು ಕಿನ್ನರರು ಸ್ವರ್ಗವಾಸದಲ್ಲಿ ವೈರಾಗ್ಯವನ್ನು ಹೊಂದಿ ದೊಡ್ಡ ದೊಡ್ಡ ಮಹಡಿ ಮನೆಗಳನ್ನು ತಿರಸ್ಕರಿಸಿ ತಂದೆಯ ಮನೆಯಂತೆ ಇರುವ ನಿನ್ನ ಪರ್ವತದಲ್ಲಿ ಒಂದು ಸೇರಿಕೊಂಡಿದ್ದಾರೆ. ಅಯ್ಯಾ ? ನೀನು ಬಹು ಧನ್ಯನು. ಏಕೆಂದರೆ ಲೋಕನಾಥನಾದ ಶಿವನು ಶಮವನ್ನು ಹೊಂದಿ ಧ್ಯಾನಾಸಕ್ತನಾಗಿ ನಿನ್ನ ಗುಹೆಯಲ್ಲಿರುವನಲ್ಲ !

೧೨೮-೧೩೭. ಪುಲಸ್ತ್ಯನು ಹೇಳಿದನು- ದೇವರ್ಷಿಯಾದ ನಾರದನು ಇಂತೆಂದು ಹೇಳಿದನು. ಹಿಮವಂತನ ಹೆಂಡತಿಯಾದ ಮೇನೆಯು ಮಗಳನ್ನು ಕರೆದುಕೊಂಡು ಲಜ್ಜೆಯಿಂದ ತಲೆ ತಗ್ಗಿಸಿಕೊಂಡು ಆ ಮುನಿಯೂ, ಹಿಮವಂತನೂ ಇದ್ದ ಮನೆಗೆ ಬಂದಳು. ಆ ತೇಜೋರಾಶಿಯಾದ ಋಷಿಯನ್ನು ನೋಡಿ ಬುರುಕಿಯನ್ನು ತೆಗೆದು ಮೇನೆಯು ಕೈಮುಗಿದುಕೊಂಡು ವಂದಿಸಿದಳು. ಆ ಮಹಾಭಾಗೆಯನ್ನು

ಆಶೀರ್ಭಿರಮಿತೋದ್ಗಾರರೂಪಾಭಿಸ್ತಾಂ ವ್ಯವರ್ಧಯತ್ ।
ತತೋ ವಿಸ್ಮಿತಚಿತ್ತಾ ತು ಹಿಮವದ್ಗಿರಿಪುತ್ರಿಕಾ ॥ ೧೩೨ ॥

ಉದೈಕ್ಷನ್ನಾರದಂ ದೇವೀ ಮುನಿಮದ್ಭುತರೂಪಿಣಂ ।
ಏಹಿ ವತ್ಸೇತಿ ಸಾಽಪ್ಯುಕ್ತಾ ಋಷಿಣಾ ಸ್ನಿಗ್ಧಯಾ ಗಿರಾ ॥ ೧೩೩ ॥

ಕಂಠೇ ಗೃಹೀತ್ವಾ ಪಿತರಮಂಕೇ ಸಾ ತು ಸಮಾವಿಶತ್ ।
ಉವಾಚ ಮಾತಾ ತಾಂ ದೇವೀಮಭಿವಂದಯ ಪುತ್ರಿಕೇ ॥ ೧೩೪ ॥

ಭಗವಂತಂ ತಪೋಧನ್ಯಂ ಪತಿಂ ಪ್ರಾಪ್ಸ್ಯಸಿ ಸಮ್ಮತಂ ।
ಇತ್ಯುಕ್ತ್ವಾ ತು ತತೋ ಮಾತ್ರಾ ವಸ್ತ್ರೇಣ ಪಿಹಿತಾನನಾ ॥ ೧೩೫ ॥

ಕಿಂಚಿತ್ಕಂಪಿತಮೂರ್ಧಾ ತು ವಾಕ್ಯಂ ನೋವಾಚ ಕಿಂಚನ ।
ತತಃ ಪುನರುವಾಚೇದಂ ವಾಕ್ಯಂ ಮಾತಾ ಸುತಾಂ ತದಾ ॥ ೧೩೬ ॥

ವತ್ಸೇ ವಂದಯ ದೇವರ್ಷಿಂ ತತೋ ದಾಸ್ಯಾಮಿ ತೇ ಶುಭಂ ।
ರತ್ನಕ್ರೀಡನಕಂ ರಮ್ಯಂ ಸ್ಥಾಪಿತಂ ಯಚ್ಚಿರಂ ಮಯಾ ॥ ೧೩೭ ॥

---

ತೇಜೋವಂತನಾದ ಋಷಿಯು ನೋಡಿ ಅಮೃತವನ್ನು ಸುರಿಸುವ ಆಶೀರ್ವಾದಗಳಿಂದ ಸಂತೋಷ ಪಡಿಸಿದನು. ಆಗ ಆಶ್ಚರ್ಯಗೊಂಡು ಹಿಮವಂತನ ಮಗಳಾದ ಪಾರ್ವತಿಯು ಅದ್ಭುತ ರೂಪವುಳ್ಳ ನಾರದನನ್ನು ನೋಡಿದಳು. ಆಗ ನಾರದನು ಹಿಮವಂತನ ಮಗಳನ್ನು ಎಲೈ ಮಗಳೇ! ಬಾರಮ್ಮ! ಎನ್ನಲು ಆಕೆಯು ತಂದೆಯ ಬಳಿಗೆ ಬಂದು ಆತನ ಕತ್ತನ್ನು ಹಿಡಿದುಕೊಂಡು ತೊಡೆಯ ಮೇಲೆ ಕುಳಿತಳು. ಆಗ ಮೇನೆಯು ಪಾರ್ವತಿಯನ್ನು ಕುರಿತು ಅಮ್ಮ ಮಗಳೆ! ತಪೋವಂತನಾದ ಈತನಿಗೆ ನಮಸ್ಕರಿಸು. ಒಳ್ಳೆಯ ಗಂಡನನ್ನು ಹೊಂದುತ್ತೀಯೆ. ಎಂದಳು. ತಾಯಿಯು ಹೀಗೆನ್ನಲು ಬಟ್ಟೆಯಿಂದ ಮುಖವನ್ನು ಮುಚ್ಚಿಕೊಂಡು ತಲೆಯನ್ನು ಸ್ವಲ್ಪ ಅಲ್ಲಾಡಿಸಿದಳೇ ಹೊರತು ಮಾತನಾಡಲೇ ಇಲ್ಲ. ಮತ್ತೆ ತಾಯಿಯು ಅಮ್ಮ ದೇವರ್ಷಿಗೆ ನಮಸ್ಕಾರ ಮಾಡು. ಆಮೇಲೆ ನಾನು ಬಹು ಕಾಲದಿಂದಲೂ ಇಟ್ಟಿರುವ ರತ್ನದ ಒಳ್ಳೆಯದಾದ ಬೊಂಬೆಯನ್ನು ಕೊಡುತ್ತೇನೆ. ಎಂದಳು.

ಇತ್ಯುಕ್ತ್ವಾ ತು ತತೋ ವೇಗಾದುದ್ಧೃತ್ಯ ಚರಣೌ ತದಾ ।
ವವಂದೇ ಮೂರ್ಧ್ನಿ ಸಂಧಾಯ ಕರಪಂಕಜಕುಡ್ಮಲಂ ॥ ೧೩೮ ॥

ಕೃತೇ ತು ವಂದನೇ ತಸ್ಯಾ ಮಾತಾ ಸಖಿಮುಖೇನ ತು ।
ಚೋದಯಾಮಾಸ ಶನಕೈಸ್ತಸ್ಯಾಃ ಸೌಭಾಗ್ಯದರ್ಶಿತಾಂ ॥ ೧೩೯ ॥

ಶರೀರಲಕ್ಷಣಾನಾಂ ಚ ಪರಿಜ್ಞಾನಾಯ ಕೌತುಕಾತ್ ।
ಸ್ತ್ರೀಸ್ವಭಾವಾತ್ಸ್ವದುಹಿತುಶ್ಚಿಂತಾಂ ಹೃದಿ ಸಮುದ್ವಹನ್ ॥ ೧೪೦ ॥

ಜ್ಞಾತ್ವಾ ತದಿಂಗಿತಂ ಶೈಲೋ ಮಹಿಷ್ಯಾ ಹೃದಯೇನ ತು ।
ಅನುದೀರ್ಣಾಕೃತಿರ್ಮೇನೇ ರಮ್ಯಮೇತದುಪಸ್ಥಿತಂ ॥ ೧೪೧ ॥

ಚೋದಿತಃ ಶೈಲಮಹಿಷೀ ಸಖ್ಯಾ ಮುನಿವರಸ್ತತಃ ।
ಸ್ಮಿತಾನನೋ ಮಹಾಭಾಗೋ ವಾಕ್ಯಂ ಪ್ರೋವಾಚ ನಾರದಃ ॥ ೧೪೨ ॥

॥ ನಾರದ ಉವಾಚ ॥

ನ ಜಾತೋಽಸ್ಯಾಃ ಪತಿರ್ಭದ್ರೇ ಲಕ್ಷಣೈಶ್ಚ ವಿವರ್ಜಿತಃ ।
ಉತ್ತಾನಹಸ್ತಾ ಸತತಂ ಚರಣೈರ್ವ್ಯಭಿಚಾರಿಭಿಃ ॥ ೧೪೩ ॥

---

೧೩೮. ತಾಯಿಯು ಹೀಗೆನ್ನಲು ಒಡನೆಯೇ ಎದ್ದು ಶೀಘ್ರವಾಗಿ ಹೋಗಿ ಕೈಗಳನ್ನು ತಲೆಯ ಮೇಲೆ ಕಟ್ಟಿಕೊಂಡು ಆತನ ಕಾಲುಗಳಿಗೆ ನಮಸ್ಕರಿಸಿದಳು.

೧೩೯-೧೪೧. ಆಕೆಯು ನಮಸ್ಕಾರಮಾಡಲು ತಾಯಿಯು ಆ ಹುಡುಗಿಯ ಸೌಭಾಗ್ಯ ಲಕ್ಷಣಗಳನ್ನು ನೋಡಿ ಅವುಗಳಿಂದ ಸೌಭಾಗ್ಯದ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಆಸೆಯಿಂದ ಸಖಿಯನ್ನು ಕುರಿತು ಋಷಿಗೆ ಹೇಳುವಂತೆ ಹೇಳಿದಳು ಈ ಪರ್ವತ ರಾಜನೂ ಕೂಡ ತನ್ನ ಮಗಳ ವಿಷಯದ ಯೋಚನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಹೆಂಡತಿಯು ಸ್ತ್ರೀಗೆ ಸ್ವಭಾವವಾದ ಚಾಪಲ್ಯದಿಂದ ಕೂಡಿರುವಳೆಂದು ಆಕೆಯು ಮನಸ್ಸಿನಲ್ಲಿರುವುದನ್ನು ತಿಳಿದು ಮುಖದ ವಿಕಾರದಿಂದ ಒಂದನ್ನೂ ಸೂಚಿಸದೆ ಇದು ಸರಿಯಾಗಿ ಒದಗಿದೆ ನನಗೂ ಬೇಕಾದುದು ಎಂದುಕೊಂಡನು

೧೪೨. ಆಗ ಆ ಮೇನೆಯ ಸಖಿಯು ಸಾಮುದ್ರಿಕವನ್ನೂ ಅದರ ಫಲವನ್ನೂ ಹೇಳುವಂತೆ ಋಷಿಯನ್ನು ಕೇಳಲು ಆ ಋಷಿಯು ನಗುತ್ತಾ ಹೀಗೆಂದನು.

೧೪೩-೧೪೪. ನಾರದನು ಹೇಳಿದನು- ಅಮ್ಮಾ ! ಈಕೆಗೆ ಗಂಡನು ಹುಟ್ಟಲೇ ಇಲ್ಲ. ಇವಳ ದೇಹದಲ್ಲಿ ಒಳ್ಳೆಯ ಲಕ್ಷಣಗಳೇ ಇಲ್ಲ. ಹಸ್ತಗಳು ಯಾವಾಗಲೂ

ಸುಚ್ಛಾಯಾಽಸ್ಯಾ ಭವಿಷ್ಯೇಯಂ ಕಿಮನ್ಯದ್ವಹು ಭಾಷ್ಯತೇ ॥ ೧೪೪ ॥

॥ ಪುಲಸ್ತ್ಯ ಉವಾಚ ॥

ಶ್ರುತ್ವೈತತ್ಸಂಭ್ರಮಾವಿಷ್ಟೋ ಧ್ವಸ್ತಧೈರ್ಯೋ ಹಿಮಾಚಲಃ ।
ನಾರದಂ ಪ್ರತ್ಯುವಾಚಾಥ ಸಾಶ್ರುಕಂಠೋ ಮಹಾಗಿರಿಃ ॥ ೧೪೫ ॥

॥ ಹಿಮವಾನುವಾಚ ॥

ಸಂಸಾರಸ್ಯಾತಿದೋಷಸ್ಯ ದುರ್ವಿಜ್ಞೇಯಾ ಗತಿರ್ಯತಃ ।
ಸೃಷ್ಟ್ಯಾ ಚಾವಶ್ಯಭಾವಿನ್ಯಾ ಕೇನಾಪ್ಯತಿಶಯಾತ್ಮನಾ ॥ ೧೪೬ ॥

ಕರ್ತ್ರಾ ಪ್ರಣೀತಾ ಮರ್ಯಾದಾ ಸ್ಥಿತಾ ಸಂಸಾರಿಣಾಮಿಯಂ ।
ಯೋ ಜಾಯತೇ ಹಿ ಯದ್ಬೀಜಾಜ್ಜನಿತುಃ ಸೋಽರ್ಥಸಾಧಕಃ ॥ ೧೪೭ ॥

ಜನಿತಾ ಅಪಿ ಜಾತಸ್ಯ ನ ಕಶ್ಚಿದಿತಿ ಚ ಸ್ಫುಟಂ ।
ಸ್ವಕರ್ಮಣೈವ ಜಾಯಂತೇ ವಿವಿಧಾ ಭೂತಜಾತಯಃ ॥ ೧೪೮ ॥

---

ಮೇಲಕ್ಕೆದ್ದುಕೊಂಡಿವೆ. ಪಾದಗಳು ವ್ಯಭಿಚಾರದ ಲಕ್ಷಣಗಳಿಂದ ಕೂಡಿವೆ. ಒಳ್ಳೆಯ ಕಾಂತಿಯಿಂದಲೂ ಕೂಡಿವೆ. ಇವಳ ಭವಿಷ್ಯವು ಇದು. ಇನ್ನೇನು ಹೇಳಲಿ, ಎಂದನು

೧೪೫. ಪುಲಸ್ತ್ಯನು ಹೇಳಿದನು- ಪರ್ವತ ರಾಜನು ಈ ಮಾತನ್ನು ಕೇಳಿ ಆತುರದಿಂದ ಕೂಡಿದನು. ಅಲ್ಲದೆ ಧೈರ್ಯವು ಹೋಯಿತು. ಆಗ ಕಣ್ಣೀರು ಬಿಡುತ್ತ ನಾರದನನ್ನು ಕುರಿತು ಇಂತೆಂದನು.

೧೪೬-೧೪೯. ಹಿಮವಂತನು ಹೇಳಿದನು- ಎಲೈ ಮುನಿಯೇ! ಸಂಸಾರವು ಅತಿ ದೋಷದಿಂದ ಕೂಡಿದುದು. ಅದರ ಗತಿಯನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಸೃಷ್ಟಿಯಾದರೋ ಅವಶ್ಯಕವಾಗಿ ಆಗಬೇಕು. ಯಾವನೋ ಒಬ್ಬ ಉತ್ತಮನಾದವನು ಸಂಸಾರಿಗಳ ಸ್ಥಿತಿಯು ಹೀಗಿರಬೇಕೆಂದು ಒಂದು ಮಿತಿಯನ್ನು ಕಲ್ಪಿಸಿದ್ದಾನೆ. ಯಾವನು ಯಾವನ ಬೀಜದಿಂದ ಹುಟ್ಟುತ್ತಾನೆಯೋ ಆ ಮಗನು ತಂದೆಯ ಪ್ರಯೋಜನಗಳನ್ನು ಅವನಂತೆಯೇ ಇದ್ದು ಸಾಧಿಸುತ್ತಾನೆ. ಎಂಬುದು ಲೋಕವಾಡಿಕೆ. ತಂದೆಯು ಮಗನಿಗೆ ಏನೂ ಮಾಡಲಾರನು. ತಂದೆಗೂ ಮಗನಿಗೂ ಏನೂ ಸಂಬಂಧವಿಲ್ಲ ಎಂಬುದೂ ಪ್ರಸಿದ್ಧವಾಗಿದೆ. ನಾನಾ ಬಗೆಯಾಗಿರುವ ಪ್ರಾಣಿ

ಅಂಡಜೋ ಹ್ಯಂಡಜಾಜ್ಜಾತಃ ಪುನರ್ಜಾಯೇತ ಮಾನವಃ ।
ಮಾನುಷೋಽಪಿ ಸರೀಸೃಪ್ಯಾಂ ಮಾನುಷತ್ವೇನ ಜಾಯತೇ ॥ ೧೪೯ ॥

ತತ್ರಾಪಿ ಜಾತಾ ಶ್ರೇಷ್ಠಾಯಾಂ ಧರ್ಮಸ್ಯೋತ್ಕರ್ಷಣೇನ ತು ।
ಅಪುತ್ರಜನ್ಮನಃ ಶೇಷಾಃ ಪ್ರಾಣಿನಃ ಸಮುಪಸ್ಥಿತಾಃ ॥ ೧೫೦ ॥

ಮನುಜಾಸ್ತತ್ರ ಸುತರಾಂ ನಯೇನ ಸಹ ಧರ್ಮಿಣಃ ।
ಕ್ರಮೇಣಾಽಶ್ರಮಸಂಪ್ರಾಪ್ತಿರ್ಬ್ರಹ್ಮಚಾರಿವ್ರತಾದನು ॥ ೧೫೧ ॥

ತಸ್ಯ ಕರ್ತುರ್ನಿಯೋಗೇನ ಸಂಸಾರೋ ಯೇನ ವರ್ಧಿತಃ ।
ಸಂಸಾರಸ್ಯ ಹಿ ನೋತ್ಪತ್ತಿಃ ಸರ್ವೇ ಸ್ಯುರ್ಯದಿ ನಿಗ್ರಹಾಃ ॥ ೧೫೨ ॥

ಕರ್ತ್ರಾ ತು ಶಾಸ್ತ್ರೇಷು ಸದಾ ಸುತಲಾಭಃ ಪ್ರಶಂಸಿತಃ ।
ಪ್ರಾಣಿನಾಂ ಮೋಹನಾರ್ಥಾಯ ನರಕತ್ರಾಣಕಾರಣಾತ್ ॥ ೧೫೩ ॥

---

ಗಳ ಗುಂಪು ತಮ್ಮ ತಮ್ಮ ಕರ್ಮಕ್ಕೆ ಅನುಗುಣವಾಗಿ ಹುಟ್ಟುತ್ತವೆ. ಮೊಟ್ಟೆಯ ಪ್ರಾಣಿಗಳಿಂದ ಮೊಟ್ಟೆಯ ಪ್ರಾಣಿಗಳು ಹುಟ್ಟುವಾಗ ಅದರಲ್ಲಿ ಮನುಷ್ಯನೂ ಹುಟ್ಟುತ್ತಾನೆ. ಮನುಷ್ಯನು ಸರ್ಪದಲ್ಲಿ ಕೂಡ ಮನುಷ್ಯನ ಗುಣವನ್ನು ಹೊಂದಿಯೇ ಹುಟ್ಟುತ್ತಾನೆ.

೧೫೦ ಧರ್ಮವು ಹೆಚ್ಚಾಗಿದ್ದರೆ ಶ್ರೇಷ್ಠವಾದ ಜಾತಿಯಲ್ಲಿ ಹುಟ್ಟುತ್ತಾರೆ. ಉಳಿದ ಪ್ರಾಣಿಗಳು ಮಕ್ಕಳನ್ನು ಹೊಂದದೇ ಎಷ್ಟೋವೇಳೆ ಅವಕ್ಕೆ ದುಃಖವೇ ಇಲ್ಲ.

೧೫೧. ಅದರಲ್ಲೂ ಮನುಷ್ಯರು ಹುಟ್ಟುವಾಗಲೇ ನೀತಿಯನ್ನು ಹೊಂದಿ ಬರುತ್ತಾರೆ. ಹುಟ್ಟಿ ಬೆಳೆಬೆಳೆಯುತ್ತ ಬಂದಹಾಗೆ ಬ್ರಹ್ಮಚರ್ಯ ಆಶ್ರಮವೂ ಆಮೇಲೆ ಗೃಹಸ್ಥಾಶ್ರಮವೂ ಬರುತ್ತವೆ

೧೫೨. ಆ ಕರ್ತೃವಿನ ಅಪ್ಪಣೆಯಂತೆ ಸಂಸಾರವು ವಿಸ್ತಾರವಾಗುವುದು. ಅವನ ಅಪ್ಪಣೆಯಿಲ್ಲವಿದ್ದರೆ ಸಂಸಾರವನ್ನೇ ಕಟ್ಟಿಕೊಳ್ಳಲಾಗುವುದಿಲ್ಲ. ಮನೆ ಮಠಗಳೂ ಇರುವುದಿಲ್ಲ.

೧೫೩. ಪ್ರಾಣಿಗಳನ್ನು ಭ್ರಾಂತಿಗೊಳಿಸುವುದಕ್ಕೆ ನರಕದಿಂದ ತಪ್ಪಿಸುವಿಕೆಯನ್ನೇ ಕಾರಣವಾಗಿಟ್ಟುಕೊಂಡು ಆ ಕರ್ತೃವು ಶಾಸ್ತ್ರದಲ್ಲಿ ಮಕ್ಕಳ ಲಾಭವನ್ನು ಹೊಗಳಿದ್ದಾನೆ.

ಸ್ತ್ರಿಯಾ ವಿರಹಿತಾ ಸೃಷ್ಟಿರ್ಜಂತೂನಾಂ ನೋಪಪದ್ಯತೇ ।
ಸ್ತ್ರೀಜಾತಿಸ್ತು ಪ್ರಕೃತ್ಯೈವ ಕೃಪಣಾ ದೈನ್ಯಭಾಗಿನೀ ॥ ೧೫೪ ॥

ಶಾಸ್ತ್ರಾಲೋಚನಸಾಮರ್ಥ್ಯಾದುದ್ಘಾಟಿತಂ ತಾಸು ಕರ್ತೃಣಾ ।
ತಸ್ಯಾಂ ಚೋಪರಿ ಸಾsವಜ್ಞಾ ಭವೇದಿತಿ ಚ ವೇಧಸಾ ॥ ೧೫೫ ॥

ಶಾಸ್ತ್ರೇಷೂಕ್ತಮಸಂದಿಗ್ಧಂ ಬಹುವಾರಂ ಮಹಾಫಲಂ ।
ದಶಪುತ್ರಸಮಾ ಕನ್ಯಾ ಯಾ ಸ್ಯಾಚ್ಛೀಲವತೀ ಶುಭಾ ॥ ೧೫೬ ॥

ವಾಕ್ಯಮೇತತ್ಫಲಭ್ರಷ್ಟಂ ಪುಂಸಾಂ ಗ್ಲಾನಿಕರಂ ಪರಂ ।
ಕನ್ಯಾ ಹಿ ಕೃಪಣಾ ಶೋಚ್ಯಾ ಪಿತುರ್ದುಃಖವಿವರ್ಧಿನೀ ॥ ೧೫೭ ॥

ಯಾsಪಿ ಸ್ಯಾತ್ಪೂರ್ಣಸರ್ವಾರ್ಥಾ ಪತಿಪುತ್ರಸಮನ್ವಿತಾ ।
ಕಿಂ ಪುನರ್ದುರ್ಭಗಾ ಹೀನಾ ಪತಿಪುತ್ರಧನಾದಿಭಿಃ ॥ ೧೫೮ ॥

---

೧೫೪. ಆ ಕರ್ತೃವು ಹೇಳಿರುವ ಸೃಷ್ಟಿಯು ಹೆಂಗಸಿಲ್ಲದಿದ್ದರೆ ಸಾಧ್ಯವಾಗುವುದೇ ಇಲ್ಲ. ಸ್ತ್ರೀಜಾತಿಯಾದರೋ ಸ್ವಭಾವವಾಗಿಯೇ ದೀನತೆಯಿಂದಿರುವುದು. ಕಾರ್ಪಣ್ಯದಿಂದಲೂ ಕೂಡಿರುವುದು.

೧೫೫. ಶಾಸ್ತ್ರಾಲೋಚನೆಗಳನ್ನು ಮಾಡಿದರೆ ಕರ್ತೃವು ಅವರನ್ನು ನಿಂದಿಸಿದ್ದಾನೆಂಬುದು ವ್ಯಕ್ತವಾಗುವುದು. ಪ್ರತ್ಯಕ್ಷವಾಗಿ ನಿಂದಿಸಿದರೆ ಆ ಸ್ತ್ರೀಯರ ಮೇಲೆ ಮೊದಲೇ ತಿರಸ್ಕಾರ ಹುಟ್ಟುವುದೆಂದು ಬ್ರಹ್ಮನು ಹೀಗೆ ಮಾಡಿರುವನು.

೧೫೬. ಶಾಸ್ತ್ರಗಳಲ್ಲಿ ಶೀಲವತಿಯೂ ಮಂಗಳಕರಳೂ ಆದ ಮಗಳು ಆದರೆ ಹತ್ತು ಜನ ಗಂಡು ಮಕ್ಕಳಿಗೆ ಸಮವೆಂದೂ, ಮಹಾ ಫಲವುಂಟೆಂದೂ, ಬಹುಬಾರಿ ಸಂದೇಹವಿಲ್ಲವೆ ಹೇಳಿದೆ

೧೫೭–೧೫೮. ಬ್ರಹ್ಮನು ಹೇಳಿರುವ ಈ ವಾಕ್ಯವು ಫಲವಿಲ್ಲದ್ದು. ಗಂಡಸರಿಗೆ ದುಃಖವನ್ನುಂಟು ಮಾಡುವುದು. ಕನ್ಯೆಯು ಎಲ್ಲಾ ಸೌಭಾಗ್ಯವನ್ನೂ ಹೊಂದಿ ಗಂಡ, ಮಕ್ಕಳುಗಳಿಂದ ಕೂಡಿದ್ದರೂ ಆಕೆಯ ವಿಷಯದಲ್ಲಿ ದೈನ್ಯವೂ ಯೋಚನೆಯೂ ಉಂಟಾಗಿ ದುಃಖವು ಹೆಚ್ಚುತ್ತದೆ. ಒಳ್ಳೆಯವಳ ವಿಷಯದಲ್ಲಿಯೇ ಹೀಗಿರುವಾಗ ಆಕೆಯು ಅಯೋಗ್ಯಳೂ, ಗಂಡ, ಮಕ್ಕಳು, ಹಣಗಳಿಲ್ಲದವಳೂ ಆದರೆ ಹೇಳತಕ್ಕದ್ದೇನಿರುವುದು ?

ತ್ವಂ ಚೋಕ್ತವಾನ್ಸುತಾಯಾ ಮೇ ಶರೀರೇ ದೋಷಸಂಗ್ರಹಂ ।
ಅಹೋ ಮುಹ್ಯಾಮಿ ಶುಷ್ಯಾಮಿ ಗ್ಲಾಮಿ ಸೀದಾಮಿ ನಾರದ ॥ ೧೫೯ ॥

ಅಯುಕ್ತಮಪಿ ವಕ್ತವ್ಯಮಪ್ರಾಪ್ಯಮಪಿ ಸಾಂಪ್ರತಂ
ಅನುಗ್ರಹಾಯ ಮೇ ಛಿಂಧಿ ದುಃಖಂ ಕನ್ಯಾಶ್ರಯಂಮುನೇ ॥ ೧೬೦ ॥

ಪರಿಚ್ಛಿನ್ನೇಽಪ್ಯಸಂದಿಗ್ಧೇ ಮನಃ ಪರಿಭವಾಶ್ರಯಾತ್ ।
ತೃಷ್ಣಾ ಮುಷ್ಣಾತಿ ನಿಷ್ಣಾತಂ ಫಲಲೋಭಾಶ್ರಯಾತ್ಪುನಃ ॥ ೧೬೧ ॥

ಸ್ತ್ರೀಣಾಂ ಹಿ ಪರಮಂ ಜನ್ಮ ಕುಲಾನಾಮುಭಯಾತ್ಮನಾಂ ।
ಇಹಾಮುತ್ರ ಸುಖಾಯೋಕ್ತಂ ಸತ್ಪತಿಪ್ರಾಪ್ತಿಸಂಜ್ಞಿತಂ ॥ ೧೬೨ ॥

ದುರ್ಲಭತ್ವಾತ್ಪತಿಃ ಸ್ತ್ರೀಣಾಂ ವಿಗುಣೋಽಪಿ ಪತಿಃ ಕಿಲ ।
ನ ಪ್ರಾಪ್ಯತೇ ವಿನಾ ಪುಣ್ಯೈಃ ಪತಿರ್ನಾರ್ಯಾ ಕದಾಚನ ॥ ೧೬೩ ॥

---

೧೫೯. ನೀನಾದರೋ ನನ್ನ ಮಗಳ ದೇಹದಲ್ಲಿ ದೋಷಗಳನ್ನು ಸಂಗ್ರಹ ವಾಗಿ ಹೇಳಿದೆ. ಅಯ್ಯೋ! ಮೂರ್ಛೆ ಬರುವುದಲ್ಲ. ಬಾಯೆಲ್ಲಾ ಒಣಗುವುದು ಕಾಂತಿಗೆಡುತ್ತಿರುವೆನು. ನಾಶವಾಗುವಂತಾಗುತ್ತಿರುವೆನಲ್ಲ. ಎಲೈ ನಾರದನೇ! ನನ್ನ ಗತಿ ಹೀಗಾಗಿದೆ.

೧೬೦. ಈಕೆಗೆ ಒರುವುದು ಅಯೋಗ್ಯವಾಗಿದ್ದರೂ, ಹೊಂದಲು ಅನರ್ಹನಾ ಗಿದ್ದರೂ ಕೂಡ ಅದನ್ನು ಈಗ ನನಗೆ ಹೇಳು ನನ್ನ ಮೇಲೆ ಅನುಗ್ರಹವಿಟ್ಟು ಈ ಕನ್ಯೆಯ ವಿಷಯವಾದ ದುಃಖವನ್ನು ನಿವಾರಿಸು

೧೬೧. ಸಂದೇಹವು ನಾಶವಾಗಿ ಸ್ವಲ್ಪವೂ ಉಳಿಯದಿದ್ದರೂ ಮನಸ್ಸು ಅವ ಮಾನ ಹೊಂದುವ ಭೀತಿಯಿಂದ ಇದ್ದರೂ ಫಲವು ಒಳ್ಳೆಯದು ಸಿಕ್ಕುವುದೆಂದು ಯೋಚಿಸಿ ಆಸೆಯು ಪಂಡಿತನನ್ನೂ ಕೂಡ ಪರಾಧೀನನನ್ನಾಗಿ ಮಾಡುತ್ತದೆ.

೧೬೨. ಒಳ್ಳೆಯ ಗಂಡನನ್ನು ಹೊಂದಿದ ಹೆಣ್ಣು ಮಕ್ಕಳ ಪ್ರಾಪ್ತಿಯು ಹುಟ್ಟಿದ ಮತ್ತು ಸೇರಿದ ಎರಡು ಕಡೆಯವರಿಗೂ ಇಹಪರಗಳಲ್ಲಿ ಸುಖವನ್ನು ಕೊಡು ತ್ತದೆ ಎಂದು ಹೇಳಿದೆ.

೧೬೩. ಗಂಡನು ಹೆಂಗಸಿಗೆ ಸಿಕ್ಕುವುದೂ ಕಷ್ಟವಾಗಿರುವಾಗ ಅವನಲ್ಲಿ ಗುಣ ಗಳಿಲ್ಲದಿದ್ದರೂ ಅವನು ಗಂಡನೇ ಆಗಿರುವನು. ಪುಣ್ಯ ಮಾಡದಿದ್ದರೆ ಹೆಂಗಸಿಗೆ ಆ ಗಂಡನೂ ಕೂಡ ಸಿಕ್ಕುವುದೇ ಇಲ್ಲ.

ಯಶೋ ನಿಸ್ಸಾಧನೋ ಧರ್ಮಃ ಪರಿಣಾಮೋತ್ಥಿತಾ ರತಿಃ ।
ಧನಂ ಜೀವಿತಪರ್ಯಂತಂ ಪತೌ ನಾರ್ಯಾಃ ಪ್ರತಿಷ್ಠಿತಂ ॥ ೧೬೪ ॥

ನಿರ್ಧನೋ ದುರ್ಮುಖೋ ಮೂರ್ಖಃ ಸರ್ವಲಕ್ಷಣವರ್ಜಿತಃ ।
ದೈವತಂ ಪರಮಂ ನಾರ್ಯಾಃ ಪತಿರುಕ್ತಃ ಸದೈವ ಹಿ ॥ ೧೬೫ ॥

ತ್ವಯಾ ದೇವರ್ಷಿಣಾ ಪ್ರೋಕ್ತಂ ನ ಜಾತೋಽಸ್ಯಾಃ ಪತಿಃ ಕಿಲ ।
ಏತದ್ದೌರ್ಭಾಗ್ಯಮತುಲ ಸಂಖ್ಯಂ ಜಮದುರುದ್ವಹಂ ॥ ೧೬೬ ॥

ಚರಾಚರೇ ಭೂತಸರ್ಗೇ ಚಿಂತಾ ಸಾ ವ್ಯಾಪಿನೀ ಮುನೇ ।
ಸ ನ ಜಾತ ಇತಿ ಶ್ರುತ್ವಾ ಮಮೇದಂ ವ್ಯಾಕುಲಂ ಮನಃ ॥ ೧೬೭ ॥

ಮನುಷ್ಯದೇವಜಾತೀನಾಂ ಶುಭಾಶುಭನಿವೇದಕಂ ।
ಲಕ್ಷಣಂ ಹಸ್ತಪಾದಾಭ್ಯಾಂ ಲಕ್ಷಣಂ ವಿಹಿತಂ ಕಿಲ ॥ ೧೬೮ ॥

---

೧೬೪. ಮೋಕ್ಷ ಸಾಧಕವಾದ ಧರ್ಮವೂ, ಕೊನೆಗೆ ಉಂಟಾಗುವ ಸುಖವೂ, ಧನವೂ, ಮತ್ತು ತನ್ನ ಕೊನೆಯ ಜೀವವಿರುವವರೆಗೂ ಇರುವ ಸ್ಥಿತಿಯೂ ಎಲ್ಲವೂ ಹೆಂಗಸಿಗೆ ಆ ಗಂಡನಲ್ಲಿಯೇ ಸ್ಥಿರವಾಗಿ ನಿಂತಿದೆ.

೧೬೫. ಹೆಂಗಸಿಗೆ ಗಂಡನು ಹಣವಿಲ್ಲದವನೂ, ಅಯೋಗ್ಯನೂ, ಮೂರ್ಖನೂ, ಒಂದು ಲಕ್ಷಣವೂ ಇಲ್ಲದವನೂ, ಆದರೂ ಅವನು ಅವಳಿಗೆ ಉತ್ತಮವಾದ ದೇವ ವೆಂದೇ ಹೇಳಿದ್ದಾರೆ.

೧೬೬. ದೇವರ್ಷಿಯಾದ ನೀನು ಇವಳಿಗೆ ಗಂಡನೇ ಹುಟ್ಟಿಲ್ಲವೆಂದು ಹೇಳಿದೆ ಯಷ್ಟೆ. ಈ ದೌರ್ಭಾಗ್ಯವು ಬಹು ಹೆಚ್ಚಾದುದು. ಅನಂತವಾದುದು. ಹೊರಲು ಬಹು ಕಷ್ಟವಾದುದು.

೧೬೭. ಆ ಚಿಂತೆಯು ಮೊದಲೇ ವ್ಯಾಪಿಸಿಕೊಂಡಿದ್ದು ಚರಾಚರ ಪ್ರಾಣಿಗ ಳಲ್ಲಿ ಆ ಗಂಡನು ಹುಟ್ಟಿಯೇ ಇಲ್ಲವೆಂಬುದನ್ನು ಕೇಳಿ ನನ್ನ ಮನಸ್ಸಂತೂ ಬಹು ದುಃಖಕ್ಕೆ ಗುರಿಯಾಗಿದೆ.

೧೬೮. ಮನುಷ್ಯರು ದೇವತೆಗಳು ಇವರಿಗೆ ಒಳ್ಳೆಯದು ಕೆಟ್ಟದ್ದನ್ನು ಹೇ ಳುವ ಲಕ್ಷಣಗಳು ಕೈ ಕಾಲುಗಳ ಲಕ್ಷಣಗಳಿಂದ ಮಾಡಲ್ಪಟ್ಟಿವೆ.

ಸೇಯಮುತ್ತಾನಹಸ್ತೇತಿ ತ್ವಯೋಕ್ತಾ ಮುನಿಪುಂಗವ ।
ಉತ್ತಾನಹಸ್ತತಾ ಪ್ರೋಕ್ತಾ ಯಾಚತಾಮೇವ ನಿತ್ಯಶಾ ॥ ೧೬೯ ॥

ಶುಭೋದಯನಾಂ ಧನ್ಯಾನಾಂ ನ ಕದಾಚಿತ್ಪ್ರಯಚ್ಛತಾಂ ।
ಸುಚ್ಛಾಯಯೋಽಸ್ಯಾಶ್ಚರಣೌ ತ್ವಯೋಕ್ತೌ ವ್ಯಭಿಚಾರಿಣೌ ॥ ೧೭೦ ॥

ತತ್ರಾಪಿ ಶ್ರೇಯಸೀ ಹ್ಯಾಶಾ ಮುನೇ ನ ಪ್ರತಿಭಾತಿ ನಃ ।
ಶರೀರಾವೇಕ್ಷಣಾಚ್ಚಾನ್ಯೇ ಪೃಥಕ್ಫಲನಿವೇದಿನಃ ॥ ೧೭೧ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ವಿರತೇ ಶೈಲೇ ಮಹಾದುಃಖವಿಚಾರಿಣಿ ।
ಸ್ಮಿತಪೂರ್ವಮುವಾಚೇದಂ ನಾರದೋ ದೇವಪೂಜಿತಃ ॥ ೧೭೨ ॥

॥ ನಾರದ ಉವಾಚ ॥

ಹರ್ಷಸ್ಥಾನೇ ಚ ಮಹತಿ ತ್ವಯಾ ದುಃಖಂ ನಿರುಚ್ಯತೇ ।
ಅಪರಿಚ್ಛನ್ನವಾಕ್ಯಾರ್ಥೇ ಮೋಹಂ ಯಾಸಿ ಮಹಾಗಿರೇ ॥ ೧೭೩ ॥

---

೧೬೯. ನೀನಾದರೋ ಈಕೆಯ ಕೈಗಳು ಮೇಲಕ್ಕೆದ್ದು, ಕೊಂಡಿದೆ ಎಂದ ಹೇಳಿದೆ. ಮೇಲಕ್ಕೆದ್ದುಕೊಂಡಿರುವ ಕೈಯು ಯಾವಾಗಲೂ ಯಾಚಿಸುತ್ತಿರುವವರ ಲಕ್ಷಣವಾಗಿದೆ. ಮುಂದೆ ಒಳ್ಳೆಯದಾಗುವ, ಧನ್ಯರಾದ ದಾನಮಾಡುವ ಮನುಷ್ಯರಿಗೆ ಹಾಗೆ ಇರುವುದೇ ಇಲ್ಲ.

೧೭೦-೧೭೧. ಇವಳ ಕಾಲುಗಳು ಕಾಂತಿಯುಕ್ತವಾಗಿರುವುದರಿಂದ ಈಕೆಯು ಹಾದರಗಿತ್ತಿಯಾಗುವ ಲಕ್ಷಣಗಳು ಇವೆ. ಇದರಲ್ಲಿಯೂ ಶ್ರೇಯಸ್ಸಿನ ಆಶೆಯು ಸ್ವಲ್ಪವೂ ನನಗೆ ತೋರುವುದೇ ಇಲ್ಲ. ಶರೀರದ ಮಿಕ್ಕ ಅವಯವಗಳನ್ನು ಬೇರೆ ಬೇರೆಯಾಗಿ ನೋಡಿ ಅವುಗಳ ಫಲವನ್ನೂ ಬೇರೆಬೇರೆಯಾಗಿ ಹೇಳು.

೧೭೨. ಪುಲಸ್ತ್ಯನು ಹೇಳಿದನು—ಮಹಾ ಆಪತ್ತನ್ನು ಯೋಚಿಸುತ್ತಿರುವ ಪರ್ವತರಾಜನು ಹೀಗೆಂದು ಹೇಳಿ ಸುಮ್ಮನಾಗಲು ದೇವಪೂಜಿತನಾದ ನಾರದನು ನಗುತ್ತ ಇಂತೆಂದನು.

೧೭೩. ನಾರದನು ಹೇಳಿದನು—ಎಲೈ ಪರ್ವತರಾಜನೇ! ಬಹು ಸಂತೋಷಕ್ಕೆ ಕಾರಣವಿರುವಾಗ ನೀನು ದುಃಖದ ವಿಷಯವನ್ನು ಹೇಳುತ್ತಿರುವೆಯಲ್ಲ. ಮಾತಿನ ಅರ್ಥವು ಮುಗಿಯುವಷ್ಟರಲ್ಲಿಯೇ ನೀನು ಬೇರೆಯಾಗಿ ಭಾವಿಸಿ ದುಃಖಗೊಳ್ಳುತ್ತಿರುವೆಯಲ್ಲ.

ಇಮಾಂ ಶೃಣು ಗಿರಂ ಶೈಲೇಂದ್ರ ರಹಸ್ಯಪರಿನಿಷ್ಠಿತಾಂ ।
ಸಮಾಹಿತೋ ಮಹಾಶೈಲ ಮಯೋಕ್ತಸ್ಯ ವಿಚಾರಿಣೀಂ ॥ ೧೭೪ ॥

ನ ಜಾತೋಽಸ್ಯಾಃ ಪತಿರ್ದೇವ್ಯಾ ಯನ್ಮಯೋಕ್ತಂ ಹಿಮಾಚಲ ।
ಸ ನ ಜಾತೋ ಮಹಾದೇವೋ ಭೂತಭವ್ಯಭವೋದ್ಭವಃ ॥ ೧೭೫ ॥

ಶರಣ್ಯಃ ಶಾಶ್ವತಃ ಶಾಸ್ತಾ ಶಂಕರಃ ಪರಮೇಶ್ವರಃ ।
ಬ್ರಹ್ಮವಿಷ್ಣ್ವಿಂದ್ರಮುನಯೋ ಗರ್ಭಜನ್ಮಜರಾರ್ದಿತಾಃ ॥ ೧೭೬ ॥

ತಸ್ಯ ತೇ ಪರಮೇಶಸ್ಯ ಸರ್ವೇ ಕ್ರೀಡನಕಾ ಗಿರೇ ।
ಬ್ರಹ್ಮಾಂಡತಸ್ತದಿಚ್ಛಾತಃ ಸಂಭೂತೋ ಭುವನಪ್ರಭುಃ ॥ ೧೭೭ ॥

ವಿಷ್ಣುರ್ಯುಗೇ ಯುಗೇ ಜಾತೋ ನಾನಾಜಾತಿರ್ಮಹಾತನುಃ ।
ಮನ್ಯಸೇ ಮಾಯಯಾ ಜಾತಂ ವಿಷ್ಣುಂ ಚಾಪಿ ಯುಗೇ ಯುಗೇ ॥ ೧೭೮ ॥

---

೧೭೪. ಆ ವಾಕ್ಯದಲ್ಲಿ ಸೇರಿಕೊಂಡಿರುವ ಅರ್ಥವನ್ನು ಒಂದೇ ಮನಸ್ಸಿನಿಂದ ಕೇಳು. ಅದರ ಅರ್ಥವನ್ನು ವಿಚಾರಮಾಡಿ ಹೇಳುತ್ತೇನೆ. ನಾನು ಹೇಳುವ ಅರ್ಥವನ್ನು ಕೇಳು

೧೭೫. ಎಲೈ ಹಿಮಾಚಲನೇ! ನಾನು ಇವಳಿಗೆ ಗಂಡನು ಹುಟ್ಟಿಲ್ಲವೆಂದು ಹೇಳಿದೆ. ಭೂತಭವ್ಯ ವರ್ತಮಾನಗಳಿಗೆ ಉತ್ಪತ್ತಿ ಕರ್ತೃವಾದ ಆ ಮಹಾದೇವನು ಹುಟ್ಟಿದವನಲ್ಲ, ಸ್ವಯಂ ಪ್ರಕಾಶನು.

೧೭೬. ಆ ಶಂಕರನು ಎಲ್ಲರಿಗೂ ರಕ್ಷಕನು. ಅವನು ಶಾಶ್ವತನಾಗಿರುವವನು. ಎಲ್ಲರನ್ನೂ ಶಿಕ್ಷಿಸುವವನು. ಬ್ರಹ್ಮ, ವಿಷ್ಣು, ಇಂದ್ರ, ಋಷಿಗಳು. ಇವರೆಲ್ಲರೂ ಗರ್ಭ, ಜನ್ಮ, ಮುಪ್ಪುಗಳಿಂದ ಕೂಡಿದವರು. ಆ ಪರಮೇಶ್ವರನಿಗೆ ಇವರೆಲ್ಲರೂ ಆಟದ ಪದಾರ್ಥಗಳು.

೧೭೭–೧೭೮ ಪ್ರಪಂಚಕ್ಕೆ ಒಡೆಯನಾದ ಈ ಸ್ವಾಮಿಯು ಬ್ರಹ್ಮಾಂಡದಲ್ಲಿ ತನ್ನ ಇಚ್ಛೆ ಬಂದಂತೆ ಕಾಣಿಸಿಕೊಳ್ಳುತ್ತಾನೆ. ವಿಷ್ಣುವು ಪ್ರತಿಯುಗದಲ್ಲಿಯೂ ನಾನಾ ಜಾತಿಗಳಲ್ಲಿ ದೊಡ್ಡದೊಡ್ಡ ದೇಹಗಳನ್ನು ತೆಗೆದುಕೊಂಡು ಹುಟ್ಟುತ್ತಾನೆ. ಯುಗಯುಗದಲ್ಲಿಯೂ ವಿಷ್ಣುವು ಮಾಯೆಯಿಂದ ಹುಟ್ಟುತ್ತಿರುವನೆಂಬುದು ನಿನಗೆ ಗೊತ್ತಿದೆ.

ಆತ್ಮನೋ ನ ವಿನಾಶೋಽಸ್ತಿ ಸ್ಥಾವರಾಂತೇಽಪಿ ಭೂಧರ ।
ಸಂಸಾರೇ ಜಾಯಮಾನಸ್ಯ ಮ್ರಿಯತೋ ವಾಽಪಿ ದೇಹಿನಃ ॥ ೧೭೯ ॥

ನಶ್ಯತೇ ದೇಹ ಏವಾತ್ರ ನಾಽತ್ಮನೋ ನಾಶ ಉಚ್ಯತೇ ।
ಬ್ರಹ್ಮಾದಿಸ್ಥಾವರಾಂತೋಽಯಂ ಸಂಸಾರೋ ಯಃ ಪ್ರಕೀರ್ತಿತಃ ॥ ೧೮೦ ॥

ಸ ಜನ್ಮಮೃತ್ಯುದುಃಖಾರ್ತೈರ್ನಿತ್ಯಂ ಹ್ಯನಿಶಂ ಪರಿವರ್ತತೇ ।
ಮಹಾದೇವೋಽಚಲಃ ಸ್ಥಾಣುರ್ನ ಜಾತೋಽಜನಕೋಽಜರಃ ॥ ೧೮೧ ॥

ಭವಿಷ್ಯತಿ ಪತಿಃ ಸೋಽಸ್ಯಾ ಜಗನ್ನಾಥೋ ನಿರಾಮಯಃ ।
ಯದುಕ್ತಂ ಚ ಮಯಾ ದೇವೀ ಲಕ್ಷಣೈರ್ವರ್ಜಿತಾತವ ॥ ೧೮೨ ॥

ಶೃಣು ತಸ್ಯಾಪಿ ವಾಕ್ಯಸ್ಯ ಸಮ್ಯಕ್ತ್ವೇನ ವಿಚಾರಣಾಂ ।
ಲಕ್ಷಣಂ ದೈವಕೋ ಹ್ಯಂಕಃ ಶರೀರಾವಯವಾಶ್ರಯಃ ॥ ೧೮೩ ॥

ಸ ಚಾಯುರ್ಧನಸೌಭಾಗ್ಯಪರಿಣಾಮಪ್ರಕಾಶಕಃ ।
ಅನಂತಸ್ಯಾಪ್ರಮೇಯಸ್ಯ ಸೌಭಗತ್ವಸ್ಯ ಭೂಧರ ॥ ೧೮೪ ॥

---

೧೭೯ ಮಹಾ ಪ್ರಳಯದಲ್ಲಿಯೂ ಕೂಡ ಆತ್ಮನಿಗೆ ನಾಶವಿಲ್ಲ. ಸಂಸಾರದಲ್ಲಿ ಹುಟ್ಟುವವನಿಗೂ ಸಾಯುವವನಿಗೂ ದೇಹವು ಹೋಗುತ್ತದೆಯೇ ಹೊರತು ಆತ್ಮನಿಗೆ ನಾಶವಿಲ್ಲವೆಂದು ಹೇಳಿದ್ದಾರೆ.

೧೮೦. ಬ್ರಹ್ಮನು ಮೊದಲುಗೊಂಡು ಸ್ಥಾವರ ಜಂಗಮಗಳಿಂದ ಕೂಡಿದ ಈ ಸಂಸಾರವು ಹುಟ್ಟು, ಸಾವು, ದುಃಖಗಳಿಂದಲೇ ಯಾವಾಗಲೂ ಸುತ್ತುತ್ತಿರುತ್ತದೆ.

೧೮೧ ಮಹಾದೇವನಾದರೋ ಚಲಿಸದೆ ಸ್ಥಿರನಾಗಿರುವನು. ಹುಟ್ಟನ್ನು ಹೊಂದಿದವನಲ್ಲ. ತಂದೆಯನ್ನೂ ಹೊಂದಿಲ್ಲ, ಮುಪ್ಪನ್ನೂ ಹೊಂದುವನಲ್ಲ. ಆ ರೋಗಾದಿಗಳಿಂದ ರಹಿತನಾದ ಜಗನ್ನಾಥನಾದ ಹರನು ಈಕೆಗೆ ಗಂಡನಾಗುತ್ತಾನೆ.

೧೮೨. ಈ ದೇವಿಯು ಲಕ್ಷಣಗಳೊಂದನ್ನೂ ಹೊಂದಿಲ್ಲವೆಂದು ನಾನು ಹೇಳಿದೆನಲ್ಲ. ಆ ವಾಕ್ಯವನ್ನೂ ವಿಶದಪಡಿಸುತ್ತೇನೆ, ಕೇಳು.

೧೮೩-೧೮೪. ಲಕ್ಷಣವೆಂಬುದು ದೇವರು ಮಾಡಿದ ಗುರುತು ಶರೀರದ ಅಂಗಗಳನ್ನು ಆಶ್ರಯಿಸಿಕೊಂಡಿರುತ್ತದೆ. ಆ ಲಕ್ಷಣವು ಆಯುಸ್ಸು, ಧನ, ಸೌಭಾಗ್ಯ ಇವುಗಳ ಪಕ್ವತೆಯನ್ನು ಪ್ರಕಾಶಿಸುತ್ತದೆ. ಲೆಕ್ಕವಿಲ್ಲದೆ ಬಹುವಾಗಿ ಇರುವ ಸೌಭಾಗ್ಯಕ್ಕೆ ಈ ಚಿಹ್ನೆಗಳು ಲಕ್ಷಣಗಳಾಗಿ ಶರೀರದಲ್ಲಿ ಇರಲಾರವು.

ನೈವಾಂಕೋ ಲಕ್ಷಣಾಕಾರಃ ಶರೀರೇ ಸಂವಿಧೀಯತೇ ॥
ಅತೋಽಸ್ಯಾ ಲಕ್ಷಣಂ ಗಾತ್ರೇ ಶೈಲ ನಾಸ್ತಿ ಮಹಾಮತೇ ॥ ೧೮೫ ॥

ಯಚ್ಚಾಹಮುಕ್ತವಾನಸ್ಯಾ ಉತ್ತಾನಕರತಾ ಸದಾ ।
ಉತ್ತಾನೋ ವರದಃ ಪಾಣಿರೇಷ ದೇವ್ಯಾಃ ಸದೈವ ತು ॥ ೧೮೬ ॥

ಸುರಾಸುರಮುನಿವ್ರಾತವರದಾತ್ರೀ ಭವಿಷ್ಯತಿ ।
ಯಚ್ಚ ಪ್ರೋಕ್ತಂ ಮಯಾ ಪಾದೌ ಸ್ವಚ್ಛಾಯೌ ವ್ಯಭಿಚಾರಿಣೌ ॥ ೧೮೭ ॥

ಮತ್ತಃ ಶೃಣು ತ್ವಮಸ್ಯಾಪಿ ವ್ಯಾಖ್ಯೋಕ್ತಿಂ ಶೈಲಸತ್ತಮ ।
ಚರಣೌ ಪದ್ಮಸಂಕಾಶೌ ಸ್ವಚ್ಛಾವಸ್ಯಾ ನಖೋಜ್ಜ್ವಲೌ ॥ ೧೮೮ ॥

ಸುರಾಸುರಾಣಾಂ ನಮತಾಂ ಕಿರೀಟಮಣಿಕಾಂತಿಭಿಃ ।
ವಿಚಿತ್ರವರ್ಣೈಃ ಪಶ್ಯದ್ಭಿಃ ಸ್ವಾಂ ಛಾಯಾಂ ಪ್ರತಿಬಿಂಬಿತೈಃ ॥ ೧೮೯ ॥

ಏಷಾ ಭಾರ್ಯಾ ಜಗದ್ಭರ್ತುರ್ವೃಷಾಂಕಹೀಧರ ।
ಜನನೀ ಸರ್ವಲೋಕಸ್ಯ ಸಂಭೂತಾ ಭೂತಭಾವಿನೀ ॥ ೧೯೦ ॥

---

೧೮೫. ಎಲೈ ಹಿಮವಂತನೇ! ಈಕೆಯು ಬಹು ಸೌಭಾಗ್ಯಶಾಲಿನಿಯಾದ್ದರಿಂದ ದೇಹದಲ್ಲಿ ಗುರುತುಗಳಿಲ್ಲವು.

೧೮೬-೧೮೯. ಈಕೆಯ ಹಸ್ತಗಳು ಮೇಲಕ್ಕೆ ಎದ್ದುಕೊಂಡು ಇರುವುವೆಂದು ಹೇಳಿದೆನಲ್ಲ. ಅದು ಈಕೆಯ ಕೈಗಳು ಎದ್ದುಕೊಂಡು ವರವನ್ನು ಕೊಡುವುದಾಗಿವೆ ಸುರರು, ಅಸುರರು, ಮುನಿಗಳು ಇವರ ಗುಂಪಿಗೆ ವರವನ್ನು ಕೊಡುವುದೆಂದು ತಿಳಿ. ಈಕೆಯ ಪಾದಗಳು ಕಾಂತಿಯಿಂದ ಕೂಡಿರುವುದರಿಂದ ಈಕೆಯು ವ್ಯಭಿಚಾರಿಣಿ ಎಂದು ಹೇಳಿದೆನಲ್ಲ. ಆ ಮಾತಿನ ವಿವರವನ್ನು ಹೇಳುವೆನು ಕೇಳು. ಈಕೆಯ ಪಾದಗಳು ಪದ್ಮದಂತಿವೆ. ಕಳಂಕವಿಲ್ಲದೆ ಉಗುರುಗಳು ಪ್ರಕಾಶವಾಗಿವೆ. ನಮಸ್ಕರಿಸುವ ದೇವದಾನವರ ಕಿರೀಟಮಣಿಗಳ ಕಾಂತಿಗಳಿಂದ ನೋಡುವವರಿಗೆ ನಾನಾ ಬಣ್ಣಗಳಾಗಿ ಕಾಣುತ್ತ ತಮ್ಮಲ್ಲಿರುವ ಕಾಂತಿಯು ಕಿರೀಟದಲ್ಲಿ ಸೇರಿರುವಂತೆ ಕಾಣುವ ಹಾಗೆ ಮಾಡುತ್ತವೆ.

೧೯೦. ಈಕೆಯು ಜಗತ್ತಿಗೆ ಒಡೆಯನಾದ ಬಸವನ ಗುರುತುಳ್ಳ ಪರಮೇಶ್ವರನಿಗೆ ಹೆಂಡತಿಯಾಗುತ್ತಾಳೆ. ಎಲ್ಲಾ ಲೋಕಕ್ಕೂ ಪ್ರಾಣಿಗಳನ್ನು ವಿಶ್ವಾಸಿಸತಕ್ಕ ತಾಯಿಯೂ ಆಗುವಳು.

ಶಿವೇಯಂ ಪಾವನಾಯೈವ ತ್ವತ್ಕ್ಷೇತ್ರೇ ಪಾವನದ್ಯುತಿಃ ।
ತದ್ಯಥಾ ಶೀಘ್ರಮೇನ್ಯೈಷಾ ಯೋಗಂ ಯಾಯಾತ್ಪಿನಾಕಿನಃ ॥ ೧೯೧ ॥

ತಥಾ ವಿಧೇಯಂ ವಿಧಿವತ್ತ್ವಯಾ ಶೈಲೇಂದ್ರಸತ್ತಮ ।
ಅಸ್ತ್ಯತ್ರ ಹಿ ಮಹತ್ಕಾರ್ಯಂ ದೇವಾನಾಂ ಹಿಮಭೂಧರ ॥ ೧೯೨ ॥

॥ ಪುಲಸ್ತ್ಯ ಉವಾಚ ॥

ಏವಂ ಶ್ರುತ್ವಾ ತು ಶೈಲೇಂದ್ರೋ ನಾರದಾತ್ಸರ್ವಮೇವ ಹಿ ।
ಸ್ವಮಾತ್ಮಾನಂ ಪುನರ್ಜಾತಂ ಮೇನೇ ಮೇನಾಪತಿಸ್ತದಾ ॥ ೧೯೩ ॥

ಉವಾಚ ಚಾಪಿ ಸಂಹೃಷ್ಟೋ ನಾರದಂ ತು ಹಿಮಾಚಲಃ ।
ದುಸ್ತರಾನ್ನರಕಾದ್ಘೋರಾದುದ್ಧೃತೋಽಸ್ಮಿ ತ್ವಯಾ ವಿಭೋ ॥ ೧೯೪ ॥

ಪಾತಾಳಾದಹಮುದ್ಧೃತ್ಯ ಸಪ್ತಲೋಕಾಧಿಪಃ ಕೃತಃ ।
ಹಿಮಾಚಲೋಽಸ್ಮಿ ವಿಖ್ಯಾತಸ್ತ್ವಯಾ ಮುನಿವರಾಧುನಾ ॥ ೧೯೫ ॥

---

೧೯೧-೧೯೨. ಈಕೆಯು ಶಿವನ ಹೆಂಡತಿಯು ಪವಿತ್ರವಾದ ಕಾಂತಿಯುಳ್ಳವಳು. ನಿನ್ನಲ್ಲಿ ನಿನ್ನನ್ನು ಪವಿತ್ರವನ್ನಾಗಿ ಮಾಡಲು ಹುಟ್ಟಿರುವಳು. ಆದ್ದರಿಂದ ಈಕೆಯು ಶೀಘ್ರವಾಗಿ ಶಿವನೊಡನೆ ಹೇಗೆ ಸೇರಬೇಕೋ ಹಾಗೆ ವಿಧಿವತ್ತಾಗಿ ಮಾಡು. ಎಲೈ ಹಿಮವಂತನೆ! ಈಕೆಯಿಂದ ದೇವತೆಗಳಿಗೆ ದೊಡ್ಡ ಕೆಲಸವಾಗಬೇಕಾಗಿದೆ.

೧೯೩. ಪುಲಸ್ತ್ಯನು ಹೇಳಿದನು– ಹಿಮವಂತನು ನಾರದನಿಂದ ಇವೆಲ್ಲವನ್ನೂ ಕೇಳಿ ತನ್ನನ್ನು ಮತ್ತೆ ಹುಟ್ಟಿದವನನ್ನಾಗಿ ತಿಳಿದುಕೊಂಡನು

೧೯೪. ಆಗ ಹಿಮವಂತನು ಸಂತೋಷಗೊಂಡು ನಾರದನನ್ನು ಕುರಿತು ಇಂತೆಂದನು. ಎಲೈ ವಿಭುವೆ! ಈಗ ನಾನು ದಾಟಲಾಗದ ನರಕದಿಂದ ನಿನ್ನಿಂದ ಮೇಲಕ್ಕೆತ್ತಲ್ಪಟ್ಟನು.

೧೯೫. ನೀನು ನನ್ನನ್ನು ಈಗ ಪಾತಾಳಲೋಕದಿಂದೆತ್ತಿ ಏಳು ಲೋಕಕ್ಕೂ ಒಡೆಯನನ್ನಾಗಿ ಮಾಡಿದೆ. ಎಲೈ ಋಷಿಯೇ! ನೀನು ಈಗ ನನ್ನನ್ನು ಹಿಮಾಚಲನನ್ನಾಗಿ ಮಾಡಿದೆ.

ಹಿಮಾಚಲಾಚ್ಛತಗುಣಾಂ ಪ್ರಾಪಿತೋಽಸ್ಮಿ ಸಮುನ್ನತಿಂ ।
ಆನಂದದಿವಸಾಹಾರಿ ಹೃದಯಂ ಮೇ ಮಹಾಮುನೇ ॥ ೧೯೬ ॥

ನಾಧ್ಯವಸ ತಿ ಕೃತ್ಯಾನಾಂ ವಿಭಾಗಪ್ರವಿಚಾರಣಾಂ ।
ಭವದ್ವಿಧಾನಾಂ ನಿಯತಮಮೋಘಂ ದರ್ಶನಂ ಮುನೇ ॥ ೧೯೭ ॥

ಭವದ್ಭಿರೇವ ಹಿ ಪ್ರೋಕ್ತಂ ನಿರಾಸಾಯಾತ್ಮರೂಪಿಣಾಂ ।
ಮುನೀನಾಂ ದೇವತಾನಾಂ ಚ ಸ್ವಯಂ ಕೃತ್ವಾ ತು ಕಲ್ಮಷಂ ॥ ೧೯೮ ॥

ತಥಾಪಿ ವಸ್ತುನ್ಯೇಕಸ್ಮಿನ್ನಾಜ್ಞಾ ಮೇ ಸಂಪ್ರದೀಯತಾಂ ।
ಇತ್ಯುಕ್ತವತಿ ಶೈಲೇಂದ್ರೇ ಸ ತದಾ ಹರ್ಷನಿರ್ಭರಃ ॥ ೧೯೯ ॥

ಉವಾಚ ನಾರದೋ ವಾಕ್ಯಂ ಕೃತಂ ಸರ್ವಮಿತಿ ಪ್ರಭೋ
ಸುರಕಾರ್ಯೇ ಸ ಏವಾರ್ಥಸ್ತವಾಪಿ ಸುಮಹತ್ತರಃ ॥ ೨೦೦ ॥

ಇತ್ಯುಕ್ತ್ವಾ ನಾರದಃ ಶೀಘ್ರಂ ಜಗಾಮ ತ್ರಿದಿವಂ ತತಃ ।
ಸ ಗತ್ವಾ ದೇವಭವನಂ ಮಹೇಂದ್ರಂ ಸಂದದರ್ಶ ಹ ॥ ೨೦೧ ॥

---

೧೯೬. ಹಿಮಾಚಲಕ್ಕಿಂತಲೂ ನೂರರಷ್ಟು ಉತ್ಕರ್ಷತೆಯನ್ನು ಹೊಂದಿಸಲ್ಪಟ್ಟೆನು. ಎಲೈ ಮುನಿಯೇ ! ನನ್ನ ಹೃದಯವು ಆನಂದದ ದಿವಸಗಳನ್ನು ತೆಗೆದು ಕೊಳ್ಳುತ್ತದೆ.

೧೯೭. ಈಗ ನನ್ನ ಮನಸ್ಸಿಗೆ ಏನೇನನ್ನು ಮಾಡಬೇಕೆಂಬುದೇ ತಿಳಿಯುವುದಿಲ್ಲ. ಎಲೈ ಋಷಿಯೇ ! ತಮ್ಮಂತಹವರ ದರ್ಶನವು ನಿಶ್ಚಯವಾಗಿಯೂ ವ್ಯರ್ಥವಾಗುವುದೇ ಇಲ್ಲ.

೧೯೮. ಆತ್ಮಜ್ಞಾನವನ್ನು ಬಲ್ಲ ಮುನಿಗಳ ದೇವತೆಗಳ ದರ್ಶನವು ತಾನು ಮಾಡಿದ ಪಾಪಗಳನ್ನು ನಾಶಮಾಡುತ್ತದೆ ಎಂದು ತಾವೇ ಹೇಳಿದ್ದೀರಿ.

೧೯೯-೨೦೧. ಆದರೆ ಇದೊಂದು ವಿಷಯದಲ್ಲಿ ನನಗೆ ಅಪ್ಪಣೆಯಾಗಬೇಕು. ಹೀಗೆ ಶೈಲನು ಕೇಳಲು ನಾರದನು ಸಂತೋಷಪಟ್ಟು ಅಯ್ಯಾ ! ಎಲ್ಲವನ್ನೂ ನೀನು ಮಾಡಿದ್ದೀಯೇ ಎಂದುಹೇಳಿ ಮುಂದೆ ಇಂತೆಂದನು. ಆದರೆ ದೇವತೆಗಳ ಕೆಲಸದಲ್ಲಿ ನಿನಗೂ ಈಕೆಯನ್ನು ಮಹೇಶನೊಡನೆ ಸೇರಿಸುವಿಕೆಯು ಬಹು ದೊಡ್ಡದಾದುದು. ಎಂದು ಹೇಳಿ ನಾರದನು ಸ್ವರ್ಗಕ್ಕೆ ಹೊರಟುಹೋದನು. ಅಲ್ಲಿ ದೇವೇಂದ್ರನ ಮನೆಗೆ ಹೋಗಿ ಆತನನ್ನು ನೋಡಿದನು.

ತತೋಽನುರೂಪೇ ಸ ಮುನಿರುಪವಿಷ್ಟೋ ಮಹಾಸನೇ ।
ಪೃಷ್ಟಃ ಶಕ್ರೇಣ ಪ್ರೋವಾಚ ಹಿಮಜಾಸಂಶ್ರಯಾಂ ಕಥಾಂ ॥ ೨೦೨ ॥

॥ ನಾರದ ಉವಾಚ ॥

ಯನ್ಮಹ್ಯಮುಕ್ತಂ ಕರ್ತವ್ಯಂ ತನ್ಮಯಾ ಕೃತಮೇವ ಹಿ ।
ಕಿಂತು ಪಂಚಶರಸ್ಯೇಷುಗೋಚರಂ ಸಮುಪಸ್ಥಿತಂ ॥ ೨೦೩ ॥

ಇತ್ಯುಕ್ತೋ ದೇವರಾಜಸ್ತು ಮುನಿನಾ ಕಾರ್ಯದರ್ಶಿನಾ ।
ಚೂತಾಂಕುರಾಸ್ತ್ರಂ ಸಸ್ಮಾರ ಭಗವಾನ್ಪಾಕಶಾಸನಃ ॥ ೨೦೪ ॥

ಸ ಸ್ಮೃತಸ್ತು ತದಾ ಕ್ಷಿಪ್ರಂ ಸಹಸ್ರಾಕ್ಷೇಣ ಧೀಮತಾ ।
ಉಪತಸ್ಥೇ ರತಿಯುತಃ ಸವಿಲಾಸೋ ಝುಷಧ್ವಜಃ ॥
ಪ್ರಾದುರ್ಭೂತಂ ಚ ತಂ ದೃಷ್ಟ್ವಾ ಶಕ್ರಃ ಪ್ರೋವಾಚ ಮನ್ಮಥಂ ॥ ೨೦೫ ॥

॥ ಶಕ್ರ ಉವಾಚ ॥

ಉಪದೇಶೇನ ಬಹುನಾ ಕಿಂ ತ್ವಾಂ ಪ್ರತಿ ರತಿಪ್ರಿಯ ।
ಮನೋಭವೋಽಸಿ ತೇನ ತ್ವಂ ವೇತ್ಸಿ ಭೂತಮನೋಗತಂ ॥ ೨೦೬ ॥

---

೨೦೨. ಆಗ ಋಷಿಯು ತನಗೆ ಯೋಗ್ಯವಾದ ಆಸನದಲ್ಲಿ ಕುಳಿತು ಶಕ್ರನು ಪಾರ್ವತಿಯ ವಿಷಯವನ್ನು ಕೇಳಲು ಹೇಳತೊಡಗಿದನು.

೦೦೩. ನಾರದನು ಹೇಳಿದನು– ಎಲೈ ದೇವರಾಜನೇ ! ನನಗೆ ಹೇಳಿದ ಕೆಲಸವನ್ನು ನಾನು ಮಾಡಿದೆನು. ಆದರೆ ಅವರು ಮನ್ಮಥನ ಅಸ್ತ್ರಕ್ಕೆ ಒಳಗಾಗಬೇಕಾದುದೊಂದೇ ಬೇಕಾಗಿರುವುದು.

೨೦೪. ಕಾರ್ಯವನ್ನು ತಿಳಿದ ನಾರದನು ಇಂತೆನ್ನಲು ಇಂದ್ರನು ಮನ್ಮಥನನ್ನು ಸ್ಮರಿಸಿದನು.

೨೦೫. ಸಹಸ್ರಾಕ್ಷನಾದ ಇಂದ್ರನು ಸ್ಮರಿಸಿದೊಡನೆಯೇ ಆ ಮಕರಕೇತನನಾದ ಮನ್ಮಥನು ರತಿಯೊಡನೆ ಒಡನೆಯೇ ಬಂದನು. ಬಂದ ಈ ಮನ್ಮಥನನ್ನು ನೋಡಿ ಇಂದ್ರನು ಇಂತೆಂದನು.

೨೦೬. ಶಕ್ರನು ಹೇಳಿದನು-ಎಲೈ ರತಿಪ್ರಿಯನಾದ ಕಾಮನೆ ! ನಿನಗೆ ಬಹುವಾಗಿ ಉಪದೇಶಮಾಡುವುದರಿಂದ ಪ್ರಯೋಜನವಿಲ್ಲ. ನೀನು ಮನಸ್ಸಿನಲ್ಲಿ ಹುಟ್ಟಿ ತಕ್ಕವನಾಗಿದ್ದೀಯೇ ಆದ್ದರಿಂದ ಪ್ರಾಣಿಗಳ ಮನಸ್ಸಿನಲ್ಲಿರುವುದನ್ನೆಲ್ಲಾ ತಿಳಿದಿರುತ್ತೀಯೆ.

ತದ್ಯಥಾಽನುಕ್ರಮೇಣ ತ್ವಂ ಕುರು ನಾಕಸದಾಂ ಪ್ರಿಯಂ ।
ಶಂಕರಂ ಯೋಜಯ ಕ್ಷಿಪ್ರಂ ಗಿರಿಪುತ್ರ್ಯಾ ಮನೋಭವ ॥ ೨೦೭ ॥

ಸಂಯುಕ್ತೋ ಮಧುನಾಽನೇನ ಗಚ್ಛ ರತ್ಯಾ ಸಹಾಯವಾನ್ ।
ಇತ್ಯುಕ್ತೋ ಮದನಸ್ತೇನ ಶಕ್ರೇಣ ಸ್ವಾರ್ಥಸಿದ್ಧಯೇ ॥
ಪ್ರೋವಾಚ ಪಂಚಬಾಣೋಽಥ ವಾಕ್ಯಂ ಭೀತಃ ಶತಕ್ರತುಂ ॥ ೨೦೮ ॥

॥ ಕಾಮ ಉವಾಚ ॥

ಅನಯಾ ದೇವ ಸಾಮಗ್ರ್ಯಾ ಮುನಿದಾನವಭೀಮಯಾ ।
ದುಸ್ಸಾಧ್ಯಃ ಶಂಕರೋ ದೇವಃ ಕಿಂ ನ ವೇತ್ಸಿ ಜಗತ್ಪ್ರಭೋ ॥ ೨೦೯ ॥

ತಸ್ಯ ದೇವಸ್ಯ ವೇತ್ಸಿ ತ್ವಂ ಕಾರಣಂ ಪದಮವ್ಯಯಂ ।
ಪ್ರಾಯಃ ಪ್ರಸಾದೇ ಕೋಪೇಽಪಿ ಸರ್ವಂ ಹಿ ಮಹತಾಂ ಮಹತ್ ॥ ೨೧೦ ॥

---

೨೦೭. ಎಲೈ ಮನೋಭವನೇ ! ನೀನು ನಿನಗೆ ಆದಷ್ಟು ಮಟ್ಟಿಗೆ ದೇವತೆಗಳಿಗೆ ಹಿತವನ್ನು ಮಾಡು. ಆ ಶಂಕರನನ್ನು ಪಾರ್ವತಿಯೊಡನೆ ಸೇರಿಸು.

೨೦೮. ಈ ಮಧುವನ್ನು ಕರೆದುಕೊಂಡು ರತಿಯನ್ನು ಸಹಾಯಕ್ಕಿಟ್ಟುಕೊಂಡು ಈಗ ಹೋಗು. ಇಂದ್ರನು ಸ್ವಾರ್ಥಸಿದ್ಧಿಗೋಸ್ಕರ ಇಂತೆನ್ನಲು ಮನ್ಮಥನು ಹೆದರಿದವನಾಗಿ ಶತಕ್ರತುವನ್ನು ಕುರಿತು ಇಂತೆಂದನು.

೨೦೯. ಕಾಮನು ಹೇಳಿದನು- ಎಲೈ ಇಂದ್ರನೇ ! ಮುನಿಗಳು, ದಾನವರು, ಇವರನ್ನು ಹೆದರಿಸುವ ಈ ಸಾಮಗ್ರ್ಯಗಳಿಂದ ಶಂಕರನನ್ನು ವಶಮಾಡಿಕೊಳ್ಳಲಾರೆವು ಎಂಬುದನ್ನು ನೀನು ತಿಳಿಯೆಯಾ ?

೨೧೦. ಎಲೈ ಇಂದ್ರನೇ ! ಆ ಮಹಾದೇವನ ತಪಸ್ಸಿನ ಕಾರಣವನ್ನೂ ಅವನ ಉತ್ಕೃಷ್ಟವಾದ ಸ್ಥಾನವನ್ನೂ ನೀನು ತಿಳಿದಿದ್ದೀಯೇ. ಸಾಧಾರಣವಾಗಿ ಅನುಗ್ರಹವಾಗಲಿ, ಕೋಪವಾಗಲಿ ಎಲ್ಲವೂ ದೊಡ್ಡವರದು ಬಹುವಾಗಿರುತ್ತದೆ.

**ಸರ್ವೋಪಭೋಗಸಾರಂ ಹಿ ಸೌಂದರ್ಯಂ ಸರ್ವಸಂಭವಂ ।**
**ವಿಶೇಷಂ ಕಾಂಕ್ಷತಾಂ ಶಕ್ರ ಸಾಮಾನ್ಯಾದ್ಭ್ರಂಶಿತಂ ಫಲಾತ್ ॥**
**ಶ್ರುತ್ವೈದ್ವಚನಂ ಶಕ್ರಸ್ತಮುವಾಚಾಮರೈರ್ಯುತಃ ॥ ೨೦೦ ॥**

**॥ ಶಕ್ರ ಉವಾಚ ॥**

**ವಯಂ ಪ್ರಮಾಣಂ ತೇ ತತ್ರ ರತಿಕಾಂತ ನ ಸಂಶಯಃ ।**
**ಸಂದೇಶೇನ ವಿನಾ ಶಕ್ತಿರಯಸ್ಕಾರಸ್ಯ ನೇಷ್ಯತೇ ॥ ೨೦೨ ॥**

**ಕಸ್ಯಚಿಚ್ಚ ಕ್ವಚಿದ್ದೃಷ್ಟಂ ಸಾಮರ್ಥ್ಯಂ ನ ತು ಸರ್ವತಃ ।**
**ಇತ್ಯುಕ್ತಃ ಪ್ರಯಯೌ ಕಾಮಃ ಸಖಾಯಂ ಮಧುಮಾಶ್ರಿತಃ ॥ ೨೦೩ ॥**

**ರತಿಯುಕ್ತೋ ಜಗಾಮಾಶು ಪ್ರಸ್ಥಂ ತುಹಿನಭೂಭೃತಃ ।**
**ಸ ತು ಪ್ರಾಪ್ಯಾಕರೋಚ್ಚಿಂತಾಂ ಕಾರ್ಯಸ್ಯೋಪಾಯಪೂರ್ವಿಕಾಂ ॥ ೨೦೪**

---

೨೦೧. ಎಲೈ ಇಂದ್ರನೇ ! ಸ್ವರ್ಗದಲ್ಲಿರುವ ಸೌಂದರ್ಯಗಳು ಎಲ್ಲಾ ಅನುಭವಿಸುವ ಪದಾರ್ಥಗಳ ಸಾರರೂಪವಾದುವಲ್ಲವೆ ! ಅವಕ್ಕಿಂತಲೂ ಹೆಚ್ಚನ್ನು ಅಪೇಕ್ಷಿಸಿದರೆ ಸಾಧಾರಣವಾದ ಫಲವೂ ಕೈಬಿಟ್ಟು ಹೋಗಬಹುದು. ಎನ್ನಲು ಈ ಮಾತನ್ನು ಇಂದ್ರನು ಕೇಳಿ ದೇವತೆಗಳೊಡನೆ ಸೇರಿಕೊಂಡು ಅವನನ್ನು ಕುರಿತು ಇಂತೆಂದನು.

೨೦೨. ಶಕ್ರನು ಹೇಳಿದನು- ಎಲೈ ರತಿಕಾಂತನಾದ ಮನ್ಮಥನೇ ! ಆ ವಿಷಯದಲ್ಲಿ ನಾವುಗಳು ತಿಳಿದವರು ಅದಕ್ಕೆ ಸಂಶಯವಿಲ್ಲ. ಇಕ್ಕಳವಿಲ್ಲದಿದ್ದರೆ ಸೂಜಿಗಲ್ಲಿನ ಶಕ್ತಿಯು ಗೊತ್ತಾಗುವುದಿಲ್ಲ.

೨೦೩. ಒಬ್ಬೊಬನ ಶಕ್ತಿಯು ಒಂದೊಂದು ವಿಷಯದಲ್ಲಿರುವುದೇ ಹೊರತು ಎಲ್ಲಾ ವಿಷಯದಲ್ಲಿಯೂ ಇರುವುದಿಲ್ಲ. ಎಂದು ದೇವೇಂದ್ರನು ಹೇಳಲು ಕಾಮನು ಮಧುವನ್ನು ಸಹಾಯಕ್ಕೆ ಕರೆದುಕೊಂಡು ಹೊರಟನು.

೨೦೪. ಜೊತೆಯಲ್ಲಿ ಕರೆದುಕೊಂಡು ಶೀಘ್ರವಾಗಿ ಹಿಮವತ್ಪರ್ವತದ ತಪ್ಪಲಿಗೆ ಹೋದನು. ಅಲ್ಲಿ ಈಶ್ವರನನ್ನು ನೋಡಿ ತನ್ನ ಕೆಲಸವನ್ನು ಯಾವ ಉಪಾಯದಿಂದ ಸಾಧಿಸಬಹುದೆಂಬುದನ್ನು ಯೋಚಿಸಿದನು.

ಮಹಾತ್ಮಾನೋ ಹಿ ನಿಷ್ಕಂಪಾ ಮನಸ್ತೇಷಾಂ ಸುದುರ್ಜಯಂ ।
ತದಾದಾವೇವ ಸಂಕ್ಷೋಭ್ಯ ನಿತ್ಯಂ ತಸ್ಯ ಜಯೋ ಭವೇತ್ ॥ ೨೧೫ ॥

ಸಂಸಿದ್ಧಿಃ ಪ್ರಾಯಶಶ್ಚೈವ ಪೂರ್ವಂ ಸಂಶೋಧ್ಯಮಾನಸಂ ।
ಕಥಮೇವಂ ವಿಧೈರ್ಭಾವೈರ್ದ್ವೇಷಾನುಗಮನಂ ವಿನಾ ॥ ೨೧೬ ॥

ಕ್ರೋಧಕ್ರೂರತರಾಸಂಗಾದ್ಭೀಷಣೇರ್ಷ್ಯಾಮಹಾಸಖಿ ।
ಚಾಪಲ್ಯಾನ್ಮೂರ್ಧ್ನಿ ವಿಧ್ವಸ್ತಧೈರ್ಯಾಧಾರಮಹಾಬಲಾ ॥ ೨೧೭ ॥

ತಾಮಸ್ಯ ವಿನಿಯೋಕ್ಷ್ಯಾಮಿ ಮನಸೋ ವಿಕೃತಿಂ ಪುನಃ ।
ವಿಧಾಯ ಧೈರ್ಯದ್ವಾರಾಣಿ ಸಂತೋಷಮುಪಕೃಷ್ಯ ಚ ॥ ೨೧೮ ॥

ಅವಗಂತುಂ ಹಿ ಮಾಂ ತತ್ರ ನ ಕಶ್ಚಿದಿಹ ಪಂಡಿತಃ ।
ವಿಕಲ್ಪಮಾತ್ರಸಂಸ್ಥಾನಂ ವಿರೂಪಾಕ್ಷಂ ಮನೋಭವಃ ॥ ೨೧೯ ॥

---

೨೧೫. ಮಹಾತ್ಮರು ಚಲಿಸತಕ್ಕವರಲ್ಲ. ಆದರೆ ಅವರಿಗೂ ಮನಸ್ಸನ್ನು ಜಯಿಸಲಾಗುವುದಿಲ್ಲ. ಆದ್ದರಿಂದ ಆವನ ಮನಸ್ಸನ್ನು ನಾನು ಮೊದಲೇ ಅಲ್ಲೋಲ ಕಲ್ಲೋಲವಾಗುವಂತೆ ಅಲ್ಲಾಡಿಸಿದರೆ ಆಗ ನನಗೆ ಜಯವು ಸಿಕ್ಕಿಯೇ ಸಿಕ್ಕುತ್ತದೆ.

೨೧೬. ಸಾಧಾರಣವಾಗಿ ಸಿದ್ಧಿಯು ದೊರಕಿಯೇ ದೊರಕುತ್ತದೆ. ಮೊದಲು ಆತನ ಮನಸ್ಸನ್ನು ಪರೀಕ್ಷಿಸುತ್ತೇನೆ. ಒಬ್ಬನಲ್ಲಿ ದ್ವೇಷವಿಲ್ಲದಿದ್ದರೆ ಅವನ ಮೇಲೆ ದ್ವೇಷಭಾವಗಳನ್ನು ಹೇಗೆ ಉಪಯೋಗಿಸುವುದು ?

೨೧೭. ಕ್ರೋಧದ ಕೆಟ್ಟ ಸಹವಾಸದಿಂದ ಭೀಷಣ(ಭಯ) ಹೊಟ್ಟೆಕಿಚ್ಚುಗಳು ಹುಟ್ಟುತ್ತವೆ. ಚಪಲತೆಯಿಂದ ಧೈರ್ಯ, ಬಲಗಳು ನಾಶವಾಗುತ್ತವೆ.

೨೧೮. ಆದ್ದರಿಂದ ನಾನೀಗ ಧೈರ್ಯದ ಬಾಗಿಲುಗಳನ್ನು ಮುಚ್ಚಿ ಸಂತೋಷ ವನ್ನು ನಾಶಮಾಡಿ ಮನಸ್ಸು ವಿಕೃತಿಯಾಗುವ ರೀತಿಯನ್ನು ಮೊದಲು ಇವನಲ್ಲಿ ಪ್ರಯೋಗಿಸುತ್ತೇನೆ. ಈ ವಿಷಯದಲ್ಲಿ ನನ್ನನ್ನು ತಿಳಿಯಲು ಯಾವನೂ ಗಟ್ಟಿಗ ನಾಗುವುದಿಲ್ಲ.

೨೧೯-೨೨೦. ತನ್ನ ವಿಕಲ್ಪಕ್ಕೆ ಗುರಿಯಾಗಿರುವ ವಿರೂಪಾಕ್ಷನನ್ನು ನೋಡಿ ಮನ್ಮಥನು ತನ್ನ ಕೆಲಸವನ್ನು ಮೊದಲುಮಾಡುವುದಕ್ಕೆ ಯೋಚಿಸಿ ತಪಸ್ಸಿನಲ್ಲಿರುವ

ಪ್ರವಿಶ್ಯಾಥ ಕ್ರಿಯಾರಂಭೀ ಗಂಭೀರಾವರ್ತದುಸ್ತರಃ ।
ಭವಿಷ್ಯಾಮಿ ಹರಸ್ಯಾಹಂ ತಪಸ್ಥಸ್ಯ ಸ್ಥಿರಾತ್ಮನಃ ॥ ೨೨೦ ॥

ಇಂದ್ರಿಯಗ್ರಾಮಮಾವೃತ್ಯ ರಮ್ಯಸಾಧನ ಸಂವಿಧಿಃ ।
ಚಿಂತಯಿತ್ವೇತಿ ಮದನೋ ಭೂತಭರ್ತುಸ್ತದಾಶ್ರಮಂ ॥ ೨೨೧ ॥

ಜಗಾಮ ಜಗತೀಸಾರಂ ಸರಲದ್ರುಮವೇದಿಕಂ ।
ಶಾತಸತ್ತ್ವಸಮಾಕೀರ್ಣಮಚಲಂ ಪ್ರಾಣಿಸಂಕುಲಂ ॥ ೨೨೨ ॥

ನಾನಾಪುಷ್ಪಲತಾಜಾಲಂ ಸಾನುಸಂಸ್ಥಗಣೇಶ್ವರಂ ।
ನಿರ್ವ್ಯಗ್ರವೃಷಭಾಘುಷ್ಟಂ ನೀಲಶಾದ್ವಲಸಾನುಕಂ ॥ ೨೨೩ ॥

ತತ್ರಾಪಶ್ಯತ್ತ್ರಿನೇತ್ರಸ್ಯ ರಮ್ಯಂ ಕಂಚಿದ್ದ್ವಿತೀಯಕಂ ।
ವೀರಕಂ ವೀರಲೋಕೇಶಮೀಶಾನಸದೃಶದ್ಯುತಿಂ ॥ ೨೨೪ ॥

---

ಸ್ಥಿರನಾದ ಆ ಹರನಿಗೆ ತನ್ನ ಗಾಂಭೀರ್ಯದಿಂದ ಕೆಲಸಸಾಧನೆಯನ್ನು ಮಾಡಿಕೊಳ್ಳು ತ್ತೇನೆಂದು ಯೋಚಿಸಿದನು.

೨೨೧-೨೨೩. ಇಂದ್ರಿಯಗಳನ್ನೆಲ್ಲವನ್ನೂ ಆವರಿಸಿಕೊಳ್ಳುವ ಮನೋಹರವಾದ ಸಾಧನವಾಗಳುಳ್ಳವನಾಗಿ ಈ ರೀತಿ ಯೋಚಿಸುತ್ತ ಮದನನು ಪ್ರಾಣಿಗಳ ಒಡೆಯ ನಾದ ಈಶ್ವರನ ಆಶ್ರಯವನ್ನು ಹೊಂದಿದನು. ಆ ಆಶ್ರಮವು ಪ್ರಪಂಚಕ್ಕೇ ಸಾರ ಭೂತವಾಗಿಯೂ, ಸರಳ ಮರಗಳ ವೇದಿಕೆಯುಳ್ಳದ್ದಾಗಿಯೂ, ವೈರವನ್ನು ಬಿಟ್ಟ ಪ್ರಾಣಿಗಳಿಂದ ಕೂಡಿದುದಾಗಿಯೂ ಸತ್ವಗುಣವು ಸಾಣೆಯನ್ನು ಹಿಡಿದಂತಿರುವುದಾಗ ಯೂ, ಬಗೆಬಗೆಯ ಹೂವು ಬಳ್ಳಿಗಳಿಂದ ಕೂಡಿರುವುದಾಗಿಯೂ ತಪ್ಪಲು ಪ್ರದೇಶದಲ್ಲಿ ಗಣೇಶನಿರುವುದಾಗಿಯೂ ಒಂದೇ ಮನಸ್ಸಿನಿಂದ ಕುಳಿತಿರುವ ಬಸವನು ಗುಟುರು ಹಾಕುತ್ತಿರುವುದಾಗಿಯೂ ಹಸುರಾಗಿರುವ ಹುಲ್ಲಿನಿಂದ ಕೂಡಿರುವುದಾಗಿಯೂ, ತಪ್ಪ ಲುಗಳು ರಮ್ಯವಾಗಿಯೂ ಇತ್ತು. ಇಂತಹ ಆ ಈಶ್ವರನ ಆಶ್ರಮವನ್ನು ನೋಡಿ ದನು. ಅಲ್ಲಿ ಈಶ್ವರನೊಡನೆ ಇದ್ದ ವೀರಕನನ್ನೂ ನೋಡಿದನು.

೨೨೪-೨೨೫. ಅಲ್ಲಿ ವೀರರಿಗೆಲ್ಲಾ ಯಜಮಾನನಾದ ಈಶ್ವರನಿಗೆ ಸಮವಾದ ತೇಜಸ್ಸುಳ್ಳ ಹಣ್ಣಾಗಿರುವ ಕುಂಕುಮಕೇಸರೀ ಹೂವಿನ ಗುಂಪಿನಂತೆ ಹೊಂಬಣ್ಣವಾದ

ಪಕ್ವಕುಂಕುಮಕಿಂಜಲ್ಕಪುಂಜಪಿಂಗಜಟಾಸಟಂ ।
ವೇತ್ರಪಾಣಿಂ ತಮುವ್ಯಗ್ರಮುಗ್ರತಾಭದ್ರಭೂಷಣಂ ॥ ೨೨೫ ॥

ತತೋ ನಿಮೀಲಿತೋನ್ನಿದ್ರಪದ್ಮಪತ್ರಾಂತಲೋಚನಂ ।
ಪ್ರೇಕ್ಷಮಾಣಮೃಜುಸ್ಥಾನಂ ನಾಸಾವಂಶಾಗ್ರಗೋಚರಂ ॥ ೨೨೬ ॥

ಅತೀವರಮ್ಯಸಿಂಹೇಂದ್ರಚರ್ಮಲಂಬೋತ್ತರೀಯಕಂ ।
ಶ್ರವಣಾಹಿಫಣೋನ್ಮುಕ್ತನಿಶ್ವಾಸಾನಲಪಿಂಗಲಂ ॥ ೨೨೭ ॥

ಪ್ರೇಂಖತ್ಕಪೋಲಪರ್ಯಂತಚುಂಬಿಲಂಬಿಜಲಾಚಯಂ ।
ಕೃತವಾಸುಕಿಪರ್ಯಂತನಾಭಿಮೂಲನಿವೇಶಿತಂ ॥ ೨೨೮ ॥

ಬ್ರಹ್ಮಾಂಜಲಿಸ್ಥಿರಾಸಾಗ್ರನಿಬದ್ಧೋರಗಭೂಷಣಂ ।
ದದರ್ಶ ಶಂಕರಂ ಕಾಮಃ ಕ್ರಮಪ್ರಾಪ್ತಾಂತಿಕಃ ಶನೈಃ ॥ ೨೨೯ ॥

ತತೋ ಭ್ರಮರಹುಂಕಾರಮಾಲಂಬ್ಯ ದ್ರುಮಸಾನುಕಂ ।
ಪ್ರವಿಷ್ಟಃ ಕರ್ಣರಂಧ್ರೇಣ ಭವಸ್ಯ ಮದನೋ ಮನಃ ॥ ೨೩೦ ॥

---

ಜಟೆಗಳ ಗುಂಪುಳ್ಳ, ಬೆತ್ತವನ್ನು ಹಿಡಿದಿರುವ, ಜೋಪಾನದಿಂದಿರುವ, ಉಗ್ರವಾಗಿದ್ದರೂ ಒಳ್ಳೆಯತನದ ಆಕಾರವುಳ್ಳ ವೀರಕನನ್ನು ನೋಡಿದನು.

೨೨೬-೨೨೭. ಅನಂತರ ಸ್ವಲ್ಪ ಮುಚ್ಚಿಕೊಂಡಿರುವ, ಊರ್ಧ್ವವಾದ ಕಣ್ಣುಗಳುಳ್ಳ ಮೂಗಿನ ಕಂಬದ ತುದಿಯಲ್ಲಿರುವ ಸ್ಥಾನವನ್ನು ನೊಡುತ್ತಿರುವ, ಚೆನ್ನಾಗಿರುವ ಸಿಂಹದ ಚರ್ಮವನ್ನು ಹೊದ್ದಿರುವ, ಕಿವಿಯ ಮೇಲಿರುವ ಹಾವಿನ ಬಿಸಿಯಾದ ಉಸಿರಿನಿಂದ ಹೊಂಬಣ್ಣವಾಗಿರುವ ಆ ಶಿವನನ್ನು ನೋಡಿದನು.

೨೨೮-೨೨೯. ಕಪೋಲಗಳ ಸುತ್ತಲೂ ಇಳಿಬಿದ್ದು, ಅಲ್ಲಾಡುತ್ತಿರುವ ಜಟೆಗಳುಳ್ಳ, ವಾಸುಕಿಯಿಂದ ಕಟ್ಟಿಕೊಂಡಿರುವ ಯೋಗಪಟ್ಟಿವುಳ್ಳ ಬ್ರಹ್ಮಾಂಜಲಿಯನ್ನು ಹಿಡಿದಿರುವ, ಭುಜದ ಮೇಲೆ ಹೆಡೆ ಬಿಟ್ಟುಕೊಂಡಿರುವ ಸರ್ಪಗಳುಳ್ಳ ಶಂಕರನನ್ನು ಕಾಮನು ನೋಡಿ ಮೆಲ್ಲಮೆಲ್ಲನೆ ಹತ್ತಿರಕ್ಕೆ ಹೋದನು.

೨೩೦. ಆಗ ಮದನನು ಸಾನುಪ್ರದೇಶದಲ್ಲಿರುವ ಭ್ರಮರದ ಹುಂಕಾರವನ್ನು ಆಶ್ರಯಿಸಿಕೊಂಡು ಈಶ್ವರನ ಮನಸ್ಸನ್ನು ಕಿವಿಯ ಮೂಲಕ ಹೊಕ್ಕನು.

ಶಂಕರಸ್ತಮಥಾಽಕರ್ಣ್ಯ ಮಧುರಂ ಮದನಾಶ್ರಯಂ ।
ಸಸ್ಮಾರ ದಕ್ಷದುಹಿತಾಂ ದಯಿತಾಂ ರಂತುಮಾನಸಃ ॥ ೨೩೧ ॥

ತತಃ ಸಾ ತಸ್ಯ ಶನಕೈಸ್ತಿರೋಧಾಯಾತಿನಿರ್ಮಲಾ ।
ಸಮಾಧಿಭಾವನಾ ತಸ್ಥೌ ಲಕ್ಷ್ಯಪ್ರತ್ಯಕ್ಷರೂಪಿಣೀ ॥ ೨೩೨ ॥

ತತಸ್ತನ್ಮಯತಾಂ ಯಾತಃ ಪ್ರತ್ಯೂಹಪಿಹಿತಾಶಯಃ ।
ವಿವೇಶ ವಿಬುಧಾಧೀಶೋ ವಿಕೃತಿಂ ಮದನಾತ್ಮಿಕಾಂ ॥ ೨೩೩ ॥

ಈಷತ್ಕ್ರೋಧಸಮಾವಿಷ್ಟೋ ಧೈರ್ಯಮಾಲಂಬ್ಯ ಧೂರ್ಜಟಿಃ ।
ನಿರಸ್ಯ ಮದನಂ ಸ್ಥಿತ್ವಾ ಯೋಗಮಾಯಾಸಮಾವೃತಂ ॥ ೨೩೪ ॥

ಸ ತಯಾ ಮಾಯಯಾಽವಿಷ್ಟೋ ಜಜ್ವಾಲ ಮದನಸ್ತತಃ ।
ಇಚ್ಛಾಶರೀರೋ ದುರ್ಜ್ಞೇಯೋ ದೋಷಾವಾಸೋ ಮಹಾಶಯಃ ॥೨೩೫॥

---

೨೩೧ ಶಂಕರನು ಮನ್ಮಥನಿಗೆ ಆಶ್ರಯವಾದ ಆ ಮಧುರ ಶಬ್ದವನ್ನು ಕೇಳಿ ರಮಿಸಲು ಇಚ್ಛೆಯುಳ್ಳವನಾಗಿ ದಕ್ಷನ ಮಗಳನ್ನು ಜ್ಞಾಪಕಕ್ಕೆ ತಂದುಕೊಂಡನು.

೨೩೨. ಆಗ ಆಕೆಯು ನಿದಾನವಾಗಿ ಸಮಾಧಿಭಾವನೆಯಲ್ಲಿ ಪ್ರತ್ಯಕ್ಷವಾಗಿ ಗುರಿಯಾಗಿ ಬಂದು ನಿಂತಳು.

೨೩೩. ತಪಸ್ಸಿಗೆ ಬಂದಿರುವ ವಿಘ್ನಗಳನ್ನು ಮನಸ್ಸಿಗೆ ತಂದುಕೊಳ್ಳದೇನೆ ಆಕೆಯ ಸ್ವರೂಪವನ್ನೇ ಧ್ಯಾನದಿಂದ ಹೊಂದಿದನು. ಅನಂತರ ಮನ್ಮಥಸಂಬಂಧವಾದ ವಿಕಾರವನ್ನೂ ಹೊಂದಿದನು.

೨೩೪. ಒಡನೆಯೇ ಆ ಶಂಕರನು, ಧೈರ್ಯವನ್ನು ಹೊಂದಿ ಸ್ವಲ್ಪ ಕೋಪವನ್ನೂ ಹೊಂದಿ ಯೋಗಮಾಯೆಯಿಂದ ಆ ಮದನ ವಿಕಾರವನ್ನು ನಾಶಪಡಿಸಿಕೊಂಡನು.

೨೩೫. ಇಚ್ಛಾಶರೀರವುಳ್ಳ ತಿಳಿಯಲು ಆಗದಿರುವ ದೋಷಗಳಿಗೆ ಆ ವಾಸಸ್ಥಾನವಾದ ಆ ಮದನನು ಆ ಮಾಯೆಯಿಂದ ಕೂಡಿಕೊಂಡು ಕೋಪದಿಂದ ತನ್ನ ಕೆಲಸವನ್ನು ಸಾಧಿಸಲುಪಕ್ರಮಿಸಿದನು.

ಹೃದಯಾನ್ನಿರ್ಗತಃ ಸೋಽಥ ವಾಸನಾವ್ಯಸನಾತ್ಮಕಃ ।
ಬಹಿಸ್ಸ್ಥಲಂ ಸಮಾಸಾದ್ಯ ಉಪತಸ್ಥೇ ಝಷಧ್ವಜಃ ॥ ೨೩೬ ॥

ಅನುಯಾತೋ ಹಿ ಸಾಹ್ಯೇನ ಮಿತ್ರೇಣ ಮಧುನಾ ಸಹ ।
ಸಹಕಾರತರೋರ್ದೃಷ್ಟ್ವಾ ಮಂದಮಾರುತನಿರ್ಧುತಂ ॥ ೨೩೭ ॥

ಸ್ತಬಕಂ ಮದನೋ ರಮ್ಯಂ ಹರವಕ್ಷಸಿ ಸತ್ವರಂ ।
ಮುಮೋಚ ಮೋಹನಂ ನಾಮ ಮಾರ್ಗಣಂ ಮಕರಧ್ವಜಃ ॥ ೨೩೮ ॥

ಸ ತಸ್ಯ ಹೃದಯೇ ಶುದ್ಧೇ ನಾಮಶಾಲಿ ಮಹಾಶರಃ ।
ಪಪಾತ ಪರುಷಃ ಪ್ರಾಂಶುಃ ಪುಷ್ಪಬಾಣೋ ವಿಮೋಹನಃ ॥ ೨೩೯ ॥

ತತಃಕರಣಸಂದೋಹೇ ವಿದ್ಧೇ ತು ಹೃದಯೇ ಭವಃ ।
ಬಭೂವ ಭೂತಪೋಽಕಂಪೋಽಧೈರ್ಯೋಽಪಿ ಮದನೋನ್ಮುಖಃ ॥ ೨೪೦ ॥

---

೨೩೬. ಸಂಸಾರದ ವಿಷಯುವೇ ಯಾವಾಗಲೂ ಯೋಚನೆಯಾಗಿ ಉಳ್ಳ ಆ ಕಾಮನು ಶಿವನ ಹೃದಯದಿಂದ ಹೊರಕ್ಕೆ ಹೊರಟು ಹೊರಗಿನ ಸ್ಥಳದಲ್ಲಿ ಬಂದು ನಿಂತನು.

೨೩೭–೨೩೮. ಹೊರಕ್ಕೆಬಂದು ಸ್ನೇಹಿತನಾದ ಮಧುವಿನೊಡನೆ ಸೇರಿಕೊಂಡು ಅಲ್ಲಿದ್ದ ಶೀಮಾವಿನ ಮರದ, ಮಂದ ಮಾರುತದಿಂದ ಸ್ವಲ್ಪವಾಗಿ ಅಲ್ಲಾಡುತ್ತಿರುವ ರಮ್ಯವಾಗಿರುವ, ಹೂಗೊಂಚಲನ್ನು ಆಶ್ರಯಿಸಿಕೊಂಡು ಮೋಹನವೆಂಬ ಬಾಣವನ್ನು ಶಿವನ ಎದೆಗೆ ಗುರಿ ಕಟ್ಟಿ ಹೊಡೆದನು.

೨೩೯. ಮನ್ಮಥನ ಹೆಸರನ್ನು ಬರೆದಿರುವ, ಕ್ರೂರವಾಗಿಯೂ, ಉತ್ತಮವಾಗಿಯೂ, ಇರುವ, ಮೋಹನವೆಂಬ ಆ ಪುಷ್ಪಬಾಣವು ಆ ಈಶ್ವರನ ಶುದ್ಧವಾದ ಹೃದಯಪ್ರದೇಶದಲ್ಲಿ ಬಿದ್ದಿತು.

೨೪೦. ಆಗ ಇಂದ್ರಿಯಗಳ ಗುಂಪಿಗೆ ಸ್ಥಾನವಾದ ಹೃದಯದಲ್ಲಿ ಹೊಡೆಯಲು ಭೂತಪತಿಯಾದ ಶಿವನು ಕಂಪಿಸದಿದ್ದರೂ ಧೈರ್ಯಗೆಟ್ಟು ಮದನಬಾಧೆಗೆ ಗುರಿಯಾದನು.

ತತಃ ಪ್ರಭುತ್ವಾದ್ಭಾವಾನಾಮಾವೇಶಂ ಸ್ವಮುಪಶ್ಯತ ।
ವಾಕ್ಯಂ ಬಹು ಬಭಾಷೇಽಥ ಪ್ರತ್ಯೂಹಪ್ರಸವಾತ್ಮಕಂ ॥ ೨೪೧ ॥

ತತಃ ಕೋಪಾನಲೋದ್ಭೂತಘೋರಹುಂಕಾರಭೀಷಣೇ ।
ಬಭೂವ ವದನೇ ನೇತ್ರಂ ತೃತೀಯಮನಲಾಕುಲಂ ॥ ೨೪೨ ॥

ರುದ್ರಸ್ಯ ರೌದ್ರವಪುಷೋ ಜಗತ್ಸಂಹಾರಭೈರವಂ ।
ತದಂತಿಕಸ್ಥೇ ಮದನೇ ವ್ಯಸ್ಫಾರಯತ ಧೂರ್ಜಟಿಃ ॥ ೨೪೩ ॥

ತನ್ನೇತ್ರವಿಸ್ಫುಲಿಂಗೇನ ಕ್ರೋಶತಾಂ ನಾಕವಾಸಿನಾಂ ।
ಗಮಿತೋ ಭಸ್ಮತಾಂ ತೂರ್ಣಂ ಕಂದರ್ಪಃ ಕಾಮದರ್ಪಕಃ ॥ ೨೪೪ ॥

ಸ ತು ತಂ ಭಸ್ಮಸಾತ್ಕೃತ್ವಾ ಹರನೇತ್ರೋದ್ಭವೋಽನಲಃ ।
ವ್ಯಜೃಂಭತ ಜಗದ್ದಗ್ಧುಂ ಜ್ಞಾತ್ವಾ ಹುಂಕಾರಘಸ್ಮರಂ ॥ ೨೪೫ ॥

---

೨೪೧. ಆಗ ಭಾವಗಳನ್ನು ನಿಗ್ರಹಿಸಲಬಲ್ಲ ಆ ಸ್ವಾಮಿಯು ತನ್ನ ಪರಾಧೀನತೆಯನ್ನು ತಿಳಿದು ವಿಘ್ನಕಾರಿಯಾದ ಅನೇಕ ಮಾತುಗಳನ್ನು ಆಡಿದನು.

೨೪೨. ಅನಂತರ ಶಿವನು ಕೋಪಾಗ್ನಿಯಿಂದ ಕೂಡಿ ಭಯಂಕರವಾದ ಹುಂಕಾರ ಮಾಡಿ ತನ್ನ ಮುಖದಲ್ಲಿರುವ ಮೂರನೆಯ ಕಣ್ಣನ್ನು ಬೆಂಕಿಯಿಂದ ಕೆಂಪಗೆ ಮಾಡಿದನು.

೨೪೩. ಭಯಂಕರನಾದ ಆ ರುದ್ರನು ಜಗತ್ತನ್ನೇ ಸಂಹಾರಮಾಡುವ ಆ ಭಯಂಕರವಾದ ಕಣ್ಣನ್ನು ಹತ್ತಿರದಲ್ಲಿಯೇ ಇರುವ ಮನ್ಮಥನ ಮೇಲೆ ಹಾರಿಸಿದನು. (ಆ ಕಡೆಗೆ ಬಿಟ್ಟನು.)

೨೪೪. ಆ ಕಣ್ಣಿನ ಬೆಂಕಿಯ ಕಿಡಿಗಳನ್ನು ನೋಡಿ ದೇವತೆಗಳು ದುಃಖಗೊಳ್ಳಲು ಆಗ ಆ ಕಿಡಿಯಿಂದ ಮನ್ಮಥನು ಭಸ್ಮವಾದನು.

೨೪೫. ಹರನ ಕಣ್ಣಿನಿಂದ ಹುಟ್ಟಿದ ಬೆಂಕಿಯು ಆ ಮನ್ಮಥನನ್ನು ಭಸ್ಮವನ್ನಾಗಿ ಮಾಡಿ ಹರನು ಮಾಡಿದ ಹುಂಕಾರದಿಂದ ಅವನ ಆಶ್ರಯವನ್ನು ತಿಳಿದು ಪ್ರಪಂಚವನ್ನೇ ದಹಿಸಲು ದೊಡ್ಡದಾಯಿತು.

ತತೋ ಭವೋ ಜಗದ್ಧೇತೋರ್ವ್ಯಭಜಜ್ಞಾತವೇದಸಂ ।
ಸಹಕಾರೇ ಮಧೌ ಚಂದ್ರೇ ಸುಮನಸ್ಸ್ವಪರೇಷ್ವಪಿ ॥ ೨೪೬ ॥

ಭೃಂಗೇಷು ಕೋಕಿಲಾಸ್ಯೇ ಚ ವಿಭಾಗೇನ ಸ್ಮರಾನಲಂ ।
ಸ ಬಾಹ್ಯಾಭ್ಯಂತರೇ ವಿದ್ಧೋ ಹರೋಽಥ ಸ್ಮರಮಾರ್ಗಣೈಃ ॥ ೨೪೭ ॥

ಭಾಗೇಷ್ವೇತೇಷು ಸಂವಿಷ್ಟಂ ವೀಕ್ಷತೀವ ಹುತಾಶನಂ ।
ವಿಭಕ್ತಂ ಲೋಕಸಂಕ್ಷೋಭಕರಂ ದುರ್ವಾರಜೃಂಭಿತಂ ॥ ೨೪೮ ॥

ತತ್ಪ್ರಾಪ್ತಿಸ್ನೇಹಸಂಪೂರ್ಣಂ ಕಾಮೇನ ಹೃದಯೇ ಕಿಲ ।
ಜ್ವಲನ್ನಹರ್ನಿಶಂ ಭೀಮೋ ದುಃಖಸ್ಯ ವಶಗೋಽಭವತ್ ॥ ೨೪೯ ॥

ವಿಲೋಕ್ಯ ಹರಹುಂಕಾರಜ್ವಾಲಾಭಸ್ಮೀಕೃತಂ ಸ್ಮರಂ ।
ವಿಲಲಾಪ ರತಿಃ ಕ್ರೂರಂ ಬಂಧುನಾ ಮಧುನಾ ಸಹ ॥ ೨೫೦ ॥

---

೨೪೬–೨೪೮. ಆಗ ಈಶ್ವರನು ಜಗತ್ತನ್ನೂ ನಾಶವಾಗದಂತೆ ಉಳಿಸಲು ಆ ಮನ್ಮಥನನ್ನು, ಸುಡುತ್ತಿರುವ ಬೆಂಕಿಯನ್ನು, ಶೀಮಾವಿನಮರ, ವಸಂತ, ಚಂದ್ರ, ಮಿಕ್ಕ ಹೂಗಳು, ದುಂಬಿಗಳು, ಕೋಗಿಲೆಯ ಮುಖ, ಇವುಗಳಲ್ಲಿ ವಿಭಾಗ ಮಾಡಿ ಇಟ್ಟನು. ಹರನೂ ಕೂಡ ಆ ಮನ್ಮಥನ ಬಾಣಗಳಿಂದ ಒಳಗೂ ಹೊರಗೂ ನೋವನ್ನು ಹೊಂದಿದವನಾಗಿ ಲೋಕವನ್ನು ನಾಶಮಾಡಿಬಿಡುವಂತಹ ಹತ್ತಿಕೊಂಡು ಉರಿಯುತ್ತಿರುವ, ಮೇಲೆ ಹೇಳಿದಂತೆ ಭಾಗ ಮಾಡಿರುವ, ಸ್ಥಳಗಳಲ್ಲಿ ಅಗ್ನಿಯನ್ನು ನೋಡುತ್ತಿರುವಂತೆ ಇದ್ದನು.

೨೪೯. ಆ ದಕ್ಷನ ಮಗಳಲ್ಲಿ ಸ್ನೇಹದಿಂದ ಕೂಡಿದ ಇಚ್ಛೆಯುಳ್ಳವನಾಗಿ ಹೃದಯದಲ್ಲಿ ಯಾವಾಗಲೂ ಆ ದುಃಖದಿಂದ ಕೂಡಿ ಆ ದುಃಖಕ್ಕೆ ಅಧೀನನಾದನು. ಮತ್ತು ಆ ಮೋಹದಿಂದಲೇ ಕೋಪವುಳ್ಳವನೂ ಆದನು.

೨೫೦. ಹರನ ಹುಂಕಾರದ ಜ್ವಾಲೆಯಿಂದ ಬೂದಿಯಾದ ಮನ್ಮಥನನ್ನು ನೋಡಿ ರತಿಯು ಬಂಧುವಾದ ಮಧುವಿನೊಡನೆ ಬಹುವಾಗಿ ದುಃಖಿಸಿದಳು.

ತತೋ ವಿಲಪ್ಯ ಬಹುಶೋ ಮಧುನಾ ಪರಿಸಾಂತ್ವಿತಾ ।
ಜಗಾಮ ಶರಣಂ ದೇವಮಿಂದುಮೌಲಿಂ ತ್ರಿಲೋಚನಂ ॥ ೨೫೧ ॥

ಭೃಂಗಾನುಯಾತಾಂ ಸಂಗೃಹ್ಯ ಪುಷ್ಪಿತಾಂ ಸಹಕಾರಜಾಂ ।
ಲತಾಂ ಪತ್ರದ್ರುಮಾಚ್ಛನ್ನಾಂ ಜಾತಾಂ ಪರಭೃತಾಂ ಸಖೀಂ ॥ ೨೫೨ ॥

ನಿಬಧ್ಯ ತು ಜಟಾಜೂಟಂ ಕುಟಿಲೈರಲಕೈ ರತಿಃ ।
ಉದ್ಧ್ವಳ್ಯ ಗಾತ್ರಂ ಶುಭ್ರೇಣ ಹೃದ್ಯೇನ ಸ್ಮರಭಸ್ಮನಾ ॥ ೨೫೩ ॥

ಜಾನುಭ್ಯಾಮನೀಂ ಗತ್ವಾ ಪ್ರೋವಾಚೇಂದುವಿಭೂಷಣಂ । ॥ ೨೫೪ ॥

॥ ರತಿರುವಾಚ ॥

ನಮಃ ಶಿವಾಯಾಸ್ತು ಮನೋಮಯಾಯ ।
ಜಗನ್ಮಯಾಯಾದ್ಭುತವರ್ತ್ಮನೇ ನಮಃ ॥
ನಮಃ ಶಿವಾಯಾಸ್ತು ಸುರಾರ್ಚಿತಾಯ ।
ತುಭ್ಯಂ ಸದಾ ಭಕ್ತಕೃಪಾಪರಾಯ ॥ ೨೫೫ ॥

---

೨೫೧. ರತಿಯು ಬಹುವಾಗಿ ಅತ್ತು ಮಧುವು ಸಮಾಧಾನ ಮಾಡಲು ಅನಂತರ ಇಂದುಮೌಳಿಯೂ ಮುಕ್ಕಣ್ಣನೂ ಆದ ಆ ಈಶ್ವರನನ್ನು ಶರಣು ಹೊಂದಿದಳು.

೨೫೨–೨೫೪. ಆಗ ರತಿಯು ದುಂಬಿಗಳು ಅನುಸರಿಸುತ್ತಿರುವ, ಎಲೆಯಿಂದ ಮುಚ್ಚಿಕೊಂಡಿರುವ, ಶೀಮಾವಿನ ಮರದ ಕೊಂಬೆಯನ್ನು ಕೈಯಲ್ಲಿ ಹಿಡಿದುಕೊಂಡು ಕೋಗಿಲೆಯಂತಿರುವ ಮುಂಗುರುಗಳನ್ನು ಮೇಲಕ್ಕೆ ಎತ್ತಿ ಕಟ್ಟಿಕೊಂಡು ಆ ಮನ್ಮಥನ ಬೂದಿಯನ್ನೇ ಮೈಗೆಲ್ಲಾ ಬಳಿದುಕೊಂಡು ಮೊಣಕಾಲುಗಳನ್ನು ಊರಿಕೊಂಡು ವಿನಯದಿಂದ ಶಿವನಿಗಿಂತೆಂದಳು.

೨೫೫. ರತಿಯು ಹೇಳಿದಳು– ಮನಸ್ಸಿನ ವಿಕಾರನಾದ ಶಿವನಿಗೆ ನಮಸ್ಕಾರವು. ಆಶ್ಚರ್ಯಕರವಾದ ರೀತಿಯಲ್ಲಿರುವ ಶಿವನಿಗೆ ನಮಸ್ಕಾರವು. ದೇವತೆಗಳಿಂದ ಪೂಜ್ಯನಾದ ಶಿವನಿಗೆ ನಮಸ್ಕಾರವು. ಭಕ್ತರಲ್ಲಿ ಕೃಪೆಯುಳ್ಳ ಶಿವನಿಗೆ ನಮಸ್ಕಾರವು.

ನಮೋ ಭವಾಯಾಸ್ತು ಭವೋದ್ಭವಾಯ ।
ನಮೋಽಸ್ತು ತೇ ಧ್ವಸ್ತಮನೋಭವಾಯ ॥
ನಮೋಽಸ್ತು ಮಾಯಾಗಹನಾಶ್ರಯಾಯ ।
ನಮೋ ನಿಸರ್ಗಾಮಲಭೂಷಿತಾಯ ॥ ೨೫೬ ॥

ನಮೋಽಸ್ತ್ವಮೇಯಾಯ ಗುಣಾಯನಾಯ ।
ನಮೋಽಸ್ತು ಸಿದ್ಧಾಯ ಪುರಾತನಾಯ ॥
ನಮಶ್ಶರಣ್ಯಾಯ ನಮೋ ಗುಣಾಯ ।
ನಮೋಽಸ್ತು ತೇ ಭೀಮಗಣಾನುಗಾಯ ॥ ೨೫೭ ॥

ನಮೋಽಸ್ತು ನಾನಾಭುವನದ್ಧಿಕರ್ತ್ರೇ ।
ನಮೋಽಸ್ತು ಭಕ್ತಾಭಿಮತಪ್ರದಾಯ ॥
ನಮೋಥ ಕರ್ಮಪ್ರಸವೇ ನಮಃ ಸದಾ ।
ಅನಂತರೂಪಾಯ ಸದೈವ ತುಭ್ಯಂ ॥ ೨೫೮ ॥

---

೨೫೬. ಮಂಗಳಕರನಾದ ಭವನಿಗೆ ನಮಸ್ಕಾರವು. ಮನ್ಮಥನಾಶಕನಾದ ಈಶ್ವರನಿಗೆ ನಮಸ್ಕಾರವು. ಮಾಯಾಟವಿಯನ್ನು ಆಶ್ರಯಿಸಿದ ಈಶನಿಗೆ ನಮಸ್ಕಾರವು. ಪವಿತ್ರವಾದುವುಗಳಿಂದ ಭೂಷಿತನಾದ ಭವನಿಗೆ ನಮಸ್ಕಾರವು.

೨೫೭. ಉತ್ಕೃಷ್ಟವಾದ ಗುಣವುಳ್ಳ ನಿನಗೆ ನಮಸ್ಕಾರವು. ಸಿದ್ಧನೂ, ಪೂರ್ವಿಕನೂ ಆದ ನಿನಗೆ ನಮಸ್ಕಾರವು. ರಕ್ಷಕನಾದ ನಿನಗೆ ನಮಸ್ಕಾರವು. ಗುಣಿಯಾದ ನಿನಗೆ ನಮಸ್ಕಾರವು. ಭಯಂಕರವಾದ ಗುಣಗಳಿಂದ ಕೂಡಿರುವ ನಿನಗೆ ನಮಸ್ಕಾರವು.

೨೫೮. ಅನೇಕವಾದ ಪ್ರಪಂಚಗಳನ್ನು ಸೃಷ್ಟಿಸಿದ ನಿನಗೆ ನಮಸ್ಕಾರವು. ಭಕ್ತರಿಗೆ ಬೇಕಾದುದನ್ನು ಕೊಡುವ ನಿನಗೆ ನಮಸ್ಕಾರವು. ಕರ್ಮವನ್ನು ಉಂಟುಮಾಡುವ ನಿನಗೆ ನಮಸ್ಕಾರವು. ಅನೇಕ ರೂಪಗಳುಳ್ಳ ನಿನಗೆ ಯಾವಾಗಲೂ ನಮಸ್ಕಾರವು.

ಅಸಹ್ಯಕೋಪಾಯ ಸುದೇವ ತುಭ್ಯಂ ।
ಶಶಾಂಕಚಿಹ್ನಾಯ ನಮೋಸ್ತು ತುಭ್ಯಂ ॥
ಅಸೀಮಲೀಲಾಪರಮಸ್ತುತಾಯ ।
ವೃಷೇಂದ್ರಯಾನಾಯ ಪುರಾಂತಕಾಯ ॥ ೨೫೯ ॥

ನಮಃ ಪ್ರಸಿದ್ಧಾಯ ಮಹೌಷಧಾಯ ।
ನಮೋಽಸ್ತು ನಾನಾವಿಧರೂಪಕಾಯ ॥
ನಮೋಽಸ್ತು ಕಾಲಾಯ ನಮಃ ಕಲಾಯ ।
ನಮೋಽಸ್ತು ತೇ ಕಾಲಕಲಾತಿಗಾಯ ॥ ೨೬೦ ॥

ಚರಾಚರಾಚಾರವಿಚಾರ್ಯವರ್ಯ ।
ಮಾಚಾರ್ಯಮುತ್ಪ್ರೇಕ್ಷಿತಭೂತಸರ್ಗಂ ॥
ತ್ವಾಮಿಂದುಮೌಲಿಂ ಶರಣಂ ಪ್ರಪನ್ನಾ ।
ಪ್ರಿಯಾಪ್ತಯೇಽಹಂ ಸಹಸಾ ಮಹೇಶಂ ॥ ೨೬೧ ॥

---

೨೫೯. ಕ್ರೂರವಾದ ಕೋಪವುಳ್ಳ ನಿನಗೆ ನಮಸ್ಕಾರವು. ಚಂದ್ರಮೌಳಿಯಾದ ನಿನಗೆ ನಮಸ್ಕಾರವು. ಬಹುವಾದ ಲೀಲೆಗಳುಳ್ಳ ನಿನಗೆ ನಮಸ್ಕಾರವು. ಎತ್ತಿನ ಮೇಲೆ ಕುಳಿತುಕೊಳ್ಳುವ ಪುರಾಂತಕನಾದ ನಿನಗೆ ನಮಸ್ಕಾರವು.

೨೬೦. ಪ್ರಸಿದ್ಧನಾದ, ಔಷಧಿ ರೂಪನಾದ, ನಿನಗೆ ನಮಸ್ಕಾರವು ನಾನಾ ಬಗೆಯ ರೂಪವುಳ್ಳ ನಿನಗೆ ನಮಸ್ಕಾರವು. ಕಾಲರೂಪನಾದ ನಿನಗೆ ನಮಸ್ಕಾರವು. ಕಲೆಯ ರೂಪನೂ ಕಾಲಕ್ಕೆ ಮೀರಿದವನೂ ಆದ ನಿನಗೆ ನಮಸ್ಕಾರವು.

೨೬೧. ಚರಾಚರ ವಸ್ತುಗಳನ್ನು ಆಡಿಸುವುದರಲ್ಲಿ ಜಾಣನಾದ, ಪ್ರಪಂಚದ ಉತ್ಪತ್ತಿಯನ್ನು ನೋಡುತ್ತಿರುವ, ಇಂದುಮೌಳಿಯಾದ, ನಿನ್ನನ್ನು, ನನ್ನ ಗಂಡನನ್ನು ಹೊಂದಲು ಶರಣು ಹೊಂದಿದ್ದೇನೆ.

ಪ್ರಯಚ್ಛ ಮೇ ಕಾಮಯಶಸ್ಸಮೃದ್ಧಿಂ ।
ಪತಿಂ ವಿನಾ ತಂ ಭಗವನ್ನ ಜೀವೇ ॥
ಸ್ತ್ರಿಯಾಃ ಪ್ರಿಯಾಯಾಃ ಪುರುಷೇಶ ನಿತ್ಯ ।
ಸ್ತತೋಽಪರಃ ಕೋ ಭುವನೇಷ್ವಿಹಾಸ್ತಿ ॥ ೨೬೨ ॥

ಪ್ರಭುಃ ಪ್ರಭಾವೀ ಪ್ರಭವಃ ಪ್ರಿಯಾಣಾಂ ।
ಪ್ರವೀಣಪರ್ಯಾಯಪರಾಪರಂ ತಪಃ ॥
ತ್ವಮೇವ ನಾಥೋ ಭುವನಸ್ಯ ಗೋಪ್ತಾ ।
ದಯಾಲುರುನ್ಮೀಲಿತಭಕ್ತಭೀತಿಃ ॥ ೨೬೩ ॥

॥ ಪುಲಸ್ತ್ಯ ಉವಾಚ ॥

ಇತ್ಥಂ ಸ್ತುತಃ ಶಂಕರ ಇಂದುಮೌಲಿ ।
ರ್ವೃಷಾಕಪಿರ್ಮನ್ಮಥಕಾಂತಯಾತು ॥
ತುತೋಷ ದೋಷಾಕರಖಂಡಧಾರೀ ।
ಉವಾಚ ಚೈನಾಂ ಮಧುರಂ ನಿರೀಕ್ಷ್ಯ ॥ ೨೬೪ ॥

---

೨೬೨. ಸ್ವಾಮಿಾ ! ಕಾಮನೆಂಬ ಯಶಸ್ಸಮೃದ್ಧಿಯನ್ನು ನನಗೆ ಕೊಡು, ಎಲೈ ಭಗವಂತನೇ, ಪತಿಯನ್ನುಳಿದು ನಾನು ಬದುಕಲಾರೆ. ಎಲೈ ಪುರುಷಶ್ರೇಷ್ಠನೇ! ಸ್ತ್ರಿಯೆಗೆ ಪ್ರಿಯನು ನಿತ್ಯನು. ಅದನ್ನು ಬಿಟ್ಟು ಯಾರುತಾನೇ ಲೋಕದಲ್ಲಿರುವರು ?

೨೬೩. ನೀನೇ ಪ್ರಭಾವವುಳ್ಳ ಪ್ರಭುವು. ಪ್ರಿಯವಾದುವುಗಳನ್ನು ಕೊಡತಕ್ಕವನು. ಉತ್ತಮವಾದ ಬಹು ಹಿಂದಿನ ತಪೋ ರೂಪನು. ನೀನೇ ಪ್ರಪಂಚಕ್ಕೆ ಒಡೆಯನು. ಲೋಕಗಳನ್ನು ಕಾಪಾಡುವವನು. ದಯಾವಂತನು. ಭಕ್ತರ ಲೀಲೆಯನ್ನು ನಾಶ ಮಾಡುವವನು.

೨೬೪. ಪುಲಸ್ತ್ಯನು ಹೇಳಿದನು– ಈ ರೀತಿಯಾಗಿ ಸ್ತುತಿಸಲ್ಪಟ್ಟ ಶಂಕರನೂ ಚಂದ್ರಮೌಳಿಯೂ ಆದ, ಈಶ್ವರನು ಸಂತೋಷಪಟ್ಟು ಈ ಮನ್ಮಥನ ಹೆಂಡತಿಯನ್ನು ಕುರಿತು ಮಧುರವಾಗಿ ಇಂತೆಂದನು

॥ ಶಂಕರ ಉವಾಚ ॥

ಭವಿಷ್ಯತಿ ಚ ಕಾಮೋಽಯಂ ಕಾಲೇ ಕಾಂತೇಽಚಿರಾದಥ ।
ಅನಂಗ ಇತಿ ಲೋಕೇಷು ವಿಖ್ಯಾತಿಂ ಚ ಗಮಿಷ್ಯತಿ ॥ ೧೬೫ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ಶಿರಸಾಽವಂದ್ಯ ಗಿರೀಶಂ ಕಾಮವಲ್ಲಭಾ ।
ಜಗಾಮೋಪವನಂ ಚಾನ್ಯದ್ರತಿಸ್ತುಹಿನಪರ್ವತೇ ॥ ೧೬೬ ॥

ರುರೋದ ಚಾಪಿ ಬಹುಶೋ ದೀನಾ ರಮ್ಯೇ ಸ್ಥಲೇ ಸ್ಥಲೇ ।
ಮರಣವ್ಯವಸಾಯಾಽಪಿ ನಿವೃತ್ತಾ ಚ ಶಿವಾಜ್ಞಯಾ ॥ ೧೬೭ ॥

ಅಥ ನಾರದವಾಕ್ಯೇನ ಚೋದಿತೋ ಹಿಮಭೂಧರಃ ।
ಕೃತಾಭರಣಸಂಸ್ಕಾರಾಂ ಕೃತಕೌತುಕಮಂಗಲಾಂ ॥ ೧೬೮ ॥

ಸ್ವರ್ಗಪುಷ್ಪಕೃತಾಪೀಡಾಂ ಶುಭ್ರಚೀನಾಂಶುಕಾಂಬರಾಂ ।
ಸಖೀಭ್ಯಾಂ ಸಂಯುತಾಂ ಶೈಲೋ ಗೃಹೀತ್ವಾ ಸ್ವಸುತಾಂ ತತಃ ॥ ೧೬೯ ॥

ಜಗಾಮ ಸುಭಗೇ ಯೋಗೇ ತದಾ ಸಂಪೂರ್ಣಮಾನಸಃ ।
ಸ ಕಾನನಾನ್ಯುಪಕ್ರಮ್ಯ ವನಾನ್ಯುಪವನಾನಿ ಚ ॥ ೧೭೦ ॥

---

೧೬೫. ಶಂಕರನು ಹೇಳಿದನು–ಎಲೈ ಹೆಂಗಸೇ! ಈ ಕಾಮನು ಸಲ್ಪ ಕಾಲದ ಮೇಲೆ ಜೀವಿಸುವನು. ಅನಂಗನೆಂಬುದಾಗಿ ಲೋಕದಲ್ಲಿ ಖ್ಯಾತಿಗೊಳ್ಳುತ್ತಾನೆ

೧೬೬. ಪುಲಸ್ತ್ಯನು ಹೇಳಿದನು– ಈಶನು ಹೀಗೆನ್ನಲು ರತಿಯು ಆತನನ್ನು ನಮಸ್ಕರಿಸಿ ಆ ಹಿಮವಂತನಲ್ಲಿಯೇ ಮತ್ತೊಂದು ಉಪವನಕ್ಕೆ ಹೋದಳು.

೧೬೭. ರಮ್ಯವಾದ ಎಲ್ಲಾ ಸ್ಥಳಗಳಲ್ಲಿಯೂ ಬಹುವಾಗಿ ಅತ್ತಳು. ಸಾಯುವುದಕ್ಕೂ ಸಿದ್ಧಳಾದಳು. ಆದರೆ ಶಿವನ ಅಪ್ಪಣೆಯಿಂದ ಸುಮ್ಮನಾದಳು.

೧೬೮–೧೭೦. ಇತ್ತ ನಾರದನ ಮಾತಿನಂತೆ ಹಿಮವಂತನು ಮಗಳಿಗೆ ಒಡವೆಗಳನ್ನಿಟ್ಟು ಮಂಗಳ ಕಾರ್ಯವನ್ನು ಮಾಡಿ ಪಾರಿಜಾತ ಹೂವನ್ನು, ತಲೆಗೆ ಮುಡಿಸಿ ಚೀನಸದ ಬಟ್ಟೆಯನ್ನು ಉಡಿಸಿ, ಅವಳನ್ನೂ ಅವಳ ಜೊತೆಗೆ ಇಬ್ಬರು ಸಖಿಯರನ್ನೂ ಕರೆದುಕೊಂಡು ಒಳ್ಳೆಯ ಹೊತ್ತಿನಲ್ಲಿ ಸಂತೋಷಗೊಂಡ ಮನಸ್ಸುಳ್ಳವನಾಗಿ ಹೊರಟನು. ಆ ಹಿಮವಂತನು ವನಗಳನ್ನೂ, ಉಪವನಗಳನ್ನೂ, ದಾಟಿ ಹೋಗುತ್ತ

ದದರ್ಶ ರುದತೀಂ ನಾರೀಮಪ್ರತರ್ಕ್ಯಾಂ ಮಹೌಜಸಂ ।
ನ ರೂಪೇಣೇದೃಶೀ ಲೋಕೇ ರಮ್ಯೇಷು ವನಸಾನುಷು ॥ ೨೭೦ ॥

ಕೌತುಕೇನ ಪರಾಮೃಷ್ಟಸ್ತಾಂ ದೃಷ್ಟ್ವಾ ರುದತೀಂ ಗಿರಿಃ ।
ಉಪಸೃತ್ಯ ತತಸ್ತಸ್ಯಾ ನಿಕಟಂ ಸೋಽಪ್ಯಪೃಚ್ಛತ ॥ ೨೭೨ ॥

॥ ಹಿಮವಾನುವಾಚ ॥

ಕಾಽಸಿ ಕಸ್ಯಾಸಿ ಕಲ್ಯಾಣಿ ಕಿಮರ್ಥಂ ಚಾಪಿ ರೋದಿಷಿ ।
ನೈತದಲ್ಪಮಹಂ ಮನ್ಯೇ ಕಾರಣಂ ಲೋಕಸುಂದರಿ ॥ ೨೭೩ ॥

ಸಾ ತಸ್ಯ ವಚನಂ ಶ್ರುತ್ವಾ ಉವಾಚ ಮಧುನಾ ಸಹ ।
ರುದತೀ ಶೋಕವಚನಂ ಶ್ವಸತೀ ದೈನ್ಯವರ್ಧನಂ ॥ ೨೭೪ ॥

॥ ರತಿರುವಾಚ ॥

ಕಾಮಸ್ಯ ದಯಿತಾಂ ಭಾರ್ಯಾಂ ರತಿಂ ಮಾಂ ವಿದ್ಧಿ ಸುವ್ರತ ।
ಗಿರಾವಸ್ಮಿಂಶ್ಚ ಭಗವಾನ್ಗಿರೀಶಸ್ತಪಸಿ ಸ್ಥಿತಃ ॥ ೨೭೫ ॥

---

ದಾರಿಯಲ್ಲಿ ಯೋಚಿಸಲು ಅಸಾಧ್ಯವಾದಷ್ಟು ಕಾಂತಿಯುಳ್ಳ, ಅಳುತ್ತಿರುವ ಒಬ್ಬ ಹೆಂಗಸನ್ನು ನೋಡಿದನು. ರೂಪವತಿಯರಲ್ಲಿ ಇಂಥವರು ಲೋಕದಲ್ಲೇ ಇಲ್ಲವಲ್ಲ. ಅಂಥಾದ್ದರಲ್ಲಿ ನನ್ನ ಈ ತಪ್ಪಲು ಪ್ರದೇಶದಲ್ಲಿರಲು ಕಾರಣವೇನು ? ಎಂದು ಆಶ್ಚರ್ಯದಿಂದ ಕೂಡಿ ಅಳುತ್ತಿರುವ ಆಕೆಯ ಬಳಿಗೆ ಬಂದು ಇಂತೆಂದು ಕೇಳಿದನು.

೨೭೩. ಹಿಮವಂತನು ಹೇಳಿದನು- ಅಮ್ಮ ನೀನಾರು ? ಯಾರ ಸಂಬಂಧಿಸಿ? ಏತಕ್ಕೆ ಅಳುತ್ತಿದ್ದೀಯೆ ? ಎಲೈ ಸುಂದರಿಯೇ ! ಇದಕ್ಕೆ ಏನೋ ಮಹಾ ಕಾರಣವಿರಬೇಕು.

೨೭೪. ಆಕೆಯೂ ಮಧುವೂ ಅವನ ಈ ಮಾತನ್ನು ಕೇಳಿ ನಿಟ್ಟುಸಿರು ಬಿಟ್ಟು ಅಳುತ್ತಾ ದಯೆಯು ಹೆಚ್ಚುವಂತೆ ಮಾಡುತ್ತಾ ಆ ದುಃಖದ ವಿಷಯವನ್ನು ಇಂತೆಂದು ಹೇಳಿದಳು.

೨೭೫-೨೭೬. ರತಿಯು ಹೇಳಿದಳು- ಎಲೈ ಪುಣ್ಯಾತ್ಮನೇ ಕಾಮನ ಹೆಂಡತಿಯಾದ ರತಿಯೆಂದು ನನ್ನನ್ನು ತಿಳಿ. ಭಗವಂತನಾದ ಶಿವನು ಈ ಗಿರಿಯಲ್ಲಿ ತಪಸ್ಸು ಮಾಡುತ್ತಿದ್ದನು. ಅವನಿಗೆ ಮನ್ಮಥನು ತೊಂದರೆಯನ್ನು ಮಾಡಲು ವಿಘ್ನ ಬಂದು

ತೇನ ಪ್ರತ್ಯೂಹರುಷ್ಟೇನ ಕ್ರೋಧಾದ್ವಿಸ್ಫಾರ್ಯ ಲೋಚನಂ ।
ವಿಮುಚ್ಯಾಗ್ನಿಶಿಖಾಜ್ವಾಲಾಂ ಕಾಮೋ ಭಸ್ಮಾವಶೇಷಿತಃ ॥ ೨೭೬ ॥

ಅಹಂ ತು ಶರಣಂ ಯಾತಾ ತಂ ದೇವಂ ಭಯವಿಹ್ವಲಾ ।
ಸ್ತುತವತ್ಯಥ ಸಂತುಷ್ಟಸ್ತತೋ ಮಾಂ ಗಿರಿಶೋಽಬ್ರವೀತ್ ॥ ೨೭೭ ॥

ತುಷ್ಟೋಽಹಂ ಕಾಮದಯಿತೇ ಕಾಮೋತ್ಪತ್ತಿರ್ಭವಿಷ್ಯತಿ ।
ತ್ವತ್ಸ್ತುತಿಂ ಚಾಪ್ಯಧೀಯಾನೋ ನರೋ ಭಕ್ತ್ಯಾ ಮದಾಶ್ರಯಃ ॥ ೨೭೮ ॥

ಲಕ್ಷ್ಯತೇ ಕಾಂಕ್ಷಿತಂ ಕಾಮಂ ನಿವರ್ತ ಮರಣಾದಪಿ ।
ಪ್ರತೀಕ್ಷಂತೀ ಚ ತದ್ವಾಕ್ಯಮಾಶಾವೇಶವಶಾದಹಂ ॥ ೨೭೯ ॥

ಶರೀರಂ ಪರಿರಕ್ಷಿಷ್ಯೇ ಕಿಂಚಿತ್ಕಾಲಂ ಮಹಾದ್ಯುತೇ ।
ಇತ್ಯುಕ್ತಸ್ತು ತಯಾ ರತ್ಯಾ ಶೈಲಃ ಸಂಭ್ರಮಭೀಷಣಃ ॥ ೨೮೦ ॥

ಪಾಣಾವಾದಾಯ ದುಹಿತಾಂ ಗಂತುಮೈಚ್ಛತ್ಸ್ವಕಂ ಪುರಂ ।
ಭಾವಿನೋಽವಶ್ಯಭಾವಿತ್ವಾದ್ಭವಿತ್ರೀ ಭೂತಭಾವಿನೀ ।
ಲಜ್ಜಮಾನಾ ಸಖೀಮುಖ್ಯೈರುವಾಚ ಪಿತರಂ ಗಿರಿಂ ॥ ೨೮೧ ॥

---

ದರಿಂದ ಕೋಪಗೊಂಡ ಆ ಗಿರೀಶನು ಕೋಪದಿಂದ ಮೂರನೆಯ ಕಣ್ಣನ್ನು ತೆರೆದು ಅಗ್ನಿ ಜ್ವಾಲೆಯನ್ನು ಬಿಟ್ಟು ಅವನನ್ನು ಸುಟ್ಟುಬಿಟ್ಟನು.

೨೭೭. ನಾನು ಭಯಪಟ್ಟು ಆ ದೇವನನ್ನು ಸ್ತೋತ್ರಮಾಡಿ ಮರೆ ಹೊಕ್ಕೆನು. ಆಗ ಈಶನು ಸಂತೋಷಗೊಂಡು ನನ್ನನ್ನು ಕುರಿತು ಇಂತೆಂದನು.

೨೭೮–೨೮೧ ಎಲೈ ಕಾಮನ ಹೆಂಡತಿಯೇ ! ನಾನು ನಿನ್ನ ವಿಷಯದಲ್ಲಿ ಸಂತೋಷಗೊಂಡಿದ್ದೇನೆ. ಕಾಮನು ಬದುಕುತ್ತಾನೆ. ನೀನು ಮಾಡಿದ ನನ್ನ ಸ್ತುತಿಯನ್ನು ನನ್ನಲ್ಲಿ ಭಕ್ತಿಯಿಟ್ಟು ಓದಿದವನು ಇಷ್ಟವಾದ ಫಲವನ್ನು ಹೊಂದಿ ಮರಣವನ್ನು ಕಳೆದುಕೊಳ್ಳುತ್ತಾನೆ. ಆ ಮಾತನ್ನು ನಿರೀಕ್ಷಿಸುತ್ತ ಆಶೆಯ ಬಲದಿಂದ ಶರೀರವನ್ನು ಕೊಂಚಕಾಲ ಕಾಪಾಡಿಕೊಂಡಿರುತ್ತೇನೆ. ಎನ್ನಲು ಪರ್ವತರಾಜನು ಈ ಮಾತನ್ನು ಕೇಳಿ ಹೆದರಿದವನಾಗಿ ಮಗಳನ್ನು ಎತ್ತಿಕೊಂಡು ತನ್ನ ಊರಿಗೆ ಹೋಗಲು ಮನಸ್ಸುಮಾಡಿದನು. ಆಗ ಆ ಜಗನ್ಮಾತೆಯಾದ ಪಾರ್ವತಿಯು ಮುಂದೆ ಅವಶ್ಯಕವಾಗಿ ಆಗಬೇಕಾದ ಕೆಲಸದ ದೆಸೆಯಿಂದ ಲಜ್ಜೆ ಪಡುತ್ತಾ ತಂದೆಯನ್ನು ಕುರಿತು ಸಖಿಯರಿಂದ ಇಂತೆಂದು ಹೇಳಿಸಿದಳು

॥ ಶೈಲಪುತ್ರ್ಯುವಾಚ ॥

ದುರ್ಭಗೇಣ ಶರೀರೇಣ ಕಿಂ ಮಮಾನೇನ ಕಾರಣಂ ।
ಕಥಂ ಚ ತಾದೃಶಂ ಪ್ರಾಪ್ತಂ ಸುಖಂ ವಾ ಮೇ ಪತಿರ್ಭವೇತ್ ॥ ೨೮೨ ॥

ತಪೋಭಿಃ ಪ್ರಾಪ್ಯತೇಽಭೀಷ್ಟಂ ನಾಸಾಧ್ಯಂ ತು ತಪಸ್ಯತಃ ।
ದುರ್ಭಗತ್ವಂ ವೃಥಾ ಲೋಕೋ ವಹತೇ ಸತಿ ಸಾಧನೇ ॥ ೨೮೩ ॥

ತಪಸಿ ಭ್ರಷ್ಟಸಂದೇಹಾ ತತಃ ಸ್ವಾರ್ಥಜಿಗಿಷಯಾ ।
ಏವಂ ತಪಃ ಕರಿಷ್ಯೇಽಹಂ ಗಚ್ಛೇತ್ಯುಕ್ತವತೀಂ ಸುತಾಂ ।
ಉವಾಚ ವಾಚಾ ಶೈಲೇಂದ್ರೋ ಗದ್ಗದಸ್ವರವರ್ಣಯಾ ॥ ೨೮೪ ॥

॥ ಹಿಮವಾನುವಾಚ ॥

ಉ ಮೇತಿ ಚಪಲಾ ಪುತ್ರಿ ನ ಕ್ಷಮಂ ತಾವಕಂ ವಪುಃ ।
ಸೋಢುಂ ಕ್ಲೇಶಾನುರೂಪಸ್ಯ ತಪಸಃ ಸೌಮ್ಯದರ್ಶನೇ ॥ ೨೮೫ ॥

---

೨೮೨ ಶೈಲನ ಮಗಳು ಹೇಳಿದಳು– ಅಯೋಗ್ಯವಾದ ಈ ಶರೀರದಿಂದ ನನಗೇನಾಗಬೇಕು ? ಆ ರೀತಿಯಾದ ಸುಖವಾಗಲಿ ಆ ರೀತಿಯಾದ ಗಂಡನಾಗಲಿ ನನಗೆ ಹೇಗೆ ಲಭಿಸುವರು ?

೨೮೩. ತಪಸ್ಸಿನಿಂದ ಇಷ್ಟವೆಲ್ಲವೂ ಸಿಕ್ಕುತ್ತದೆ. ತಪಸ್ಸಿಗೆ ಅಸಾಧ್ಯವಾದುದು ಇಲ್ಲವೇ ಇಲ್ಲ. ತಪೋರೂಪವಾದ ಸುಖ ಹೊಂದುವ ಕಾರಣವಿದ್ದರೂ ಲೋಕದಲ್ಲಿ ಜನಗಳು ಅದನ್ನು ಉಪಯೋಗಿಸಿಕೊಳ್ಳದೆ ವ್ಯರ್ಥವಾಗಿ ಕ್ಲೇಶಿಸುತ್ತಿರುವರು.

೨೮೪. ಈ ರೀತಿ ಪಾರ್ವತಿಯು ತನ್ನ ಇಷ್ಟವನ್ನು ಸಾಧಿಸಿಕೊಳ್ಳಲು ತಪಸ್ಸೇ ಸಾಧನವೆಂದು ತಪಸ್ಸಿನ ವಿಷಯದಲ್ಲಿ ನಿಸ್ಸಂದೇಹಳಾದಳು. ಅನಂತರ ನಾನು ತಪಸ್ಸನ್ನು ಮಾಡುತ್ತೇನೆ. ನೀನು ಹೋಗೆಂದ ಮಗಳನ್ನು ನೋಡಿ ಪರ್ವತರಾಜನು ದುಃಖದಿಂದ ತೊದಲು ಮಾತಾಡುತ್ತ ಇಂತೆಂದನು.

೨೮೫. ಹಿಮವಂತನು ಹೇಳಿದನು– ಎಲೈ ಚಂಚಲ ಮನಸ್ಸುಳ್ಳ ಮಗಳೇ ! ಬೇಡಮ್ಮ ! ನಿನ್ನ ಶರೀರವು ಕ್ಲೇಶದಿಂದ ಸಾಧಿಸಬೇಕಾದ ತಪಸ್ಸುಗಳ ಕಷ್ಟವನ್ನು ಸಹಿಸಲು ತಕ್ಕದ್ದಲ್ಲ.

ಭವಿಷ್ಯಂತಿ ಚ ಕಾರ್ಯಾಣಿ ಪದಾರ್ಥಾನಿ ಸದೈವ ತು ।
ಭಾವಿನೋಽರ್ಥಾ ಭವಂತ್ಯೇವ ಬಹವೋಽನಿಚ್ಛತೋಽಪಿ ಹ ॥ ೨೮೬ ॥

ತಸ್ಮಾನ್ನ ತಪಸಾ ತೇಽಸ್ತಿ ಬಾಲೇ ಕಿಂಚಿತ್ಪ್ರಯೋಜನಂ ।
ಭವನಂ ಚೈವ ಗಚ್ಛಾಮಿ ಚಿಂತಯಿಷ್ಯಾಮಿ ತತ್ರ ವೈ ॥ ೨೮೭ ॥

ಇತ್ಯುಕ್ತಾ ತು ಯದಾ ನೈವ ಗೃಹಮನ್ವೇತಿ ಶೈಲಜಾ ।
ತತೋಽದ್ರಿಶ್ಚಿಂತಯಾಽವಿಷ್ಟಃ ಸ್ವಸುತಾಂ ಪ್ರಶಶಂಸ ಚ ॥ ೨೮೮ ॥

ತತೋಽಂತರಿಕ್ಷೇ ದಿವ್ಯಾ ಚ ವಾಗಭೂದ್ಭುವನತ್ರಯೇ ।
ಉ ಮೇತಿ ಚಪಲಾ ಪುತ್ರಿ ತ್ವಯೋಕ್ತಾ ತನಯಾ ಯತಃ ॥ ೨೮೯ ॥

ಉಮೇತಿ ನಾಮ ತೇನಾಸ್ಯ ಭುವನೇಷು ಭವಿಷ್ಯತಿ ।
ಸಿದ್ಧಿಮೂರ್ತಿಮತೀ ತ್ವೇಷಾ ಸಾಧಯಿಷ್ಯತಿ ಚಿಂತಿತಂ ॥ ೨೯೦ ॥

---

೨೮೬. ಮುಂದಾಗುವ ಕೆಲಸಗಳಾಗಲಿ, ಪ್ರಯೋಜನಗಳಾಗಲಿ, ಆಗಿಯೇ ಆಗುತ್ತವೆ. ಬಂದೇ ಬರುತ್ತವೆ. ಮುಂದೆ ಬರತಕ್ಕ ಕೆಲಸಗಳೂ ಪ್ರಯೋಜನಗಳೂ ಎಷ್ಟಿದ್ದರೂ ನಾವು ಇಷ್ಟ ಪಡದಿದ್ದರೂ ಆಗಿಯೇ ಆಗುತ್ತವೆ.

೨೮೭. ಎಲೈ ಬಾಲಳೇ ! ಆದ್ದರಿಂದ ತಪಸ್ಸಿನಿಂದ ನಿನಗೆ ಸ್ವಲ್ಪವೂ ಪ್ರಯೋಜನವಿಲ್ಲ. ಮನೆಗೆ ಹೋಗೋಣ. ಅಲ್ಲೇ ಧ್ಯಾನ ಮಾಡೋಣ. ಎಂದನು.

೨೮೮. ಹಿಮವಂತನು ಹೀಗೆ ಹೇಳಿದರೂ ಆಕೆಯು ಮನೆಗೆ ಹಿಂತಿರುಗದಿರಲು ಆಗ ಅವನು ಯೋಚನೆಗೊಳಗಾಗಿ ತನ್ನ ಮಗಳನ್ನು ಶ್ಲಾಘಿಸಿದನು.

೨೮೯-೨೯೦. ಆಗ ಅಂತರಿಕ್ಷದಲ್ಲಿ ಅಶರೀರವಾಣಿಯು ಇಂತೆಂದಿತು. ನೀನು ಉಮ (ಉ= ಎಲೈ ಹುಡುಗಿಯೇ, ಮಾ= ತಪಸ್ಸುಮಾಡಬೇಡ ) ಎಂದು ಮಗಳನ್ನು ಕುರಿತು ಹೇಳಿದುದರಿಂದ ಲೋಕದಲ್ಲಿ ಆಕೆಯು ಉಮಾ ಎಂಬ ಹೆಸರನ್ನು ಹೊಂದುತ್ತಾಳೆ. ಈಕೆಯು ಪ್ರತ್ಯಕ್ಷಳಾದ ಸಿದ್ಧಿಯು. ತನಗೆ ಬೇಕಾದುದನ್ನು ಸಾಧಿಸಿಕೊಳ್ಳುವಳು.

ಇತಿ ಶ್ರುತ್ವಾ ತು ವಚನಂ ಸ ತದಾಽಕಾಶಮಂಡಲೇ ।
ಅನುಜ್ಞಾಯ ಸ ತಾಂ ಶೈಲೋ ಜಗಾಮಾಽಶು ಸ್ವಮಂದಿರಂ ॥ ೨೯೧ ॥

॥ ಪುಲಸ್ತ್ಯ ಉವಾಚ ॥

ಶೈಲಜಾಽಪಿ ಯಯೌ ಶೈಲಮಗಮ್ಯಮಪಿ ದೈವತೈಃ ।
ಸಖೀಭ್ಯಾಮನುಯಾತಾ ತು ನಿಯತಾ ನಗರಾಜಜಾ ॥ ೨೯೨ ॥

ಶೃಂಗಂ ಹಿಮವತಃ ಪುಣ್ಯಂ ನಾನಾಧಾತುವಿಭೂಷಿತಂ ।
ದಿವ್ಯಪುಷ್ಪಲತಾಕೀರ್ಣಂ ಭ್ರಮರೋದ್ಘುಷ್ಟಪಾದಪಂ ॥ ೨೯೩ ॥

ದಿವ್ಯಪ್ರಸ್ರವಣೋಪೇತಂ ಮನೋರಥಶತೋಜ್ಜ್ವಲಂ ।
ನಾನಾಪಕ್ಷಿಸಮಾಯುಕ್ತಂ ಚಕ್ರವಾಕೋಪಶೋಭಿತಂ ॥ ೨೯೪ ॥

ಜಲಜಸ್ಥಲಜೈಃ ಪುಣ್ಯೈಃ ಪ್ರಫುಲ್ಲೈರುಪಶೋಭಿತಂ ।
ಚಿತ್ರಕಂದರಸಂಗುಹ್ಯಂ ದಿವ್ಯಗೇಹಸಮನ್ವಿತಂ ॥ ೨೯೫ ॥

---

೨೯೧. ಆಗ ಆ ಹಿಮವಂತನು ಆಕಾಶವಾಣಿಯ ಈ ಮಾತನ್ನು ಕೇಳಿ ಆಕೆಯ ಇಷ್ಟದಂತೆ ಒಪ್ಪಿಕೊಂಡು ತನ್ನ ಮನೆಗೆ ಹೊರಟು ಹೋದನು.

೨೯೨. ಪುಲಸ್ತ್ಯನು ಹೇಳಿದನು- ಪಾರ್ವತಿಯೂ ಕೂಡ ದೇವತೆಗಳಿಗೂ ಹೋಗಲಾಗದ ಆ ಬೆಟ್ಟದ ಭಾಗವನ್ನು ಹೊಂದಿದಳು. ಸಖಿಯರಿಂದ ಅನುಸರಿಸಲ್ಪಡುತ್ತ ನಿಯಮವನ್ನು ಹೊಂದಿದಳು.

೨೯೩-೨೯೪. ಆಕೆಯು ಹಿಮವಂತನ ಒಂದು ಶಿಖರಕ್ಕೆ ಹೋದಳು. ಆ ಶಿಖರವು ಅನೇಕ ಬಣ್ಣದ ಕಲ್ಲುಗಳಿಂದಲೂ ಉತ್ತಮವಾದ ಹೂವಿರುವ ಬಳ್ಳಿಗಳಿಂದಲೂ ಕೂಡಿದ್ದಿತು. ಭ್ರಮರಗಳು ಮರಗಳಲ್ಲಿ ಸುಳಿದಾಡುತ್ತ ಝೇಂಕರಿಸುತ್ತಿದ್ದುವು. ಉತ್ತಮವಾದ ನದಿಗಳು ಹರಿಯುತ್ತಿದ್ದುವು. ಮನಸ್ಸಿಗೆ ಬಹು ಆನಂದಕರವಾಗಿದ್ದಿತು. ಬಗೆಬಗೆಯ ಹಕ್ಕಿಗಳೂ ಅಲ್ಲಿದ್ದುವಲ್ಲದೆ, ಚಕ್ರವಾಕ ಪಕ್ಷಿಗಳೂ ಇದ್ದುವು.

೨೯೫-೨೯೬. ಭೂಮಿಯಲ್ಲಿ ಹುಟ್ಟುವ ಕಮಲಗಳೂ, ನೀರಿನಲ್ಲಿ ಹುಟ್ಟುವ ಕಮಲಗಳೂ ಅಲ್ಲಿದ್ದುವು. ಮನೋಹರವಾದ ಗುಹೆಯು ಅಲ್ಲಿದ್ದು ಅದನ್ನು ಮನೆಯನ್ನಾಗಿ ಮಾಡಿಕೊಳ್ಳಲು ಅನುಕೂಲವಾಗಿದ್ದಿತು. ಅನೇಕ ಪಕ್ಷಿಗಳುಳ್ಳ ಕಲ್ಪವೃಕ್ಷ

ನಾನಾವಿಹಂಗಸಂಘುಷ್ಟಂ ಕಲ್ಪಪಾದಪಸಂಕಟಂ ।
ತತ್ರಾಪಶ್ಯನ್ಮಹಾಶಾಖಂ ಶಾಖಿನಂ ಹರಿತಚ್ಛದಂ ॥ ೨೯೬ ॥

ಸರ್ವರ್ತುಕುಸುಮೋಪೇತಂ ಚಕ್ರವಾಕೋಪಶೋಭಿತಂ ।
ನಾನಾಪುಷ್ಪಶತಾಕೀರ್ಣಂ ನಾನಾವಿಧಫಲಾನ್ವಿತಂ ॥ ೨೯೭ ॥

ತ್ಯಕ್ತಂ ಸೂರ್ಯಸ್ಯ ರುಚಿಭಿರ್ಭಿನ್ನಸಂಹತಪಲ್ಲವಂ ।
ತತ್ರಾಂಬರಾಣಿ ಸಂತ್ಯಜ್ಯ ಭೂಷಣಾನಿ ಚ ಶೈಲಜಾ ॥ ೨೯೮ ॥

ಸಂವೀತಾ ವಲ್ಕಲೈರ್ದಿವ್ಯೈರ್ದರ್ಭನಿರ್ಮಿತಮೇಖಲಾ ।
ನಿಸ್ಸ್ನಾತಾ ಪಾಟಲಾಹಾರಾ ಬಭೂವ ಶರದಾಂ ಶತಂ ॥ ೨೯೯ ॥

ಶತಮೇಕೇನ ಪರ್ಣೇನಾವರ್ತಯತ ಹಿಮಾತ್ಮಜಾ ।
ನಿರಾಹಾರಾ ಶತಂ ಸಾಽಭೂತ್ಸಮಾನಾಂ ತಪಸೋ ನಿಧಿಃ ॥ ೩೦೦ ॥

---

ಅಲ್ಲಿ ಅನೇಕವಾಗಿದ್ದುವು. ಅಂತಹ ಶಿಖರವಿರುವ ಸ್ಥಳದಲ್ಲಿ ಒಂದು ದೊಡ್ಡ ಮರವಿದ್ದಿತು. ಅದು ಅನೇಕ ಕೊಂಬೆಗಳಿಂದ ಕೂಡಿದ್ದಿತು ಎಲೆಗಳಿಂದ ಹಸುರಾಗಿ ಮನೋಹರವಾಗಿದ್ದಿತು.

೨೯೭. ಅದರಲ್ಲಿ ಎಲ್ಲಾ ಋತುವಿನಲ್ಲಿ ಬಿಡುವ ಹೂಗಳೂ ಇದ್ದುವು ಅಲ್ಲಿ ಚಕ್ರವಾಕ ಪಕ್ಷಿಗಳು ಕುಳಿತು ಪ್ರಕಾಶಿಸುತ್ತಿದ್ದುವು. ಅನೇಕ ಬಗೆಯ ಹೂಗಳಿಂದಲೂ ಹಣ್ಣುಗಳಿಂದಲೂ ಅದು ಕೂಡಿದ್ದಿತು.

೨೯೮. ಅಲ್ಲಿ ಸೂರ್ಯರಶ್ಮಿಯೇ ಕೆಳಕ್ಕೆ ಬೀಳುತ್ತಿರಲಿಲ್ಲ. ಚಿಗುರುಗಳು ಅಲ್ಲಲ್ಲಿಯೇ ಹೊರಹೊರಡುತ್ತಿದ್ದುವು. ಅಲ್ಲಿ ಪಾರ್ವತಿಯು ಬಟ್ಟೆಗಳನ್ನೂ ಒಡವೆಗಳನ್ನೂ ತೆಗೆದಿಟ್ಟಳು.

೨೯೯. ಒಳ್ಳೆಯದಾದ ನಾರು ಶೀರೆಗಳನ್ನುಟ್ಟು ದರ್ಭೆಯ ಹುರಿಗಳನ್ನು ಸೊಂಟಕ್ಕೆ ಕಟ್ಟಿಕೊಂಡಳು. ಮೂರು ವೇಳೆ ಸ್ನಾನ ಮಾಡುತ್ತಿದ್ದಳು. ಹಣ್ಣೆಲೆಗಳನ್ನು ತಿನ್ನುತ್ತಾ ನೂರು ವರ್ಷಗಳು ತಪಸ್ಸುಮಾಡಿದಳು.

೩೦೦. ದಿನವೊಂದಕ್ಕೆ ಒಂದು ಎಲೆಯನ್ನು ತಿನ್ನುತ್ತಾ ನೂರು ವರ್ಷಗಳು ತಪಸ್ಸು ಮಾಡಿದಳು. ಅನಂತರ ಆಹಾರವಿಲ್ಲದೆ ನೂರು ವರ್ಷಗಳು ತಪಸ್ಸು ಮಾಡಿದಳು.

ತತ್ರ ಉದ್ವೇಜಿತಾಃ ಸರ್ವೇ ಪ್ರಾಣಿನಸ್ತಪಸೋಽಗ್ನಿನಾ ।
ತತಃ ಸಸ್ಮಾರ ಭಗವಾನ್ಮುನೀನ್ಸಪ್ತ ಶತಕ್ರತುಃ ॥ ೩೦೧ ॥

ತೇ ಸಮಾಗತ್ಯ ಮುದಿತಾಃ ಸರ್ವೇ ಸಮುದಿತಾಸ್ತಥಾ ।
ಪೂಜಿತಾಸ್ತೇ ಮಹೇಂದ್ರೇಣ ಪಪ್ರಚ್ಛುಸ್ತಂ ಪ್ರಯೋಜನಂ ॥ ೩೦೨ ॥

॥ ಋಷಯ. ಊಚುಃ ॥

ಕಿಮರ್ಥಂ ಹಿ ಸುರಶ್ರೇಷ್ಠ ಸಂಸ್ಮೃತಾಸ್ತು ವಯಂ ತ್ವಯಾ ॥ ೩೦೩ ॥

॥ ಪುಲಸ್ತ್ಯ ಉವಾಚ ॥

ಶಕ್ರಃ ಪ್ರೋವಾಚ ಶೃಣ್ವಂತು ಭಗವಂತಃ ಪ್ರಯೋಜನಂ ।
ಹಿಮಾಚಲೇ ತಪೋ ಘೋರಂ ತಪ್ಯತೇ ಭೂಧರಾತ್ಮಜಾ ॥ ೩೦೪ ॥

ತಸ್ಯಾಭಿಮತಯೋಗೇನ ಭವಂತಃ ಕರ್ತುಮರ್ಹಥ ।
ತಪಸ್ಸಮಾಪನಂ ದೇವ್ಯಾ ಜಗದರ್ಥೇ ತ್ವರಾನ್ವಿತಾಃ ॥ ೩೦೫ ॥

---

೩೦೧. ಆಗ ಆಕೆಯ ತಪಸ್ಸಿನ ಜ್ವಾಲೆಯಿಂದ ಅಲ್ಲಿರುವ ಪ್ರಾಣಿಗಳೆಲ್ಲವೂ ಹೆದರುತ್ತ ಬಂದುವು. ಈ ಸಮಯದಲ್ಲಿ ಇಂದ್ರನು ಸಪ್ತರ್ಷಿಗಳನ್ನು ಸ್ಮರಿಸಿಕೊಂಡನು.

೩೦೨. ಅವರು ಸಂತೋಷದಿಂದ ಬಂದು ಎಲ್ಲರೂ ಅಲ್ಲಿ ಸೇರಿದರು. ಅವರನ್ನು ಯೋಗ್ಯತೆಗೆ ತಕ್ಕಂತೆ ಇಂದ್ರನು ಗೌರವಿಸಿದನು. ಅನಂತರ ಆ ಋಷಿಗಳು ನಮ್ಮನ್ನು ಕರೆಸಿದ ಕಾರಣವೇನು ? ಎಂದು ಇಂದ್ರನನ್ನು ಕೇಳಿದರು

೩೦೩. ಋಷಿಗಳು ಹೇಳಿದರು- ಎಲೈ ಇಂದ್ರನೇ ! ನಮ್ಮನ್ನು ಏತಕ್ಕೆ ನೀನು ಸ್ಮರಿಸಿದೆ ?

೩೦೪-೩೦೫. ಪುಲಸ್ತ್ಯನು ಹೇಳಿದನು- ಆಗ ಇಂದ್ರನು ಎಲೈ ಋಷಿಗಳಿರಾ ! ಕೇಳಿರಿ. ಹಿಮವಂತನಲ್ಲಿ ಪಾರ್ವತಿಯು ಘೋರವಾದ ತಪಸ್ಸನ್ನು ಮಾಡುತ್ತಿದ್ದಾಳೆ. ಅವಳಿಗೆ ಇಷ್ಟವಾದುದನ್ನು ಕೊಟ್ಟು ಆಕೆಯ ಆ ಘೋರ ತಪಸ್ಸನ್ನು ನಿಲ್ಲಿಸಿ ಪ್ರಪಂಚಕ್ಕೆ ಹಿತವನ್ನುಂಟುಮಾಡಿರಿ. ಜಾಗ್ರತೆಯಾಗಿ ಹೋಗಿ.

॥ ಪುಲಸ್ತ್ಯ ಉವಾಚ ॥

ತಥೇತ್ಯುಕ್ತ್ವಾ ತು ತಂ ಶೈಲಂ ಸಿದ್ಧಸಂಘಾತಸೇವಿತಂ ।
ಊಚುರಾಗಮ್ಯ ಮುನಯಸ್ತಾಮಥೋ ಮಧುರಾಕ್ಷರಂ ॥ ೩೦೬ ॥

॥ ಋಷಯ ಊಚುಃ ॥

ಪುತ್ರಿ ಕಸ್ತೇ ವ್ಯವಸಿತಃ ಕಾಮಃ ಕಮಲಲೋಚನೇ ॥ ೩೦೭ ॥

॥ ಪುಲಸ್ತ್ಯ ಉವಾಚ ॥

ತಾನುವಾಚ ತತೋ ದೇವೀ ಸಾದರಂ ಗೌರವಾನ್ಮುನೀನ್ ॥ ೩೦೮ ॥

॥ ದೇವ್ಯುವಾಚ ॥

ತಪಸ್ಯಂತೋ ಮಹಾಭಾಗಾಃ ಪ್ರೋಹ್ಯ ಮೌನಂ ಭವಾದೃಶಾಂ ।
ವಂದನಾಯ ನಿಯುಕ್ತಾ ಧೀರ್ಯಾಚಯತ್ಯವಿಕಲ್ಪಿತಾ ॥ ೩೦೯ ॥

ಸುಪ್ರಸನ್ನಮುಖಾ ಯೂಯಂ ಗೃಹೀತ್ವಾಽಸನಮಾದಿತಃ ।
ಉಪವಿಷ್ಟಾಃ ಶ್ರಮಂ ಮುಕ್ತ್ವಾ ತತಃ ಪೃಚ್ಛಥ ಮಾಮನು ॥ ೩೧೦ ॥

---

೩೦೬. ಪುಲಸ್ತ್ಯನು ಹೇಳಿದನು- ಆ ಋಷಿಗಳು ಹಾಗೆ ಆಗಲೆಂದು ಹೇಳಿ ಸಿದ್ಧರು ಸೇವಿಸುತ್ತಿರುವ ಹಿಮವತ್ಪರ್ವತಕ್ಕೆ ಹೋಗಿ ಆ ಪಾರ್ವತಿಯನ್ನು ಕುರಿತು ಮೃದುವಾಗಿ ಇಂತೆಂದರು.

೩೦೭. ಋಷಿಗಳು ಹೇಳಿದರು–ಎಲೈ ಮಗಳೇ ! ನೀನು ಯಾವ ಇಷ್ಟವನ್ನು ಕುರಿತು ತಪಸ್ಸು ಮಾಡುತ್ತಿದ್ದೀಯೋ ?

೩೦೮. ಪುಲಸ್ತ್ಯನು ಹೇಳಿದನು– ಆಗ ಆ ದೇವಿಯು ಗೌರವದಿಂದಲೂ, ಅಕ್ಕರೆಯಿಂದಲೂ, ಅವರನ್ನು ಕುರಿತು ಇಂತೆಂದಳು.

೩೦೯-೩೧೦. ಎಲೈ ತಪಸ್ವಿಗಳೇ ! ನನ್ನ ಮನಸ್ಸು ಮೌನವನ್ನು ಬಿಟ್ಟು ನಿಮ್ಮ ವಂದನೆಗೆ ಪ್ರೇರಿಸುತ್ತದೆ. ಅನಂತರ ಬೇಕಾದುದನ್ನು ಕೇಳಿಕೊಳ್ಳಲೂ ಪ್ರೇರಿಸುತ್ತದೆ. ನೀವೆಲ್ಲರೂ ಪ್ರಸನ್ನಮುಖರಾಗಿದ್ದೀರಿ. ಕುಳಿತುಕೊಂಡು ಅರ್ಘ್ಯಪಾದ್ಯಗಳನ್ನು ತೆಗೆದುಕೊಂಡು ಅನಂತರ ನನ್ನನ್ನು ಕೇಳಿರಿ.

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾಸ್ತೇ ತತಶ್ಚಕ್ರುಸ್ತತ್ರಾಽಸನಪರಿಗ್ರಹಂ ।
ಸಾ ಚ ತಾನ್ಸಿಧಿವತ್ಪೂರ್ವಂ ಪೂಜಯಿತ್ವಾ ವಿಧಾನತಃ ॥ ೩೧೧ ॥

ಉವಾಚಾಽದಿತ್ಯಸಂಕಾಶಾನ್ಮುನೀನ್ಸಪ್ತ ಋಷೀನ್ ಶನೈಃ ।
ತ್ಯಕ್ತ್ವಾ ವ್ರತಾತ್ಮಕಂ ಮೌನಂ ನತ್ವಾ ಚ ವಿಧಿವನ್ಮುನೀನ್ ॥ ೩೧೨ ॥

ಭಗವಂತೋಽಪಿ ಮೌನಾಂತೇ ತಸ್ಯಾಃ ಸಪ್ತರ್ಷಯೋಽಪ್ಯಥ ।
ಗೌರವಾಧಾರತಾಂ ಪ್ರಾಪ್ತಾಂ ಪಪ್ರಚ್ಛುಸ್ತಾಂ ಪುನಸ್ತಥಾ ॥ ೩೧೩ ॥

ಸಾಽಪಿ ಗೌರವಗರ್ಭೇಣ ಮನಸಾ ಚಾರುಹಾಸಿನೀ ।
ಮುನೀನ್ಸರ್ವಾನಥಾಽಲೋಕ್ಯ ಪ್ರೋವಾಚಾಪೋಹ್ಯ ವಾಗ್ಯಮಂ ॥ ೩೧೪ ॥

॥ ದೇವ್ಯುವಾಚ ॥

ಭಗವಂತೋ ವಿಜಾನೀಥ ಪ್ರಾಣಿನಾಂ ಮನಸೇಪ್ಸಿತಂ ।
ಶರೀರಾದಿಭಿರತ್ಯರ್ಥಂ ಕಥಯಂತಿ ಹಿ ದೇಹಿನಃ ॥ ೩೧೫ ॥

---

೩೧೧-೩೧೨. ಪುಲಸ್ತ್ಯನು ಹೇಳಿದನು-ಆಕೆಯು ಹೀಗೆನ್ನಲು ಅವರೆಲ್ಲರೂ ಆಸನದಲ್ಲಿ ಕುಳಿತರು. ಅನಂತರ ವಿಧಿಯಂತೆ ಅವರೆಲ್ಲರನ್ನೂ ಪೂಜಿಸಿದಳು. ಮತ್ತು ವ್ರತಕ್ಕೆ ಸಂಬಂಧಪಟ್ಟ ಮೌನವನ್ನು ಬಿಟ್ಟು ಅವರನ್ನು ನಮಸ್ಕರಿಸಿ ಆ ತೇಜೋವಂತರಾದ ಏಳು ಜನ ಋಷಿಗಳನ್ನೂ ಕುರಿತು ಮೆಲ್ಲಗೆ ಇಂತೆಂದಳು.

೩೧೩. ಆಕೆಯು ಮೌನವನ್ನು ಬಿಡುತ್ತಲೂ ಗೌರವಾರ್ಹಳಾದ ಆಕೆಯನ್ನು ಕುರಿತು ಮತ್ತೆ ಅವರು ಹಿಂದಿನಂತೆಯೇ ಕೇಳಿದರು.

೩೧೪. ಆಕೆಯೂ ಕೂಡ ತನ್ನ ಆ ಮೌನವನ್ನು ಬಿಟ್ಟು ಆ ಋಷಿಗಳೆಲ್ಲರನ್ನೂ ನೋಡಿ ಗೌರವದಿಂದ ಕೂಡಿರುವ ಮನಸ್ಸಿನಿಂದ ಇಂತೆಂದಳು.

೩೧೫. ದೇವಿಯು ಹೇಳಿದಳು-ಎಲೈ ಋಷಿಗಳಿರ! ನೀವು ಪೂಜ್ಯರು. ಪ್ರಾಣಿಗಳ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳಬಲ್ಲಿರಿ. ಅಲ್ಲದೆ ಪ್ರಾಣಿಗಳೂ ಕೂಡ ಶರೀರವೇ ಮೊದಲಾದುವುಗಳ ಚೇಷ್ಟೆಯಿಂದ ತಮ್ಮ ಅಭಿಪ್ರಾಯವನ್ನು ಮತ್ತೊಬ್ಬರು ತಿಳಿಯುವಂತೆ ಮಾಡಿಕೊಂಡಿರುತ್ತವೆ.

ಕೇಚಿತ್ತು ನಿಪುಣಾಸ್ತತ್ರ ಘಟಂತೇ ವಿವಿಧೋದ್ಯಮೈಃ ।
ಉಪಾಯೈರ್ದುರ್ಲಭಾನ್ಭಾವಾನಾಪ್ನುವಂತಿ ಹ್ಯತಂದ್ರಿಕಾಃ ॥ ೩೧೬ ॥

ಅಪರೇ ತು ಪರಿಚ್ಛಿದ್ಯ ನಾನಾಕಾರಾನುಪಕ್ರಮಾನ್ ।
ದೇಹಾಂತರಾರ್ಥಮಾರಂಭಮಾಶ್ರಯಂತಿ ಹಿ ತದ್ವ್ರತಂ ॥ ೩೧೭ ॥

ಮಮ ತ್ವಾಕಾಶಸಂಭೂತಕುಸುಮಸ್ರಗ್ವಿಭೂಷಿತಂ ।
ವಿಂಧ್ಯಶೃಂಗಂ ಸ್ಪ್ರಷ್ಟುಕಾಮೋ ಹಸ್ತಃ ಪ್ರಸರತೇ ಮುಹುಃ ॥ ೩೧೮ ॥

ಅಹಂ ಕಿಲ ಭವಂ ದೇವಂ ಪತಿಂ ಪ್ರಾಪ್ತುಂ ಸಮುದ್ಯತಾ ।
ಪ್ರಕೃತ್ಯೈವ ದುರಾರಾಧ್ಯಂ ತಪಸ್ಯಂತಂ ಚ ಸಂಪ್ರತಿ ॥ ೩೧೯ ॥

ಸುರಾಸುರೈರನಿರ್ಣೀತಂ ಪರಮಾರ್ಥಕ್ರಿಯಾಶ್ರಯಂ ।
ಸಾಂಪ್ರತಂ ಚಾಪಿ ನಿರ್ದಗ್ಧೋ ಮದನೋ ವೀತರಾಗಿಣಾ ॥
ಕಥಮಾರಾಧಯೇದೀಶಂ ಮಾದೃಶೀ ತಾದೃಶಂ ಶಿವಂ ॥ ೩೨೦ ॥

---

೩೧೬. ಕೆಲವರು ಅದರಲ್ಲಿ ಜಾಣರಾಗಿ ಅನೇಕ ಪ್ರಯತ್ನಗಳಿಂದ ಆ ಕೆಲಸವನ್ನು ಮಾಡಿಕೊಳ್ಳುತ್ತಾರೆ. ಎಷ್ಟು ಕಷ್ಟವಾದರೂ ಬೇಸರಪಡದೆ ಆ ಕೆಲಸವು ಅಸಾಧ್ಯವಾದರೂ ಉಪಾಯಗಳಿಂದ ಮಾಡಿಕೊಳ್ಳುತ್ತಾರೆ.

೩೧೭. ಮತ್ತೆ ಕೆಲವರು ಅನೇಕ ಬಗೆಯನ್ನು ಆಶ್ರಯಿಸದೆ ಒಂದೇ ರೀತಿಯಿಂದಿದ್ದು ದೇಹವು ನಾಶವಾಗುವವರೆಗೂ ಆ ವ್ರತಗಳನ್ನು ಬಿಡುವುದಿಲ್ಲ.

೩೧೮. ನನ್ನ ಕೈಗಳಾದರೋ ಆಕಾಶದಲ್ಲಿ ಹುಟ್ಟಿ, ಹೂಗಳ ಮಾಲೆಯಿಂದ ಅಲಂಕರಿಸಲ್ಪಟ್ಟ (ಅಂತರಿಕ್ಷವನ್ನು ಮುಟ್ಟುವ) ವಿಂಧ್ಯ ಪರ್ವತದ ಶಿಖರವನ್ನು ಮುಟ್ಟಲು ಮೇಲಕ್ಕೆ ಹೋಗುತ್ತವೆ.

೧೩೯-೩೨೦. ನಾನಾದರೋ ಈಶ್ವರನನ್ನು ಗಂಡನನ್ನಾಗಿ ಹೊಂದಬೇಕೆಂದು ಪ್ರಯತ್ನಿಸಿದ್ದೇನೆ. ಅವನು ಸ್ವಭಾವವಾಗಿಯೇ ಪೂಜಿಸಲು ಆಗದವನು. ಈಗಂತಲೂ ತಪಸ್ಸನ್ನು ಮಾಡುತ್ತಿದ್ದಾನೆ. ದೇವದಾನವರೂ ಕೂಡ ಅವನನ್ನು ಇಂಥವನೆಂದು ನಿರ್ಣಯಿಸಲಾರರು ಪರಮಾರ್ಥವಾದ ಕ್ರಿಯೆಯನ್ನು ಹೊಂದಿರುವನು ಈಗತಾನೆ ಅವನು ಮನ್ಮಥನನ್ನು ಸುಟ್ಟಿರುವನು. ಅವನು ಆಶೆಗಳನ್ನು ಬಿಟ್ಟಿರತಕ್ಕವನು. ಅಂತಹವನನ್ನು ನನ್ನಂತಹವಳು ಹೇಗೆತಾನೇ ಹೊಂದಲು ಸಾಧ್ಯವಾದೀತು?

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಮುನಯಸ್ತೇ ತು ಸ್ಥಿರತಾಂ ಮನಸಃ ಸ್ಥಿತಾಃ ।
ಜ್ಞಾತುಮಸ್ಯಾ ವಚಃ ಪ್ರೋಚುಃ ಪ್ರಕ್ರಮಾತ್ಪ್ರಕೃತಾರ್ಥಕಂ ॥ ೩೨೧ ॥

॥ ಮುನಯ ಊಚುಃ ॥

ದ್ವಿವಿಧಂ ತು ಸುಖಂ ತಾವತ್ಪುತ್ರಿ ಲೋಕೇ ವಿಭಾವ್ಯತೇ ।
ಶರೀರಸ್ಯಾಸ್ಯ ಸಂಯೋಗಶ್ಚೇತಸಶ್ಚಾಪಿ ನಿರ್ವೃತಿಃ ॥ ೩೨೨ ॥

ಪ್ರಕೃತ್ಯಾತು ಸ ದಿಗ್ವಾಸಾ ಭೀಮೋ ಭಸ್ಮಾಸ್ಥಿಭೂಷಣಃ ।
ಕಪಾಲೀ ಭಿಕ್ಷುಕೋ ನಗ್ನೋ ವಿರೂಪಾಕ್ಷೋಽಸ್ಥಿರಕ್ರಿಯಃ ॥ ೩೨೩ ॥

ಪ್ರಮತ್ತೋನ್ಮತ್ತಕಾಕಾರೋ ಬೀಭತ್ಸಕೃತಸಂಗ್ರಹಃ ।
ಪತಿನಾ ತೇನ ನಾಸ್ತ್ಯರ್ಥೋ ಮೂರ್ತಾನರ್ಥೇನ ಕಾಂಕ್ಷಿತಃ ॥ ೩೨೪ ॥

ಯದಿ ಸ್ವಸ್ಯ ಶರೀರಸ್ಯ ಸುಖಮಿಚ್ಛಸಿ ಶಾಶ್ವತಂ ।
ತತ್ಕಥಂ ತೇ ಮಹಾದೇವಾದ್ಭೂತಭಾಜೋ ಜುಗುಪ್ಸಿತಾತ್ ॥ ೩೨೫ ॥

---

೩೨೧. ಪುಲಸ್ತ್ಯನು ಹೇಳಿದನು–ಆಕೆಯು ಹೀಗೆನ್ನಲು ಮುನಿಗಳು ಈಕೆಯ ಮನಸ್ಸಿನ ದೃಢವನ್ನು ತಿಳಿದುಕೊಳ್ಳಲು ಕ್ರಮವಾಗಿ ಕೆಲಕೆಲವು ಮಾತುಗಳನ್ನಾಡಿದರು.

೩೨೨. ಮುನಿಗಳು ಹೇಳಿದರು–ಅಮ್ಮ! ಲೋಕದಲ್ಲಿ ಸುಖವೆಂಬುದು ಎರಡು ಬಗೆಯಾಗಿದೆ.

೩೨೩-೩೨೪. ಅವನು ಸ್ವಭಾವವಾಗಿಯೇ ದಿಗಂಬರನು, ಬೂದಿ, ಮೂಳೆಗಳನ್ನು ಅಲಂಕಾರವುಳ್ಳವನು ಕಪಾಲವನ್ನು ಕೈಯಲ್ಲಿ ಹಿಡಿದಿದ್ದಾನೆ. ಭಿಕ್ಷುಕನು ಬೆತ್ತಲೆ ಇದ್ದಾನೆ. ಮುಕ್ಕಣ್ಣನು, ಚಪಲನು, ಕೊಬ್ಬಿದವನು, ಹುಚ್ಚನು, ಭಯಂಕರವಾದ ಪದಾರ್ಥಗಳನ್ನೇ ಹತ್ತಿರದಲ್ಲಿಟ್ಟುಕೊಂಡಿದ್ದಾನೆ. ಅನರ್ಥಗಳೇ ಅವನಲ್ಲಿ ಮೂರ್ತಿಮತ್ತಾಗಿವೆ. ಅವನನ್ನು ಗಂಡನನ್ನಾಗಿ ಹೊಂದಿದರೆ ನಿನ್ನ ಅಪೇಕ್ಷೆಗಳು ಕೈಗೂಡುವುದಿಲ್ಲ. ಅದು ಉಪಯೋಗವಿಲ್ಲ.

೩೨೫-೩೩೦. ನಿನ್ನ ದೇಹಕ್ಕೆ ಶಾಶ್ವತವಾದ ಸುಖವು ಸಿಕ್ಕಬೇಕಾದರೆ ಆ ಅಸಹ್ಯಕರನಾದ ಮಹಾದೇವನಿಂದ ಅದು ಸಿಕ್ಕುವುದಿಲ್ಲ. ಅವನು ಮನುಷ್ಯನ ಕೊಬ್ಬು,

ಸ್ರವನ್ನರವಸಾತ್ನಾಸ್ಥಿಕಪಾಲಕೃತಭೂಷಣಾತ್ ।
ಶ್ವಸದುಗ್ರಭುಜಂಗೇಂದ್ರಕೃತಭೂಷಣಭೂಷಣಾತ್ ॥ ೩೨೬ ॥

ಶ್ಮಸಾನವಾಸಿನೋ ರೌದ್ರಪ್ರಮಥಾನುಗತಾದಪಿ ।
ಸುರೇಂದ್ರಮುಕುಟವ್ರಾತನಿಘೃಷ್ಟಚರಣೋಽರಿಹಾ ॥ ೩೨೭ ॥

ಹರಿರಸ್ತಿ ಜಗದ್ಧಾತಾ ಶ್ರೀಕಾಂತೋಽನಂತಮೂರ್ತಿಮಾನ್ ।
ನಾಥೋ ಯಜ್ಞಭುಜಾಮಸ್ತಿ ತಥೇಂದ್ರಃ ಪಾಕಶಾಸನಃ ॥ ೩೨೮ ॥

ದೇವತಾನಾಂ ನಿಧಿಶ್ಚಾಸ್ತಿ ಜ್ವಲನಃ ಸರ್ವಕಾಮಧುಕ್ ।
ವಾಯುರಸ್ತಿ ಜಗದ್ಧಾತಾ ಯಃ ಪ್ರಾಣಃ ಸರ್ವದೇಹಿನಾಂ ॥ ೩೨೯ ॥

ತಥಾ ವೈಶ್ರವಣೋ ರಾಜಾ ಸರ್ವಾರ್ಥಮಹಿಮಾ ಪ್ರಭುಃ ।
ಏಭ್ಯ ಏಕತಮಂ ಕಸ್ಮಾತ್ತ್ವಂ ನ ಸಂಪ್ರಾಪ್ತುಮಿಚ್ಛಸಿ ॥ ೩೩೦ ॥

ಉತಾನ್ಯಾದಿ ಹಸಂಪ್ರಾಪ್ತ್ಯಾ ಸುಖಂ ತೇ ಮನಸೇಹಿತಂ ।
ಏವಮೇತತ್ತಥಾ ಪುತ್ರಿ ಪ್ರಭಾವೋ ಲೋಕಸಂಪದಾಂ ॥ ೩೩೧ ॥

---

ಸೋರುತ್ತಿರುವ ನರಕಪಾಲವನ್ನು ಹಿಡಿದುಕೊಂಡಿದ್ದಾನೆ. ಭಯಂಕರವಾದ ಪ್ರಮಥ ಗಣಗಳ ಜೊತೆಯಲ್ಲಿ ಸೇರಿಕೊಂಡಿರುತ್ತಾನೆ. ಬುಸುಗುಟ್ಟುತ್ತಿರುವ ಸರ್ಪಗಳನ್ನು ಮೈಗೆಲ್ಲಾ ಕಟ್ಟಿಕೊಂಡಿದ್ದಾನೆ. ಯಾವಾಗಲೂ ಸ್ಮಶಾನದಲ್ಲಿಯೇ ಇರುತ್ತಾನೆ. ಇಂತಹವನನ್ನು ನೀನು ಹೇಗೆ ಸೇರುತ್ತೀಯೆ ? ಸುಖತಾನೆ ಹೇಗೆ ಬಂದೀತು ? ದೇವತೆಗಳ ಕಿರೀಟದಿಂದ ತಿಕ್ಕಲ್ಪಟ್ಟ ಪಾದಗಳುಳ್ಳ ಜಗದ್ರಕ್ಷಕನಾದ ಶ್ರೀಕಾಂತನಾದ ಅನೇಕ ಶರೀರಗಳನ್ನು ಹೊಂದಬಲ್ಲ ವಿಷ್ಣುವಿದ್ದಾನೆ. ದೇವತೆಗಳಿಗೆ ಒಡೆಯನಾದ ಪಾಕಾಸುರನನ್ನು ಕೊಂದ ಇಂದ್ರನಿದ್ದಾನೆ. ದೇವತೆಗಳಿಗೆ ನಿಧಿಯಾದ ಇಷ್ಟಾರ್ಥಗಳನ್ನು ಕೊಡುವ ಅಗ್ನಿಯಿದ್ದಾನೆ. ಎಲ್ಲರಿಗೂ ಪ್ರಾಣರೂಪನಾಗಿ ಪ್ರಪಂಚವನ್ನೇ ಕಾಪಾಡುವ ವಾಯುವಿದ್ದಾನೆ. ಅನೇಕ ಮಹಿಮೆಗಳಿಗೆ ಆಶ್ರಯನಾದ ಕುಬೇರನಿದ್ದಾನೆ. ಇವರಲ್ಲಿ ಯಾರನ್ನಾದರೂ ನೀನೇಕೆ ಅಪೇಕ್ಷಿಸಲಿಲ್ಲ. ?

೩೩೧-೩೩೨. ಇದಲ್ಲದೆ ಮತ್ತೆ ಯಾವುದಾದರೂ ಸುಖವನ್ನು ಹೊಂದಬೇಕೆಂಬ ಆಸೆಯಿದ್ದರೆ ಅದು ಮನಸ್ಸಿಗೆ ಬೇಕಾದ ಸುಖವಾಗಿದ್ದರೆ ಆಗ ಇದಾಗಬಹುದು. ಅದು ಲೋಕದ ಸ್ವಭಾವವು. ಆದರೂ ಕೂಡ ಈ ದೇಹದಲ್ಲಾಗಲೀ, ಸತ್ತಮೇಲಾ

ಅಸ್ಮಿನ್ದೇಹೇ ಪರೇ ವಾಽಪಿ ಕಲ್ಯಾಣಪ್ರಾಪ್ತಯೇ ತವ ।
ಪಿತುರೇವಾಸ್ತಿ ತೇ ಸರ್ವಂ ಸುರೇಭ್ಯೋ ಯನ್ನಿವೇದಿತಂ ॥ ೩೩೨ ॥

ವರಸ್ತು ಪ್ರಾಪ್ತಯೇ ಕ್ಲೇಶಃ ಸ ಚಾಪ್ಯತ್ರಾಫಲಸ್ತರುಃ ।
ಪ್ರಾಯೇಣ ಪ್ರಾರ್ಥಿತೋ ಹ್ಯರ್ಥಃ ಸಮರ್ಥೋ ಹ್ಯತಿದುರ್ಲಭಃ ॥
ಸ್ವಸ್ಥಾನವಿನಿಯೋಗಿತ್ವಾತ್ಪುತ್ರಿ ತತ್ರಾಪಿ ಲಭ್ಯತೇ ॥ ೩೩೩ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತವತ್ಸು ಕುಪಿತಾ ಮುನಿವರ್ಯೇಷು ಶೈಲಜಾ ।
ಉವಾಚ ಕ್ರೋಧರಕ್ತಾಕ್ಷೀ ಸ್ಫುರದ್ಭಿರ್ದಶನಚ್ಛದೈಃ ॥ ೩೩೪ ॥

॥ ದೇವ್ಯುವಾಚ ॥

ಅಸದ್ಗ್ರಹಸ್ಯ ಕಾ ನೀತಿರ್ವ್ಯಸನಸ್ಯ ಕ್ವ ಯಂತ್ರಣಾ ।
ವಿಪರೀತಾರ್ಥಬೋದ್ಧಾರಃ ಸತ್ಪಥೇ ಕೇನ ಯೋಜಿತಾಃ ॥ ೩೩೫ ॥

---

ಗಲೀ, ಸುಖವನ್ನು ಹೊಂದಲು ಅಪೇಕ್ಷಿಸಿದರೆ ಆಫಲವನ್ನು ಕೊಡಲು ಲೋಕದ ಸಂಪತ್ತುಗಳಿಗೆಲ್ಲಾ ಉತ್ಪತ್ತಿ ಸ್ಥಾನನಾದ ನಿನ್ನ ತಂದೆಯೇ ಇರುವನಲ್ಲ. ದೇವತೆಗಳು ಯಾವಯಾವುದನ್ನು ಕೊಡಬಲ್ಲರೋ ಅದೆಲ್ಲವನ್ನೂ ಅವನೇ ಕೊಡಬಲ್ಲನಲ್ಲ.

೩೩೩. ವರವನ್ನು ಹೊಂದಬೇಕಾದರೆ ಕಷ್ಟ. ನೀನು ಉದ್ದೇಶಿಸುವ ಮರವು ಹಣ್ಣಿಲ್ಲದ್ದು. ಸಾಧಾರಣವಾಗಿ ನಾವು ಅಪೇಕ್ಷಿಸುವ ಆಶೆಗಳು ಆತನಲ್ಲಿ ಸಿಕ್ಕುವುದು ಬಹಳ ಕಷ್ಟವಾಗಿರುವುವು. ಅವು ಉಳಿದೆಡೆಯಲ್ಲೂ ಸಿಕ್ಕುತ್ತವೆ. ಅವನನ್ನು ಬಿಟ್ಟು ಬೇರೆಯವನನ್ನು ಅಪೇಕ್ಷಿಸಿದರೂ ಅವು ಸಿಕ್ಕುತ್ತವೆ.

೩೩೪. ಪುಲಸ್ತ್ಯನು ಹೇಳಿದನು- ಈ ಋಷಿಗಳು ಇಂತೆನ್ನಲು ಅವರಲ್ಲಿ ಈಕೆಯು ಕೋಪಗೊಂಡು ಪ್ರಕಾಶಮಾನವಾದ ತುಟಿಗಳನ್ನು ಕೋಪಗಳಿಂದ ನಡುಗಿಸುತ್ತ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಇಂತೆಂದಳು.

೩೩೫. ದೇವಿಯು ಹೇಳಿದಳು- ಅಯೋಗ್ಯವಾದುದನ್ನು ಆಶ್ರಯಿಸುವುದಕ್ಕೆ ನೀತಿಯಾವುದಿದೆ ? ಆ ದುರಾಸೆಗಳಿಗೆ ನಿಯಮವೇನಿದೆ ? ನೀವುಗಳು ವಿಷಯವನ್ನು ವ್ಯತ್ಯಾಸವಾಗಿ ತಿಳಿದುಕೊಂಡಿದ್ದೀರಿ. ಅದನ್ನೇ ಭೋಧಿಸುತ್ತಿದ್ದೀರಿ ಇಂತಹ ನಿಮ್ಮನ್ನು ಒಳ್ಳೆಯ ದಾರಿಯಲ್ಲಿರುವಿರೆಂದು ಯಾರುತಾನೆ ಹೇಳುವರು ?

ಏವಂ ಮಾಂ ವಿತ್ಥ ದುಷ್ಪ್ರಜ್ಞಾಮಸ್ಥಾನಾಸದ್ಗ್ರಹಪ್ರಿಯಾಂ ।
ನ ಮಾಂ ಪ್ರತಿ ವಿಚಾರೋಽಸ್ತಿ ಯದಹಂಕಾರಮಾನಿನೀ ॥ ೩೩೬ ॥

ಪ್ರಜಾಪತಿಸಮಾಃ ಸರ್ವೇ ಭವಂತಃ ಸರ್ವದರ್ಶಿನಃ ।
ನ ನೂನಂ ವಿತ್ಥ ತಂ ದೇವಂ ಶಾಶ್ವತಂ ಜಗತಃ ಪ್ರಭುಂ ॥ ೩೩೭ ॥

ಅಜಮೀಶಾನಮವ್ಯಕ್ತಮಮೇಯಮಹಿಮೋದಯಂ ।
ಆಸ್ತಾಂ ತತ್ಕರ್ಮಸದ್ಭಾವಂ ಸಂಬೋಧಂ ತಾವದಾವೃತಂ ॥೩೩೮ ॥

ವಿದುಸ್ತಂ ನ ಹರಿಬ್ರಹ್ಮಮುಖಾ ಅಪಿ ಸುರೇಶ್ವರಾಃ ।
ಯತ್ತಸ್ಯ ವಿಭವಂ ಸ್ಫೋತ್ಥಂ ಭುವನೇಷು ವಿಜೃಂಭಿತಂ ॥ ೩೩೯ ॥

ಪ್ರಕಟಂ ಸರ್ವಭೂತಾನಾಂ ತದಪ್ಯಥ ನ ವಿತ್ಥ ಕಿಂ ।
ಕಸ್ಯೈತದ್ಗಗನಂ ಮೂರ್ತಿಃ ಕಸ್ಯಾಗ್ನಿಃ ಕಸ್ಯ ಮಾರುತಃ ॥ ೩೪೦ ॥

ಕಸ್ಯ ಭೂಃ ಕಸ್ಯ ವರುಣಃ ಕಶ್ಚಂದ್ರಾರ್ಕವಿಲೋಚನಃ ।
ಕಸ್ಯಾರ್ಚಯಂತಿ ಲೋಕೇಷು ಲಿಂಗಂ ಭಕ್ತ್ಯಾ ಸುರಾಸುರಾಃ ॥ ೩೪೧ ॥

---

೩೩೬. ನಾನು ದುರ್ಬುದ್ಧಿಯುಳ್ಳವಳೆಂದೂ ಅಯೋಗ್ಯ ಸ್ಥಳದಲ್ಲಿ ಅಯೋಗ್ಯವಾದುದನ್ನು ಹೊಂದುವುದರಲ್ಲಿ ಆಶೆಯುಳ್ಳವಳೆಂದೇ ತಿಳಿಯಿರಿ. ನನ್ನನ್ನು ಕುರಿತು ಯೋಚಿಸಬೇಡಿರಿ. ನಾನು ಅಹಂಕಾರಿಣಿಯು, ಕೋಪಿಯು.

೩೩೭. ನೀವೆಲ್ಲರೂ ಬ್ರಹ್ಮನಿಗೆ ಸಮಾನವಾದವರು, ಎಲ್ಲವನ್ನೂ ತಿಳಿದವರು, ಶಾಶ್ವತನಾದ ಜಗತ್ತಿಗೇ ಪ್ರಭುವಾದ ಆ ಸ್ವಾಮಿಯನ್ನು ನೀವು ತಿಳಿದಿಲ್ಲ.

೩೩೮. ಹುಟ್ಟುವಿಕೆಯಿಲ್ಲದವನು, ಐಶ್ವರ್ಯವಂತನು ವ್ಯಕ್ತನಲ್ಲದವನು, ಅಳೆಯುವುದಕ್ಕೆ ಆಗದ ಮಹಿಮೆಯುಳ್ಳವನು ಇವನ ಕೆಲಸವು ಹಾಗಿರಲಿ. ಜ್ಞಾನದಿಂದ ಕೂಡಿದ್ದಾನೆ.

೩೩೯-೩೪೧. ಹರಿ, ಬ್ರಹ್ಮ, ಮುಂತಾದ ದೇವತೆಗಳೂ, ಕೂಡ ಅವನನ್ನು ತಿಳಿಯರು. ಅವನ ಮಹಿಮೆಯು ಪ್ರಪಂಚದಲ್ಲಿ ಎಲ್ಲ ಪ್ರಾಣಿಗಳಿಗೂ ತಿಳಿದಿರುತ್ತದೆ. ಅದನ್ನು ನೀವು ತಿಳಿಯದಿರುವಿರೇನು ? ಆಕಾಶ, ಅಗ್ನಿ, ವಾಯು, ಭೂಮಿ, ನೀರು, ಚಂದ್ರ, ಸೂರ್ಯರು, ಯಾವನ ದೇಹವಾಗಿರುವರೋ ಅವನನ್ನು ಹೇಗೆ ತಿಳಿಯದಿರುವಿರಿ ! ಯಾವನ ಲಿಂಗವನ್ನು ದೇವತೆಗಳೂ, ದಾನವರೂ, ಭಕ್ತಿಯಿಂದ ಪೂಜಿಸುವರೋ, ಅವನನ್ನು ಹೇಗೆ ತಿಳಿಯದಿರುವಿರಿ?

ಯಚ್ಚ ಬ್ರಹ್ಮೇಶ್ವರಾ ದೇವಾಃ ವಿಷ್ಣ್ವಿಂದ್ರಾದ್ಯಾ ಮಹರ್ಷಯಃ ।
ಪ್ರಭಾವಂ ಪ್ರಭವಂ ಚಾಪಿ ತೇಷಾಮಪಿ ನ ವಿತ್ಥ ಕಿಂ ॥ ೩೪೨ ॥

ಅದಿತೇಃ ಕಶ್ಯಪಾಜ್ಜಾತಾ ದೇವಾ ನಾರಾಯಣಾದಯಃ ।
ಮರೀಚೇಃ ಕಶ್ಯಪಃ ಪುತ್ರೋ ಹ್ಯದಿತಿರ್ದಕ್ಷಪುತ್ರಿಕಾ ॥ ೩೪೩ ॥

ಮರೀಚಿಶ್ಚಾಪಿ ದಕ್ಷಶ್ಚ ಪುತ್ರೌ ತೌ ಬ್ರಹ್ಮಣಃ ಕಿಲ ।
ಬ್ರಹ್ಮಾ ಹಿರಣ್ಮಯಂ ತ್ವಂಡಂ ದಿವ್ಯಸಿದ್ಧಿವಿಭೂತಿಕಂ ॥ ೩೪೪ ॥

ಕಸ್ಯ ಪ್ರಾದುರಭೂದ್ಧ್ಯಾನಾತ್ಪ್ರಾಕೃತಃ ಪ್ರಕೃತಾಂಶಕಃ ।
ಪ್ರಕೃತೌ ಚ ತೃತೀಯಾಯಾಮಬುದ್ಧಿಜನನೀ ಕ್ರಿಯಾ ॥ ೩೪೫ ॥

ಜಾತಃ ಸಸರ್ಜ ಯನ್ಮಾರ್ಗಾನ್ಬುದ್ಧಿಪೂರ್ವಾನ್ಸ್ವಕರ್ಮಜಾನ್ ।
ಅಜಾತಃ ಕೋಽಭವದ್ದೇವೋ ಬ್ರಹ್ಮಣೋಽವ್ಯಕ್ತಜನ್ಮನಃ ॥ ೩೪೬ ॥

---

೩೪೨. ಬ್ರಹ್ಮ, ವಿಷ್ಣು, ಮುಂತಾದ ದೇವತೆಗಳೂ, ಇಂದ್ರಾದಿಗಳೂ, ಮಹರ್ಷಿಗಳೂ, ಯಾವನ ಮಹಿಮೆಯನ್ನೂ, ಉತ್ಪತ್ತಿಯನ್ನೂ ತಿಳಿದಿಲ್ಲವೋ ಅಂತಹ ಇಂದ್ರಾದಿಗಳಿಗೂ ಕರ್ತೃವಾದ ಆತನ ಮಹಿಮೆಯನ್ನು ನೀವು ಹೇಗೆ ತಿಳಿಯಬಲ್ಲಿರಿ?

೩೪೩. ಕಶ್ಯಪನಿಂದ ಅದಿತಿಯಲ್ಲಿ ನಾರಾಯಣನೇ ಮೊದಲಾದ ದೇವತೆಗಳು ಹುಟ್ಟಿದರು. ಕಶ್ಯಪನು ಮರೀಚಿಯ ಮಗನು, ಅದಿತಿಯು ದಕ್ಷನ ಮಗಳು.

೩೪೪. ಮರೀಚಿಯೂ, ದಕ್ಷನೂ, ಅವರಿಬ್ಬರೂ ಬ್ರಹ್ಮನ ಮಕ್ಕಳು. ಬ್ರಹ್ಮನು ಚಿನ್ನದ ಅಂಡ (ಮೊಟ್ಟೆ) ರೂಪವಾದವನು. ಉತ್ತಮವಾದ ಸಿದ್ಧಿಪ್ರಭಾವಗಳುಳ್ಳವನು.

೩೪೫. ಆ ಬ್ರಹ್ಮನು ಈ ಶಿವನ ಸಂಕಲ್ಪದಿಂದ ಹುಟ್ಟಿದವನು, ಅವನು ಪ್ರಾಕೃತನು. ಪ್ರಕೃತಿ ಸಂಬಂಧಿಯು, ಪ್ರಕೃತಿಯ ಅಂಶವುಳ್ಳವನು. ಮೂರನೆಯದಾದ ಪ್ರಕೃತಿಯಲ್ಲಿ ಬುದ್ಧಿಪೂರ್ವಕವಾಗಿ ಮಾಡಿದ ಕ್ರಿಯೆಗಳಾಗುತ್ತವೆ.

೩೪೬. ಹಾಗೆ ಹುಟ್ಟಿದ ಬ್ರಹ್ಮನು ಶಿವನ ಮಾರ್ಗವನ್ನು ಅನುಸರಿಸುವುವುಗಳನ್ನು ಬುದ್ಧಿಪೂರ್ವಕವಾಗಿ ತನ್ನ ಕ್ರಿಯೆಯಿಂದ ಸೃಷ್ಟಿಸಿದನು. ಗೊತ್ತುಮಾಡಿಕೊಳ್ಳಲು ಆಗದಿರುವ ಜನ್ಮವುಳ್ಳ, ಬ್ರಹ್ಮನಿಗೂ ಜನ್ಮವನ್ನು ಕೊಟ್ಟ, ಉತ್ಪತ್ತಿರಹಿತನಾದ ಅವನು ಎಲ್ಲಕ್ಕೂ ಒಡೆಯನಾಗಿರುವನು.

ಯಃ ಸ್ವಯೋಗೇನ ಸಂಕ್ಷೋಭ್ಯ ಪ್ರಕೃತಿಂ ಕೃತವಾನಿದಂ ।
ಸಿದ್ಧಗಂಧರ್ವಸ್ಯೈಶ್ವರ್ಯಂ ಸರ್ವಂ ತಲ್ಲೋಕಕರ್ತೃಣಃ ॥ ೩೪೭ ॥

ಕೇನ ವಿಷ್ಣ್ವಾದಯಃ ಸೃಷ್ಟಾಃ ಸ್ವಮಹಿಮ್ನಾ ಸದೈವ ಹಿ ।
ಕೃತ್ವಾಽಯಂ ದೇಹಮನ್ಯಾದೃಕ್ತ್ಂ ತಂ ಕೃತ್ವಾ ಪುನರ್ಹರಿಃ ॥ ೩೪೮ ॥

ಕುರುತೇ ಜಗತಃ ಕೃತ್ಯಮುತ್ತಮಾಧಮಮಧ್ಯಮಂ ।
ಏವಮೇವ ಹಿ ಸಂಸಾರೋ ಜನ್ಮಾದಿಮರಣಾಂತಕಃ ॥ ೩೪೯ ॥

ಸ್ವಕರ್ಮಣಃ ಫಲಂ ಹ್ಯೇತತ್ಸ್ವತನೋರನುರೂಪತಃ ।
ಅಥ ನಾರಾಯಣೇನೈವ ಸ್ವಕೀಯೇಚ್ಛಾಸಮಾಶ್ರಯಾತ್ ॥ ೩೫೦ ॥

ತತ್ಪ್ರೇರಿತಃ ಪ್ರಯಾತ್ಯೇಷಃ ಜನ್ಮನಾರಾಯಣಾತ್ಮಕಂ ।
ಸೋಽಪಿ ಕರ್ಮಣಿ ಏವೋಽಕ್ತಾ ಪ್ರೇರಣಾವಿವಶಾತ್ಮನಾಂ ॥ ೩೫೧ ॥

---

೩೪೭. ಯಾವನು ತನ್ನ ಯೋಗದಿಂದಲೇ ಮಥಿಸಿ, ಈ ಪ್ರಕೃತಿಯನ್ನೂ, ಸಿದ್ಧರು, ಗಂಧರ್ವರು, ಇವರ ಐಶ್ವರ್ಯವನ್ನೂ ಸೃಷ್ಟಿಸಿದನೋ ಅವೆಲ್ಲವೂ ಈ ಲೋಕಕರ್ತೃವಾದ ಈಶ್ವರನದಲ್ಲವೇ ?

೩೪೮-೩೪೯. ಯಾವನು ವಿಷ್ಣುವೇ ಮುಂತಾದವರನ್ನು ತನ್ನ ಮಹಿಮೆಯಿಂದ ಸೃಷ್ಟಿಸಿರುವನೋ ಅಂತಹವರಲ್ಲಿ ಹರಿಯು ಬೇರೆಬೇರೆ ದೇಹಗಳನ್ನು ತೆಗೆದುಕೊಂಡು ಉತ್ತಮ, ಮಧ್ಯಮ, ಅಧಮ, ಕೃತ್ಯಗಳುಳ್ಳ ಈ ಜಗತ್ತಿನ ಕೆಲಸವನ್ನು ಮಾಡುವನು. ಹುಟ್ಟಿದ ಮೊದಲುಗೊಂಡು ಸಾಯುವವರೆಗೂ ಇರುವ ಸಂಸಾರದ ಸ್ಥಿತಿಯೇ ಇದು.

೩೫೦-೩೫೧. ತನ್ನ ಕರ್ಮದ ಫಲಕ್ಕೆ ಅನುರೂಪವಾಗಿ ತಾನು ದೇಹವನ್ನು ಹೊಂದಿರುತ್ತಾನೆ. ಆ ಶಿವನಿಂದಲೇ ಪ್ರೇರಿತನಾಗಿ ನಾರಾಯಣನು ಆತನ ಇಚ್ಛೆಯನ್ನು ಅನುಸರಿಸಿ ನಾರಾಯಣನೇ ಮುಂತಾದ ಅವತಾರಗಳನ್ನು ಹೊಂದುವನು. ಅದು ಕೂಡ ಕರ್ಮಾಧೀನವಾದುದು. ಪ್ರೇರಣೆಯೆಂಬುದು ಪರಾಧೀನರಿಗಲ್ಲವೇ ?

ಯಥೋನ್ಮಾದಾದಿದುಷ್ಟಸ್ಯ ಮತಿರೇವ ಹಿ ಸಾ ಭವೇತ್ ।
ಇಷ್ಟಾನೇವ ಪದಾರ್ಥಾನ್ಸ್ವೈ ವಿಪರೀತಾನ್ಹಿ ಮನ್ಯತೇ ॥ ೩೫೨ ॥

ಲೋಕಸ್ಯ ವ್ಯವಹಾರೇಷು ದೃಷ್ಟೇಷು ಹಸತೇ ಸದಾ ।
ದರ್ಮಾಧರ್ಮಫಲಪ್ರಾಪ್ತೌ ವಿಷ್ಣುಮೇವ ನಿಭೋಧತ ॥ ೩೫೩ ॥

ತಥಾಽನಾದಿತ್ವಮಸ್ಯಾಸ್ತಿ ಸಾಮಾನ್ಯಂ ತು ತದಾತ್ಮನಾಂ ।
ತಸ್ಯ ವಾ ಜೀವಿತಂ ದೀರ್ಘಂ ದೃಷ್ಟಂ ದೇಹೇ ತು ಕುತ್ರಚಿತ್ ॥ ೩೫೪ ॥

ಭವದ್ಭಿರ್ಯಸ್ಯ ನೋ ದೃಷ್ಟಂ ಭಾವಮಂತಪಥಾಪಿ ವಾ ।
ದೇಹಿನಾಮೇಕ ಏವೈಷ ಕ್ವಚಿಜ್ಜಾಯೇನ್ಮ್ರಿಯೇತ್ಕ್ವಚಿತ್ ॥ ೩೫೫ ॥

ಕ್ವಚಿದ್ಗರ್ಭಗತೋ ನ ಸ್ಯಾತ್ಕ್ವಚಿಜ್ಜೀವೋ ನರಾಮರಾಃ ।
ಕ್ವಚಿತ್ಸಮಾಃ ಶತಂ ಜೀವೇತ್ಕ್ವಚಿದ್ವಾಕ್ಯೇ ವಿಪರ್ಯಯಃ ॥ ೩೫೬ ॥

---

೩೫೨. ಹುಚ್ಚು ಮುಂತಾದುವುಗಳಿಂದ ಕೂಡಿದವನಿಗೆ ಹೇಳಿದಂತೆ ಕೇಳುವ ಬುದ್ಧಿಯು ಬರುತ್ತದೆ. ಅವನು ತನಗೆ ಇಷ್ಟವಾದ ಪದಾರ್ಥಗಳನ್ನು ಇಷ್ಟವಲ್ಲದವುಗಳನ್ನಾಗಿ ತಿಳಿಯುತ್ತಾನೆ.

೩೫೩. ಲೋಕದ ವ್ಯವಹಾರಗಳನ್ನು ನೋಡುತ್ತ ಆ ಹುಚ್ಚನು ನಗುತ್ತಾನೆ. ಅದರಂತೆನೀವು ಧರ್ಮ, ಅಧರ್ಮಗಳ ಫಲವನ್ನು ಹೊಂದುವುದರಲ್ಲಿ ವಿಷ್ಣುವೇ ಕರ್ತನೆಂಧು ತಿಳಿಯಿರಿ.

೩೫೪. ಅದೇ ರೀತಿ ಅವನಿಗೆ ಆದಿಯಿಲ್ಲದಿರುವಿಕೆಯೂ, ಇರುತ್ತದೆ. ಆ ಈಶ್ವರನನ್ನೇ ಆತ್ಮದಲ್ಲಿ ಉಳ್ಳವರಿಗೆ ಆ ಅನಾದಿತ್ವವು ಸಾಮಾನ್ಯವಾದುದು. ಅವನ ಜೀವಿತವೂ ದೀರ್ಘವಾದುದೇ. ಅವನ್ನು ಕೆಲವೆಡೆ ನೋಡಿದ್ದೇವೆ.

೩೫೫. ನೀವು ಯಾರ ಹುಟ್ಟು ಸಾವುಗಳನ್ನು ನೋಡಿಲ್ಲವೋ ಅಂಥವನು ದೇಹ ಹೊಂದಿದವರಲ್ಲಿ ಈ ಶಿವನೊಬ್ಬನೇ. ಕೆಲವರು ಸಾಯುತ್ತಾರೆ ಮತ್ತೆ ಹುಟ್ಟುತ್ತಾರೆ.

೩೫೬-೩೫೭. ಒಂದೊಂದು ಸಾರಿ ಗರ್ಭದಲ್ಲಿರುವನು. ಕೆಲವು ವೇಳೆ ನರರು ದೇವತೆಗಳ ಜೀವವಾಗಿರುವನು. ಕೆಲವು ಕಡೆ ನೂರು ವರ್ಷಗಳು ಬದುಕುವನು.

ಶತಾಯುಃ ಪುರುಷೋಯಸ್ತು ಸೋಽನಂತಃ ಸ್ವಲ್ಪಜೀವಿತಃ ।
ಜೀವಿತೋ ಯೋ ಮ್ರಿಯತ್ಯಗ್ರೇ ತಸ್ಮಾತ್ಸೋಽಮರ ಉಚ್ಯತೇ ॥ ೩೫೭ ॥

ಅದೃಷ್ಟಜನ್ಮನಿಧನೇಷ್ವೇವಂ ವಿಷ್ಣ್ವಾದಯೋ ಗತಾಃ ।
ಏತಚ್ಛೈಲೇಷ್ವ ತನ್ಮೈಶ್ವರ್ಯಃ ಸಂಸಾರೇ ಕೋ ಭವೇದಿಹ ॥ ೩೫೮ ॥

ತತ್ಕ್ಷಯಾಯೋದಿತೋ ಯೋಗೋ ದಾನಾನ್ಯಾಶ್ಚರ್ಯರೂಪಿಣಃ ।
ತಸ್ಮಾದನೀಶ್ವರಾನ್ಸರ್ವಾನನ್ಯತ್ಕಶ್ಚಿದ್ಭವಿಷ್ಯತಿ ॥ ೩೫೯ ॥

॥ ಮುನಯ ಊಚುಃ ॥

ಭವತ್ಪ್ರಸಾದಾಮಲವಾರಿಸೇವಿತಾ ।
ಫಲೇನ ಕಶ್ಚಿತ್ತು ಧನಾದ್ವಿಮುಹ್ಯತೇ ॥
ಜಗತ್ಯಸೌ ಧನ್ಯತಮೋ ಹಿಮಾಚಲ ।
ಸ್ತದಾಶ್ರಯಂ ಯಸ್ಯಸುತಾ ತಪಸ್ಯತಿ ॥ ೩೬೦ ॥

---

ಕೆಲವು ವೇಳೆ ಮಧ್ಯದಲ್ಲಿಯೇ ಸಾಯುವನು. ಶತಾಯುಸ್ಸುಳ್ಳವರು ಮನುಷ್ಯರು. ಸ್ವಲ್ಪಕಾಲ ಬದುಕುವರು. ಜೀವವಿದ್ದರೂ ಯಾವನು ಸತ್ತವರಂತಿರುವನೋ ಅದರಿಂದಲೇ ಅವನು ಅಮರನೆನ್ನಿಸಿಕೊಳ್ಳುತ್ತಾನೆ.

೩೫೮. ಹುಟ್ಟು ಸಾವುಗಳು ತಿಳಿಯದಿರುವವರಲ್ಲಿ ವಿಷ್ಣು ಬ್ರಹ್ಮಾದಿಗಳು ಸೇರಿಕೊಂಡಿರುವರು. ಸಂಸಾರದಲ್ಲಿ ಈ ಶಿವನ ರೀತಿಯಾದ ಐಶ್ವರ್ಯವುಳ್ಳವನು ಯಾವನು ತಾನೆ ಇರುವನು ?

೩೫೯. ಆ ಜನನಮರಣಗಳನ್ನು ನಾಶಮಾಡಿಕೊಳ್ಳುವುದಕ್ಕೆ ಯೋಗವೂ ದಾನಗಳೂ ಹೇಳಲ್ಪಟ್ಟಿವೆ. ಆಶ್ಚರ್ಯ ರೂಪವುಳ್ಳ, ಸ್ವತಂತ್ರನಾದ, ಎಲ್ಲರಿಗೂ ಉತ್ಕೃಷ್ಟನಾದ ಅವನಿಗಿಂತಲೂ ಉತ್ತಮನು ಮತ್ತೊಬ್ಬನು ಇದ್ದಾನೇನು ?

೩೬೦. ಮುನಿಗಳು ಹೇಳಿದರು—ನಿನ್ನ ಅನುಗ್ರಹವೆಂಬ ನಿರ್ಮಲವಾದ ನೀರನ್ನು ಹೊಂದಿ ಬೆಳೆದ ಫಲವೆಂಬ ಧನದಿಂದಲೇ ಯಾವನಾದರೂ ಕೂಡ ಮೈಮರೆಯುತ್ತಾನೆ. ಯಾವ ಹಿಮವಂತನಲ್ಲಿ ಮಗಳಾದ ಪಾರ್ವತಿಯು ತಪಸ್ಸು ಮಾಡುತ್ತಾಳೋ ಅಂತಹ ಹಿಮಾಚಲನೂ ಅವನ ಆಶ್ರಯವಾದ ಸ್ಥಾವರ ರೂಪವಾದ ಪರ್ವತವೂ ಕೂಡ ಈ ಜಗತ್ತಿನಲ್ಲಿ ಬಹು ಧನ್ಯವಾದುವು.

ಸ ದೈತ್ಯರಾಜೋಽಪಿ ಮಹಾಫಲೋದಯೋ ।
ವಿಮೂಲಿತಾಶೇಷಸುರೋಽಪಿ ಸತ್ವರಃ ॥
ತ್ವದೀಯಮಂಶಂ ಪ್ರವಿಲೋಕ್ಯ ಕಲ್ಮಷಾ ।
ತ್ಸ್ವಕಂ ಶರೀರಂ ಪರಿಮೋಕ್ಷ್ಯತೇ ಹಿ ಸಃ ॥ ೩೬೧ ॥

ಸ ಧನ್ಯಧೀರ್ಲೋಕಪಿತಾ ಚತುರ್ಮುಖೋ ।
ಹರಿಶ್ಚ ಯಃ ಸಂಭ್ರಮವಹ್ನಿದೀಪಿತಃ ॥
ತ್ವದಂಘ್ರಿಯುಗ್ಮಂ ಹೃದಯೇ ನ ಬಿಭ್ರ ।
ತ್ಪ್ರಯಾತಿ ಪಾಪಂ ಪ್ರಶಮೈಕಹೇತುಕಂ ॥ ೩೬೨ ॥

ತ್ವಮೇವ ಏಕೋ ವಿವಿಧಾಕೃತಕ್ರಿಯಃ ।
ಕಿಲೇತಿ ವಾಚಾ ವಿಬುಧೈರ್ವಿಭೂಷ್ಯಸೇ ॥
ಅಥಾನ್ಯ ಏಕಸ್ತ್ವಮನಾದ್ಯಮನ್ಯಥಾ ।
ಜಗತ್ತಥಾ ನಿರ್ವೃತಿಕಂ ಚ ನ ಸ್ಪೃಶೇತ್ ॥ ೩೬೩ ॥

---

೩೬೧. ದೇವತೆಗಳನ್ನೆಲ್ಲಾ ನಾಶಮಾಡಿದ ಶೌರ್ಯವುಳ್ಳ ಆ ತಾರಕನೂ ಕೂಡ ಮಹಾ ಫಲವನ್ನು ಹೊಂದುತ್ತಾನೆ. ನಿನ್ನ ಅಂಶರೂಪವಾದ ಮಗನನ್ನು ನೋಡಿ ತನ್ನ ಶರೀರವನ್ನು ಪಾಪದ ದೆಸೆಯಿಂದ ಕಳೆದುಕೊಳ್ಳುತ್ತಾನೆ.

೩೬೨. ಲೋಕಪಿತೃವಾದ ಆ ಚತುರ್ಮುಖನೂ ವಿಷ್ಣುವೂ ಸುಡಲ್ಪಟ್ಟ ಆ ಮನ್ಮಥನೂ ಧನ್ಯರು. ಶಮಕ್ಕೆ ಕಾರಣವಾದ ನಿನ್ನ ಪಾದಯುಗ್ಮವನ್ನು ಮನಸ್ಸಿನಲ್ಲಿ ಧರಿಸಿ ಪಾಪಗಳನ್ನು ಕಳೆದುಕೊಳ್ಳುತ್ತಾರೆ.

೩೬೩. ಎಲೈ ಶಿವನೇ! ನೀನು ಒಬ್ಬನೇ ಆಗಿದ್ದರೂ ನಾನಾಬಗೆಯಾದ ಆಕಾರ ಕ್ರಿಯೆಗಳುಳ್ಳವನಾಗಿ ಆಗುತ್ತೀಯೆ. ಎಂದು ದೇವತೆಗಳು ಹೊಗಳುತ್ತಾರೆ. ನೀನೇ ಬೇರೆಯಾದವನು, ಒಬ್ಬನೇ ಆದವನು, ಆದಿಯಿಲ್ಲದವನೂ ಆಗಿದ್ದೀಯೆ. ಹಾಗಿಲ್ಲದಿದ್ದರೆ ಈ ಜಗತ್ತು ಸುಖರೂಪನಾದ ನಿನ್ನನ್ನು ಆಶ್ರಯಿಸುತ್ತಿರಲಿಲ್ಲ.

ನ ವೇತ್ಸಿ ವಾ ದುಃಖಮಿದಂ ಪ್ರಜಾತ್ಮಕಂ ।
ನಿಹನ್ಯತೇ ತತ್ಫಲುಸರ್ವತಃ ಕ್ರಿಯಾಃ ॥
ಉಪೇಕ್ಷಸೇ ಚೇಜ್ಜಗತಾಮುಪದ್ರವಂ ।
ದಯಾಸಮುತ್ವಂ ತವ ಕೇನ ದೃಶ್ಯತೇ ॥ ೩೬೪ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಮುನಿಯಸ್ತಸ್ಮಾದಾಜಗ್ಮುರ್ಯತ್ರ ವೈ ಶಿವಃ ।
ನಮಸ್ಕೃತ್ಯ ಚ ತೇ ಭಕ್ತ್ಯಾ ಭಗವಂತಂ ಸಮೂಚಿರೇ ॥ ೩೬೫ ॥

॥ ಋಷಯ ಊಚುಃ ॥

ನಾಕನಾಥ ದಯಾದೇವ ತಪಸ್ಯತಿ ಸುತಾ ಗಿರೇಃ ।
ಸತ್ವಾತ್ವತ್ತದೀಪ್ಸಿತಂ ಜ್ಞಾತ್ವಾ ತ್ವತ್ಸಕಾಶಮಿಹಾಽಗತಾಃ ॥ ೩೬೬ ॥

ಸಂಯೋಗಮಾಯಾಮಹಿಮಾಗುಣಾಶ್ರಯಂ ।
ನ ವಿದ್ಯತೇ ನಿರ್ಮಲಭೂತಿಗೌರವಂ ॥
ವಯಂ ಚ ಧನ್ಯಾಃ ಸುತರಾಂ ಶರೀರಣಾಂ ।
ಯದೀದೃಶಂ ತ್ವಾಂ ಪ್ರವಿಲೋಕಯಾಮಹೇ ॥ ೩೬೭ ॥

---

೩೬೪. ಎಲೈ ಶಿವನೇ! ಪ್ರಜೆಗಳಲ್ಲಿ ಬಂದಿರುವ ಈ ದುಃಖವನ್ನು ನೀನು ತಿಳಿಯೆಯಾ? ಎಲ್ಲಾ ಕಡೆಯಲ್ಲಿಯೂ ಯಾಗಾದಿ ಕ್ರಿಯೆಗಳು ನಾಶವಾಗುತ್ತಿವೆಯಲ್ಲ? ಜಗತ್ತಿನ ಈ ತೊಂದರೆಯನ್ನು ನೀನು ನಿರ್ಲಕ್ಷಿಸಿದರೆ ನಿನ್ನನ್ನು ದಯಾವಂತನೆಂದು ಯಾರುತಾನೆ ತಿಳಿಯುತ್ತಾರೆ?

೩೬೫. ಪುಲಸ್ತ್ಯನು ಹೇಳಿದನು—ಹೀಗೆಂದು ಹೇಳಿ ಆ ಋಷಿಗಳು ಶಿವನಿದ್ದಲ್ಲಿಗೆ ಬಂದರು. ಅಲ್ಲಿ ಅವನಿಗೆ ಅವರು ನಮಸ್ಕಾರ ಮಾಡಿ ಇಂತೆಂದರು.

೩೬೬. ಋಷಿಗಳು ಹೇಳಿದರು—ಎಲೈ ಸ್ವರ್ಗಕ್ಕೆ ಒಡೆಯನೆ! ದಯೆಯುಳ್ಳ ಸ್ವಾಮಿಯೆ! ಪಾರ್ವತಿಯು ತಪಸ್ಸು ಮಾಡುತ್ತಿದ್ದಾಳೆ. ಮನೋದಾರ್ಢ್ಯದಿಂದ ಆಕೆಯ ಅಪೇಕ್ಷೆಯನ್ನು ತಿಳಿದು ನಿನ್ನ ಬಳಿಗೆ ಬಂದಿದ್ದೇವೆ.

೩೬೭. ಯೋಗದಿಂದ ಕೂಡಿದ ಮಾಯೆಯ ಮಹಿಮೆಗಳ ಗುಣಗಳಿಗೆ ಮನೆಯೂ, ಪರಿಶುದ್ಧವಾದ ಐಶ್ವರ್ಯಕ್ಕೆ ಸ್ಥಾನವೂ ನಿನ್ನ ಹೊರತು ಮತ್ತೊಂದಿಲ್ಲ. ಈ ರೀತಿಯಾದ ನಿನ್ನನ್ನು ನೋಡುತ್ತಿರುವುದರಿಂದ ನಾವುಗಳಾದರೋ ಶರೀರವನ್ನು ಹೊಂದಿದವರಲ್ಲಿ ಧನ್ಯರು.

ತ್ವದ್ದರ್ಶನಾಚ್ಚೈವ ಮನೋರಥೋ ಯಥಾ ।
ಪ್ರಯಾತಿ ಸಾಫಲ್ಯತಯಾ ಮನೋಽನಘಂ ॥
ಜಗದ್ವಿಧಾನೈಕವಿಧೌತತನ್ಮುಖೇ ।
ಕರಿಷ್ಯಸೇ ಕೇವಲಸತ್ವರಾ ವಯಂ ॥ ೩೬೮ ॥

॥ ಪುಲಸ್ತ್ಯ ಉವಾಚ ॥

ವಿಧೇಯುರಿತ್ಥಂ ಮುನಯೋಽಸಕೃಚ್ಚ ತಾಂ ।
ಗಿರಾಂ ಗಿರೀಶಶ್ರುತಿಭೂತಿಸಂನಿಧೌ ॥
ಉತ್ಸೃಷ್ಟಕೇದಾರ ಇವಾವನೀತಲೇ ।
ಸುಬೀಜಮುಷ್ಟಿಂ ಸುಫಲಾಯ ಕರ್ಷಕಾಃ ॥ ೩೬೯ ॥

ತೇಷಾಂ ಶ್ರುತ್ವಾ ಹಿತಾಂ ರಮ್ಯಾಂ ಪ್ರಕೃವಾತ್ಪ್ರಕ್ರಮಕ್ರಿಯಾಂ ।
ವಾಚಂ ವಾಚಾಂ ಪತಿಪ್ರಖ್ಯಃ ಪ್ರೋವಾಚ ಸ್ಮಿತಸುಂದರಃ ॥ ೩೭೦ ॥

---

೩೬೮. ನಿನ್ನನ್ನು ದರ್ಶನ ಮಾಡೋಣದರಿಂದಲೇ ಮನೋರಥಗಳು ಸಫಲವಾಗುತ್ತವೆ. ಅವು ಸಫಲವಾಗುವುದರಿಂದ ಮನಸ್ಸು ಪಾಪರಹಿತವಾಗುತ್ತದೆ. ಜಗತ್ತನ್ನು ನಿರ್ಮಿಸಿದ ಪವಿತ್ರವಾದ ಆ ಕಡೆಗೆ ಮನಸ್ಸನ್ನು ಮಾಡು. ನಾವು ಮಾತ್ರ ಕೇವಲ ಆತುರರಾಗಿದ್ದೇವೆ.

೩೬೯. ಲೋಕದಲ್ಲಿ ಒಳ್ಳೆಯ ಭೂಮಿಯಲ್ಲಿ ರೈತನಾದವನು ಒಳ್ಳೆಯ ಬಿತ್ತವನ್ನು ಬಿತ್ತಿ ಒಳ್ಳೆಯ ಫಲವನ್ನು ಎದುರುನೋಡುತ್ತಿರುವಂತೆ ಈಶ್ವರನಾದ ನಿನ್ನ ಕಿವಿಯಲ್ಲಿ ಈ ಮಾತನ್ನು ಹೇಳಿ ಋಷಿಗಳಾದ ನಾವೂ ಕೂಡ ಅದರ ಫಲವನ್ನು ಎದುರುನೋಡುತ್ತಿದ್ದೇವೆ.

೩೭೦. ಆ ಋಷಿಗಳ ಈ ಮುಂದುವರಿಯುವ ಕೆಲಸದ, ಹಿತವೂ ರಮ್ಯವೂ ಆದ ಮಾತನ್ನು ಕೇಳಿ ಮಾತಿಗೆ ಒಡೆಯನಾದ ಆ ಶಿವನು ನಗುತ್ತ ಇಂತೆಂದನು.

॥ ಶರ್ವ ಉವಾಚ ॥

ಜಾನೇ ಲೋಕವಿಧಾನೇ ತು ಸತ್ಯಂ ತತ್ಕಾರ್ಯಮುತ್ತಮಂ ।
ಪ್ರಾಯಃ ಪ್ರಾಲೇಯಶೈಲಸ್ಯ ಶಂಕೇ ತತ್ಕಾಲರೂಪಿಣಃ ॥ ೩೭೧ ॥

ಸತ್ಯಮುತ್ಕಂಠಿತಾಃ ಸರ್ವೇ ಯೇ ಯೇ ಕಾರ್ಯಾರ್ಥಮುದ್ಯತಾಃ ।
ತೇಷಾಂ ತ್ವರಂತಿ ಚೇತಾಂಸಿ ಕಿಂ ನು ನಾಮ ಮಹಾತ್ಮನಾಂ ॥ ೩೭೨ ॥

ಲೋಕಯಾತ್ರಾಽನುಗಂತವ್ಯಾ ವಿಶೇಷೇಣ ವಿವಕ್ಷಿತೈಃ ।
ಯತಸ್ತದ್ಧರ್ಮಮೇಧಂತೇ ತತ್ಪ್ರಮಾಣ್ಯಂ ಪರೇ ಧೃತಾಃ ॥ ೩೭೩ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಮುನಯೋ ಜಗ್ಮುಸ್ತ್ವರಿತಾಸ್ತುಹಿನಾಚಲಂ ।
ತತ್ರ ತೇ ಪೂಜಿತಾಸ್ತೇನ ಹಿಮಶೈಲೇನ ಸಾದರಂ ॥
ಊಚುರ್ಮುನಿವರಾಃ ಪ್ರೀತಾಃ ಸ್ವಲ್ಪಕಂ ತು ತ್ವರಾನ್ವಿತಾಃ ॥ ೩೭೪ ॥

---

೩೭೧. ಈಶ್ವರನು ಹೇಳಿದನು — ಲೋಕಗಳನ್ನು ಸರಿಯಾಗಿ ಇಡುವ ರೀತಿಯ ಉತ್ತಮವಾದ ಆ ಕೆಲಸಗಳನ್ನು ನಾನು ಬಲ್ಲೆನು. ಕಾಲಕ್ಕೆ ಅನುಸಾರವಾಗಿ ನಡೆಯುವ ಹಿಮವಂತನಿಗೂ. ಆ ರೀತಿ ಮಗಳನ್ನು ನನಗೆ ಕೊಡಬೇಕೆಂಬ ಆಸೆಯಿರುವುದನ್ನೂ ಬಲ್ಲೆ.

೩೭೨. ಈ ಕೆಲಸದಲ್ಲಿ ಪ್ರಯತ್ನಪಟ್ಟಿರುವ ನೀವೆಲ್ಲರೂ ಆತುರವುಳ್ಳವರಾಗಿದ್ದೀರಿ. ಮಹಾತ್ಮರ ವಿಷಯದಲ್ಲಿ ಹೇಳಬೇಕಾದುದೇ ಇಲ್ಲ.

೩೭೩. ಲೋಕದ ಹಿತವನ್ನು ವಿಶೇಷವಾಗಿ ಬಯಸತಕ್ಕವರು ಲೋಕಯಾತ್ರೆಯನ್ನು ಬಿಡದೆ ಅನುಸರಿಸಬೇಕು. ಅದರಿಂದ ಅವರ ಧರ್ಮವು ವೃದ್ಧಿಯಾಗುತ್ತದೆ. ಅವರನ್ನು ಉಳಿದವರು ಅನುಸರಿಸಿ ನಡೆಯುತ್ತಾರೆ. (ನೀವೆಲ್ಲರೂ ಅಪೇಕ್ಷಿಸಿರುವುದರಿಂದ ಅದರಂತೆ ನಾನು ನಡೆಯುತ್ತೇನೆ. ಅದರಿಂದಲೂ ಧರ್ಮ ವೃದ್ಧಿಯಾಗುತ್ತದೆ. ಇದರಂತೆ ಇತರರು ನಡೆಯಲು ಮೇಲ್ಪಂಕ್ತಿಯಾಗುತ್ತದೆ)

೩೭೪. ಪುಲಸ್ತ್ಯನು ಹೇಳಿದನು—ಶಿವನು ಇಂತೆನ್ನಲು ಋಷಿಗಳು ಶೀಘ್ರವಾಗಿ ಹಿಮವಂತನ ಬಳಿಗೆ ಹೋದರು. ಅಲ್ಲಿ ಹಿಮವಂತನು ಅವರನ್ನು ಪೂಜಿಸಿದನು. ಆಗ ಋಷಿಗಳು ಸೂಕ್ಷ್ಮವಾಗಿ ಅವನಿಗೆಂತೆಂದರು.

॥ ಮುನಿಯ ಊಚುಃ ॥

ದೇವೋ ದುಹಿತರಂ ಸಾಕ್ಷಾತ್ಪಿನಾಕೀ ತವ ಮಾರ್ಗತೇ ।
ತಚ್ಛೀಘ್ರಂ ಪಾವಯಾತ್ಮಾನಮಾಹುತಿಂ ಚಾನಲೇಽರ್ಪಿತಾಂ ॥ ೩೭೫ ॥

ಕಾರ್ಯಂ ಹಿ ತಚ್ಚ ದೇವಾನಾಂ ಸುಚಿರಂ ಪರಿವರ್ತತೇ ।
ಜಗದುದ್ಧಾರಣಾಯೈಷ ವಿಧಾತವ್ಯಃ ಸಮುದ್ಯಮಃ ॥ ೩೭೬ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಸ್ತು ತದಾ ಶೈಲೋ ಹರ್ಷಾವೇಶವಶಾನ್ಮುನೀನ್ ।
ಅಸಮರ್ಥೋಽಭವದ್ವಕ್ತುಮುತ್ತರಂ ಪ್ರಾರ್ಥಯನ್ನಿವ ॥ ೩೭೭ ॥

ತತೋ ಮೇನಾಮುನೀನ್ವಂದ್ಯ ಪ್ರೋವಾಚ ಸ್ನೇಹವಿಕ್ಲವಾ ।
ದುಹಿತುನ್ತಾನ್ಮುನೀಂಶ್ಚೈವ ವಚನಂ ಸ್ವಯಮರ್ಥವತ್ ॥ ೩೭೮ ॥

---

೩೭೫. ಮುನಿಗಳು ಹೇಳಿದರು—ದೇವನಾದ ಪಿನಾಕಿಯು ನಿನ್ನ ಮಗಳನ್ನು ತಾನಾಗಿಯೇ ಅಪೇಕ್ಷಿಸುತ್ತಾನೆ. ಆದ್ದರಿಂದ ಅವನಿಗೆ ಅವಳನ್ನು ಕೊಟ್ಟು ನೀನು ಪವಿತ್ರನಾಗು. ಆಹುತಿಯನ್ನು ಅಗ್ನಿಯಲ್ಲಿ ಹೋಮ ಮಾಡಿ ಪವಿತ್ರನಾಗು.

೩೭೬. ಇದು ದೇವತೆಗಳ ಕೆಲಸ. ಬಹು ದಿನದಿಂದ ಕಾಲಹರಣವಾಗುತ್ತಿದೆ. ಈ ಕೆಲಸವನ್ನು ಜಗತ್ತಿನ ಉದ್ಧಾರಕ್ಕೋಸ್ಕರ ನೀನು ಜಾಗ್ರತೆಯಾಗಿ ಮಾಡಬೇಕು.

೩೭೭. ಪುಲಸ್ತ್ಯನು ಹೇಳಿದನು—ಋಷಿಗಳು ಇಂತೆನ್ನಲು ಆ ಹಿಮವಂತನು ಹರ್ಷದಿಂದ ಕೂಡಿದವನಾಗಿ ಅವರ ಉತ್ತರವನ್ನೇ ಅಪೇಕ್ಷಿಸುತ್ತಿರುವವನಂತೆ ತಾನು ಉತ್ತರ ಹೇಳಲು ಸಮರ್ಥನಾಗದೆ ಸುಮ್ಮನಿದ್ದನು.

೩೭೮. ಆಗ ಮೇನೆಯು ಆ ಋಷಿಗಳಿಗೆ ನಮಸ್ಕರಿಸಿ ತನ್ನ ಮಗಳ ಮೇಲಿನ ಸ್ನೇಹದಿಂದ ಕೂಡಿ ಮುನಿಗಳನ್ನು ಕುರಿತು ಇಂತೆಂದಳು.

॥ ಮೇನೋವಾಚ ॥

ಯದರ್ಥಂ ದುಹಿತುರ್ಜನ್ಮ ಚೇಚ್ಛಂತ್ಯಪಿ ಮಹಾಫಲಂ ।
ತದೇವೋಪಸ್ಥಿತಂ ಸರ್ವಂ ಪ್ರಕ್ರಮೇಣೈವ ಸಾಂಪ್ರತಂ ॥ ೩೭೯ ॥

ಕುಲಜನ್ಮವಯೋರೂಪವಿಭುತ್ವೈರಯುತೋಽಪಿಯಃ ।
ವರಸ್ತಸ್ಯಾಪಿ ನಾಹೂಯ ಸುತಾ ದೇಯಾ ಹ್ಯಯಾಚತಃ ॥ ೩೮೦ ॥

ದಿಗ್ವಾಸಾ ಜಟಿಲಃ ಶೂಲೀ ದಗ್ಧಕಾಮೋಽಪಿ ಕಾಮದಃ ।
ಸ ತು ಮತ್ಸುತಯಾ ಘೋರಃ ಕಥಂ ನಾಮ ಉಪಾಸ್ಯತೇ ॥ ೩೮೧ ॥

॥ ಮುನಯ ಊಚುಃ ॥

ಐಶ್ವರ್ಯಮವಗಚ್ಛಸ್ವ ಶಂಕರಸ್ಯ ಸುರಾಸುರಾಃ ।
ಆರಾಧ್ಯಮಾನಪಾದಾಬ್ಜಯುಗಲಾಶ್ಚ ಸುನಿರ್ವೃತಾಃ ॥ ೩೮೨ ॥

---

೩೭೯. ಮೇನೆಯು ಹೇಳಿದಳು—ಪ್ರಪಂಚದಲ್ಲಿ ಹೆಣ್ಣು ಮಕ್ಕಳನ್ನು ಪಡೆದು ಅದರ ಒಳ್ಳೆಯದು, ಕೆಟ್ಟದು, ಏನೇನನ್ನು ಅಪೇಕ್ಷಿಸುತ್ತಾರೆಯೋ ಅವೆಲ್ಲವೂ ಈಗ ಕ್ರಮವಾಗಿ ಒದಗಿವೆ.

೩೮೦. ಕುಲ, ರೂಪ, ವಯಸ್ಸು, ಅಧಿಕಾರ, ಇವುಗಳು ಒಂದೂ ಇಲ್ಲದವನು ವರನು. ಅವನೂ ಕೂಡ ನಮ್ಮನ್ನು ಯಾಚಿಸುತ್ತಿಲ್ಲ. ಅಂತಹವನನ್ನು ಕರೆದು ಹೆಣ್ಣು ಕೊಡಲು ಸಾಧ್ಯವಿಲ್ಲ.

೩೮೧. ಅವನು ದಿಗಂಬರ 'ಜಟೆಯುಳ್ಳವನು' ಹೊಟ್ಟೆನೋವುಳ್ಳವನು, ಕಾಮನನ್ನು ಸುಟ್ಟವನು, ಇಂತಹವನು ನನ್ನ ಮಗಳ ಇಷ್ಟವನ್ನು ಪೂರೈಸುತ್ತಾನೆಯೇ ? ಇಂತಹ ಘೋರನಾದವನನ್ನು ನನ್ನ ಮಗಳು ಹೇಗೆ ಸೇವಿಸಿಯಾಳು ?

೩೮೨. ಮುನಿಗಳು ಹೇಳಿದರು- ದೇವತೆಗಳೂ, ದಾನವರೂ ಆ ಶಂಕರನ ಪಾದಗಳನ್ನು ಸೇವಿಸುತ್ತ ಸುಖದಿಂದಿರುವುದರಿಂದ ಆ ಶಂಕರನ ಐಶ್ವರ್ಯವು ಹೇಗಿರಬಹುದೆಂದು ತಿಳಿದುಕೋ.

ಯಸ್ಯೋಪಯೋಗಿ ಯದ್ರೂಪಂ ತೇನ ತತ್ಪ್ರಾರ್ಥ್ಯತೇ ಚಿರಂ ।
ಘೋರಂ ತಪಸ್ಯತೇ ಬಾಲಾ ತೇನ ರೂಪೇಣ ನಿರ್ವೃತಿಃ ॥ ೩೮೩ ॥

ಯತ್ನಾ ವ್ರತಾನಿ ದಿವ್ಯಾನಿ ನಯಿಷ್ಯತಿ ಸಮಾಪನಂ ।
ತದತ್ರಾವಹಿತಾ ತಾವದಸ್ಮಾಸ್ವೇವ ಭವಿಷ್ಯತಿ ॥ ೩೮೪ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಗಿರಿಣಾ ಸಾರ್ಧಂ ಯಯುರ್ಯತ್ರಾಸ್ತಿ ಶೈಲಜಾ ।
ಜಿತಾರ್ಕಜ್ವಲನಜ್ವಾಲಾ ತಪಸ್ತೇಜೋಮಯೀ ಹ್ಯುಮಾ ।
ಪ್ರೋಕ್ತಾ ಸಾ ಮುನಿಭಿಃ ಸ್ನಿಗ್ಧಂ ಮಾನಿನ್ಯಾಹ ವಚೋಽರ್ಥವತ್ ॥ ೩೮೫ ॥

॥ ಉಮೋವಾಚ ॥

ನಾಹಂ ಕ್ಷುದ್ರಾತ್ಕಿಲೇಚ್ಛಾಮಿ ಋತೇ ಶರ್ವಾತ್ಪಿನಾಕಿನಃ ।
ಸ್ಥಿತಂ ಚ ತಾರತಮ್ಯೇನ ಪ್ರಾಣಿನಾಂ ಪರಮುದ್ಧಿದಂ ॥ ೩೮೬ ॥

---

೩೮೩. ಯಾವನಿಗೆ ಯಾವ ರೂಪವು ಉಪಯೋಗವಾಗುತ್ತಿರುವುದೋ ಅವನು ಆ ರೂಪವನ್ನು ಕೇಳುತ್ತಾನೆ. ನಿನ್ನ ಮಗಳು ಘೋರವಾಗಿ ತಪಸ್ಸು ಮಾಡುತ್ತಿರುವಳು. ಅವಳ ರೂಪಿಗೆ ಅವನ ರೂಪು ಸರಿಯಾಗಿರುವುದು. ಅವಳು ತನ್ನ ರೂಪಿನ ಆ ಯತಿಯನ್ನೇ ಅಪೇಕ್ಷಿಸುವಳು. ಆದ್ದರಿಂದಲೇ ಆಕೆಯ ಮನಸ್ಸು ತೃಪ್ತಿಯಾಗುತ್ತದೆ.

೩೮೪. ಆಕೆಯು ದಿವ್ಯವಾದ ವ್ರತಗಳನ್ನು ಮಾಡುತ್ತ ಅವುಗಳನ್ನು ಮುಕ್ತಾಯಗೊಳಿಸುವಳು. ಅವನಲ್ಲಿಯೇ ಅವಳು ಮನಸ್ಸು ಮಾಡಿರುವುದರಿಂದ ನಮ್ಮಗಳ ಮಾತಿನಂತೆ ನಡೆದುಕೊಳ್ಳುತ್ತಾಳೆ. ನಾವೂ ವ್ರತಿಗಳಲ್ಲವೆ ?

೩೮೫. ಪುಲಸ್ತ್ಯನು ಹೇಳಿದನು- ಹೀಗೆಂದು ಹೇಳಿ ಋಷಿಗಳು ಆ ಪರ್ವತ ರಾಜನನ್ನು ಕರೆದುಕೊಂಡು ಪಾರ್ವತಿಯು ಬಿಸಿಲು ಬೆಂಕಿಗಳನ್ನು ಸಹಿಸಿಕೊಂಡು ತೇಜೋಮಯಿಯಾಗಿ ತಪಸ್ಸು ಮಾಡುತ್ತಿದ್ದಲ್ಲಿಗೆ ಹೋದರು. ತಾವು ಬಂದಿರುವ ವಿಷಯವನ್ನು ಒಳ್ಳೆಯ ರೀತಿಯಿಂದ ಆಕೆಗೆ ಹೇಳಲು ಆಕೆಯು ಸಾಭಿಪ್ರಾಯವಾಗಿ ಇಂತೆಂದಳು.

೩೮೬. ಉಮೆಯು ಹೇಳಿದಳು- ಪಿನಾಕವನ್ನು ಹಿಡಿದಿರುವ ಈಶ್ವರನನ್ನು ಹೊರತು ಬೇರೊಬ್ಬರನ್ನೂ ನಾನೊಲ್ಲೆನು. ಪ್ರಾಣಿಗಳಿಗೆ ತಾರತಮ್ಯವನ್ನು ನೋಡಿ ಅವರಿಗೆ ತಕ್ಕಂತೆ ಒಳ್ಳೆಯದನ್ನು ಕೊಡುದವನು ಅವನಲ್ಲವೆ !

ಧೀರತ್ವೈಶ್ವರ್ಯಕಾರ್ಯಾಣಿ ಪ್ರಮಾಣಮತುಲಂ ಮಹತ್ ।
ಯಸ್ಮಾನ್ನ ಕಿಂಚಿದಪರಂ ಯಚ್ಚ ಯಸ್ಮಾತ್ಪ್ರವರ್ತತೇ ॥ ೩೮೭ ॥

ಯಸ್ಯೈಶ್ವರ್ಯಮನಾದ್ಯಂತಂ ತಮಹಂ ಶರಣಂ ಗತಾ ।
ಸಮಃ ಸವ್ಯವಸಾಯಶ್ಚ ದೀರ್ಘೇಣ ವಿಪರೀತಕಃ ॥ ೩೮೮ ॥

॥ ಪುಲಸ್ತ್ಯ ಉವಾಚ ॥

ಏವಂ ನಿಶಮ್ಯ ತೇ ವಾಚಂ ದೇವ್ಯಾ ಮುನಿವರಾಸ್ತದಾ ।
ಆನಂದಾಶ್ರುಪರೀತಾಕ್ಷಾಃ ಶಶಂಸುಸ್ತಾಂ ತಪಸ್ವಿನೀಂ ॥
ಊಚುಶ್ಚ ಪರಮಪ್ರೀತಾಃ ಶೈಲಜಾಂ ಮಧುರಂ ವಚಃ ॥ ೩೮೯ ॥

॥ ಋಷಯ ಊಚುಃ ॥

ಅತ್ಯದ್ಭುತಮಹೋ ಪುತ್ರಿ ಜ್ಞಾನಮೂರ್ತಿರಿವಾಮಲಾ ।
ಪ್ರಸಾದಯತಿ ನೋ ಭಾವಂ ಭವಭಾವಪ್ರತಿಶ್ರಯಾತ್ ॥ ೩೯೦ ॥

---

೩೮೭. ಧೀರತ್ವ ಐಶ್ವರ್ಯದ ಕೆಲಸಗಳು ದೊಡ್ಡದೊಡ್ಡ ಪ್ರಾಮಾಣ್ಯದ ಕೆಲಸಗಳು ಇವನ್ನು ಯಾವನು ಮಾಡುತ್ತಾನೆಯೋ, ಯಾವನಿಗಿಂತಲೂ ಬೇರೆ ವಸ್ತುವಿಲ್ಲವೋ, ಯಾವನಿಂದಲೇ ಎಲ್ಲವೂ ನಡೆಯುತ್ತವೆಯೋ, ಅಂತಹವನನ್ನು ಶರಣು ಹೊಂದಿದ್ದೇನೆ.

೩೮೮. ಆ ಈಶ್ವರನ ಐಶ್ವರ್ಯವು ಕೊನೆ ಮೊದಲಿಲ್ಲದುದು. ಅವನು ಎಲ್ಲರಲ್ಲಿಯೂ ಸಮನು, ಕೆಲಸ ಮಾಡುವವನು. ಸಾವಕಾಶದಿಂದ ವ್ಯತ್ಯಾಸವನ್ನು ಮಾಡತಕ್ಕವನು.

೩೮೯. ಪುಲಸ್ತ್ಯನು ಹೇಳಿದನು– ದೇವಿಯ ಮಾತನ್ನು ಇಂತು ಕೇಳಿದ ಈ ಋಷಿಗಳು ಆನಂದದಿಂದ ಕಣ್ಣೀರು ಸುರಿಸುತ್ತ ಆ ತಪಸ್ವಿನಿಯನ್ನು ಹೊಗಳಿದರು. ಸಂತೋಷದಿಂದ ಆಕೆಯನ್ನು ಕುರಿತು ಇಂತೆಂದರು.

೩೯೦. ಋಷಿಗಳು ಹೇಳಿದರು– ಎಲೈ ಪುತ್ರಿಯೇ ! ಇದು ಬಹು ಆಶ್ಚರ್ಯವು. ನೀನು ಪರಿಶುದ್ಧವಾದ ಜ್ಞಾನಮೂರ್ತಿಯೇ ಸರಿ. ನೀನು ಭವನನ್ನು ಹೊಂದುವ ಅಭಿಲಾಷೆಯಿಂದ ನಮ್ಮನ್ನು ಸಂತೋಷಪಡಿಸಿದೆ.

ನನು ವಿದ್ಮೋ ವಯಂ ತಸ್ಯ ದೇವಸ್ಯೈಶ್ವರ್ಯಮದ್ಭುತಂ ।
ತ್ವನ್ನಿಶ್ಚಯಸ್ಯ ದೃಢತಾಂ ವೇತ್ತುಂ ವಯಮಿಹಾಗತಾಃ ॥ ೩೯೧ ॥

ಅಚಿರಾದೇವ ತನ್ವಂಗಿ ಕಾಮಸ್ತ್ವೇಷ ಭವಿಷ್ಯತಿ ।
ಆದಿತ್ಯಸ್ಯ ಪ್ರಭಾ ಯಾತಿ ರತ್ನೇಭ್ಯಃ ಕಾ ದ್ಯುತಿಃ ಪೃಥಕ್ ॥ ೩೯೨ ॥

ಕೋಽರ್ಥೋ ವರ್ಣಾನ್ಸ್ವಕಾಂಸ್ತ್ಯಕ್ತ್ವಾ ತಥಾ ತ್ವಂ ಗಿರಿಶಂ ವಿನಾ ।
ಯಾನೋಽನೇಕಾಭ್ಯುಪಾಯೇನ ತಮಭ್ಯರ್ಥಯಿತುಂ ವಯಂ ॥ ೩೯೩ ॥

ಅಸ್ಮಾಕಮಪಿ ಚೈಷೋಽರ್ಥಃ ಸುತರಾಂ ಹೃದಿ ವರ್ತತೇ ।
ಅತಸ್ತ್ವಮೇವ ಸಾ ಬುದ್ಧಿರ್ಯತೋ ನೀತಿಸ್ತ್ವಮೇವ ಹಿ ।
ಅತೋ ನಿಸ್ಸಂಶಯಂ ಕಾರ್ಯಂ ಶಂಕರೋಽಪಿ ವಿಧಾಸ್ಯತಿ ॥ ೩೯೪ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಪೂಜಿತಾಃ ಸರ್ವೇ ಮುನಯೋ ಗಿರಿಕನ್ಯಯಾ ।
ಪ್ರಯಯುರ್ಗಿರಿಶಂ ದ್ರಷ್ಟುಂ ಪ್ರಸ್ಥಂ ಹಿಮವತೋ ಮಹತ್ ॥ ೩೯೫ ॥

---

೩೯೧. ಅಮ್ಮ, ನಾವು ಆ ಸ್ವಾಮಿಯ ಅದ್ಭುತವಾದ ಐಶ್ವರ್ಯವನ್ನು ಬಲ್ಲೆವು. ನಿನ್ನ ನಿಶ್ಚಯವನ್ನು ತಿಳಿಯಲು ನಾವು ಇಲ್ಲಿಗೆ ಬಂದಿದ್ದೇವೆ.

೩೯೨. ಎಲೈ ಪಾರ್ವತಿಯೇ ! ಶೀಘ್ರದಲ್ಲಿಯೇ ಈ ನಿನ್ನ ಅಭಿಲಾಷೆಯು ಈಡೇರುತ್ತದೆ. ಸೂರ್ಯನ ಬಿಸಿಲೇ ಬರುವಾಗ ರತ್ನದಿಂದ ಬೇರೆ ಬೆಳಕು ಮಾಡುವುದೇತಕ್ಕೆ?

೩೯೩. ಪದದಲ್ಲಿರುವ ವರ್ಣಗಳನ್ನು ಬಿಟ್ಟುಬಿಟ್ಟರೆ ಅರ್ಥವೇನಿರುವುದು ? ಹಾಗೇ ನೀನು ಗಿರಿಶನನ್ನು ಬಿಟ್ಟರೆ ಪ್ರಯೋಜನವಿರುವುದಿಲ್ಲ. ನಾವು ಹೋಗಿ ಅನೇಕ ಉಪಾಯಗಳಿಂದ ಅವನನ್ನು ಯಾಚಿಸುತ್ತೇವೆ.

೩೯೪. ನಮಗೂ ಇದೇ ವಿಷಯವು ಮನಸ್ಸಿನಲ್ಲಿರುವುದು. ನೀನೇ ಆ ಬುದ್ಧಿಯೂ, ನೀತಿಯೂ, ಆಗಿದ್ದೀಯೆ, ಆದ್ದರಿಂದ ಈ ಕೆಲಸವನ್ನು ಶಂಕರನೂ ನಿಶ್ಚಯವಾಗಿ ಒಪ್ಪಿಕೊಂಡು ಮಾಡುತ್ತಾನೆ.

೩೯೫. ಪುಲಸ್ತ್ಯನು ಹೇಳಿದನು- ಹೀಗೆಂದು ಹೇಳಿ ಆ ಋಷಿಗಳು ಪಾರ್ವತಿಯಿಂದ ಪೂಜಿತರಾಗಿ ಶಿವನನ್ನು ನೋಡಲು ಹಿಮವಂತನ ತಪ್ಪಲಿಗೆ ಹೋದರು.

ಗಂಗಾಂಭಃಸ್ನಾವಿತಾತ್ಮಾನಃ ಪಿಂಗಾ ಬದ್ಧಜಟಾಸಟಾಃ ।
ಭೃಂಗಾನುಯಾತಪಾಣಿಸ್ಥಮಂದಾರಕುಸುಮಸ್ರಜಃ ॥ ೩೯೬ ॥

ಸಂಪ್ರಾಪ್ಯ ತು ಗಿರೇಃ ಪ್ರಸ್ಥಂ ದದೃಶುಃ ಶಂಕರಾಶ್ರಮಂ ।
ಪ್ರಶಾಂತಾಶೇಷಸತ್ತ್ವೌಘಂ ಪರ್ಯಸ್ತಮಿತಕಾನನಂ ॥ ೩೯೭ ॥

ನಿಶ್ಶಬ್ದಕ್ಷೋಭಸಲಿಲಪ್ರಯಾತಂ ಸರ್ವತೋದಿಶಂ ।
ತತ್ರಾಪಶ್ಯಂಸ್ತತೋ ದ್ವಾರಿ ವೀರಕಂ ವೇತ್ರಪಾಣಿನಂ ॥ ೩೯೮ ॥

ತಮೇತೇ ಮುನಯಃ ಪೂಜ್ಯಾ ವಿನೀತಾಃ ಕಾರ್ಯಗೌರವಾತ್ ।
ಊಚುರ್ಮಧುರಭಾಷಾಭಿಸ್ತೇ ದೇವಂ ವಾಗ್ಮಿನಾಂ ವರಾಃ ॥ ೩೯೯ ॥

॥ ಮುನಯ ಊಚುಃ ॥

ದ್ರಷ್ಟುಂ ವರಮಿಹಾಽಯಾತಾಃ ಶಕರಂ ಗಣನಾಯಕಂ ।
ತ್ರಿಲೋಚನಂ ವಿಜಾನೀಹಿ ಸುರಕಾರ್ಯಪ್ರಚೋದಿತಾಃ ॥ ೪೦೦ ॥

---

೩೯೬. ಗಂಗೆಯ ನೀರಿನಿಂದ ನೆನೆದ ದೇಹವುಳ್ಳ, ಹೊಂಬಣ್ಣದ ಜಟೆಯನ್ನು ಧರಿಸಿರುವ, ಆ ಋಷಿಗಳು ಕೈಯಲ್ಲಿ ಮಂದಾರದಹೂವನ್ನು ಹಿಡಿದುಕೊಂಡು ಅದನ್ನು ದುಂಬಿಗಳು ಅನುಸರಿಸುತ್ತಿರಲು ಶಿವನಿದ್ದಲ್ಲಿಗೆ ಬಂದರು.

೩೯೭-೩೯೮. ಆ ಹಿಮವಂತನ ತಪ್ಪಲಿಗೆ ಹೋಗಿ ಅಲ್ಲಿ ಶಂಕರನ ಆಶ್ರಮವನ್ನು ನೋಡಿದರು. ಅಲ್ಲಿ ಎಲ್ಲಾ ಪ್ರಾಣಿಗಳೂ ಶಾಂತವಾಗಿದ್ದುವು. ಕಾಡೆಲ್ಲವೂ ಮಲಗಿರುವಂತೆ ಸದ್ದಿಲ್ಲದಿದ್ದಿತು. ನೀರು ಸದ್ದು ಮಾಡದೆ ಹರಿಯುತ್ತಿತ್ತು. ಅಲ್ಲಿಗೆ ಹೋಗಿ, ಬೆತ್ತವನ್ನು ಕೈಲಿ ಹಿಡಿದು ಬಾಗಿಲಿನಲ್ಲಿ ಕುಳಿತಿರುವ ವೀರಭದ್ರನನ್ನು ನೋಡಿದರು.

೩೯೯. ಕಾರ್ಯದ ಗೌರವದಿಂದ ಪೂಜ್ಯರಾದರೂ ಈ ಋಷಿಗಳು ವಿನಯದಿಂದಲೂ, ಮಧುರವಾಗಿಯೂ, ಅವನೊಡನೆ ಇಂತೆಂದರು.

೪೦೦. ಮುನಿಗಳು ಹೇಳಿದರು– ಎಲೈ ವೀರಕನೇ, ದೇವತೆಗಳ ಕಾರ್ಯಕ್ಕೋಸ್ಕರ ಗಣನಾಥನಾದ, ಶಂಕರನಾದ, ತ್ರಿಲೋಚನನಾದ, ಶಿವನನ್ನು ವರದ ಪಿಷಯದಲ್ಲಿ ನೋಡಲು ಬಂದಿದ್ದೇವೆ. ಇವನಿಗೆ ದೇವತೆಗಳ ಕೆಲಸವು ಆಗಬೇಕಾಗಿದೆ

ತ್ವಮೇವ ನೋ ಗತಿಸ್ತತ್ರ ಯಥಾ ಕಾಲಾನತಿಕ್ರಮಃ ।
ಸ್ಯಾತ್ಪ್ರಾರ್ಥನ್ಯೈಷಾ ಸ್ತ್ರಾಯೇಣ ಪ್ರತೀಹಾರಮಯೀ ಪ್ರಭೋ ॥ ೪೦೧ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತೋ ಮುನಿಭಿಃ ಸೋಽಥ ಗೌರವಾತ್ತಾನುವಾಚ ಹ ॥ ೪೦೨ ॥

॥ ಪ್ರತೀಹಾರ ಉವಾಚ ॥

ಸವನಸ್ಯಾಪರಾಂ ಸಧ್ಯಾಂ ಸ್ನಾತುಂ ಮಂದಾಕಿನೀಜಲೇ ।
ಕ್ಷಣೇನ ಭಾವಿತಾ ವಿಪ್ರಾಸ್ತತ್ರ ದ್ರಕ್ಷ್ಯಥ ಶೂಲಿನಂ ॥ ೪೦೩ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ಮುನಯಸ್ತಸ್ಥುರ್ಯತ್ನಾತ್ಕಾರ್ಯವಿಚಕ್ಷಣಾಃ ।
ಗಂಭೀರಾಂಬುಧರಾಪ್ರಾಪ್ತ್ಯೈತೃಷಿತಾಶ್ಚಾತಕಾ ಯಥಾ ॥ ೪೦೪ ॥

ತಥಾ ಕ್ಷಣೇನ ನಿಷ್ಪನ್ನಃ ಸಮಾಚಾರಕ್ರಿಯಾವಿಧಿಃ ।
ವೀರಾಸನಕೃತೋದ್ದೇಶಂ ಮೃಗಚರ್ಮನಿಯಾಮಿತಂ ॥ ೪೦೫ ॥

---

೪೦೧. ಕಾಲ ಕಳೆಯದಂತೆ ಆತನನ್ನು ನೋಡುವುದಕ್ಕೆ ನೀನೇ ಗತಿಯು. ನೀನು ಹಾಗೆ ಮಾಡು. ಬಾಗಿಲು ಕಾಯುವವನಲ್ಲಿ ಪ್ರಾರ್ಥನೆ ಮಾಡಿಕೊಂಡರೆ ಅದು ಫಲಿಸಿಯೇ ಫಲಿಸುವುದು.

೪೦೨. ಪುಲಸ್ತ್ಯನು ಹೇಳಿದನು- ಋಷಿಗಳು ಹೀಗೆನ್ನಲು ಅವನು ಗೌರವ ದಿಂದ ಇಂತೆಂದನು.

೪೦೩. ಪ್ರತೀಹಾರನು ಹೇಳಿದನು- ಹೋಮಾದಿಗಳನ್ನು ಮಾಡಲು ಸಾಯಂಕಾಲದ ಸ್ನಾನಕ್ಕೆ ಈ ಮಂದಾಕಿನೀನದಿಗೆ ಆ ಶಿವನು ಬರುವನು. ಕೊಂಚ ಹೊತ್ತು ಕಾದಿರಿ. ಅಲ್ಲಿ ಆ ಶಿವನನ್ನು ನೋಡಬಹುದು.

೪೦೪. ಪುಲಸ್ತ್ಯನು ಹೇಳಿದನು- ಕಾರ್ಯದಲ್ಲಿ ಕುಶಲರಾದ ಆ ಋಷಿಗಳು ಮಳೆಗಾಲ ಮೇಘದ ನೀರನ್ನು ಎದುರು ನೋಡುವ ಚಾತಕ ಪಕ್ಷಿಗಳಂತೆ ಅಲ್ಲಿ ಕಾದಿದ್ದರು.

೪೦೫. ಅನಂತರ ಪೂಜಾ ವಿಧಿಗಳು ಕ್ಷಣಕಾಲದಲ್ಲಿ ಮುಗಿಯಲು ಮೃಗ ಚರ್ಮದ ಮೇಲೆ ವೀರಾಸನವನ್ನು ಹಾಕಿ ಶಿವನು ಕುಳಿತುಕೊಂಡನು.

ತತೋ ವಿನೀತೋ ಜಾನುಭ್ಯಾಮವಲಂಬ್ಯ ಮಹೀಂ ಮುದಾ ।
ಉವಾಚ ವೀರಕೋ ದೇವಂ ಪ್ರಣಮ್ಯೈಕಸಮಾಶ್ರಯಂ ॥ ೪೦೬ ॥

॥ ವೀರಕ ಉವಾಚ ॥

ಸಂಪ್ರಾಪ್ತಾ ಮುನಯಃ ಸಪ್ತ ದ್ರಷ್ಟುಂ ತ್ವಾಂ ದೀಪ್ತತೇಜಸಂ ।
ವಿಭೋ ಸಮಾದಿಶ ದ್ರಷ್ಟುಂ ತತೋಧ್ಯಾನಮಿಹಾರ್ಹಸಿ ॥ ೪೦೭ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತೋ ಧೂರ್ಜಟಿಸ್ತೇನ ವೀರಕೇಣ ಮಹಾತ್ಮನಾ ।
ಭ್ರೂಭಂಗಸಂಜ್ಞಯಾ ತೇಷಾಂ ಪ್ರವೇಶಾಜ್ಞಾಂ ದದೌ ತದಾ ॥ ೪೦೮ ॥

ಮೂರ್ಧ್ನಃ ಕಂಪೇನ ತಾನ್ಸಪ್ತ ವೀರಕೋಽಪಿ ಮಹಾಮುನೀನ್ ।
ಆಜುಹಾವ ವಿದೂರಸ್ಥಾನ್ದರ್ಶನಾಯ ಪಿನಾಕಿನಃ ॥ ೪೦೯ ॥

ತ್ವರಾಬದ್ಧಜಟಾಸ್ತೇ ಚ ಲಂಬಕೃಷ್ಣಾಜಿನಾಂಬರಾಃ ।
ವಿವಿಶುರ್ವೇದಿಕಾಂ ದಿವ್ಯಾಂ ಗಿರೀಶಸ್ಯ ವಿಭೂತಿಭಿಃ ॥ ೪೧೦ ॥

---

೪೦೬. ಆಗ ವೀರಕನು ಮಂಡಿಗಳನ್ನು ನೆಲಕ್ಕೆ ಊರಿಕೊಂಡು ಸ್ವಾಮಿಯನ್ನು ನಮಸ್ಕರಿಸಿ ಸ್ನೇಹದಿಂದ ಇಂತೆಂದನು.

೪೦೭ ವೀರಕನು ಹೇಳಿದನು– ಎಲೈ ಸ್ವಾಮಿಯೇ ! ನಿನ್ನನ್ನು ನೋಡಲು ಸಪ್ತ ಋಷಿಗಳು ಬಂದಿದ್ದಾರೆ. ಅವರನ್ನು ನೋಡಲು ಅಪ್ಪಣೆ ಕೊಡು ಅನಂತರ ಧ್ಯಾನಕ್ಕೆ ಕುಳಿತುಕೊಳ್ಳಬಹುದು.

೪೦೮. ಪುಲಸ್ತ್ಯನು ಹೇಳಿದನು- ವೀರಕನು ಶಿವನಿಗೆ ಹೀಗೆಂದು ಹೇಳಲು ಹುಬ್ಬಿನ ಸನ್ನೆಯಿಂದ ಅವರನ್ನು ಕರೆದು ತರುವಂತೆ ಅಪ್ಪಣೆಮಾಡಿದನು.

೪೦೯. ತಲೆಯನ್ನು ಅಲ್ಲಾಡಿಸುವಿಕೆಯಿಂದ ವೀರಕನು ಆ ಸಪ್ತರ್ಷಿಗಳನ್ನು ಪಿನಾಕಿಯ ದರ್ಶನಕ್ಕೆ ದೂರದಲ್ಲಿದ್ದವರನ್ನು ಕರೆದನು.

೪೧೦. ಅವಸರದಿಂದ ಜಡೆಗಳನ್ನು ಕಟ್ಟಿಕೊಂಡು ಕೃಷ್ಣಾಜಿನವನ್ನು ನೇತಾಡಿಸುತ್ತ ತಮ್ಮ ಪ್ರಭಾವದಿಂದ ಕೂಡಿಕೊಂಡು ಆ ಗಿರೀಶನ ತಪೋವೇದಿಕೆಗೆ ಬಂದರು.

ಬದ್ಧಪಾಣಿಪುಟಾಕ್ಷಿಪ್ತನಾಕಪುಷ್ಪೋತ್ಕರಾಸ್ತತಃ ।
ಪಿನಾಕಿಪಾದಯುಗಲಂ ವಂದ್ಯ ನಾಕನಿವಾಸಿನಃ ॥ ೪೮೧ ॥

ತತಃ ಸ್ನಿಗ್ಧೇಕ್ಷಿತಾಃ ಸಂತೋ ಮುನಯಃ ಶೂಲಪಾಣಿನಾ ।
ಗಿರೀಶಂ ತು ತತೋ ದೃಷ್ಟ್ವಾ ತೇ ಸಮಂ ತುಷ್ಟುವುರ್ಮುದಾ ॥ ೪೮೨ ॥

॥ ಮುನಯ ಊಚುಃ ॥

ಅಹೋ ಕೃತಾರ್ಥಾ ವಯಮೇವ ಸಾಂಪ್ರತಂ-
ಸುರೇಶ್ವರೈರ್ವಂದಿತಪಾದಪಲ್ಲವಂ ।
ವಿಲೋಕಯಾಮೋ ಗುಣಗೌರವರ್ದ್ಧಿಭಿಃ-
ಸಮಾದಿಶತ್ಕಾರ್ಯಮಶೇಷರಕ್ಷಣಂ ॥ ೪೮೩ ॥

॥ ಪುಲಸ್ತ್ಯ ಉವಾಚ ॥

ತತಃ ಪ್ರಹಸ್ಯ ಸರ್ವಜ್ಞ ಉವಾಚ ಮುನಿಸತ್ತಮಾನ್ ॥ ೪೮೪ ॥

---

೪೮೧. ಈ ಋಷಿಗಳು ಬೊಗಸೆಯಲ್ಲಿ ಹೂವನ್ನಿಟ್ಟುಕೊಂಡಿದ್ದು ಅದನ್ನು ಅವನ ಪಾದಗಳ ಮೇಲೆ ಚೆಲ್ಲಿ ಆ ಪಾದಗಳಿಗೆ ನಮಸ್ಕರಿಸಿದರು.

೪೮೨. ಶೂಲಪಾಣಿಯಾದ ಆ ಈಶ್ವರನು ಸ್ನೇಹಪೂರಿತವಾದ ನೋಟದಿಂದ ಅವರನ್ನು ನೋಡಿದನು. ಆಗ ಸುಮುಖನಾದ ಆ ಶಿವನನ್ನು ಈ ಋಷಿಗಳು ನೋಡಿ ಸ್ತುತಿಸಿದರು.

೪೮೩. ಮುನಿಗಳು ಹೇಳಿದರು- ಅಹೋ ನಾವು ಕೃತಾರ್ಥರು, ಸುರರು ಅಸುರರುಗಳು ಯಾವನ ಪಾದ ಪಲ್ಲವಗಳನ್ನು ನಮಸ್ಕರಿಸುತ್ತಾರೆಯೋ, ಅಂತಹ ಎಲ್ಲರನ್ನೂ ಕಾಪಾಡುವ, ಲೋಕಕ್ಕೆಲ್ಲಾ ಅಪ್ಪಣೆಮಾಡುವ ಗುಣವುಳ್ಳ ಪಾದಗಳನ್ನು ಗೌರವದಿಂದ ನಾವು ನೋಡುತ್ತಿರುವೆವಲ್ಲ ?

೪೮೪. ಪುಲಸ್ತ್ಯನು ಹೇಳಿದನು- ಆಗ ಸರ್ವಜ್ಞನಾದ ಶಿವನು ನಕ್ಕು ಆ ಋಷಿಗಳಿಗೆ ಇಂತೆಂದನು.

॥ ಶಂಕರ ಉವಾಚ ॥

ಭವತಾಂ ಯದ್ಧೃದಿ ಗತಂ ಕಾರ್ಯಂ ತತ್ಕುರುತಾಧುನಾ ॥ ೪೧೫ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ಮುನಯಸ್ತೂರ್ಣಂ ಯಯುರ್ಯತ್ರ ಚ ಶೈಲಜಾ ।
ಬಭಾಷಿರೇ ವಿಭಾಗಜ್ಞಾ ಗಿರಿಜಾಂ ಗಿರಿಗಹ್ವರೇ ॥ ೪೧೬ ॥

॥ ಮುನಯ ಊಚುಃ ॥

ರಮ್ಯಂ ಪ್ರಿಯಂ ಮನೋಹಾರಿ ಮಾ ರೂಪಂ ತಪಸಾ ದಹ ।
ಪ್ರಾತಸ್ತೇ ಶಂಕರಃ ಪಾಣಿಮೇಷ ಪ್ರತಿಗ್ರಹೀಷ್ಯತಿ ॥ ೪೧೭ ॥

ವಯಮರ್ಥಿತವಂತಸ್ತೇ ಪಿತರಂ ಪೂರ್ವಮಾಗತಾಃ ।
ಪಿತ್ರಾ ಸಹ ಗೃಹಂ ಗಚ್ಛ ವಯಂ ಯಾಮಃ ಸ್ವಮಂದಿರಂ ॥ ೪೧೮ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ತಪಸಃ ಸತ್ಯಂ ಫಲಮಸ್ತೀತಿ ಚಿಂತ್ಯ ಸಾ ।
ತ್ವರಮಾಣಾ ಯಯೌ ವೇಶ್ಮ ಪಿತುರ್ದಿವ್ಯಂ ಸುಶೋಭಿತಂ ॥ ೪೧೯ ॥

---

೪೧೫. ಶಂಕರನು ಹೇಳಿದನು- ನಿಮ್ಮ ಮನಸ್ಸಿನಲ್ಲಿರುವ ಕಾರ್ಯವನ್ನು ಮಾಡಿರಿ.

೪೧೬. ಪುಲಸ್ತ್ಯನು ಹೇಳಿದನು- ಶಿವನು ಹೀಗೆನ್ನಲು ಅವರು ಜಾಗ್ರತೆಯಾಗಿ ಪಾರ್ವತಿಯಿರುವಲ್ಲಿಗೆ ಹೋಗಿ ಅವಳನ್ನು ಕುರಿತು ಇಂತೆಂದರು.

೪೧೭. ಮುನಿಗಳು ಹೇಳಿದರು- ರಮ್ಯವಾಗಿಯೂ, ಪ್ರಿಯವಾಗಿಯೂ ಮನೋಹರವಾಗಿಯೂ, ಇರುವ ಈ ನಿನ್ನ ರೂಪವನ್ನು ತಪಸ್ಸಿನಿಂದ ನಾಶಮಾಡಿಕೊಳ್ಳಬೇಡ. ಬೆಳಿಗ್ಗೆ ಶಂಕರನು ನಿನ್ನ ಪಾಣಿಗ್ರಹಣವನ್ನು ಮಾಡುತ್ತಾನೆ.

೪೧೮. ನಾವು ಮೊದಲೇ ಬಂದು ನಿನ್ನ ತಂದೆಯನ್ನು ಕೇಳಿದ್ದೆವು. ಈಗ ನೀನು ತಂದೆಯೊಡನೆ ಮನೆಗೆ ಹೋಗು. ನಾವೂ ನಮ್ಮ ಮನೆಗೆ ಹೋಗುತ್ತೇವೆ.

೪೧೯. ಪುಲಸ್ತ್ಯನು ಹೇಳಿದನು- ಋಷಿಗಳು ಹೀಗೆನ್ನಲು ಆಕೆಯು ತಪಸ್ಸಿಗೆ ಖಂಡಿತವಾಗಿಯೂ ಫಲವಿದೆ, ಎಂದು, ತಿಳಿದು ಅವಸರದಿಂದ ತನ್ನ ತಂದೆಯ ದಿವ್ಯವಾದ ಮನೆಗೆ ಹೋದಳು.

ಸಾ ತತ್ರ ರಜನೀಂ ಮೇನೇ ವರ್ಷಾಯುತಸಮಾಂ ಸತೀ ।
ಹರದರ್ಶನಸಂಜಾತಸಮುತ್ಕಂಠಾ ಹಿಮಾದ್ರಿಜಾ ॥ ೪೨೦ ॥

ತತೋ ಮುಹೂರ್ತೇ ಬ್ರಾಹ್ಮೇ ತು ತಸ್ಯಾಶ್ಚಕ್ರುಃ ಸುಹೃತ್ಕ್ರಿಯಾಂ ।
ನಾನಾಮಂಗಲಸಂದೋಹಾನ್ಯಥಾವತ್ಕ್ರಮಪೂರ್ವಕಂ ॥ ೪೨೧ ॥

ದಿವ್ಯಮಂಗಲಸಂಯೋಗಾನ್ಮಂದಿರೇ ಬಹುಮಂಗಲೇ ।
ಉಪಾಸತ ಗಿರಿಂ ಮೂರ್ತಾ ಋತವಃ ಸರ್ವಕಾಮಿಕಾಃ ॥ ೪೨೨ ॥

ವಾಯವಃ ಸುಖದಾಶ್ಚಾಸನ್ಸಂಮಾರ್ಜನವಿಧೌ ಗಿರೇಃ ।
ಹರ್ಮ್ಯೇಷು ಶ್ರೀಃ ಸ್ವಯಂ ದೇವೀ ಕೃತನಾನಾಪ್ರಸಾಧನಾ ॥ ೪೨೩ ॥

ಕಾಂತಿಃ ಸರ್ವೇಷು ಭಾವೇಷು ಋದ್ಧಿಶ್ಚ ಭರಣಾಕುಲಾ ।
ಚಿಂತಾಮಣಿಪ್ರಭೃತಯೋ ರತ್ನಾಃ ಶೈಲಂ ಸಮಂತತಃ ॥ ೪೨೪ ॥

---

೪೨೦. ಹರನ ದರ್ಶನದಲ್ಲಿ ಕಾತರಳಾದ ಆ ಪಾರ್ವತಿಯು ಆ ದಿನದ ರಾತ್ರಿಯನ್ನು ಹತ್ತುಸಾವಿರ ವರ್ಷಗಳಿಗೆ ಸಮವಾದ ದೀರ್ಘವಾದುದನ್ನಾಗಿ ತಿಳಿದಳು.

೪೨೧. ಅನಂತರ ಬೆಳಿಗ್ಗೆ ಬ್ರಾಹ್ಮ ಮುಹೂರ್ತದಲ್ಲಿ ಸಖಿಯರು ಅನೇಕವಾದ ಮಂಗಳ ಕರ್ಮಗಳನ್ನು ಕ್ರಮವಾಗಿ ಆ ಪಾರ್ವತಿಗೆ ಮಾಡಿದರು.

೪೨೨. ಮಂಗಳ ಗೃಹವಾದ ಆ ಬೆಟ್ಟದಲ್ಲಿ ಈಕೆಗೆ ಮಂಗಳವುಂಟಾಗಲು ಋತುಗಳು ಇಷ್ಟಾರ್ಥಗಳನ್ನೆಲ್ಲಾ ಕೊಡುತ್ತಾ ಆಕಾರವನ್ನು ಹೊಂದಿ ಸೇವಿಸುತ್ತಿದ್ದುವು.

೪೨೩. ವಾಯುಗಳು ಸುಖವಾಗಿ ಬೀಸುತ್ತ ಆ ಪರ್ವತದಲ್ಲಿ ಕಸವನ್ನು ಗುಡಿಸಿದುವು. ಲಕ್ಷ್ಮಿಯು ತಾನಾಗಿಯೇ ಆ ಅರಮನೆಯಲ್ಲಿ ಬಗೆ ಬಗೆಯಾದ ಅಲಂಕಾರಗಳನ್ನು ಮಾಡಿದಳು.

೪೨೪. ಕಾಂತಿಯು ಎಲ್ಲಾ ಭಾವಗಳಲ್ಲಿಯೂ ಸೇರಿತು. ಋದ್ಧಿಯು ಎಲ್ಲಾ ಕಡೆಯಲ್ಲಿಯೂ ತುಂಬಿತು. ಚಿಂತಾಮಣಿಯೇ ಮುಂತಾದ ರತ್ನಗಳು, ಬೆಟ್ಟದ ಸುತ್ತಲೂ ಇದ್ದು ರಂಜಿಸಿದುವು.

ಉಪತಸ್ಥುರ್ಲತಾಶ್ಚಾಪಿ ಕಲ್ಪಕಾಮಾ ಮಹಾದ್ರುಮಾಃ ।
ಓಷಧ್ಯೋ ಮೂರ್ತಿಮತ್ಯಶ್ಚ ದಿವ್ಯೌಷಧಿಸಮನ್ವಿತಾಃ ॥ ೪೨೫ ॥

ರಸಾಶ್ಚ ಧಾತವಶ್ಚೈವ ಸರ್ವೇಶಸ್ಯ ಚ ಕಿಂಕರಾಃ ।
ಕಿಂಕರಾಸ್ತಸ್ಯ ಶೈಲಸ್ಯ ವ್ಯಗ್ರಾಶ್ಚಾಶ್ರಮುವರ್ತಿನಃ ॥ ೪೨೬ ॥

ನದ್ಯಃ ಸಮುದ್ರಾ ನಿಖಿಲಾಃ ಸ್ಥಾವರಂ ಜಂಗಮಂ ಚ ಯತ್ ।
ತೇ ಸರ್ವೇ ಹಿಮಶೈಲಸ್ಯ ಮಹಿಮಾನಮವರ್ಧಯನ್ ॥ ೪೨೭ ॥

ಅಭವನ್ಮನಯೋ ನಾಗಾ ಯಕ್ಷಾ ಗಂಧರ್ವಕಿನ್ನರಾಃ ।
ಶಂಕರಸ್ಯಾಪಿ ವಿಬುಧಾ ಗಂಧಮಾದನಪರ್ವತೇ ॥ ೪೨೮ ॥

ಸಜ್ಜಮಂಡನಸಂಭಾರಾಸ್ತಸ್ಥುರ್ನಿರ್ಮಲಮೂರ್ತಯಃ ।
ಶರ್ವಸ್ಯಾಥ ಜಟಾಜೂಟೇ ಚಂದ್ರಖಂಡಂ ಪಿತಾಮಹಃ ॥ ೪೨೯ ॥

ಬಬಂಧ ಪ್ರಣಯೋದಾರವಿಸ್ಫಾರಿತವಿಲೋಚನಃ ।
ಕಪಾಲಮಾಲಾಂ ವಿಪುಲಾಂ ಚಾಮುಂಡಾ ಮೂರ್ಧ್ನಿ ಬಧ್ನತೀ ॥ ೪೩೦ ॥

---

೪೨೫. ಲತೆಗಳೂ, ಕಾಮಧೇನುವೂ, ಕಲ್ಪವೃಕ್ಷಗಳೂ, ಬಂದುವು. ಔಷಧಿಗಳೆಲ್ಲವೂ ತಮ್ಮ ಪ್ರಭಾವಗಳೊಡನೆ ಆಕಾರವನ್ನು ಹೊಂದಿ ಬಂದುವು.

೪೨೬. ರಸಗಳೂ, ಧಾತುಗಳೂ, ಆ ಸ್ವಾಮಿಗೆ ಆಳುಗಳಾಗಿ ಬಂದುವು. ಹಾಗೆ ಬಂದು ತಮ್ಮ ತಮ್ಮ ಕೆಲಸಗಳಲ್ಲಿ ಜಾಗರೂಕವಾಗಿ ಕೆಲಸ ಮಾಡುತ್ತಿದ್ದುವು.

೪೨೭. ನದಿಗಳು, ಸಮುದ್ರಗಳು, ಸ್ಥಾವರ ಜಂಗಮಗಳೂ, ಎಲ್ಲವೂ ಬಂದು ಆ ಹಿಮವಂತನ ಮಹಿಮೆಯನ್ನು ಹೆಚ್ಚಿಸಿದುವು.

೪೨೮-೪೩೦. ಇತ್ತ ಗಂಧಮಾದನ ಪರ್ವತದಲ್ಲಿ ನಾಗರು, ಯಕ್ಷರು, ರಾಕ್ಷಸರು, ಗಂಧರ್ವರು, ಕಿನ್ನರರು, ವಿಬುಧರು, ಇವರು ಅಲಂಕಾರ ಪದಾರ್ಥಗಳನ್ನು ಸಿದ್ಧಮಾಡಿಕೊಂಡು ತಾವೂ ಶುದ್ಧರಾಗಿ ಸಿದ್ಧರಾದರು, ಬ್ರಹ್ಮನು ಶಿವನಿಗೆ ಜಟೆಗಳಲ್ಲಿ ಚಂದ್ರನ ಖಂಡವನ್ನು ಸಂತೋಷದಿಂದ ಹಾಸ್ಯ ಮಾಡುತ್ತ, ಕಟ್ಟಿದನು. ಚಾಮುಂಡೆಯು ಆತನ ಕತ್ತಿನಲ್ಲಿ ಕಪಾಲಮಾಲೆಯನ್ನು ಕಟ್ಟಿದಳು.

ಉವಾಚ ಗಿರಿಶಂ ಕಾಲೀ ಪುತ್ರಂ ಜನಕಯ ಶಂಕರ ।
ಯೋ ದೈತ್ಯೇಂದ್ರಕುಲಂ ಹತ್ವಾ ಮಾಂ ರಕ್ತೈಸ್ತರ್ಪಯಿಷ್ಯತಿ ॥ ೪೩೧ ॥

ಶೌರಿರ್ವತಂಸಿಕಾರತ್ನಂ ಕಂಠಾಭರಣಮುಜ್ಜ್ವಲಂ ।
ಭುಜಗಾಭರಣಂ ಗೃಹ್ಯ ಸಜ್ಜಂ ಶಂಭೋಃ ಪುರೋಽಭವತ್ ॥ ೪೩೨ ॥

ಶಕ್ರೋ ಗಜಾಜಿನಂ ತಸ್ಯ ವಸಾಭ್ಯಕ್ತಾಗ್ರಪಲ್ಲವಂ ।
ದಧೇ ಸರಭಸಂ ಸ್ವಿದ್ಯದ್ವಿಸ್ತೀರ್ಣಮುಖಪಂಕಜಂ ॥ ೪೩೩ ॥

ವಾಯವಶ್ಚ ವವುಸ್ತೀಕ್ಷ್ಣಾಸ್ತೀಕ್ಷ್ಣಂ ಹಿಮಗಿರಿಪ್ರಭಂ ।
ವೃಷಂ ವಿಭೂಷಯಾಮಾಸುರ್ಹರಯಾನಂ ಮನೋಜವಂ ॥ ೪೩೪ ॥

ವಿರೇಜುರ್ನಯನಾಂತಸ್ಥಾಃ ಶಂಭೋಃ ಸೂರ್ಯಾನಲೇಂದವಃ ।
ಸ್ವಾಂ ದ್ಯುತಿಂ ಲೋಕನಾಥಸ್ಯ ಜಗತಃ ಕರ್ಮಸಾಕ್ಷಿಣಃ ॥ ೪೩೫ ॥

---

೪೩೧. ಆಗ ಕಾಳಿಯು ಎಲೈ ಶಂಕರನೇ! ದೈತ್ಯರ ಕುಲವನ್ನು ನಾಶಮಾಡಿ ನನ್ನನ್ನು ರಕ್ತದಿಂದ ತೃಪ್ತಿಪಡಿಸುವ ಮಗನನ್ನು ಹುಟ್ಟಿಸು. ಎಂದಳು.

೪೩೨. ವಿಷ್ಣುವು ಶಿರೋರತ್ನವನ್ನೂ ಕತ್ತಿನ ಆಭರಣವನ್ನೂ ಭುಜಗಾಭರಣವನ್ನೂ, ಹಿಡಿದುಕೊಂಡು ಶಂಭುವಿನ ಮುಂದೆ ನಿಂತಿದ್ದನು.

೪೩೩. ಇಂದ್ರನು ಮೇದಸ್ಸಿನಿಂದ ನೆನೆದಿರುವ ಹೊಸದಾದ ಆನೆಯ ಚರ್ಮವನ್ನು ಹಿಡಿದುಕೊಂಡು ಮುಖದಲ್ಲಿ ಬೆವರನ್ನು ಹೊಂದಿ ಆವಸರದಿಂದ ನಿಂತಿದ್ದನು.

೪೩೪. ವಾಯುಗಳು ಚೆನ್ನಾಗಿ ಬೀಸಿ ಹಿಮವಂತನಂತಿರುವ ವೃಷಭನ ಕೊಳೆ ಹೋಗುವಂತೆ ಮಾಡಿದುವು. ಹರಯಾನವೂ, ವೇಗವುಳ್ಳದ್ದೂ, ಆದ ಆ ಬಸವನನ್ನೂ ಅಲಂಕರಿಸಿದುವು.

೪೩೫. ಸೂರ್ಯ, ಚಂದ್ರ, ಅಗ್ನಿಗಳು, ಆ ಶಂಭುವಿನ ಕಣ್ಣನ್ನು ಹೊಂದಿ ಲೋಕದ ಪುಣ್ಯ ಪಾಪಗಳಿಗೆ ಸಾಕ್ಷಿಗಳಾದ ಅವರು ಅವನ ಕಾಂತಿಯನ್ನು ಹೆಚ್ಚಿಸಿದರು.

ಚಿತಾಭಸ್ಮ ಸಮಾಧತ್ತ ಕಪಾಲೇ ರಜತಪ್ರಭಂ ।
ಮನುಜಾಸ್ಥಿಮಯೀಂ ಮಾಲಾಂ ನಿಬಬಂಧ ಚ ಪಾಣಿನಾ ॥ ೪೩೬ ॥

ಪ್ರೇತಾಧಿಪಃ ಪುರೋ ದೂರೇ ಸಭಯಃ ಸಮವರ್ತತ ।
ನಾನಾಕಾರಮಹಾರತ್ನಭೂಷಣಂ ಧನದಾಹೃತಂ ॥ ೪೩೭ ॥

ವಿಹಾಯೋದ್ದೀಪ್ತಸರ್ಪೇಂದ್ರಕಟಕೇನ ಸ್ವಪಾಣಿನಾ ।
ಕರ್ಣೋತ್ತಂಸಂ ಚಕಾರೇಶಸ್ತ್ವಮಲಂ ತಕ್ಷಕಂ ಸ್ವಯಂ ॥ ೪೩೮ ॥

ನಿಷ್ಪನ್ನಾಭರಣಂ ಚೈವಂ ಪ್ರಸಾಧ್ಯೇಶಂ ಪ್ರಸಾಧನೈಃ ।
ತತ್ರಾಪ್ಯೇಷಾಂ ನಿಯಮತೋ-ಹ್ಯಭವನ್ನ್ಯಗ್ರಮೂರ್ತಯಃ ॥ ೪೩೯ ॥

ಮುಮೋಚಾಭಿನವಾನ್ಸರ್ವರಮ್ಯಶಾಲಿರಸೌಷಧೀನ್ ।
ವ್ಯಗ್ರಾ ತು ಪೃಥಿವೀ ದೇವೀ ಸರ್ವಭಾವಾನ್ಮನೋರಮಾ ॥ ೪೪೦ ॥

ಗೃಹೀತ್ವಾ ವರುಣಃ ಸಾಕ್ಷಾದ್ರತ್ನಾನ್ಯಾಭರಣಾನಿ ಚ ।
ಪುಷ್ಪಾಣಿ ಚ ವಿಚಿತ್ರಾಣಿ ನಾನಾರತ್ನಮಯಾನಿ ತು ॥ ೪೪೧ ॥

---

೪೩೬-೪೩೮. ಬೆಳ್ಳಿಯಂತಿರುವ ಚಿತಿಯ ಭಸ್ಮವನ್ನು ಕಪಾಲದಲ್ಲಿ ತುಂಬಿ ಕೊಟ್ಟು ಮನುಷ್ಯರ ಮೂಳೆಯ ಮಾಲೆಯನ್ನು ಕಟ್ಟಿ ಯಮನು ಹೆದರಿಕೆಯಿಂದ ದೂರದಲ್ಲಿ ನಿಂತಿದ್ದನು. ಬಗೆಬಗೆಯ ರತ್ನಗಳ ಒಡವೆಯನ್ನು ಕುಬೇರನು ತಂದನು. ಅದನ್ನು ಬಟ್ಟುಬಿಟ್ಟು, ಹಾವಿನ ಕೈಬಳೆಯನ್ನು ಹಾಕಿಕೊಂಡು ತಕ್ಷಕನನ್ನು ತಾನೇ ಕಿವಿಗೆ ಇಟ್ಟುಕೊಂಡನು.

೪೩೯. ಆಭರಣಗಳನ್ನು ಉತ್ಪತ್ತಿಮಾಡುವ ಈಶನನ್ನು ಅಲಂಕಾರಗಳಿಂದ ಅಲಂಕರಿಸಿದರು. ಇವನ್ನು ಕಟ್ಟಿದರೂ ಅವರೆಲ್ಲರೂ ಏನನ್ನುವನೋ ಎಂದು ಅಂಜು ತ್ತಿದ್ದರು.

೪೪೦. ಭೂಮಿಯು ಆಸಕ್ತಿಯಿಂದ ಹೊಸದಾದ ಭತ್ತಗಳನ್ನೂ, ರಸಗಳನ್ನೂ ಔಷಧಿಗಳನ್ನೂ, ಸರ್ವ ಭಾವಗಳನ್ನೂ ಉಂಟುಮಾಡಿದಳು.

೪೪೧-೪೪೪. ಸರ್ವಜ್ಞನಾದ ಸರ್ವ ದೇಹಗಳಲ್ಲಿಯೂ ಇರುವ ವರುಣನು ತಾನಾಗಿಯೇ ಪುಷ್ಪಗಳನ್ನೂ, ನಾನಾರತ್ನಗಳಿಂದ ಕೂಡಿದ ಆಭರಣಗಳನ್ನೂ ಹಿಡಿದು

ತಸ್ಥೌ ಸಾಭರಣೋ ದೇವಃ ಸರ್ವಜ್ಞಃ ಸರ್ವದೇಹಿನಾಂ ।
ಜ್ವಲನಶ್ಚಾರಿ ದಿವ್ಯಾನಿ ಹೈಮಾನ್ಯಾಭರಣಾನಿ ಚ ॥ ೪೪೨ ॥

ಜಾತರೂಪಪವಿತ್ರಾಣಿ ಪ್ರಯತಃ ಸಮುಪಸ್ಥಿತಃ ।
ವಾಯುರ್ವವೌ ಸುರಭಿಭಿಃ ಸುಖಸಂಸ್ಪರ್ಶನೋ ವಿಭುಂ ॥ ೪೪೩ ॥

ಛತ್ರಂ ಚಂದ್ರಕರೋದ್ದಾಮಂ ಹಾಸಿತಂ ಚ ಶತಕ್ರತುಃ ।
ಜಗ್ರಾಹ ಮುದಿತಃ ಶ್ರೀಮಾನ್ಬಾಹುಭಿರ್ವಜ್ರಭೂಷಣಃ ॥ ೪೪೪ ॥

ಜಗುರ್ಗಂಧರ್ವಮುಖ್ಯಾಶ್ಚ ನನೃತುಶ್ಚಾಪ್ಸರೋಗಣಾಃ ।
ನಾದಯಂತೋಽತಿಮಧುರಂ ಜಗುರ್ಗಂಧರ್ವಕಿನ್ನರಾಃ ॥ ೪೪೫ ॥

ಮುಹೂರ್ತಾ ಋತವಸ್ತತ್ರ ಜಗುಶ್ಚ ನನೃತುಶ್ಚ ವೈ ।
ಚಪಲಾಶ್ಚ ಗಣಾಸ್ತಸ್ಥುರ್ಲೋಡಯಂತೋ ಹಿಮಾಚಲಂ ॥ ೪೪೬ ॥

ಉಪವಿಷ್ಟಃ ಕ್ರಮಾದ್ಧಾತಾ ವಿಶ್ವಕೃದ್ಭಗನೇತ್ರಹಾ ।
ಚಕಾರೌದ್ವಾಹಿಕಂ ಕೃತ್ಯಂ ಪತ್ನ್ಯಾ ಸಹ ಯಥೋದಿತಂ ॥ ೪೪೭ ॥

---

ನಿಂತನು. ಅಗ್ನಿಯು ಚಿನ್ನದ ಒಡವೆಗಳನ್ನೂ ಬೆಳ್ಳಿಯ ಪವಿತ್ರಗಳನ್ನೂ ಹಿಡಿದು ನಿಂತನು ವಾಯುವು ಮಂದವಾಗಿ ಹಿತವಾಗಿರುವಂತೆ ಆ ಸ್ವಾಮಿಯ ಮೇಲೆ ಬೀಸಿದನು.

೪೪೪. ವಜ್ರಾಯುಧವನ್ನು ಹಿಡಿದ ಇಂದ್ರನು ಚಂದ್ರನಂತೆ ಪ್ರಕಾಶಮಾನವಾದ ಶ್ವೇತಚ್ಛತ್ರವನ್ನು ಸ್ವಾಮಿಗೆ ಹಿಡಿದನು!

೪೪೫. ಗಂಧರ್ವ ಶ್ರೇಷ್ಠರು ಹಾಡುತ್ತಿದ್ದರು. ಅಪ್ಸರರು ಕುಣಿಯುತ್ತಿದ್ದರು. ಗಂಧರ್ವರೂ, ಕಿನ್ನರರೂ ವಾದ್ಯವನ್ನು ಮಧುರವಾಗಿ ಬಾರಿಸುತ್ತ ಹಾಡುತ್ತಿದ್ದರು.

೪೪೬. ಮುಹೂರ್ತಗಳು, ಋತುಗಳು ಹಾಡಿದುವು. ಮತ್ತು ಕುಣಿದುವು. ಗಣಗಳು ಚಾಪಲ್ಯದಿಂದ ಹಿಮವತ್ಪರ್ವತವನ್ನು ಅಲ್ಲೋಲ ಕಲ್ಲೋಲ ಮಾಡುತ್ತಿದ್ದುವು.

೪೪೭. ಭಗನ ನೇತ್ರವನ್ನು ನಾಶಮಾಡಿದ, ಪ್ರಪಂಚದ ಕರ್ತೃವಾದ ಆ ಸ್ವಾಮಿಯು ಹೆಂಡತಿಯೊಡನೆ ಕುಳಿತುಕೊಂಡು ಶಾಸ್ತ್ರದಲ್ಲಿ ಹೇಳಿರುವಂತೆ ಮದುವೆಯ ಕೆಲಸಗಳನ್ನೆಲ್ಲಾ ಮಾಡಿದನು.

ಪತ್ತ್ವಾರ್ಘ್ಯಂ ಗಿರಿರಾಜೇನ ಸುರವೃಂದೈರ್ವಿನೋದಿತಃ
ಅವಸತ್ತಾಂ ಕ್ಷಪಾಂ ತತ್ರ ಪತ್ನ್ಯಾ ಸಹ ಪುರಾಂತಕಃ ॥ ೪೪೮ ॥

ತತೋ ಗಂಧರ್ವಗೀತೇನ ನೃತ್ಯೇನಾಪ್ಸರಸಾಮಪಿ ।
ಸ್ತುತಿಭಿರ್ದೇವದೈತ್ಯಾನಾಂ ವಿಬುದ್ಧೋ ವಿಬುಧಾಧಿಪಃ ॥ ೪೪೯ ॥

ಆಮಂತ್ರ್ಯ ಹಿಮಶೈಲೇಂದ್ರಂ ಪ್ರಭಾತೇ ಜಾಯಯಾ ಸಹ ।
ಜಗಾಮ ಮಂದರಗಿರಿಂ ವಾಯುವೇಗೇನ ಶೃಂಗಿಣಾ ॥ ೪೫೦ ॥

ತತೋ ಗತೇ ಭಗವತಿ ನೀಲಲೋಹಿತೇ ।
ಸಹೋಮಯಾ ರತಿಮನುಭೂತ ಭೂಧರಃ ॥
ಸಬಾಂಧವೋ ಭವತಿ ಹಿ ಕಸ್ಯ ನೋ ಮನೋ ।
ವಿಶೃಂಖಲಂ ಜಗತಿ ಹಿ ಕನ್ಯಕಾಪಿತುಃ ॥ ೪೫೧ ॥

ಪುರೋದ್ಯಾನೇಷು ರಮ್ಯೇಷು ವಿವಿಕ್ತೇಷು ವನೇಷು ಚ ।
ಸುರಕ್ತಹೃದಯೋ ದೇವ್ಯಾ ವಿಜಹಾರ ಭಗಾಕ್ಷಿಹಾ ॥ ೪೫೨ ॥

---

೪೪೮. ಗಿರಿರಾಜನಾದ ಹಿಮವಂತನು ಈಶ್ವರನಿಗೆ ಅರ್ಘ್ಯವನ್ನು ಕೊಟ್ಟನು. ಸುರರು ನೋಡಿ ವಿನೋದವಾಗಿ ಮಾತನಾಡಿದರು. ಅನಂತರ ಆ ರಾತ್ರಿಯಲ್ಲಿ ಹೆಂಡತಿಯೊಡನೆ ಶಿವನು ಅಲ್ಲಿಯೇ ಇದ್ದನು.

೪೪೯. ಅನಂತರ ಗಂಧರ್ವರ ಹಾಡಿನಿಂದಲೂ ಅಪ್ಸರಸ್ತ್ರೀಯರ ನರ್ತನದಿಂದಲೂ ದೇವತೆಗಳ ದಾನವರ ಸ್ತುತಿಗಳಿಂದಲೂ ಬೆಳಿಗ್ಗೆ ಎಚ್ಚರಗೊಂಡನು.

೪೫೦. ಹಿಮವಂತನಿಗೆ ಪ್ರಯಾಣ ಮಾಡುತ್ತೇನೆಂದು ಹೇಳಿ ಬೆಳಿಗ್ಗೆ ಹೆಂಡತಿಯೊಡನೆ, ವಾಯುವೇಗವುಳ್ಳ ಬಸವನಮೇಲೆ ಕುಳಿತುಕೊಂಡು ಮಂದರ ಪರ್ವತಕ್ಕೆ ಹೋದನು.

೪೫೧. ನೀಲಲೋಹಿತನಾದ ಶಿವನು ಉಮೆಯೊಡನೆ ಹೊರಟುಹೋಗಲು ಪರ್ವತರಾಜನಾದ ಹಿಮವಂತನು ಬಂಧುಗಳೊಡನೆ ಸುಖಿಯಾಗಿದ್ದನು. ಕನ್ಯೆಯನ್ನು ಶ್ರೇಷ್ಠನಾದ ವರನಿಗೆ ಕೊಟ್ಟನಂತರ ಕನ್ಯಾಪಿತೃವಿಗೆ ಯಾವನಿಗೆ ತಾನೇ ಲೋಕದಲ್ಲಿ ಮನಸ್ಸು ಬಿಡುಗಡೆ ಹೊಂದಿದಂತೆ ಆಗುವುದಿಲ್ಲ ಎಲ್ಲರಿಗೂ ಆಗಿಯೇ ಆಗುತ್ತದೆ

೪೫೨. ಆಮೇಲೆ ಆ ಶಿವನು ಪಟ್ಟಣದ ಉದ್ಯಾನಗಳಲ್ಲಿಯೂ ಮನೋಹರವಾದ ಜನಗಳ ಸಂಪರ್ಕವಿಲ್ಲದ ವನಗಳಲ್ಲಿಯೂ ಕೂಡ ಸಂತೋಷಗೊಂಡ ಮನಸ್ಸುಳ್ಳವನಾಗಿ ಹೆಂಡತಿಯೊಡನೆ ವಿಹರಿಸಿದನು.

ತತೋ ಬಹುತಿಥೇ ಕಾಲೇ ಪುತ್ರನಾಮ್ನಾ ಗಿರೇಃ ಸುತಾ ।
ಸಖೀಭಿಃ ಸಹಿತಾ ಕ್ರೀಡಾಂ ಚಕ್ರೇ ಕೃತ್ರಿಮಪುತ್ರಕೈಃ ॥ ೪೫೩ ॥

ಕದಾಚಿದ್ಗಂಧತೈಲೇನ ಗಾತ್ರಮಭ್ಯಜ್ಯ ಶೈಲಜಾ ।
ಚೂರ್ಣೈರುದ್ವರ್ತಯಾಮಾಸ ಮಲೇನಾಽಪೂರಿತಾಂ ತನುಂ ॥ ೪೫೪ ॥

ತದುದ್ವರ್ತನಕಂ ಗೃಹ್ಯ ನರಂ ಚಕ್ರೇ ಗಜಾನನಂ ।
ಪುರುಷಂ ಕ್ರೀಡಿತಾ ದೇವೀ ತಂ ಸಾಽಕ್ಷೇಪಯದಂಭಸಿ ॥ ೪೫೫ ॥

ಜಾಹ್ನವ್ಯಾಃ ಶಿವಯಾ ಸಖ್ಯಾ ತತಃ ಸೋಽಭೂದ್ಬೃಹತ್ತನುಃ ।
ಕಾಯೇನಾತಿವಿಶಾಲೇನ ಜಗದಾಪೂರಯತ್ತದಾ ॥ ೪೫೬ ॥

ಪುತ್ರೇತ್ಯುವಾಚ ತಂ ದೇವೀ ಪುತ್ರೇತ್ಯೂಚೇ ಚ ಜಾಹ್ನವೀ ।
ಗಾಂಗೇಯ ಇತಿ ದೇವೈಸ್ತು ಪೂಜಿತೋಽಭೂದ್ಗಜಾನನಃ ॥ ೪೫೭ ॥

---

೪೫೩. ಅನಂತರ ಆ ಪಾರ್ವತಿಯು ಕೆಲವುಕಾಲ ಕಳೆಯಲು ಮಗನು ಎಂಬ ಹೆಸರಿಟ್ಟುಕೊಂಡು ಸಖಿಯರೊಡನೆ ಬೊಂಬೆಗಳನ್ನಿಟ್ಟುಕೊಂಡು ಆಟವಾಡಿದಳು.

೪೫೪. ಒಂದುಸಾರಿ ಈ ಪಾರ್ವತಿಯು ಗಂಧದ ಎಣ್ಣೆಯನ್ನು ಮೈಗೆಲ್ಲಾ ಹಚ್ಚಿಕೊಂಡು ಆ ಕೊಳೆಯ ಮೈಯನ್ನು ಹಿಟ್ಟುಗಳಿಂದ ತಿಕ್ಕಿಕೊಂಡಳು

೪೫೫. ಆ ತಿಕ್ಕಿಕೊಳ್ಳುವ ಹಿಟ್ಟನ್ನು ತೆಗೆದುಕೊಂಡು ಆ ಪಾರ್ವತಿಯು ಆನೆಯ ಮುಖವುಳ್ಳ ಒಂದು ಪುರುಷಾಕೃತಿಯನ್ನು ಮಾಡಿದಳು. ಆಟವಾಡಿದ ಮೇಲೆ ಅದನ್ನು ಗಂಗೆಯ ನೀರಿನಲ್ಲಿ ಎಸೆದಳು.

೪೫೬. ಅನಂತರ ಆ ಬೊಂಬೆಯು ಆ ನೀರಿನಲ್ಲಿ ದೊಡ್ಡದಾಗಿ ಬೆಳೆಯಿತು. ಹೀಗೆ ಬೆಳೆಯುತ್ತಿರುವ ಅದರ ದೊಡ್ಡ ಶರೀರದಿಂದ ಪ್ರಪಂಚವನ್ನೇ ಮುಚ್ಚುತ್ತ ಬಂದಿತು.

೪೫೭. ಆಗ ಆ ಪಾರ್ವತಿಯೂ, ಗಂಗೆಯೂ, ಅವನನ್ನು ಮಗನೆಂದು ಕರೆದರು. ದೇವತೆಗಳು ಗಾಂಗೆಯ ಎಂಬದಾಗಿ ಆ ಗಜಾನನನನ್ನು ಪೂಜಿಸಿದರು.

ವಿನಾಯಕಾಧಿಪತ್ಯಂ ಚ ದದಾವಸ್ಯ ಪಿತಾಮಹಃ ।
ಪುನಃ ಸಾ ಕ್ರೀಡತೀ ಚಕ್ರೇ ತರುಂ ಚ ವರವರ್ಣಿನೀ ॥ ೪೫೮ ॥

ಮನೋಜ್ಞಮಂಕುರಂ ರೂಢಮಶೋಕಸ್ಯ ಶುಭಾನನಾ ।
ವರ್ಧಯಾಮಾಸ ತಂ ಚಾಪಿ ಕೃತಸಂಸ್ಕಾರಮಂಗಲಂ ॥ ೪೫೯ ॥

ಬೃಹಸ್ಪತಿಮುಖೈರ್ವಿಪ್ರೈರ್ದಿವಸ್ಪತಿಪುರೋಹಿತೈಃ ।
ತತೋ ದೇವೈಃ ಸಮುನಿಭಿಃ ಪ್ರೋಕ್ತಾ ದೇವೀ ತ್ವಿದಂ ವಚಃ ॥ ೪೬೦ ॥

॥ ಮುನಿದೇವಾ ಊಚುಃ ॥

ಅಧುನಾ ದರ್ಶಿತೇ ಮಾರ್ಗೇ ಮರ್ಯಾದಾಂ ಕರ್ತುಮರ್ಹಸಿ ।
ಫಲಂ ಕಿಂ ಭವಿತಾ ದೇವಿ ಕಲ್ಪಿತೈಸ್ತರುಪುತ್ರಕೈಃ ॥ ೪೬೧ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ಹರ್ಷಪೂರ್ಣಾಂಗೀ ಪ್ರೋವಾಚಾತಿಶುಭಾಂ ಗಿರಂ ॥ ೪೬೨ ॥

---

೪೫೮. ಬ್ರಹ್ಮನು ಆ ಗಜಾನನನಿಗೆ ವಿನಾಯಕರ ಯಾಜಮಾನ್ಯವನ್ನು ಕೊಟ್ಟನು. ಮತ್ತೆ ಆಡುತ್ತಿರುವಾಗ ಆ ಪಾರ್ವತಿಯು ಒಂದು ಮರವನ್ನು ಮಾಡಿದಳು. ಅದರಲ್ಲಿ ಚಿಗುರು ಹೊರಟಿತು. ಅದು ಅಶೋಕದ ಮರವು.

೪೫೯-೪೬೦. ಇಂದ್ರನ ಪುರೋಹಿತನಾದ ಬೃಹಸ್ಪತಿ ಮುಂತಾದವರಿಂದ ಆ ಮರಕ್ಕೆ ಉಪನಯನ ಮುಂತಾದ ಸಂಸ್ಕಾರಗಳನ್ನು ಮಾಡಿಸಿ ಬೆಳೆಸಿದಳು. ಅನಂತರ ಮುನಿಗಳೂ, ದೇವತೆಗಳೂ, ಈಕೆಯನ್ನು ಕುರಿತು ಇಂತೆಂದರು.

೪೬೧. ಮುನಿಗಳೂ, ದೇವತೆಗಳೂ, ಹೇಳಿದರು—ಎಲೈ ದೇವಿಯೇ! ನೀನು ತೋರಿಸಿರುವ ಈ ಮಾರ್ಗಕ್ಕೆ ಒಂದು ಎಲ್ಲೆಯನ್ನು ಕಲ್ಪಿಸಬೇಕು. ಮಕ್ಕಳಂತೆ ಭಾವಿಸಲ್ಪಟ್ಟ ಈ ಮರದ ರೂಪವಾದ ಮಕ್ಕಳಿಂದ ಫಲವೇನು ಬರುವುದು ?

೪೬೨. ಪುಲಸ್ತ್ಯನು ಹೇಳಿದನು—ಹೀಗೆನ್ನಲು ಸಂತೋಷದಿಂದ ಕಣ್ಣೀರನ್ನು ಸುರಿಸುತ್ತ ಇಂತೆಂದಳು.

॥ ಪಾರ್ವತ್ಯುವಾಚ ॥

ಏಕಂ ನಿರುದಕೇ ಗ್ರಾಮೇ ಯಃ ಕೂಪಂ ಕಾರಯೇದ್ಬುಧಃ ।
ಬಿಂದೌ ಬಿಂದೌ ಚ ತೋಯಸ್ಯ ಸ ವಸೇದ್ವತ್ಸರಂ ದಿವಿ ॥ ೪೬೩ ॥

ದಶಕೂಪಸಮಾ ವಾಪೀ ದಶವಾಪೀಸಮೋ ಹ್ರದಃ ।
ದಶಹ್ರದಸಮಾ ಕನ್ಯಾ ದಶಕನ್ಯಾಸಮೋ ದ್ರುಮಃ ॥
ಏಷಾ ವೈ ಶುಭಮರ್ಯಾದಾ ನಿಯತಾ ಲೋಕಭಾವಿನೀ ॥ ೪೬೪ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾಸ್ತು ತತೋ ವಿಪ್ರಾ ಬೃಹಸ್ಪತಿಪುರೋಗಮಾಃ ।
ಜಗ್ಮುಃ ಸ್ವಮಂದಿರಾಣ್ಯೇವ ಭವಾನೀಂ ವಂದ್ಯ ಮಾತರಂ ॥ ೪೬೫ ॥

ಗತೇಷು ತೇಷು ದೇವೋಽಪಿ ಶಂಕರಃ ಪರ್ವತಾತ್ಮಜಾಂ ।
ಪಾಣಿನಾಽಲಂಬ್ಯ ಪಾದೇನ ಸ್ವಮಾವಾಸಮುಗಚ್ಛತ ॥ ೪೬೬ ॥

ಚಿತ್ತಪ್ರಸಾದಜನನಪ್ರಾಸಾದಾಟ್ಟಾಲಗೋಪುರಂ ।
ಲಂಬಮೌಕ್ತಿಕದಾಮಾನಂ ಮಾಲಿಕಾಕುಲವೇದಿಕಂ ॥ ೪೬೭ ॥

---

೪೬೩. ಪಾರ್ವತಿಯು ಹೇಳಿದಳು – ಯಾವನು ನೀರಿಲ್ಲದ ಊರಿನಲ್ಲಿ ಒಂದು ಭಾವಿಯನ್ನು ತೋಡಿಸುವನೋ ಅವನು ಸ್ವರ್ಗದಲ್ಲಿ ಒಂದೊಂದು ಬಿಂದುವಿಗೂ ಒಂದೊಂದು ವರ್ಷದಂತೆ ಇರುತ್ತಾನೆ.

೪೬೪. ಹತ್ತು ಭಾವಿಗಳಿಗೆ ಒಂದು ಕೊಳವು ಸಮವು ಹತ್ತು ಕೊಳಗಳಿಗೆ ಒಂದು ಮಡುವು ಸಮವು. ಹತ್ತು ಮಡುಗಳಿಗೆ ಒಬ್ಬಳು ಹೆಣ್ಣು ಮಗಳು ಸಮವು. ಹತ್ತು ಜನ ಹೆಣ್ಣು ಮಕ್ಕಳಿಗೆ ಒಂದು ಮರವು ಸಮವು. ಇದೇ ನಾನು ಮಾಡಿರುವ ಶುಭವಾದ ಲೋಕ ನಡತೆಯು. ಮತ್ತು ನಿಯಮವು.

೪೬೫, ಪುಲಸ್ತ್ಯನು ಹೇಳಿದನು—ಹೀಗೆ ಹೇಳುತ್ತಲು ಬೃಹಸ್ಪತಿಯೇ ಮುಂತಾದವರು ಆ ಭವಾನಿಯನ್ನು ನಮಸ್ಕರಿಸಿ ತಮ್ಮ ತಮ್ಮ ಮನೆಗೆ ಹೊರಟುಹೋದರು.

೪೬೬. ಅವರೆಲ್ಲರೂ ಹೊರಟುಹೋಗಲು ಶಿವನೂ ಕೂಡ ಪಾರ್ವತಿಯು ಕೈ ಹಿಡಿದುಕೊಂಡು ನಡೆದುಕೊಂಡೇ ತನ್ನ ಮನೆಗೆ ಹೋದನು

೪೬೭-೪೬೯. ಆ ಮನೆಯು ಮನಸ್ಸಿಗೆ ಹರ್ಷವನ್ನುಂಟುಮಾಡುತ್ತಿದ್ದಿತು. ಮಹಡಿ, ಅಟ್ಟ, ಗೋಪುರಗಳಿಂದ ಕೂಡಿದ್ದಿತು. ಮುತ್ತಿನ ಗೊಂಚಲುಗಳು ನೇತಾ

ಸುನದ್ಧಕಲಧೌತಂ ಚ ಕ್ರೀಡಾಗೃಹಮನೋಗತಂ ।
ಪ್ರಕೀರ್ಣಕುಸುಮಾಮೋದಮತ್ತಾಲಿಕುಲಕೂಜಿತಂ ॥ ೪೬೮ ॥

ಕಿಂನರೋದ್ಗೀತಸಂಗೀತಗೃಹಾಂತರಿತಭಿತ್ತಿರಂ ।
ಸುಗಂಧಿಧೂಪಸಂಘಾತಂ ಮನಃಪ್ರಾಪ್ಯಮಲಕ್ಷಿತಂ ॥ ೪೬೯ ॥

ಕ್ರೀಡಾಮಯೂರನಾರೀಭೀ ರತಿಕೊಭೀ ರಭಸಾರ್ಪಿತಂ ।
ಹಂಸಸಂಘಾತಸಂದಿಷ್ಟಸ್ಫಟಿಕಸ್ತಂಭತೋರಣಂ ॥ ೪೭೦ ॥

ಅನಾವಿಲಮಸಂಭ್ರಾಂತ್ಯಾ ಬಹುಶಃ ಕಿನ್ನರಾಕುಲಂ ।
ಶುಕ್ಯೈರ್ಯತ್ರಾಭಿದೃಶ್ಯಂತೇ ಪದ್ಮರಾಗವಿನಿರ್ಮಿತಾಃ ॥ ೪೭೧ ॥

ಭಿತ್ತಯೋ ಜಾತಿಸಂಭ್ರಾಂತ್ಯಾ ಪ್ರತಿಬಿಂಬಿತಮೌಕ್ತಿಕಾಃ ।
ತತ್ರಾಕ್ಷೈಃ ಪ್ರಿಯಯಾ ದೇವೋ ವಿಹರ್ತುಮುಪಚಕ್ರಮೇ ॥ ೪೭೨ ॥

---

ಡುತ್ತಿದ್ದುವು. ಮಾಲೆಗಳೂ, ವೇದಿಕೆಗಳೂ, ಅನೇಕವಾಗಿದ್ದುವು ಚಿನ್ನವನ್ನು ಅಲ್ಲಲ್ಲಿ ಕೆತ್ತಿದ್ದರು. ಮನಸ್ಸಿಗೆ ಹರ್ಷವನ್ನು ಕೊಡುವ ಕ್ರೀಡಾಗೃಹವಿದ್ದಿತು. ಹೂವನ್ನು ಚೆಲ್ಲಿ ಸುವಾಸನೆ ಬರುವಂತೆ ಮಾಡಿದ್ದರು. ಆ ಹೂವಿಗೆ ದುಂಬಿಗಳು ಬಂದು ಝೇಂಕರಿಸುತ್ತಿದ್ದುವು ಕಿನ್ನರರು ಹಾಡುವ ಸಂಗೀತ ಗೃಹವು ಪಕ್ಕದಲ್ಲಿಯೇ ಇದ್ದಿತು ಸುಗಂಧವಾದ ಧೂಪಗಳಿಂದ ಕೂಡಿದ್ದಿತು. ಮನಸ್ಸಿನಿಂದ ಹೊಂದಲು ಸಾಧ್ಯವೇ ಹೊರತು ಕಣ್ಣಿಗೆ ಒಂದೇ ಸಾರಿ ಕಾಣುತ್ತಿರಲಿಲ್ಲ.

೪೭೦. ಕ್ರೀಡೆಯಾಡುತ್ತಿರುವ ಹೆಣ್ಣು ನವಿಲುಗಳು ರತಿಯ ವೇಗ ಹೊಂದಿರುವಂತೆ ಆ ನವಿಲುಗಳ ಪ್ರತಿಮೆಗಳಿದ್ದುವು. ಹಂಸಗಳ ಗುಂಪಿನಿಂದ ಕೂಡಿರುವಂತೆ ಚಿತ್ರವುಳ್ಳ ಸ್ಫಟಿಕದ ಬಾಗಿಲುವಾಡಗಳುಳ್ಳ ಬಾಗಿಲಿದ್ದಿತು. ಆ ಸ್ಥಳವು ನಿರ್ಮಲವಾಗಿದ್ದಿತು. ಕಿನ್ನರರು ಅಲ್ಲಿದ್ದರು. ಅವಸರವೆಂಬುದೇ ಅಲ್ಲಿರಲಿಲ್ಲ.

೪೭೧-೪೭೨. ಅಲ್ಲಿ ಪದ್ಮರಾಗದಿಂದ ಮಾಡಲ್ಪಟ್ಟಿದ್ದ ಗೋಡೆಗಳನ್ನು ಪದ್ಮರಾಗದ ಗಿಳಿಗಳು ಅಲ್ಲಿರುವುದರಿಂದ ತಿಳಿಯಬಹುದಾಗಿದ್ದಿತು. ಬೆಳ್ಳಗಿದ್ದು ನಮ್ಮ ಜಾತಿಗೆ ಸೇರಿವೆ ಎಂಬಂತೆ ಮುತ್ತುಗಳನ್ನು ಪ್ರತಿಬಿಂಬಿಸಿಕೊಂಡು ಗೋಡೆಗಳಿದ್ದುವು. ಅಲ್ಲಿ ಈಶ್ವರನು ಹೆಂಡತಿಯೊಡನೆ ಪಗಡೆಯಾಡಲು ಮೊದಲುಮಾಡಿದನು.

ಸ್ವಚ್ಛೇಂದ್ರನೀಲಭೂಭಾಗೇ ಕ್ರೀಡಂತೌ ಯತ್ರ ಸಂಸ್ಥಿತೌ ।
ವಪುಃಸಹಾಯತಾಂ ಪ್ರಾಪ್ತೌ ವಿನೋದರಸನಿರ್ವೃತಾ ॥ ೪೭೩ ॥

ಏವಂ ಪ್ರಕೀಡತೋಸ್ತತ್ರ ದೇವಶಂಕರಯೋಸ್ತದಾ ।
ಪ್ರಾದುರ್ಭೂತೋ ಮಹಾಶಬ್ದಃ ಪತಿತೋಽಂಬರಗೋಚರಃ ॥ ೪೭೪ ॥

ತಚ್ಛ್ರುತ್ವಾ ಕೌತುಕಾದ್ದೇವೀ ಕಿಮೇತದಿತಿ ಶಂಕರಂ ।
ಪರ್ಯಪೃಚ್ಛತ್ಸುರವರಂ ಹರಂ ವಿಸ್ಮಿತಪೂರ್ವಕಂ ॥ ೪೭೫ ॥

ಉವಾಚ ದೇವೋ ನೈತತ್ತೇ ದೃಷ್ಟಪೂರ್ವಂ ಶುಚಿಸ್ಮಿತೇ ।
ಏತೇ ಗಣೇಶಾ ಕ್ರೀಡಂತಿ ಶೈಲೇಽಸ್ಮಿನ್ಮತ್ಪ್ರಿಯಾಃ ಸದಾ ॥ ೪೭೬ ॥

ತಪಸಾ ಬ್ರಹ್ಮಚರ್ಯೇಣ ನಾಮಭಿಃ ಕ್ಷೇತ್ರಸೇವನೈಃ ।
ಯೈರಹಂ ತೋಷಿತಃ ಪೂರ್ವಂ ತ ಏತೇ ಮನುಜೋತ್ತಮಾಃ ॥ ೪೭೭ ॥

ಮತ್ಸಮೀಪಮನುಪ್ರಾಪ್ತಾ ಮಮ ಹೃದ್ಯಾಃ ಶುಭಾನನೇ ।
ಕಾಮರೂಪಾ ಮಹೋತ್ಸಾಹಾ ಮಹಾರೂಪಗುಣಾನ್ವಿತಾಃ ॥ ೪೭೮ ॥

---

೪೭೩. ನಿರ್ಮಲವಾಗಿರುವ ಇಂದ್ರನೀಲದ ಮಣಿಯನ್ನು ಹದ್ದಿರುವ ಸ್ಥಳದಲ್ಲಿ ಆಡುತ್ತಿದ್ದರು. ತಾವಿಬ್ಬರೇ ಇರುತ್ತ ವಿನೋದದಿಂದ ಸುಖಿಸುತ್ತಿದ್ದರು.

೪೭೪. ಈ ರೀತಿ ಪಾರ್ವತಿ ಪರಮೇಶ್ವರರು ಕ್ರೀಡಿಸುತ್ತಿರಲು ಒಂದು ಮಹಾ ಶಬ್ದವು ಆಕಾಶದಲ್ಲೆಲ್ಲಾ ಕೇಳಿ ಬಂದಿತು.

೪೭೫. ಅದನ್ನು ಕೇಳಿ ಗೌರಿಯು ಶಂಕರನನ್ನು ಕುರಿತು ನಗುತ್ತ ಆಶ್ಚರ್ಯ ದಿಂದ ಇದೇನೆಂದು ಕೇಳಿದಳು.

೪೭೬. ಆಗ ಶಂಕರನು ದೇವಿಯೇ! ಇದೇನೂ ಅಲ್ಲ ನೀನು ಯಾವಾ ಗಲೂ ಇದನ್ನು ನೋಡಿಲ್ಲ. ಇದು ನನಗೆ ಪ್ರಿಯರಾದ ಗಣೇಶರು. ಪರ್ವತದಲ್ಲಿ ಕ್ರೀಡಿಸುವ ಶಬ್ದವು ಎಂದನು.

೪೭೭. ತಪಸ್ಸು, ಬ್ರಹ್ಮಚರ್ಯೆ, ನಾಮಸ್ಮರಣೆ, ಕ್ಷೇತ್ರಗಳ ಸೇವೆ, ಇವುಗ ಳಿಂದ ಪೂರ್ವದಲ್ಲಿ ನನ್ನನ್ನು ಸಂತೋಷಪಡಿಸಿದ ಮನುಷ್ಯರು ಇವರು.

೪೭೮. ಇವರು ನನ್ನ ಹತ್ತಿರಕ್ಕೆ ಬಂದಿದ್ದಾರೆ. ನನಗೆ ಸಂತೋಷವನ್ನುಂಟು ಮಾಡುವವರು. ಇಷ್ಟ ಬಂದ ರೂಪವನ್ನು ಹೊಂದುತ್ತಾರೆ. ಉತ್ತಮವಾದ ರೂಪು, ಗುಣಗಳುಳ್ಳವರು.

ಕರ್ಮಭಿರ್ವಿಸ್ಮಯಂ ತ್ವೇಷಾಂ ಪ್ರಯಾಮಿ ಬಲಶಾಲಿನಾಂ ।
ಸಾಮರಸ್ಯಾಸ್ಯ ಜಗತಃ ಸೃಷ್ಟಿಸಂಹರಣಕ್ಷಮಾಃ ॥ ೪೭ ॥

ಬ್ರಹ್ಮಚಂದ್ರೇಂದ್ರಗಂಧರ್ವೈಃ ಸಕಿನ್ನರಮಹೋರಗೈಃ ।
ವಿವರ್ಜಿತೋಽಪ್ಯಹಂ ನಿತ್ಯಂ ನೈಭಿರ್ವಿರಹಿತೋ ರಮೇ ॥ ೪೮೦ ॥

ಹೃದ್ಯಾ ಮೇ ಚಾರುಸರ್ವಾಂಗಿ ತ ಏತೇ ಕ್ರೀಡಂತೇ ಗಿರೌ ।
ಇತ್ಯುಕ್ತಾ ತು ತದಾ ದೇವೀ ತ್ಯಕ್ತ್ವಾ ತಂ ವಿಸ್ಮಯಾಕುಲಾ ॥ ೪೮೧ ॥

ಗವಾಕ್ಷಾಂತರಮಾಸಾದ್ಯ ಪ್ರೇಕ್ಷತೇ ಚಕಿತಾನನಾ ।
ಯಾವಂತಸ್ತೇ ಕೃಶಾ ದೀರ್ಘಾ ಹ್ರಸ್ವಾಃ ಸ್ಥೂಲಾ ಮಹೋದರಾಃ॥ ೪೮೨ ॥

ವ್ಯಾಘ್ರೇಭವದನಾಃ ಕೇಚಿತ್ಕೇಚಿನ್ಮೇಷಾಜರೂಪಿಣಃ ।
ಅನೇಕಪ್ರಾಣಿರೂಪಾಶ್ಚ ಜ್ವಾಲಾಸ್ಯಾಃ ಕೃಷ್ಣಪಿಂಗಲಾಃ ॥ ೪೮೩ ॥

೪೭೯. ಬಲಿಷ್ಠರಾದ ಇವರ ಕೆಲಸದಿಂದ ಆಶ್ಚರ್ಯಪಡುತ್ತೇನೆ. ದೇವತೆಗಳೊಡನೆ ಕೂಡಿದ ಈ ಜಗತ್ತಿನ ಸೃಷ್ಟಿ, ನಾಶಗಳನ್ನು ಕೂಡ ಇವರು ಮಾಡಬಲ್ಲವರು.

೪೮೦. ಬ್ರಹ್ಮ, ಚಂದ್ರ, ಇಂದ್ರ, ಗಂಧರ್ವ, ಕಿನ್ನರ ಮಹೋರಗರುಗಳಿಲ್ಲದಿದ್ದರೂ ನನಗೆ ದುಃಖವಾಗುವುದಿಲ್ಲ ಇವರಿಲ್ಲದಿದ್ದರೆ ಸ್ವಲ್ಪವೂ ನನಗೆ ಸಂತೋಷವೇ ಇರುವುದಿಲ್ಲ.

೪೮೧. ಎಲೈ ಚಾರ್ವಂಗಿಯೇ! ಇವರು ನನಗೆ ಹೃದ್ಯರು. ಈ ಬೆಟ್ಟದಲ್ಲಿ ಕ್ರೀಡಿಸುತ್ತಾರೆ. ಎಂದೆನಲು ಆಶ್ಚರ್ಯದಿಂದ ನೋಡಬೇಕೆಂಬ ಆಸೆಯನ್ನು ಹೊಂದಿ ಆಟವನ್ನು ಬಿಟ್ಟು ಕಿಟಕಿಯಲ್ಲಿ ಆಶ್ಚರ್ಯದಿಂದ ನೋಡಿದಳು.

೪೮೨–೪೮೪. ಅವರಲ್ಲಿ ಕೆಲವರು ಕೃಶರು, ಕೆಲವರು ದೀರ್ಘರು, ಕೆಲವರು, ಕುಳ್ಳರು, ಕೆಲವರು ದಪ್ಪ, ಕೆಲವರ ಮುಖ ಹುಲಿಯ ಮುಖ, ಕೆಲವರದು ಆನೆಯ ಮುಖ, ಕೆಲವರು ಆಡಿನ ರೂಪದವರು, ಕೆಲವರು ಕುರಿಯ ರೂಪದವರು, ಮತ್ತೆ ಕೆಲವರು ಬಗೆಬಗೆಯಾದ ಪ್ರಾಣಿಗಳ ರೂಪದವರು, ಬೇಕಾದಷ್ಟು ಜನರಿದ್ದರು ಮುಖದಲ್ಲಿ ಜ್ವಾಲೆಯು ಹೊಮ್ಮುತ್ತಿದ್ದಿತು ಮತ್ತು ಕೆಂಪಗಿದ್ದಿತು. ಕೆಲವರು ಸೌಮ್ಯ

ಸೌಮ್ಯಾ ಭೀಮಾಃ ಸ್ಮಿತಮುಖಾಃ ಕೃಷ್ಣಪಿಂಗ ಜಟಾಸಟಾಃ ।
ನಾನಾವಿಹಂಗವದನಾ ನಾನಾವಿಧಸುರಾನನಾಃ ॥ ೪೮೪ ॥

ಕೌಶೇಯಚರ್ಮವಸನಾ ನಗ್ನಾಶ್ಚಾನ್ಯೇ ವಿರೂಪಿಣಃ ।
ಗೋಕರ್ಣಾ ಗಜಕರ್ಣಾಶ್ಚ ಬಹುವಕ್ತ್ರೇಕ್ಷಣೋದರಾಃ ॥ ೪೮೫ ॥

ಬಹುಪಾದಾ ಬಹುಭುಜಾ ದಿವ್ಯನಾನಾಸ್ತ್ರಪಾಣಯಃ ।
ಅನೇಕಕುಸುಮಾಪೀಡಾ ನಾನಾವ್ಯಾಲವಿಭೂಷಣಾಃ ॥ ೪೮೬ ॥

ಕೃತನಾನಾಯುಧಧರಾ ನಾನಾಕವಚಭೂಷಣಾಃ ।
ವಿಚಿತ್ರವಾಹನಾರೂಢಾ ದಿವ್ಯರೂಪಾ ವಿಯಚ್ಚರಾಃ ॥ ೪೮೭ ॥

ವೀಣಾವಾದ್ಯರವೋದ್ಘುಷ್ಟಾ ನಾನಾಸ್ಥಾನಕನರ್ತಕಾಃ ।
ಗಣೇಶಾಂಸ್ತಾಂಸ್ತಥಾ ದೃಷ್ಟ್ವಾ ದೇವೀ ಪ್ರೋವಾಚ ಶಂಕರಂ ॥ ೪೮೮ ॥

---

ನಾಗಿದ್ದರು, ಕೆಲವರು ಭಯಂಕರವಾಗಿದ್ದರು. ಕೆಲವರು ಕಪ್ಪಗಿರುವರು, ಕೆಲವರು ಹೊಂಬಣ್ಣದ ಜಟೆಗಳನ್ನು ಹೊಂದಿದ್ದರು. ಕೆಲವರು ಪಕ್ಷಿಗಳ ಮುಖವುಳ್ಳವರಾಗಿದ್ದರು. ರಾಕ್ಷಸರ ಮುಖದಂತೆ ಕೆಲವರಿಗೆ ಮುಖವಿದ್ದಿತು.

೪೮೫. ಕೆಲವರು ರೇಷ್ಮೆಯ ಬಟ್ಟೆಗಳನ್ನೂ ಕೆಲವರು ಚರ್ಮಗಳನ್ನೂ ಹೊದ್ದಿದ್ದರು. ಕೆಲವರು ಬೆತ್ತಲೆ ಇದ್ದರು. ಕೆಲವರು ವಿಕಾರವಾಗಿದ್ದರು. ಕೆಲವರಿಗೆ ಹಸುವಿನ ಕಿವಿಯಂತೆ ಕಿವಿಯಿದ್ದಿತು. ಆನೆಯ ಕಿವಿಯಂತೆ ಕಿವಿಗಳೂ ಕೆಲವರಿಗಿದ್ದುವು. ಕೆಲವರಿಗೆ ಅನೇಕ ಮುಖಗಳೂ ಮತ್ತೆ ಕೆಲವರಿಗೆ ಅನೇಕ ಹೊಟ್ಟೆಯೂ ಇದ್ದುವು.

೪೮೬-೪೮೭. ಕೆಲವರಿಗೆ ಅನೇಕ ಕಾಲುಗಳೂ, ಕೆಲವರಿಗೆ ಅನೇಕ ಕೈಗಳೂ ಇದ್ದುವು. ಇವರೆಲ್ಲರೂ ದಿವ್ಯವಾದ ಅಸ್ತ್ರಗಳನ್ನು ಕೈಯಲ್ಲಿ ಹಿಡಿದಿದ್ದರು. ಬಗೆಬಗೆಯ ಹೂವನ್ನು ಮುಡಿದುಕೊಂಡಿದ್ದರು. ಹಾವನ್ನು ಕಟ್ಟಿಕೊಂಡಿದ್ದರು. ಅನೇಕ ಆಯುಧಗಳನ್ನು ಹಿಡಿದಿದ್ದರು. ನಾನಾ ಬಗೆಯಾದ ಕವಚಗಳನ್ನು ತೊಟ್ಟಿದ್ದರು. ಬಗೆಬಗೆಯ ವಾಹನಗಳ ಮೇಲೆ ಕುಳಿತಿದ್ದರು. ಒಳ್ಳೆಯ ರೂಪವಂತರಾಗಿ ಆಕಾಶದಲ್ಲಿ ಸಂಚರಿಸುತ್ತಿದ್ದರು.

೪೮೮. ವೀಣೆಯನ್ನು ಬಾರಿಸುತ್ತ ಬಗೆಬಗೆಯಾಗಿ ಕುಣಿಯುತ್ತಾ ಇರುವ ಆ ಗಣೇಶರನ್ನು ನೋಡಿ ಪಾರ್ವತಿಯು ಶಂಕರನಿಗಿಂತೆಂದಳು.

॥ ದೇವ್ಯುವಾಚ ॥

ಗಣೇಶಾಃ ಕತಿ ಸಂಖ್ಯಾತಾಃ ಕಿಂ ನಾಮಾನಃ ಕಿಮಾತ್ಮಕಾಃ ।
ಏಕೈಕಶೋ ಮಮ ಬ್ರೂಹ್ಯಧಿಷ್ಠಿತಾಯೇ ಪೃಥಕ್ಪೃಥಕ್ ॥ ೪೮೯

॥ ಶಂಕರ ಉವಾಚ ॥

ಕೋಟಿಕೋಟಿಶ್ಚ ಸಂಖ್ಯಾತಾ ನಾನಿಖ್ಯಾತಪೌರುಷಾಃ
ಜಗದಾಪೂರಿತಂ ಸರ್ವಮೇಭಿರ್ಭೀಮೈರ್ಮಹಾಬಲೈಃ ॥ ೪೯೦ ॥
ಸಿದ್ಧಕ್ಷೇತ್ರೇಷು ರಥ್ಯಾಸು ಜೀರ್ಣೋದ್ಯಾನೇಷು ವೇಶ್ಮಸು ।

ದಾನವಾಂ ಶರೀರೇಷು ಬಾಲೇಷೂನ್ಮತ್ತಕೇಷು ಚ ॥ ೪೯೧ ॥
ಏತೇ ಚೈವಂ ಸಮುದಿತಾ ನಾನಾಹಾರವಿಹಾರಿಣಃ ।

ಊಷ್ಮಪಾಃ ಫೇನಪಾಶ್ಚೈವ ಧೂಮಪಾ ಮಧುಪಾಯಿನಃ ॥ ೪೯೨ ॥
ಮೇದೋಹಾರಾ ರುಧಿರಪಾಃ ಸರ್ವಭಕ್ಷಾ ಹ್ಯಭೋಜನಾಃ ।

---

೪೮೯. ದೇವಿಯು ಹೇಳಿದಳು– ಗಣೇಶರು ಎಷ್ಟು ಜನರಿರುವರು ? ಅವರ ಹೆಸರೇನು ? ಅವರ ಸ್ಥಿತಿಯೇನು ? ಅವರ ಒಡೆಯರು ಯಾರು ಯಾರು ? ಅವರು ಎಲ್ಲಿರುವರು ? ಒಬ್ಬೊಬ್ಬರನ್ನಾಗಿ ನನಗೆ ಹೇಳು.

೪೯೦. ಶಂಕರನು ಹೇಳಿದನು- ಇವರು ಕೋಟಿ ಕೋಟಿ ಲೆಕ್ಕದಲ್ಲಿ ಇರುವರು. ಬಹು ಬಲಿಷ್ಠರು. ಮಹಾ ಬಲಿಷ್ಠರಾದ ಇವರಿಂದ ಜಗತ್ತೇ ತುಂಬಿರುವುದು.

೪೯೧. ಸಿದ್ಧ ಕ್ಷೇತ್ರಗಳಲ್ಲಿಯೂ ಬೀದಿಯ ಚೌಕಗಳಲ್ಲಿಯೂ ಕೆಟ್ಟುಹೋದ ಉದ್ಯಾನಗಳಲ್ಲಿಯೂ, ಪಾಳು ಮನೆಗಳಲ್ಲಿಯೂ, ದಾನವರ ಶರೀರದಲ್ಲಿಯೂ, ಮಕ್ಕಳಲ್ಲಿಯೂ, ಹುಚ್ಚರಲ್ಲಿಯೂ, ಇವರು ಇರುವರು

೪೯೨-೪೯೩. ಇವರೆಲ್ಲರೂ ಹೀಗೆಯೇ ಗುಂಪುಗುಂಪಾಗಿರುವರು. ಅನೇಕ ಬಗೆಯಾದ ಆಹಾರ ಒಡವೆಗಳನ್ನುಳ್ಳವರು. ಕೆಲವರು ತುಂತುರನ್ನು ಕುಡಿದಿರುವರು, ಕೆಲವರು ನೊರೆಯನ್ನು ತಿನ್ನುವರು, ಕೆಲವರು ಹೊಗೆಯನ್ನು ಕುಡಿಯುವರು, ಕೆಲವರು ಜೇನನ್ನು ಕುಡಿಯುವರು, ಕೆಲವರು ಮೇದಸ್ಸನ್ನು ತಿನ್ನುವರು, ಕೆಲವರು ರಕ್ತವನ್ನು ಕುಡಿಯುವರು, ಕೆಲವರು ಎಲ್ಲವನ್ನೂ ತಿನ್ನುವರು, ಕೆಲವರು ದೇವತೆಗಳಂತೆ

ಪೇನಾದಾಸ್ತಾಪಸಾಹಾರಾ ನಾನಾವಾದ್ಯರತಿಪ್ರಿಯಾಃ ॥
ನ ಚೈಷಾಂ ವೈ ಅನಂತತ್ವಾದ್ಗುಣಾನ್ವಕ್ತುಂ ಹಿಶಕ್ಯತೇ ॥ ೪೯೩ ॥

॥ ದೇವ್ಯುವಾಚ ॥

ನಾಗತ್ವಗುತ್ತರಾಸಂಗಃ ಶುದ್ಧಾಂಗೋ ಮುಂಜಮೇಖಲೀ ।
ಮಾಸಶ್ಮೈಲೇನ ಕಲ್ಕೇನ ಚಪಲೋ ರಂಜಿತಾನನಃ ॥ ೪೯೪ ॥

ಭೃಂಗವಂಷ್ಟ್ರೋತ್ಪಲಾನಾಂ ಚ ಸ್ರಗ್ದಾಮಾ ಮಧುರಾಕೃತಿಃ ।
ಪಾಷಾಣಶಕಲೋತ್ಥಾನಕಾಂಸತಾಲಪ್ರವರ್ತಕಃ ॥ ೪೯೫ ॥

ಅಸೌ ಗಣೇಶ್ವರೋ ದೇವ ನಾಮ ಕಿಂ ಕಿಂನರಾನುಗಃ ।
ಯ ಏಷ ಗಣಗೀತೇಷು ದತ್ತಕರ್ಣೋ ಮುಹುರ್ಮುಹುಃ ॥ ೪೯೬ ॥

॥ ಶರ್ವ ಉವಾಚ ॥

ಸ ಏಷ ವೀರಕೋ ದೇವಿ ಸದಾ ಮೇ ಹೃದಯಪ್ರಿಯಃ ।
ನಾನಾಶ್ಚರ್ಯಗುಣಾಧಾರೋ ಗಣೇಶ್ವರಗಣಾರ್ಚಿತಃ ॥ ೪೯೭ ॥

---

ಅವ್ಯಾತಪಾನ ಮಾಡುವರು. ಕೆಲವರು ತಾಪಸರಂತೆ ಆಹಾರವುಳ್ಳವರು. ಇವರೆಲ್ಲರೂ ಬಗೆಬಗೆಯ ವಾದ್ಯಗಳನ್ನು ಬಾರಿಸುವುದರಲ್ಲಿ ಆಸಕ್ತರು. ಇವರ ಗುಣಗಳು ಬಹುವಾಗಿರುವುದರಿಂದ ಹೇಳಲು ಸಾಧ್ಯವಾಗುವುದಿಲ್ಲ.

೪೯೪-೪೯೬. ದೇವಿಯು ಹೇಳಿದಳು—ಆನೆಯ ಚರ್ಮವನ್ನು ಹೊದ್ದಿರುವ ಶುದ್ಧವಾದ ದೇಹವುಳ್ಳ, ನೊದೆಯ ಉಡಿದಾರವನ್ನು ಕಟ್ಟಿಕೊಂಡಿರುವ ಮಣ್ಣಿ ಶಿಲೆಯ ಬಗ್ಗಡವನ್ನು ಮಾಡಿಕೊಂಡು ಅದನ್ನು ಮುಖಕ್ಕೆ ಬಳಿದುಕೊಂಡಿರುವ, ಕಪ್ಪಗಿರುವ ಹಲ್ಲುಳ್ಳ, ಕನ್ನೆದೆಲೆಯ ಮಾಲೆಗಳನ್ನು ಹಾಕಿಕೊಂಡಿರುವ ಆಕಾರವು ಚೆನ್ನಾಗಿರುವ ಕಲ್ಲಿನ ಚೂರುಗಳನ್ನು ತೆಗೆದುಕೊಂಡು ತಾಳ ಹಾಕುತ್ತಿರುವ ಕಿನ್ನರರ ಜೊತೆಯ ಈ ಗಣೇಶನ ಹೆಸರೇನು ? ಇವನು ಈ ಗಣಗಳ ಸಂಗೀತವನ್ನು ಕಿವಿಗೊಟ್ಟು ಬಾರಿಬಾರಿಗೂ ಕೇಳುತ್ತಿರುವೆನು.

೪೯೭. ಈಶ್ವರನು ಹೇಳಿದನು–ಇವನ ಹೆಸರು ವೀರಕನೆಂದು ನನಗೆ ಯಾವಾಗಲೂ ಪ್ರಿಯನು. ಅನೇಕ ಆಶ್ಚರ್ಯಗಳಿಗೆ ಆಧಾರನು. ಗಣಗಳೆಲ್ಲವೂ ಇವನನ್ನು ಪೂಜಿಸುತ್ತವೆ.

॥ ದೇವ್ಯುವಾಚ ॥

ಈ ದೃಶಸ್ಯ ಸುತಸ್ಯಾಸ್ತಿ ಮನೋತ್ಕಂಠಾ ಪುರಾಂತಕ ।
ಕದಾಽಹಮೀದೃಶಂ ಪುತ್ರಂ ದ್ರಕ್ಷ್ಯಾಮ್ಯಾನಂದದಾಯಕಂ ॥ ೨೯೮ ॥

ಏಷ ಏವ ಸುತಸ್ತೇಽಸ್ತು ನಯನಾನಂದಕಾರಕಃ ।
ತ್ವಯಾ ಮಾತ್ರಾ ಕೃತಾರ್ಥೋ ಹಿ ವೀರಕೋಽಪಿ ಸುಮಧ್ಯಮೇ ॥ ೨೯೯ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಪ್ರೇಷಯಾಮಾಸ ವಿಜಯಾಂ ಹರ್ಷಣೋತ್ಸುಕಾಂ ।
ವೀರಕಾನಯನಾಯಾಽಶು ದುಹಿತಾ ಭೂಭೃತಃ ಸಖೀಂ ॥
ಸಾಽವರುಹ್ಯ ತ್ವರಾಯುಕ್ತಾ ಪ್ರಾಸಾದಾದಂಬರಸ್ಪೃಶಃ ॥ ೩೦೦ ॥

॥ ವಿಜಯೋವಾಚ ॥

ಗಣಪಂ ಗಣಮಧ್ಯಸ್ಥಂ ಗಣಕೋಟಿಪ್ರವರ್ತಿನಂ ।
ಏಹಿ ವೀರಕ ಚಾಪಲ್ಯಾತ್ತ್ವಯಾ ದೇವೀ ಪ್ರತೋಷಿತಾ ॥ ೩೦೧ ॥

---

೨೯೮. ದೇವಿಯು ಹೇಳಿದಳು–ಎಲೈ ಪುರಾಂತಕನೇ ! ಈ ರೀತಿಯಾದ ಮಗನಲ್ಲಿ ನನಗೆ ಆಸೆಯಿದೆ. ಆನಂದವನ್ನುಂಟುಮಾಡುವ ಇಂತಹ ಮಗನನ್ನು ನಾನು ಯಾವಾಗ ನೋಡುವೆನು.

೨೯೯. ಶರ್ವನು ಹೇಳಿದನು– ಎಲೈ ಪಾರ್ವತಿಯೇ ! ಕಣ್ಣಿಗೆ ಸೊಗಸುವ ಇವನೇ ನಿನಗೆ ಮಗನಾಗಲಿ. ಈ ವೀರಕನಿಗೆ ನೀನು ತಾಯಿಯಾದರೆ ಅವನು ಧನ್ಯನು.

೩೦೦ ಪುಲಸ್ತ್ಯನು ಹೇಳಿದನು- ಪಾರ್ವತಿಯು ಸಂತೋಷದಿಂದ ವಿಜಯೆಯನ್ನು ಕರೆದು ವೀರಕನನ್ನು ಕರೆತರುವಂತೆ ಆಕೆಗೆ ಹೇಳಿದಳು. ಆಗ ಆ ವಿಜಯೆಯು ಮುಗಿಲುಮುಟ್ಟುವ ಆ ಅರಮನೆಯಿಂದ ಅವಸರದಿಂದ ಇಳಿದು ಹೋದಳು.

೩೦೧.೩೦೨. ವಿಜಯೆಯು ಹೇಳಿದಳು– ಗಣಗಳ ಮಧ್ಯದಲ್ಲಿರುವ ಕೋಟಿ ಗಣಗಳನ್ನು ನಡೆಸುವ ಗಣಪತಿಯನ್ನು ಕುರಿತು ಎಲೈ ವೀರಕನೇ ! ನಿನ್ನ ವಿಷಯದಲ್ಲಿ

ತ್ವಾಮಾವಾಹ್ವಯತಿ ಚೇತ್ಯುಕ್ತಸ್ತ್ಯಕ್ತ್ವಾ ಪಾಷಾಣಖಂಡಕಂ ।
ದೇವ್ಯಾಃ ಸಮೀಪಮಾಗಚ್ಛದ್ವಿಜಯಾನುಗತಃ ಶನೈಃ ॥ ೫೦೨ ॥

ಪ್ರಾಸಾದಶಿಖರೋತ್ಫುಲ್ಲರಕ್ತಾಂಬುಜನಿಭದ್ಯುತಿಃ ।
ತಂ ದೃಷ್ಟ್ವಾ ಪ್ರಸ್ಥಿತಾಽನಲ್ಪಸ್ವಾದುಕ್ಷೀರಪಯೋಧರಾ ॥ ೫೦೩ ॥

॥ ಗಿರಿಜೋವಾಚ ॥

ಪಿಬ ಕ್ಷೀರಮಿದಂ ವತ್ಸ ಸ್ರುತಂ ಪಿಬ ಯಥೇಚ್ಛಕಂ ॥ ೫೦೪ ॥

॥ ಪುಲಸ್ತ್ಯ ಉವಾಚ ॥

ಉವಾಚ ದೇವೀ ಸಸ್ನೇಹಂ ಗಿರಾ ಮಧುರವರ್ಣಯಾ ॥ ೫೦೫ ॥

॥ ಉಮೋವಾಚ ॥

ಏಹಿ ಸದ್ಯೋ ಹಿ ಜಾತೋಸಿ ಮೇ ಪುತ್ರಕೋ
ದೇವದೇವೇನ ದತ್ತೋಽಧುನಾ ವೀರಕ ।
ಉಕ್ತ್ವೇತ್ಯಂಕಮಾಧಾಯ ಪರ್ಯಷ್ವಜತ್ತಂ-
ಕಪೋಲೇ ಚುಚುಂಬಾಗರಾಣ್ನಂದಿನೀ ॥ ೫೦೬ ॥

---

ದೇವಿಯು ಸಂತೋಷಪಟ್ಟು ಕರೆಯುತ್ತಿದ್ದಾಳೆ. ಬಾ ಎನ್ನಲು, ಆತನು ಆ ಕಲ್ಲುಗಳನ್ನು ಕೆಳಗೆ ಹಾಕಿ ವಿಜಯೆಯ ಜೊತೆಯಲ್ಲಿ ದೇವಿಯ ಬಳಿಗೆ ಬಂದನು.

೫೦೩. ಪ್ರಾಸಾದದ ಶಿಖರದಲ್ಲಿರುವ ಕೆಂಪು ಕಮಲದಂತೆ ಕಾಂತಿಯುಳ್ಳ ಆ ಪಾರ್ವತಿಯು ಆತನನ್ನು ನೋಡಿ ಹೊರಹೊಮ್ಮಿದ ಎದೆ ಹಾಲುಳ್ಳವಳಾದಳು.

೫೦೪. ಗಿರಿಜೆಯು ಹೇಳಿದಳು–ಎಲೈ ವತ್ಸನೇ! ಇಗೋ ಈ ಹಾಲು ಸೋರುತ್ತಿರುವುದು. ಯಥೇಚ್ಛವಾಗಿ ಕುಡಿ.

೫೦೬. ಪುಲಸ್ತ್ಯನು ಹೇಳಿದನು- ಆಗ ದೇವಿಯು ಸ್ನೇಹದಿಂದ ಕೂಡಿದ ಮಧುರವಾದ ಮಾತನ್ನು ಹೇಳಿದಳು.

೫೦೬. ಉಮೆಯು ಹೇಳಿದಳು- ಎಲೈ ಪುತ್ರನೇ ! ಬಾ, ಈಗ ನನ್ನ ಮಗನಾದೆ. ದೇವದೇವನು ನಿನ್ನನ್ನು ನನಗೆ ಕೊಟ್ಟಿದ್ದಾನೆ. ಹೀಗೆಂದು ಹೇಳಿ ಅವನನ್ನು ತೊಡೆಯಮೇಲೆ ಕೂರಿಸಿಕೊಂಡು ಪಾರ್ವತಿಯು ಕೆನ್ನೆಯಲ್ಲಿ ಮುತ್ತಿಟ್ಟಳು.

ಮೂರ್ಧ್ನ್ಯುಪಾಘ್ರಾಯ ಸಮ್ಮಾರ್ಜ್ಯ ಗಾತ್ರಾಣಿ-
ಸಂಭೂಷಯಾಮಾಸ ದಿವ್ಯೈಃ ಸ್ವಯಂ ಭೂಷಣ್ಯೈಃ ।
ಕಿಂಕಿಣೀಮೇಖಲಾನೂಪುರೈಃ ಸನ್ಮಣಿಕ್ಯಾಢ್ಯ-
ಕೇಯೂರಹಾರೈರಮೂಲ್ಯೈರ್ಗುಣ್ಯೈಃ ॥ ೫೦೭ ॥

ಕೋಮಲ್ಯೈಃ ಪಲ್ಲವೈಶ್ಚಿತ್ರಿತೈಶ್ಚಾರುಭಿ-
ರ್ಮಂಗಳ್ಯೈಃ ಕಂಕಣೈರ್ದಿವ್ಯಮಂತ್ರೋದ್ಭವೈಃ ।
ತಸ್ಯ ಶುದ್ಧೈಸ್ತತೋ ಭೂರಿಭಿಶ್ಚಾಕರೋ-
ನ್ಮಿಶ್ರಸಿದ್ಧಾರ್ಥಕೈರಂಗರಕ್ಷಾವಿಧಿಂ ॥ ೫೦೮ ॥

ಏವಮಾದಾಯ ಚೋವಾಚ ಕೃತ್ವಾ ಸ್ರಜಂ-
ಮೂರ್ಧ್ನಿ ಗೋರೋಚನಾಪತ್ರಭಂಗೋಜ್ಜ್ವಲೈಃ ॥
ವತ್ಸ ವತ್ಸಾಧುನಾ ಕ್ರೀಡ ಸಾರ್ಧಂ ಗಣೈ-
ರಪ್ರಮತ್ತೋ ವ್ರಜ ಶ್ವಭ್ರವರ್ಜಂ ಶನೈಃ ॥ ೫೦೯ ॥

---

೫೦೭. ಆತನನ್ನು ತಲೆಯಲ್ಲಿ ಮೂಸಿನೋಡಿ ಮೈಯನ್ನು ಸವರಿಸಿ ತಾನೇ ಎಲ್ಲಾ ಒಡವೆಗಳನ್ನೂ ತೊಡಿಸಿದಳು. ಗೆಜ್ಜೆ, ಉಡಿದಾರ, ಕಾಲುಬಳೆ, ಮಾಣಿಕ್ಯದ ಕಾಲುಬಳೆ ಮುಂತಾದುವನ್ನು ತೊಡಿಸಿದಳು.

೫೦೮. ಕೋಮಲವಾದ ಚಿಗುರುಗಳಿಂದಲೂ, ಮನೋಹರವಾದ ಮಂಗಳಕರಗಳಾದ, ಮಂತ್ರದಿಂದ ಕೂಡಿರುವ ಕಂಕಣಗಳನ್ನೂ ಕಟ್ಟಿ ಶುದ್ಧವಾದ, ಇನ್ನೂ ಇತರ ಅನೇಕ ಪದಾರ್ಥಗಳಿಂದಲೂ, ಬಿಳಿಯ ಸಾಸಿವೆಯಿಂದಲೂ ಅಂಗರಕ್ಷೆಯನ್ನು ಮಾಡಿದಳು.

೫೦೯. ಈ ರೀತಿ ಶೃಂಗರಿಸಿ ತಲೆಯಲ್ಲಿ ಹೂ ಮುಡಿಸಿ ಗೋರೋಚನದ ಚಿತ್ರಗಳನ್ನು ಬರೆದು ಮಗು, ಈ ಗಣಗಳೊಂದಿಗೆ ಹಳ್ಳಗಳನ್ನು ನೋಡಿಕೊಂಡು ಜೋಕೆಯಿಂದ ಆಟವಾಡು.

ವ್ಯಾಲಮಾಲಾಕುಲಾಃ ಶೈಲಸಾನುದ್ರುಮಾ-
ದಂತಿಭಿರ್ಭಗ್ನಸಾರಾಃ ಪರೇ ಭಂಗಿನಃ ।
ಜಾಹ್ನವೀಮಂಡಲಂ ಕ್ಷುಬ್ಧತೋಯಾಕುಲಂ-
ಮಾ ವಿಶೇಥಾ ಬಹುವ್ಯಾಘ್ರಜುಷ್ಟೇ ವನೇ ॥ ೫೧೦ ॥

ವತ್ಸ ಸಂಖ್ಯೇಷು ದುರ್ಗೇಷು ಯದ್ವೀರಕ-
ಪುತ್ರ ಭಾವಾಯತಾಂ ಸ್ವಸ್ಥಚಿತ್ತೋ ಜನಃ ।
ಪ್ರಾರ್ಥಿತಂ ಭವ್ಯಮಾಯಾತಿ ಭಾವಿನ್ಯಸೌ-
ಭಾವ್ಯತಾಂ ಸೋऽಪಿ ನಿರ್ವರ್ತ್ಯ ಸರ್ವೈರ್ಗುಣೈಃ ॥ ೫೧೧ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೋऽಂಬಯಾ ವೀರಕೋ ಮಾತರಂ-
ಸ ಸ್ಮಯನ್ನಾಹ ಲೀಲಾರಸಾವಿಷ್ಟಧೀಃ ॥
ಏಷ ಮಾತ್ರಾ ಸ್ವಯಂ ಮೇ ಕೃತಃ ಕಂಕಣಃ-
ಪತ್ರಕಚ್ಛಿತ್ರಿತಃ ಪಾಟಲೈರ್ಬಿಂದುಭಿಃ ॥ ೫೧೨ ॥

---

೫೧೦. ಈ ಬೆಟ್ಟದ ಮರಗಳಿರುವಲ್ಲಿ ದುಷ್ಟ ಮೃಗಗಳು ಇವೆ, ಎಷ್ಟೋ ಮರಗಳನ್ನು ಆನೆಗಳು ಮುರಿದಿವೆ. ಮುರಿಯುತ್ತವೆ, ಅಲ್ಲಿ ಸುತ್ತಬೇಡ, ಗಂಗೆಯ ನೀರು ಆಳವಾಗಿರುತ್ತದೆ, ಅಲ್ಲಿ ಹೋಗಿ ಇಳಿಯಬೇಡ, ಬಹುವಾದ ಹುಲಿಗಳಿರುವ ಕಾಡಿಗೆ ಹೋಗಬೇಡ.

೫೧೧. ಎಲೈ ವತ್ಸನೇ ! ಯುದ್ಧದಲ್ಲಿ, ಕಷ್ಟ ಸ್ಥಳಗಳಲ್ಲಿ, ಇರುವವರ ಮನಸ್ಸಿನಂತೆ ನಡೆ. ನಮಗೆ ಬೇಕಾದ ಒಳ್ಳೆಯದು ಬಂದೇ ಬರುತ್ತದೆ, ಅದು ಕೆಟ್ಟದೆಲ್ಲವನ್ನೂ ನಾಶಮಾಡಿ, ತಾನು ಬರುತ್ತದೆ.

೫೧೨. ಪುಲಸ್ತ್ಯನು ಹೇಳಿದನು- ತಾಯಿಯಾದ ಪಾರ್ವತಿಯು ಹೀಗೆ ಹೇಳಲು, ವೀರಕನು ತಾಯಿಯೊಡನೆ ಲೀಲೆಯಿಂದ ನಗುತ್ತ ಇಂತೆಂದನು. ತಾಯಿ ! ನೀನೇ ನಿನ್ನ ಕೈಯಿಂದ ಈ ಕಂಕಣವನ್ನು ಕಟ್ಟಿದ್ದೀಯೆ, ಕಾವಿಯ ಬಣ್ಣದ ಬಿಂದುಗಳಿಂದ ಈ ಚಿತ್ರವನ್ನು ಬರೆದಿದ್ದೀಯೆ

ಚಾರುಪುಷ್ಪೈರಿಯಂ ಮಾಲತೀಭಿಃ ಕೃತಾ-
ಮಾಲಿಕಾ ಮೇ ಶಿರಸ್ಯಾಹಿತಾ ಕೋಮಲಾ ।
ತೋಷಯಾಮೀಶ್ವರೀಮಿತ್ಯಯಂ ಸತ್ವರಂ-
ಚಿಂತಯಿತ್ವಾಽವ್ರಜದ್ಬಾಹ್ಯತಃ ಕ್ರೀಡನಂ ॥ ೫೧೩ ॥

ಸ್ವೈರ್ಗಣೈಃ ಸಂಯುತೋ ವೀರಕೋ ಹರ್ಷಿತೋ
ದಕ್ಷಿಣಾತ್ಪಶ್ಚಿಮ ಪಶ್ಚಿಮಾದುತ್ತರಂ ।
ಉತ್ತರಾತ್ಪೂರ್ವಮಭ್ಯೇತ್ಯ ಸಖ್ಯಾ ಯುತಾ-
ಪ್ರೇಕ್ಷತೀ ತಂ ಗವಾಕ್ಷಾಂತರಾದ್ವೀರಕಂ ॥ ೫೧೪ ॥

ಶೈಲಪುತ್ರೀ ಬಹಿಃ ಕ್ರೀಡತಾಂ ಯಜ್ಜಗ-
ತ್ಸ್ನೇಹಜಃ ಪುತ್ರ ಲಬ್ಧೋ ಯತಸ್ತತ್ರ ಕಃ ।
ಮೋಹಮಾಯಾತಿ ಯಃ ಸ್ವಲ್ಪಚೇತಾ ಜಡೋ-
ಮಾಂಸವಿಣ್ಮೂತ್ರಸಂಘಾತದೇಹೋದ್ಭವಃ ॥ ೫೧೫ ॥

---

೫೧೩. ಅಮ್ಮ ! ನೀನು ಮಾಲತೀ ಪುಷ್ಪಗಳಿಂದ ಮಾಲೆಯನ್ನು ಕಟ್ಟಿ, ನನ್ನ ತಲೆಗೆ ಮುುಡಿಸಿದ್ದೀಯೆ, ಎಂದು ಹೇಳಿ ಹೊರಗೆ ಹೋಗಿ ಹೊರಗಿನ ಕ್ರೀಡೆಗಳಿಂದ ಈಕೆಯನ್ನು ಸಂತೋಷಪಡಿಸುತ್ತೇನೆ, ಎಂದು ಯೋಚಿಸಿ ಹೋದನು.

೫೧೪. ವೀರಕನು ಹರ್ಷಗೊಂಡು ತನ್ನ ಗಣಗಳಿಂದ, ಕೂಡಿಕೊಂಡು ದಕ್ಷಿಣಕ್ಕೂ, ಅಲ್ಲಿಂದ ಪಶ್ಚಿಮಕ್ಕೂ, ಪಶ್ಚಿಮದಿಂದ ಉತ್ತರಕ್ಕೂ, ಪೂರ್ವಕ್ಕೂ, ಬಂದನು. ಪಾರ್ವತಿಯು ಗವಾಕ್ಷದಲ್ಲಿ ಸಖಿಯೊಡನೆ ನೋಡುತ್ತಿದ್ದಳು

೫೧೫. ಪಾರ್ವತಿಗೆ ಹೊರಗೆ ಆಡುತ್ತಿರುವ, ಈ ಸ್ನೇಹದ, ಮಗನು ಸಿಕ್ಕಿದನು. ಹೀಗೆ ಮಕ್ಕಳು ಸಿಕ್ಕಿದರೆ, ಮಾಂಸ, ಮಲ, ಮೂತ್ರ, ಸಂಘಾತದಿಂದ ದೇಹವನ್ನು ಹೊಂದುವ ಮಗನಲ್ಲಿ ಯಾವ ಮೂಢನು ತಾನೇ ಮೋಹಗೊಳ್ಳುವನು ?

ದೃಷ್ಟುಮಭ್ಯಂತರಂ ನಾಕವಾಸೇಶ್ವರೇ-
ಷ್ವಿಂದುಮೌಲಿಂ ಪ್ರವಿಷ್ಟೇಷು ಕಕ್ಷಾಂತರಂ ।
ವಾಹನಾನ್ಯಧ್ಯರೋಹದ್ಗಣೇಶ್ವೈರ್ಯುತೋ-
ಲೋಕಪಾಲಾಸ್ತ್ರಪೂಗಂ ಮುಹೂರ್ತಾದಯಂ ॥ ೫೧೬ ॥

ಖಡ್ಗ ಏಷೋಽವಿಷದ್ರಾಕರೋ ನಿರ್ಮಲಃ-
ಕೃಂತಕಃ ಕಸ್ಯ ಕೇನಾಽಹೃತೋ ಬ್ರೂತ ನಃ ।
ನೋ ಭವೇದ್ಯೋಽಸ್ತಿ ದಂಡೇನ ಕಿಂ ದುಃಸಹೋ-
ಭೀಮಮೂರ್ತ್ಯಂಗಣೇ ನಾಸ್ತಿ ಕೃತ್ಯಂ ಗಿರೌ ॥ ೫೧೭ ॥

ಪಾಶ ಏಷೋಽಸ್ತಿ ತೇನಾತ್ರ ಕೋ ವಂಚ್ಯತೇ-
ಮಾ ವೃಥಾ ಲೋಕಪಾಲಾನುಗಾ ವಿದ್ರುತಃ ।
ಏವಮೇವೈತದಿತ್ಯಬ್ರುವಂಸ್ತೇ ತದಾ
ವೀಕ್ಷ್ಯದೇವಾನುಗಂ ವೀರಕಂ ರಕ್ಷಣಂ ॥ ೫೧೮ ॥

---

೫೧೬. ದೇವತೆಗಳು ಈಶ್ವರನನ್ನು ನೋಡಲು ಮನೆಯ ಅಂಗಳಕ್ಕೆ ಹೋಗಲು, ಆ ವೀರಕನು ಅವರ ವಾಹನಗಳ ಮೇಲೆ ಹತ್ತಿಕೊಂಡನು. ಅವರ ಅಸ್ತ್ರಗಳನ್ನು ಕ್ಷಣ ಕಾಲದಲ್ಲಿ ತೆಗೆದುಕೊಂಡನು.

೫೧೭. ಆ ಖಡ್ಗಕ್ಕೆ ವಿಷವನ್ನು ಬಳಿದಿಲ್ಲ. ನಿರ್ಮಲವಾಗಿದೆ ಕಡಿಯುವು ದಕ್ಕೆ ಹಿತವಾಗಿದೆ, ಯಾರು ಯಾರಿಗೆ ತಂದಿದ್ದಾರೆ, ನನಗೆ ಹೇಳಿ. ನನಗೇನಾದರೂ ತಂದಿರುವರೋ ? ನಮಗೆ ತಂದಿದ್ದರೆ, ಅದರಿಂದ ಪ್ರಯೋಜನವೇ ಇಲ್ಲ. ಈಶ್ವರನಿರುವ ಈ ಬೆಟ್ಟದಲ್ಲಿ ಅಯೋಗ್ಯನಾದವನೊಬ್ಬನೂ ಇಲ್ಲ.

೫೧೮. ಈ ಪಾಶವಿದೆಯಲ್ಲ, ಇದರಿಂದ ಬಿಡಿಸಿಕೊಂಡು ಹೋಗುವರಾರು ! ಎಲೈ, ಲೋಕಪಾಲಕರನ್ನು ಹಿಂಬಾಲಿಸುವ ದೇವತೆಗಳಿರ ! ಸುಮ್ಮನೆ ಓಡಿ ಹೋಗ ಬೇಡಿರಿ ಎನ್ನಲು ಆಗ ಅವರೆಲ್ಲರೂ ಹಾಗೆ ಆಗಲೆಂದು ದೇವತೆಗಳನ್ನು ಅನುಸರಿಸುತ್ತಿರುವ ವೀರಕನನ್ನು ನೋಡಿ ಹೇಳಿದರು.

ಪ್ರಾಹ ದೇವೀ ವನೇ ಪರ್ವತೇ ನಿರ್ಝರಾ-
ಧ್ಯಗ್ನಿಶಾಲಾಮುಖೇ ಭೂತಲೇ ಭೂತಪಾಃ ।
ನಿರ್ಝರಾಂಭೋನಿಪಾತೇಷು ನೋ ಮಜ್ಜತಾ-
ತ್ಪುಷ್ಪಜಾಲಾವನದ್ಧೇಷು ಧಾಮಸ್ವಪಿ ॥ ೫೧೯ ॥

ಪ್ರೋಚ್ಚನಾನಾದ್ರಿಕುಂಜಾವಗಾಹೇಷ್ವಥೋ-
ಮಾರುತಾಸ್ಫೋಟಸಂರಕ್ಷಣೇ ಕಾಮತಃ ।
ಕಾಂಚನೋತ್ತುಂಗಶೃಂಗಾವರೋಹಕ್ಷಿತೌ-
ಹೈಮರೇಣೂತ್ಕರಾಸಂಗಪಿಂಗದ್ಯುತಿಃ ॥ ೫೨೦ ॥

ಖೇಚರಾಣಾಂ ವನೇ ಚಾಪಿ ರಮ್ಯೇ ಚ-
ಭೂರೂಪಸಂಪತ್ಪ್ರಕಾರೋ ಗಣೋ ಗಚ್ಛತಾತ್ ॥
ಮಂದರೇ ಕಂದರೇ ಚಾರುವಾಪೀತಟೇ-
ಕುಂದಮಂದಾರಪುಷ್ಪಪ್ರವಾಲಾಂಬುಜೇ ॥ ೫೨೧ ॥

---

೫೧೯. ಹೀಗೆ ಹೋಗುತ್ತಿರುವ ಗಣಗಳನ್ನು ಗಣಪತಿಯನ್ನೂ ನೋಡಿ, ದೇವಿಯು ವನ, ಪರ್ವತ, ಗಿರಿ, ನದಿ, ಅಗ್ನಿಶಾಲೆ, ಭೂಮಿ, ಜಲಪಾತಗಳು, ಪುಷ್ಪಗಳುಳ್ಳ ವನಗಳು, ಇವುಗಳಲ್ಲಿ ನೀವು ತಡೆಯಿಲ್ಲದೇ ಹೋಗಿರಿ. ಎಂದಳು.

೫೨೦. ದೊಡ್ಡದಾಗಿರುವ ಅನೇಕವಾದ ಬೆಟ್ಟಗಳು, ಅವುಗಳ ಪೊದರುಗಳು, ಹಳ್ಳಗಳು, ಗಾಳಿಯು ಹೊಡೆತದ ಸ್ಥಳ, ಎತ್ತರವಾಗಿರುವ ಶಿಖರಗಳು, ಇಲ್ಲಿ ತಡೆಯಿಲ್ಲದೆ ಹೋಗಿರಿ. ಇಂತಹ ಶಿಖರಗಳಲ್ಲಿ ಚಿನ್ನದ ಧೂಳಿನಂತೆ ಇರುವ, ದೂಳನಿಂದ ಹೊಂಬಣ್ಣವನ್ನು ಹೊಂದಿರಿ, ಎಂದಳು.

೫೨೧. ದೇವತೆಗಳ ವನವಾದ ಮಧುವನದಲ್ಲಿಯೂ, ಭೂಮಿಯಲ್ಲಿರುವ ರೂಪದಿಂದಲೇ ಈ ಗಣಗಳೂ ಹೋಗಲಿ ಮಂದರದಲ್ಲಿಯೂ, ಗುಹೆಗಳಲ್ಲಿಯೂ, ಅನೇಕ ಹೂಗಳುಳ್ಳ ಕೊಳಗಳೆಡೆಯಲ್ಲಿಯೂ, ಇವು ಅಪ್ರತಿಹತವಾಗಿ ಹೋಗಲಿ.

ಸಿದ್ಧನಾರೀಭಿರಾಪೀತರೂಪಾಮೃತಂ-
ವಿಸ್ತೃತೈರ್ನೇತ್ರಪಾತ್ರೈರನುನ್ಮೇಷಿಭಿಃ ।
ವೀರಕಂ ಶೈಲಪುತ್ರೀ ನಿಮೇಷಾಂತರಾದಸ್ಮ-
ರತ್ಪುತ್ರಗೃದ್ನುರ್ವಿನೋದಾರ್ಥಿನೀ ॥ ೫೨೨ ॥

ಸೋಽಪಿ ತಾವತ್ಕ್ಷಣಾದಾಹ್ಯ ಪುಣ್ಯೋದಯೋ-
ಯೋ ಹಿ ಜನ್ಮಾಂತರಸ್ಯಾತ್ಮಜತ್ವಂ ತತಃ ।
ಕ್ರೀಡತಸ್ತಸ್ಯ ತೃಪ್ತಿಃ ಕಥಂ ಜಾಯತೇ-
ಯೋಽಪಿ ಭಾವಾಜ್ಜಗದ್ವೇಧಸಾ ತೇಜಸಾ ॥ ೫೨೩ ॥

ಕಲ್ಪಿತಃ ಪ್ರೇಕ್ಷಣಂ ದಿವ್ಯಗೀತಕ್ಷಣಂ-
ನೃತ್ಯಲೋಲೈರ್ಗಣೇಶೈಃ ಪ್ರನೃತ್ಯಕ್ಷಣಂ ॥
ಸಿಂಹನಾದಾಕುಲೇ ಗಂಡಶೈಲೇ ಜಲ-
ದ್ದ್ರುಪ್ರಜಾಲೇ ಬೃಹತ್ಸಾಲತಾಲೇಕ್ಷಣೇ ॥ ೫೨೪ ॥

---

೫೨೨. ಅಗಲವಾಗಿ ಕಣ್ಣುಗಳನ್ನು ಬಿಟ್ಟುಕೊಂಡು, ರೆಪ್ಪೆಯನ್ನು ಮುಚ್ಚದೆ ಸಿದ್ಧ ನಾರಿಯರಿಂದ ನೋಡಲ್ಪಟ್ಟ ರೂಪವುಳ್ಳ ವೀರಕನನ್ನು ಪಾರ್ವತಿಯು ಮರೆ ಇಲ್ಲ ನೋಡಬೇಕೆಂಬ ಆಸೆಯಿಂದಲೂ, ಸಂತೋಷದಿಂದಲೂ, ಸ್ಮರಿಸಿದಳು.

೫೨೩-೫೨೫. ಜನ್ಮಾಂತರದಲ್ಲಿಯೂ ಮಗನಾಗಿದ್ದ ಆ ಪುಣ್ಯವಂತನಾದ ವೀರಕನು ಕ್ಷಣಕಾಲದಲ್ಲಿಯೇ ಬಂದನು, ಬ್ರಹ್ಮನ ತೇಜಸ್ಸಿನಿಂದ ಕೂಡಿದ ಜಗತ್ತನ್ನು ಆಟದ ಭೂಮಿಯನ್ನಾಗಿ ಮಾಡಿದ ಅತನು ಆಡುತ್ತ ಆಟದ ತೃಪ್ತಿಯನ್ನು ಹೊಂದಲೇ ಇಲ್ಲ, ಇಂತಹ ಗಣೇಶನು ತನ್ನ ಪರಿವಾರಗಳೊಡನೆ ಕ್ಷಣಕಾಲ ಕುಣಿದನು. ಸಿಂಹನಾದವುಳ್ಳ, ಸಣ್ಣ ಬೆಟ್ಟಗಳಲ್ಲಿಯೂ, ಒಳ್ಳೆಯ ಮರಗಳ ಗುಂಪಿನಲ್ಲಿಯೂ, ದೊಡ್ಡ ಸಾಲ ತಾಲಗಳಿರುವಲ್ಲಿಯೂ, ಆಡಿದನು. ದುಂಬಿಗಳಂತೆ ಕಪ್ಪಗಿರುವ ಹೊಂಗೆಯ

ಫುಲ್ಲನಾನಾತಮಾಲಾಲಿಕಾಲೇಕ್ಷಣಂ-
ವೃಕ್ಷಮೂಲೇ ವಿಲೋಲೋ ಮರಾಲೇಕ್ಷಣಂ ।
ಸ್ವಲ್ಪಪಂಕೇ ಜಲೇ ಪಂಕಜಾಂಕೇಕ್ಷಣಂ-
ಮಾತುರಂಕೇ ಶುಭೇ ನಿಷ್ಕಲಂಕೇಕ್ಷಣಂ ॥ ೫೨೫ ॥

ಪರಿಕ್ರೀಡತೇ ಬಾಲಲೀಲಾವಿಹಾರೀ-
ಗಣೇಶಾಧಿಪೋ ದೇವತಾನಂದಕಾರೀ ।
ನಿಕುಂಜೇಷು ವಿದ್ಯಾಧರೋದ್ಗೀತಶೀಲಃ-
ಪಿನಾಕೀವ ಲೀಲಾವಿಲಾಸೈಃ ಸಲೀಲಃ ॥ ೫೨೬ ॥

ಪ್ರಕಾಶ್ಯ ಭುವನಂ ಗೋಭಿಸ್ತತೋ ದಿನಕರೇ ಗತೇ ।
ದೇಶಾಂತರಂ ತದಾ ಪಶ್ಚಾದ್ದೂರೋತೆ ಧರಣೀಧರಃ ॥ ೫೨೭ ॥

ಮಿತ್ರತ್ವಮಸ್ಯ ಸುದೃಢಂ ಹೃದಯೇ ದ್ಯೋತಯನ್ನಿವ ।
ನಿತ್ಯಮಾರಾಧಿತೋ ವಿಪ್ರೈಃ ಶ್ರೀಮಾನ್ವಿಖನಸಃ ಸುತಃ ॥ ೫೨೮ ॥

ಮರಗಳೆಡೆಯಲ್ಲಿಯೂ, ಮರದ ಬುಡಗಳಲ್ಲಿಯೂ, ಸ್ವಲ್ಪ ಕೆಸರಿರುವ ನೀರಿನಲ್ಲಿಯೂ ತಾಯಿಯ ತೊಡಯ ಮೇಲೂ, ಕ್ಷಣ ಕ್ಷಣಕಾಲ ಆಟವಾಡಿದನು

೫೨೬. ಗಣೇಶನು ಬಾಲಲಿಲಾ ವಿಹಾರವುಳ್ಳವನಾಗಿಯೂ, ದೇವತೆಗಳಿಗೆ ಆನಂದವನ್ನುಂಟುಮಾಡುವವನಾಗಿಯೂ ಆಡುತ್ತಿದ್ದನು. ಪೊದರುಗಳಲ್ಲಿ ವಿದ್ಯಾಧರರಂತೆ ಹಾಡುತ್ತಲೂ ಇದ್ದನು. ಲೀಲೆಯಿಂದ ಸಾಕ್ಷಾತ್ ಶಿವನಂತೆ ಕುಣಿಯುತ್ತಲೂ ಇದ್ದನು.

೫೨೭. ಸೂರ್ಯನು ಪ್ರಪಂಚವನ್ನೆಲ್ಲಾ ತನ್ನ ಕಿರಣಗಳಿಂದ ಬೆಳಗಿ, ಅನಂತರ ದೇಶಾಂತರಕ್ಕೆ ಹೋಗಲು ಪರ್ವತರಾಜನು ದೂರದಲ್ಲಿರುವಂತಾದನು.

೫೨೮- ಇವನಲ್ಲಿರುವ ಮಿತ್ರತ್ವವು ಸ್ಥಿರವಾದುದೆಂಬುದನ್ನು ತೋರಿಸುವನೋ ಎಂಬಂತೆ ಹೃದಯದಲ್ಲಿ ಧ್ಯಾನಿಸುತ್ತ ಆ ಸೂರ್ಯನನ್ನು ಬ್ರಾಹ್ಮಣರು ಪೂಜಿಸಿದರು.

ನಾಕರೋತ್ಸವಿತುರ್ಮೇರುರುಪಕಾರಂ ಪತಿಷ್ಯತಃ ।
ಜನೇಷ್ವೇಷಾ ವ್ಯವಸ್ಥೇತಿ ಶ್ರೂಯತೇ ಸ್ಖಲಿತೋ ಽಧಃ ॥ ೫೨೯ ॥

ದಿನೇನಾನುಗತೋ ಭಾನುಃ ಸ್ವಜನಂ ಪರಿಪೂರಯನ್ ।
ಸಂಧ್ಯಾಬದ್ಧಾಂಜಲಿಪುಟಾ ಮುನಯೋಽಭಿಮುಖಾ ರವಿಂ ॥ ೫೩೦ ॥

ಯಾವದಧ್ಯಾಸತೇ ಶೀಘ್ರಂ ನಿವಾರ್ಯೋಷ್ಣಾಭಿಭಾಷಿತಂ ।
ವ್ಯಜೃಂಭತಾಥ ಲೋಕೇಽಸ್ಮಿನ್ ಕ್ರಮಾದ್ವ್ಯಭಾವರಂತಮಃ ॥ ೫೩೧ ॥

ಕುಟಿಲಸ್ಯೇವ ಹೃದಯೇ ಕಾಲುಷ್ಯಂ ದೂಷಯನ್ಮನಃ ।
ಜ್ವಲತ್ಫಣಿ ಫಣಾರತ್ನ ದೀಪೋದ್ಯೋತಿತಭಿತ್ತಿಕೇ ॥ ೫೩೨ ॥

ಶಯನೇ ಶಶಿಸಂಘಾತರತ್ನವಸ್ತ್ರೋತ್ತರಚ್ಛದೇ ।
ನಾನಾರತ್ನದ್ಯುತಿಲಸಚ್ಛಕ್ರಚಾಪವಿಡಂಬಕೇ ॥ ೫೩೩ ॥

---

೫೨೯. ಇಷ್ಟು ದಿನವೂ ಉಪಕಾರ ಹೊಂದಿದ ಮೇರುವು ಸೂರ್ಯನು ಬಿದ್ದು ಹೋಗುತ್ತಿದ್ದರೆ ಯಾವ ಉಪಕಾರವನ್ನೂ ಮಾಡಲೇ ಇಲ್ಲ. ಜನಗಳಲ್ಲಿಯೂ ಕೂಡ ಇದೇ ರೀತಿಯಾದ ಸ್ವಭಾವವಿರುವುದೆಂದು ಆ ಸೂರ್ಯನು ಕೆಳಗೆ ಬೀಳುತ್ತಾ ತೋರಿಸುತ್ತಿದ್ದನು.

೫೩೦-೫೩೧ ಭಾನುವು ತನ್ನ ಜನಗಳ ಇಷ್ಟವನ್ನು ಪೂರ್ತಿಮಾಡಿ ದಿನದಿಂದ ಅನುಸರಿಸಲ್ಪಟ್ಟವನಾಗಿ ಹೊರಟುಹೋದನು ಮುನಿಗಳು ಬೊಗಸೆಯಲ್ಲಿ ನೀರನ್ನು ಹಿಡಿದು ಸೂರ್ಯನಿಗೆದುರಾಗಿ ನಿಂತು ಉಪಾಸನೆ ಮಾಡುವಷ್ಟರಲ್ಲಿಯೇ ರಾತ್ರಿಯು ಕತ್ತಲೆಯು ಉಷ್ಣವನ್ನು ನಾಶಮಾಡಿ ಲೋಕದಲ್ಲೆಲ್ಲಾ ಹರಡಿಕೊಂಡಿತು.

೫೩೨-೫೩೫. ಹಾದರಗಳ್ಳನ ಕೆಟ್ಟತನವನ್ನು ದೂಷಿಸುವಂತೆ ಆ ಕತ್ತಲೆಯನ್ನು ಮನಸ್ಸು ದೂಷಿಸುವಂತಿದ್ದಿತು. ಆ ಕತ್ತಲೆಯಲ್ಲಿ ಆ ಶಿವನ ಮನೆಯ ಗೋಡೆಗಳು ಹಾವುಗಳ ಹೆಡೆಯ ರತ್ನದಿಂದ ಪ್ರಕಾಶಿತವಾಗಿದ್ದುವು, ಹಾಸಿಗೆಗೆ ಚಂದ್ರಕಾಂತಿ ಮಣಿಯಂತಿರುವ ಮುಗ್ಗುಲು ಹಾಸಿಗೆಯನ್ನು ಹಾಸಿದ್ದರು, ಸುತ್ತಲೂ ಇರುವ ಬಗೆ ಬಗೆಯ ರತ್ನಗಳ ಕಾಂತಿಯಿಂದ ಆ ಹಾಸಿಗೆಯು ಕಾಮನ ಬಿಲ್ಲನ್ನು ಹೊಂದಿದಂತೆ ನಾನಾವರ್ಣವಾಗಿದ್ದಿತು. ರತ್ನಗಳಿಂದಲೂ, ಗೆಜ್ಜೆಗಳಿಂದಲೂ, ಮುತ್ತಿನಿಂದಲೂ,

ರತ್ನೈಃ ಕಿಂಕಿಣಿಜಾಲೇನ ಲಸನ್ಮುಕ್ತಾಕಲಾಪಕೇ ।
ಕಮನೀಯಚಲಲ್ಲೀಲಾವಿತಾನಾಚ್ಛಾದಿತಾಂಬರೇ ॥ ೫೩೪ ॥

ಮಂದಿರೇ ಮಂದಸಂಚಾರಂ ಗತೇ ಗಿರಿಸುತಾಯುತಃ ।
ತಸ್ಥೌ ಗಿರಿಸುತಾಬಾಹುಲತಾಮಿಲಿತಕಂಧರಃ ॥ ೫೩೫ ॥

ಶಶಿಮೌಲಿಃ ಸಿತಜ್ಯೋತ್ಸ್ನಾಸ್ಫಾರಪೂರಿತಗೋಚರಃ ।
ಗಿರಿಜಾಽಪ್ಯಸಿತಾಪಾಂಗೀ ನೀಲೋತ್ಪಲದಲಚ್ಛವಿಃ ॥ ೫೩೬ ॥

ವಿಭಾವರ್ಯಾ ಚ ಸಂಪೃಕ್ತಾ ಬಭೂವಾತೀವ ಗೋಮಯೀ ।
ತಾಮುವಾಚ ತತೋ ದೇವಃ ಕ್ರೀಡಾಕೇಲಿಕಲಾಯುತಾಂ ॥ ೫೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಗೌರೀವಿವಾಹವರ್ಣನಂ
॥ ನಾಮ ಚತ್ವಾರಿಂಶತ್ತಮೋಽಧ್ಯಾಯಃ ॥

---

ಹಾಸಿಗೆಯು ಕೂಡಿದ್ದಿತು. ಮನೋಹರವಾದ ಅಲ್ಲಾಡುತ್ತಿರುವ ಮೇಲ್ಕಟ್ಟಿಗೆ ಒಟ್ಟಿಯನ್ನು ಹಾಕಿದ್ದರು, ಇಂತಹ ಮನೆಯಲ್ಲಿ ಜನಗಳ ಸಂಚಾರವು ಕಡಿಮೆಯಾಗಲು ಆಗ ಆ ಹಾಸಿಗೆಯಲ್ಲಿ ಪಾರ್ವತಿಯು ಎರಡು ಕೈಗಳಿಂದಲೂ ಶಿವನ ಕತ್ತನ್ನು ಅಪ್ಪಿಕೊಂಡಿದ್ದಳು.

೫೩೬-೫೩೭. ಶಿವನು ತನ್ನ ತಲೆಯಲ್ಲಿರುವ ಚಂದ್ರನ ಚಂದ್ರಿಕೆಯಿಂದ ಬೆಳ್ಳಗಾಗಿದ್ದನು. ಪಾರ್ವತಿಯು ಕಪ್ಪಗೆ ಕನ್ನೈದಿಲೆಯಂತಿದ್ದಳು, ಜೊತೆಗೆ ಕತ್ತಲೆಯೂ, ಸೇರಿ ಕೊಂಡುದುದರಿಂದ ಇನ್ನೂ ಕಪ್ಪಗಾಗಿದ್ದಳು. ಅಂತಹ ಈಕೆಯು ಈಗ ಹೆಚ್ಚಾದ ಕಪ್ಪು ಕಾಂತಿಯಿಂದ ಕೂಡಿದ್ದಳು, ಕ್ರೀಡಾರಸದಲ್ಲಿ ಆಸಕ್ತಳಾಗಿರುವ ಈಕೆಯನ್ನು ಕುರಿತು ಮಹದೇವನು ಇಂತೆಂದನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಗೌರೀ ವಿವಾಹವರ್ಣವೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—✓—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
## ॥ ಏಕಚತ್ವಾರಿಂಶತ್ತಮೋಽಧ್ಯಾಯಃ ॥



॥ ಶರ್ವ ಉವಾಚ ॥

ಶರೀರೇ ಮಮ ತನ್ವಂಗಿ ಸಿತೇಭಾಸ್ಯಸಿತದ್ಯುತಿಃ ।
ಭುಜಂಗೀವಾಸಿತಾ ಶುಭ್ರೇ ಸಂಶ್ಲಿಷ್ಟಾ ಚಂದನೇ ತತಾ ॥ ೧ ॥

ಚಂದ್ರಾತಪೇನ ಸಂಪೃಕ್ತಾ ರುಧಿರಾಂಬರಜಾ ತಥಾ ।
ರಜನೀವಾಸಿತೇ ಪಕ್ಷೇ ದೃಷ್ಟಿದೋಷಂ ದದಾಸಿ ಮೇ ॥ ೨ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ಗಿರಿಜಾ ತೇನ ಮುಕ್ತಕಂಠಾ ಪಿನಾಕಿನಂ ।
ಉವಾಚ ಕೋಪರಕ್ತಾಕ್ಷೀ ಭ್ರುಕುಟೀವಿಕೃತಾನನಾ ॥ ೩ ॥

---

## ನಲವತ್ತೊಂದನೆಯ ಅಧ್ಯಾಯವು

೧. ಶಿವನು ಹೇಳಿದನು– ಎಲೈ ಪಾರ್ವತಿಯೇ! ಬೆಳ್ಳಗಿರುವ ನನ್ನ ಶರೀರದಲ್ಲಿ ಕಪ್ಪಗಿರುವ ನೀನು ಆಲಿಂಗಿಸಿರುವುದನ್ನು ನೋಡಿದರೆ ಬೆಳ್ಳಗಿರುವ ಚಂದನಮರವನ್ನು ಆಲಂಗಿಸಿರುವ ಕೃಷ್ಣಸರ್ಪದಂತೆ ಕಾಣುತ್ತೀಯೆ.

೨. ನೀನು ಕೆಂಪುಬಟ್ಟೆಯನ್ನುಟ್ಟಿದ್ದೀಯೆ, ಅದರ ಮೇಲೆ ಚಂದ್ರಿಕೆಯು ಬಿದ್ದಿದೆ. ಇದನ್ನು ನೋಡಿದರೆ ಕೃಷ್ಣಪಕ್ಷದ ರಾತ್ರಿಯಂತೆ ನನ್ನ ಕಣ್ಣುಗಳಿಗೆ ದೋಷವನ್ನುಂಟುಮಾಡುತ್ತಿದ್ದೀಯೆ. (ಮಲಿನಳಾಗಿದ್ದೀಯೆ)

೩. ಪುಲಸ್ತ್ಯನು ಹೇಳಿದನು– ಶಿವನು ಹೀಗೆ ಹೇಳುತ್ತಲೂ ಪಾರ್ವತಿಯು ಶಿವನ ಕತ್ತನ್ನು ಬಿಟ್ಟು ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಹುಬ್ಬನ್ನು ಗಂಟಿಕ್ಕಿಕೊಂಡು ಇಂತೆಂದಳು.

॥ ದೇವ್ಯುವಾಚ ॥

ಸ್ವಕೃತೇನ ಜನಸ್ಸರ್ವೋ ಜಾಡ್ಯೇನ ಪರಿಭೂಯತೇ ।
ಅವಶ್ಯಮರ್ಥೀ ಪ್ರಾಪ್ನೋತಿ ಖಂಡನಂ ಶಶಿಮಂಡನ ॥ ೪ ॥

ತಪೋಭಿರ್ದೀರ್ಘಚರಿತೈರ್ಯಸ್ತ್ವಾಂ ಪ್ರಾರ್ಥಿತವತ್ಯಹಂ ।
ತಸ್ಯಾ ಮೇ ನಿಯತಸ್ತ್ವೇಷಃ ಅವಮಾನಃ ಪದೇ ಪದೇ ॥ ೫ ॥

ನೈವಾಸ್ಮಿ ಕುಟಿಲಾ ಶರ್ವ ವಿಷಮಾ ನ ಚ ಧೂರ್ಜಟೇ ।
ಸವಿಷಸ್ತ್ವಂ ಜಗತ್ಖ್ಯಾತೋ ವ್ಯಕ್ತದೋಷಾಕರಾಶ್ರಯಃ ॥ ೬ ॥

ತ್ವಂ ಹಿ ಮುಷ್ಣಾಸಿ ದಶನಾನ್ನೇತ್ರಹಂತಾ ಭಗಸ್ಯ ಚ ।
ಆದಿತ್ಯಸ್ತ್ವಾಂ ವಿಜಾನಾತಿ ಭಗವಾನ್ದ್ವಾದಶಾತ್ಮಕಃ ॥ ೭ ॥

---

೪. ದೇವಿಯು ಹೇಳಿದಳು– ಎಲೈ ಶಿವನೇ ! ಪ್ರತಿಯೊಬ್ಬನೂ ತನ್ನಲ್ಲಿರುವ ಅಥವಾ ತಾನು ಮಾಡಿದ ದೋಷದಿಂದ ಇತರರನ್ನು ತಿರಸ್ಕರಿಸುತ್ತಾನೆ. ಆ ತಿರಸ್ಕಾರವನ್ನು ಅವನ ಎದುರಾಳಿಯು ಖಂಡಿತ ಅನುಭವಿಸಬೇಕು.

೫. ಎಲೈ ಶಿವನೇ ! ಬಹಳ ಕಾಲ ತಪಸ್ಸನ್ನು ಮಾಡಿ ನಿನ್ನನ್ನು ಅಪೇಕ್ಷಿಸಿ ಹೊಂದಿದೆನಲ್ಲ ! ಅದಕ್ಕೋಸ್ಕರ ಬಾರಿಬಾರಿಗೂ ಈ ಅವಮಾನವೆಂದು ಕಾಣುತ್ತದೆ. ಇದು ಖಂಡಿತ.

೬. ಎಲೈ ಶರ್ವನೇ ! ನಾನು ಕಪಟೆಯಲ್ಲ. ನಿನಗೆ ವಿರುದ್ಧಳಾಗಿಯೂ ಇಲ್ಲ. ನೀನು ವಿಷಹೊಂದಿರುವವನೆಂದೂ ದೋಷಿಗಳಿಗೆ ಸ್ಥಾನನೆಂದೂ ಜಗತ್ತಿನಲ್ಲೆಲ್ಲಾ ಪ್ರಸಿದ್ಧನಾಗಿದ್ದೀಯೆ. (ವಿಷವನ್ನು ಕುಡಿದು ಕತ್ತಿನಲ್ಲಿಟ್ಟುಕೊಂಡಿರುವುದರಿಂದ ವಿಷದಿಂದ ಕೂಡಿರುವವನು ದೋಷಾಕರನೆಂದರೆ ಚಂದ್ರನು. ಅವನಿಗೆ ಸ್ಥಾನಖುಳ್ಳವನು.)

೭. ನೀನು ಹಲ್ಲುಗಳನ್ನೂ ಕೂಡ ಕದಿಯುತ್ತೀಯೆ. ಭಗನೆಂಬುವನ ಕಣ್ಣುಗಳನ್ನು ಹಾಳುಮಾಡಿದವನು (ಭಗವೆಂದರೆ ಹೆಂಗಸರ ಮರ್ಮಸ್ಥಾನ, ನೇತ್ರವೆಂದರೆ ಅದರೊಳಗಿರುವ ಹಲ್ಲು. ಅದನ್ನು ನಾಶಮಾಡುವವನು ಶಿವನು ಭಗನೆಂಬ ಸೂರ್ಯನ ಕಣ್ಣುಗಳನ್ನು ನಾಶಮಾಡಿದವನು. ಭಗ, ನೇತ್ರಗಳೆಂಬ ಪದಗಳ ಶ್ಲೇಷೆಯನ್ನು ಕಪಿಯು ತಿರಸ್ಕಾರರೂಪವಾದ ಅರ್ಥಕ್ಕೆ ಎಳೆದುಕೊಂಡಿರುವನು) ಹನ್ನೆರಡು ರೀತಿಯಲ್ಲಿ ಬೆಳಗುವ ಆ ಆದಿತ್ಯನು ನಿನ್ನನ್ನು ಚೆನ್ನಾಗಿ ಬಲ್ಲನು.

ಮೂರ್ಧ್ನಿ ಶೂಲಂ ಜನಯಸಿ ಸ್ವೈರ್ದೋಷೈರ್ಮಾಮಧಿಕ್ಷಿಪನ್ ।
ಯಸ್ತ್ವಂ ಮಾಮಾಹ ಕೃಷ್ಣೇತಿ ಮಹಾಕಾಲೋಽಸಿ ವಿಶ್ರುತಃ ॥ ೮ ॥

ಯಾಸ್ಯಾಮ್ಯಹಂ ಪರಿತ್ಯಕ್ತುಮಾತ್ಮಾನಂ ತಪಸಾ ಗಿರಿಂ ।
ಜೀವನ್ತ್ಯಾ ನಾಸ್ತಿ ಮೇ ಕೃತ್ಯಂ ಧೂರ್ತೇನ ಪರಿಭೂತಯಾ ॥ ೯ ॥

ಕಾಪಾಲಿಕೇನ ಕ್ಷುದ್ರೇಣ ಶ್ಮಶಾನೇ ನಿತ್ಯವಾಸಿನಾ ।
ಭೂತ್ಯಾ ವಿಲಿಪ್ತಸ್ವಾಂಗೇನ ಮಾತೃಮಧ್ಯಸ್ಥಚಾರಿಣಾ ॥ ೧೦ ॥

॥ ಪುಲಸ್ತ್ಯ ಉವಾಚ ॥

ನಿಶಮ್ಯ ತಸ್ಯಾ ವಚನಂ ಕೋಪತೀಕ್ಷ್ಣಾಕ್ಷರಂ ಹರಃ ।
ಉವಾಚಾವಿಷ್ಟಸಂಭ್ರಾಂತಪ್ರಣಯೇನೇಂದುಮೌಳಿನಾ ॥ ೧೧ ॥

---

೮. ನಿನ್ನಲ್ಲಿರುವ ಕೆಟ್ಟತನದಿಂದ ನನ್ನನ್ನು ಬಯ್ಯುತ್ತ ತಲೆನೋವನ್ನುಂಟು ಮಾಡುತ್ತಿದ್ದೀಯೆ. ನನ್ನನ್ನು ಕಪ್ಪಗಿರುವಳೆಂದೆನ್ನುತ್ತೀಯಲ್ಲ ನಿನ್ನ ಹೆಸರೇ ಮಹಾ ಕಾಳ (ಬಹು ಕಪ್ಪಾದವನು) ಎಂದು ಲೋಕದಲ್ಲೆಲ್ಲ ಪ್ರಸಿದ್ಧವಾಗಿರುವುದು.

೯. ನಾನು ಮತ್ತೆ ಹಿಮವತ್ಪರ್ವತಕ್ಕೆ ಹೋಗಿ ತಪಸ್ಸಿನಿಂದಲೇ ಈ ಪ್ರಾಣ ವನ್ನು ಕಳೆದುಕೊಳ್ಳುತ್ತೇನೆ. ನಾನು ಬದುಕಿದ್ದು ಪ್ರಯೋಜನವಿಲ್ಲ. ಧೂರ್ತನಾದ ನೀನು ನನ್ನನ್ನು ಹೀಯಾಳಿಸುತ್ತಲೇ ಇದ್ದೀಯೆ.

೧೦. ನೀನು ಕೈಯಲ್ಲಿ ಯಾವಾಗಲೂ ಕಪಾಲವನ್ನೇ ಹಿಡಿದಿದ್ದೀಯೆ. ಮತ್ತು ಯಾವಾಗಲೂ ಸ್ಮಶಾನದಲ್ಲಿಯೇ ವಾಸಮಾಡುತ್ತಿದ್ದೀಯೆ ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡಿದ್ದೀಯೆ. ತಾಯಿಯರಲ್ಲಿಯೇ ನೀನು ರಮಿಸುತ್ತ ಅವರ ಮಧ್ಯದಲ್ಲಿಯೇ ಓಡಾಡುತ್ತಿದ್ದೀಯೆ. (ತಾಯಿಯರಿಗೆ ಹೊರಗಿನಿಂದ ಬರುವವರಿಗೆ ಮಧ್ಯಸ್ಥಿಕೆಮಾಡಿ ತಲೆಹಿಡುಕನಾಗಿದ್ದೀಯೆ. ಷಣ್ಮಾತೃಗಳು ಇವನ ಅಪ್ಪಣೆಯನ್ನು ನಡೆಸಲು ಸಮೀಪ ಪದಲ್ಲಿಯೇ ಇರುವರು.)

೧೧. ಪುಲಸ್ತ್ಯನು ಹೇಳಿದನು- ಹರನು ಈ ಪಾರ್ವತಿಯು ಕೋಪದಿಂದ ಕಠಿಣವಾದ ಮಾತುಗಳಾಡಿದುದನ್ನು ಕೇಳಿ ಇನ್ನು ಹೆಚ್ಚಾಗಿ ಹಾಸ್ಯಮಾಡಬಾರದೆಂದು ವಿನಯದಿಂದ ಇಂತೆಂದನು.

॥ ಶರ್ವ ಉವಾಚ ॥

ಅಗಾತ್ಮಜಾಸಿ ಗಿರಿಜೇ ನಾಹಂ ನಿಂದಾಸ್ಪದಸ್ತವ ।
ಚಾಟೂಕ್ತಿ ಬುದ್ಧ್ಯಾ ತ್ವನಯಾ ಮತ್ವಾಹೋನ್ಮತಸಂಶ್ರಯಾ ॥ ೧೨ ॥
ವಿಕಲ್ಪಸ್ಸ್ವಸ್ಥಚಿತ್ತೇ ತು ಗಿರಿಜ್ಞೈಷ ಮಮ ಕ್ರಮಾತ್ ।
ಯದ್ಯೇವಂ ಕುಪಿತಾ ಭೀರು ತತ್ತ್ವಾಹಂ ನ ವೈ ಪುನಃ ॥ ೧೩ ॥
ನರ್ಮವಾದೀ ಭವಿಷ್ಯಾಮಿ ಜಹಿ ಕೋಪಂ ಶುಚಿಸ್ಮಿತೇ ।
ಶಿರಸಾ ಪ್ರಣತೇನೈಷ ರಚಿತಸ್ತೇ ಮಯಾಂಜಲಿಃ ॥ ೧೪ ॥
ಹೀನೋಹ್ಯಪ್ಯಪಮಾನೇನ ನಿಂದಿತೇನೈತಿ ವಿಕ್ರಿಯಾಂ ।
ಅಸತಾಂ ತು ಸತಾಂ ನ ನ್ಯಾನ್ನರ್ಮಸ್ಪೃಷ್ಟೋ ನರಃ ಕಿಲ ॥ ೧೫ ॥

॥ ಪುಲಸ್ತ್ಯ ಉವಾಚ ॥

ಅನೇಕೈಶ್ಚಾಟುಭಿರ್ದೇವೀ ದೇವೇನ ಪ್ರತಿಬೋಧಿತಾ ।
ಕೋಪಂ ತೀವ್ರಂ ನ ತತ್ಯಾಜ ಸತೀ ಮರ್ಮಣಿ ಘಟ್ಟಿತಾ ॥ ೧೬ ॥

---

೧೨-೧೪. ಶಿವನು ಹೇಳಿದನು-ಎಲೈ ಗಿರಿಜೆಯೆ ! ನೀನು ಸಂಚರಿಸಲಾರದ ಪರ್ವತನ ಮಗಳಾಗಿದ್ದೀಯೆ. ಈ ಚಾಟು (ತಮಾಷೆ) ಮಾತುಗಳನ್ನು ಕೇಳಿ ನನ್ನನ್ನು ನಿಂದಿಸಬಾರದು. ನನಗೆ ಬುದ್ಧಿಭ್ರಮೆಯಾಗುತ್ತದೆಂದು ತಿಳಿ. (ಉನ್ಮತ್ತ, ಉನ್ಮತ್ತ ಹೂ, ಅದನ್ನು ಹೊಂದಿರುವವನು. ಉನ್ಮತ್ತದಹೂ ಶಿವನಿಗೆ ಬಹು ಇಷ್ಟ, ಅದನ್ನು ತಿಂದರೆ ಹುಚ್ಚು ಹಿಡಿಯುತ್ತದೆ.) ಸರಿಯಾಗಿರುವವರಿಗೇ ಬುದ್ಧಿಯು ವ್ಯತ್ಯಾಸವಾಗುತ್ತದೆ. ನನಗೆ ಈ ಹುಚ್ಚು ಹಿಡಿಯುವುದರಿಂದ ಬುದ್ಧಿ ವ್ಯತ್ಯಾಸವಾಗುವುದು ಆಶ್ಚರ್ಯವಲ್ಲ. ಇದಕ್ಕೋಸ್ಕರ ನೀನು ಕೋಪಗೊಳ್ಳುವುದಾದರೆ ಮತ್ತೆ ನಾನು ಇಂತಹ ಚುಚ್ಚುಮಾತುಗಳನ್ನು ಆಡುವುದಿಲ್ಲ. ಎಲೈ ಶುಚಿಸ್ಮಿತೆಯೇ ! ಕೋಪವನ್ನು ಬಿಡು. ತಲೆಯಿಂದ ನಮಸ್ಕರಿಸಿ ಕೈಮುಗಿದು ಕೇಳಿಕೊಳ್ಳುವೆನು.

೧೫. ನೀಚನೂ ಕೂಡ ಈ ರೀತಿಯ ಅಯೋಗ್ಯವಾದ ನಿಂದೆಯ ಅಪಮಾನದಿಂದ ಕೋಪವನ್ನು ಹೊಂದುತ್ತಾನೆ. ಸತ್ಪುರುಷರಿಗೆ ಈ ರೀತಿ ಮನಸ್ಸಿಗೆ ದುಃಖಕರವಾದ ಚುಚ್ಚುಮಾತುಗಳನ್ನಾಡಬಾರದು.

೧೬. ಪುಲಸ್ತ್ಯನು ಹೇಳಿದನು-ಅನೇಕವಾದ ಒಳ್ಳೆಯ ಚಾಟುಮಾತುಗಳಿಂದ ಶಿವನು ಸಮಾಧಾನಪಡಿಸಿದರೂ ಆ ಪಾರ್ವತಿಯು ಮನಸ್ಸಿನಲ್ಲಿ ಬಹು ನೊಂದವಳಾಗಿ ಕೋಪವನ್ನು ಬಿಡಲಿಲ್ಲ.

ಅನಪ್ಸ್ಟಬ್ಧಮಥಾಚ್ಛಿದ್ಯ ವಾಸತ್ಯಂಕರಪಾಣಿನಾ ।
ವಿಪರ್ಯಸ್ತಾಲಕಾ ವೇಗಾದ್ಗಂತುಮ್ಯೈಚ್ಛಚ್ಚ ಶೈಲಜಾ ॥
ತಸ್ಯಾ ವ್ರಜಂತ್ಯಾಃ ಕೋಪೇನ ಪುನರಾಹ ಪುರಾಂತಕಃ ॥ ೧೭ ॥

॥ ಶರ್ವ ಉವಾಚ ॥

ಸತ್ಯಂ ಸರ್ವೈರವಯವೈಸ್ತ್ವನೋಽಸಿ ಸದೃಶಂ ಪಿತುಃ ।
ಹಿಮಾಚಲಸ್ಯ ಶೃಂಗೈಸ್ತು ಮೇಘಜಾಲಾಕುಲಂ ಮನಃ ॥ ೧೮ ॥

ತಥಾ ದುರವಗಾಹೇಭ್ಯೋ ಗಹನೋ ಹಿ ತವಾಶಯಃ ।
ಕಾಠಿಣ್ಯಮಶ್ಮಸಾರೇಭ್ಯೋ ವನೇಭ್ಯೋ ಬಹುಧಾಗತಂ ॥ ೧೯ ॥

ಕುಟಿಲತ್ವಂ ನಿಮ್ನಗಾಭ್ಯೋ ದುಸ್ಸೇವ್ಯಾತ್ವಂ ಹಿಮಾದಪಿ ।
ಸಂಕ್ರಾಂತಂ ಸರ್ವಮೇವೈತತ್ತ್ವನ್ವಂಗಿ ಹಿಮಭೂಧರಾತ್ ॥ ೨೦ ॥

---

೧೭. ಶಂಕರನು ಹೋಗಬೇಡವೆಂದು ಸೀರೆಯ ಸೆರಗನ್ನು ಹಿಡಿದುಕೊಂಡಿದ್ದರೂ ಪಾರ್ವತಿಯು ಅವನ ಕೈಯಿಂದ ಅದನ್ನು ಕಿತ್ತುಕೊಂಡು ಮುಂಗುರುಳನ್ನು ಕೆದರಿಕೊಂಡು ಹೋಗುವುದಕ್ಕೆ ಸಿದ್ಧಳಾದಳು. ಇಷ್ಟಾದರೂ ಆಕೆಯು ಹೋಗುತ್ತಿರುವುದನ್ನು ನೋಡಿ ಶಂಕರನು ಕೋಪದಿಂದ ಮತ್ತೆ ಇಂತೆಂದನು.

೧೮. ತಂದೆಯಾದ ಹಿಮವಂತನನ್ನೇ ನೀನು ನಿಶ್ಚಯವಾಗಿಯೂ ಪ್ರತಿಯೊಂದು ಅವಯವದಿಂದಲೂ ಅನುಕರಿಸುತ್ತಿದ್ದೀಯೆ. ಮನಸ್ಸನ್ನು ಅವನ ಶಿಖರಗಳು ತಾವು ತಡೆದಿರುವ ಮೇಘಗಳಂತೆ ವ್ಯಥೆ ಹೊಂದಿಸಿವೆ.

೧೯-೨೦. ಅಂತೆಯೇ ಒಳಗೆ ಹೋಗಲು ಆಗದಿರುವ ಆತನ ಕಾಡುಗಳಂತೆಯೇ ನಿನ್ನ ಮನಸ್ಸೂ ಒಳಗೆ ಹೋಗಲು ಅಸಾಧ್ಯವಾದುದು. ಅವನಲ್ಲಿರುವ ಕಲ್ಲುಗಳಂತೆ ನಿನ್ನ ಮನಸ್ಸು ಕಠಿಣವಾಗಿರುವುದು. ವನಗಳಂತೆ ನಾನಾಬಗೆಯಾಗಿಯೂ ಇರುವುದು. ಅವನಲ್ಲಿರುವ ಹಳ್ಳವನ್ನು ಅನುಸರಿಸಿ ವಕ್ರವಕ್ರವಾಗಿಯೂ ಇರುವುದು. ಅವನಲ್ಲಿರುವ ಹಿಮವನ್ನು ಸೇವಿಸುವುದಕ್ಕಾಗದಂತೆ ನಿನ್ನ ಮನಸ್ಸನ್ನು ಅನುಸರಿಸಲಾಗುವುದಿಲ್ಲ. ಎಲೈ ಪಾರ್ವತಿಯೇ? ಈ ರೀತಿ ನಿನ್ನ ತಂದೆಯಾದ ಪರ್ವತರಾಜನ ಒಂದೊಂದು ಅವಯವದಿಂದಲೂ ಒಂದೊಂದು ಅಂಶವೂ ನಿನ್ನಲ್ಲಿ ಸೇರಿಕೊಂಡಿವೆ

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಸಾ ಪುನಃ ಪ್ರಾಹ ಗಿರೀಶಂ ಪರ್ವತಾತ್ಮಜಾ ।
ಕೋಪಕಂಪಿತಮೂರ್ಧಾ ವೈ ಪ್ರಸ್ಫುರದ್ದಶನಚ್ಛದಾ ॥ ೨೧ ॥

॥ ಉಮೋವಾಚ ॥

ಸ್ಯಾತ್ಸರ್ವಂ ದೋಷದಾನೇನ ನಿಂದಾಯಾಂ ಗುಣಿನೋ ಜನಾತ್ ।
ತವಾಪಿ ದುಷ್ಟಸಂಪರ್ಕಾತ್ಸಂಕ್ರಾಂತಂ ಸರ್ವಮೇವ ಹಿ ॥ ೨೨ ॥

ವ್ಯಾಲೇಭ್ಯೋನೇಕಜಿಹ್ವತ್ವಂ ಭಸ್ಮನಾಽಸ್ನೇಹವೃತ್ತಿತಾ ।
ಹೃತ್ಕಾಲುಷ್ಯಂಶಶಾಂಕೋತ್ಥಂ ದುರ್ಬೋಧತ್ವಂ ವಿಷಾದಪಿ ॥ ೨೩ ॥

ಕಿಂಚಾತ್ರ ಬಹುನೋಕ್ತೇನ ಅಲಂ ವಾಚಾಂ ಶ್ರಮೇಣ ತೇ ।
ಶ್ಮಶಾನವಾಸಾನ್ನಿರ್ಭೀಸ್ತ್ವಂ ನಗ್ನತ್ವಾತ್ತವ ನ ತ್ರಪಾ ॥
ನಿರ್ಘೃಣಸ್ತ್ವಂ ಕಪಾಲಿತ್ವಾದ್ದಯಯಾ ವಿಗತಾ ಚಿರಂ ॥ ೨೪ ॥

---

೨೧. ಪುಲಸ್ತ್ಯನು ಹೇಳಿದನು – ಗಿರೀಶನು ಹೀಗೆಂದುದನ್ನು ಕೇಳಿ ಆ ಪರ್ವತರಾಜಪುತ್ರಿಯು ಕೋಪದಿಂದ ತುಟಿಯನ್ನು ನಡುಗಿಸುತ್ತ ತಲೆಯನ್ನು ಅಲ್ಲಾಡಿಸುತ್ತ ಇಂತೆಂದಳು.

೨೨. ಉಮೆಯು ಹೇಳಿದಳು—ಗುಣವುಳ್ಳವನನ್ನು ಬಯ್ಯುವ ದೋಷದಿಂದ ಎಲ್ಲವೂ (ಆಗಬಾರದ್ದೆಲ್ಲವೂ) ಆಗುತ್ತವೆ. ನಿನಗೂ ಕೂಡ ಕೆಟ್ಟವುಗಳ ಸಹವಾಸದಿಂದಲೇ ಆ ದುರ್ಗುಣವೆಲ್ಲವೂ ಬಂದಿವೆ.

೨೩. ದುಷ್ಟಸರ್ಪಗಳಿಂದ ಅನೇಕ ನಾಲಿಗೆಯಾಗಿರುವಿಕೆ (ಒಂದು ಮಾತು ಇಲ್ಲದಿರುವಿಕೆ) ಯನ್ನೂ ಬೂದಿಯಿಂದ ಸ್ನೇಹ (ಎಣ್ಣೆ) ಇಲ್ಲದಿರುವಿಕೆಯನ್ನೂ ಹೊಂದಿದ್ದೀಯೆ. ಶಶಾಂಕನಾದ ಚಂದ್ರನಿಂದ ಮನಸ್ಸಿನಲ್ಲಿ (ಒಳಗೆ ಕಲ್ಮಷವಿರುವಿಕೆ) ಕಲ್ಮಷವನ್ನೂ ವಿಷದಿಂದ ಬಹು ತೊಂದರೆ ಕೊಡುವುದನ್ನೂ ಹೊಂದಿದ್ದೀಯೆ.

೨೪. ಬಹಳ ಹೇಳುದುದರಿಂದ ಪ್ರಯೋಜನವೇನು ? ಮಾತಾಡುವುದರಿಂದ ಆಯಾಸಪಟ್ಟುಕೊಳ್ಳಬೇಡ. ಶ್ಮಶಾನದಲ್ಲಿ ವಾಸಮಾಡುವುದರಿಂದ ಹೆದರಿಕೆಯನ್ನು ಬಿಟ್ಟಿದ್ದೀಯೆ. ನೀನು ಬೆತ್ತಲೆಯಾಗಿರುವುದರಿಂದಲೇ ನಾಚಿಕೆಯೆಂಬುದೇ ಇಲ್ಲ. ಕಪಾಲವನ್ನು ಹಿಡಿದಿರುವುದರಿಂದಲೇ ಮೃದುತನವೆಂಬುದೇ ಹೋಗಿಬಿಟ್ಟಿದೆ. ನಿನ್ನಲ್ಲಿ ದಯೆಯೆಂಬುದು ಯಾವಾಗಲೋ ಹೊರಟುಹೋಗಿದೆ.

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ಮಂದಿರಾತ್ತಸ್ಮಾನ್ನಿರ್ಜಗಾಮ ಹಿಮಾದ್ರಿಜಾ ।
ತಸ್ಯಾಂ ವ್ರಜಂತ್ಯಾಂ ದೇವೇಶ್ಯಾಂ ಗಣೈಃ ಕಿಲಕಿಲಾ ಕೃತಾ ॥ ೨೫ ॥

ಕ್ವ ಮಾತರ್ಗಚ್ಛಸೀತ್ಯುಕ್ತ್ವಾ ರುದದ್ಭಿರ್ಧಾವಿತಂ ಪುನಃ ।
ವಿಷ್ಟಭ್ಯ ಚರಣೌ ದೇವ್ಯಾ ವೀರಕೋವಾಕ್ಯಗದ್ಗದಃ ॥ ೨೬ ॥

ಪ್ರೋವಾಚ ಮಾತಃ ಕಿಂತ್ವೇತತ್ಕ್ವ ಯಾಸಿ ಕುಪಿತಾತುರಾ ।
ಅಹಂ ತ್ವಾಮನುಯಾಸ್ಯಾಮಿ ವ್ರಜಂತೀಂ ಸ್ನೇಹವರ್ಜಿತಾಂ ॥ ೨೭ ॥

ನೋಚೇತ್ಪತಿಷ್ಯೇಶಿಖರಾದ್ಗಿರೇರಸ್ಯ ತ್ವಯೋಜ್ಝಿತಃ ।
ಉನ್ನಮ್ಯ ವದನಂ ದೇವೀ ದಕ್ಷಿಣೇನ ತು ಪಾಣಿನಾ ॥ ೨೮ ॥

ಉವಾಚ ವೀರಕಂ ಮಾತಾ ತ್ವಂ ಶೋಕಂ ಪುತ್ರ ಮಾ ಕೃಥಾಃ ।
ಶೈಲಾಗ್ರಾತ್ಪತಿತುಂ ನೈವ ನ ಚ ಗಂತುಂ ಮಯಾ ಸಹ ॥ ೨೯ ॥

---

೨೫. ಪುಲಸ್ತ್ಯನು ಹೇಳಿದನು—ಹೀಗೆಂದು ಹೇಳಿ ಆ ಮನೆಯಿಂದ ಪಾರ್ವತಿಯು ಹೊರಟಳು. ಅವಳು ಹೋಗುವುದನ್ನು ನೋಡಿ ಗಣಗಳು ಕಿಲಕಿಲ ಎಂದು ಕಲಕಲಧ್ವನಿ ಮಾಡಿದುವು.

೨೬-೨೭ ಆ ಗಣಗಳೆಲ್ಲವೂ ಅಮ್ಮ ! ಎಲ್ಲಿಗೆ ಹೋಗುತ್ತೀಯೆ ? ಎಂದು ಹೇಳಿ ಅಳುತ್ತಾ ಹಿಂದೆ ಓಡಿದುವು. ವೀರಕನು ತಾಯಿಯ ಕಾಲುಗಳನ್ನು ಹಿಡಿದುಕೊಂಡು ಗದ್ಗದ ಧ್ವನಿಯಿಂದ ಅಮ್ಮ ! ಕೋಪಮಾಡಿಕೊಂಡು ಎಲ್ಲಿಗೆ ಹೋಗುತ್ತೀಯೆ ? ನಮ್ಮಲ್ಲಿ ಸ್ನೇಹವನ್ನು ಬಿಟ್ಟು ಹೋಗುತ್ತಿರುವ ನಿನ್ನ ಜೊತೆಯಲ್ಲಿಯೇ ನಾನೂ ಬರುತ್ತೇನೆ. ಎಂದನು.

೨೮. ಎಲೈ ತಾಯಿಯೇ ! ನೀನು ನನ್ನನ್ನು ಬಿಟ್ಟು ಹೊರಟುಹೋದರೆ ನಾನು ಈ ಬೆಟ್ಟದ ಶಿಖರದಿಂದ ಕೆಳಗೆ ಬಿದ್ದು ಪ್ರಾಣವನ್ನು ಬಿಟ್ಟುಬಿಡುತ್ತೇನೆ ಎನ್ನಲು ಆಗ ದೇವಿಯು ತಲೆಯನ್ನು ಮೇಲಕ್ಕೆತ್ತಿಕೊಂಡು ನೋಡಿ ಬಲಗೈಯನ್ನು ಮೇಲಕ್ಕೆತ್ತಿ ಸನ್ನೆಮಾಡುತ್ತ ಎಲೈ ವೀರಕನೇ ! ನೀನು ದುಃಖಪಡಬೇಡ. ಎಂದು ವೀರಕನಿಗೆ ಹೇಳಿದಳು.

೨೯-೩೦. ನೀನು ಬೆಟ್ಟದ ತುದಿಯಿಂದ ಬೀಳಲೂ ಬೇಡ. ನನ್ನೊಡನೆ ಬರಲೂ ಬೇಡ. ನಾನು ಹೋಗುವ ಕೆಲಸವನ್ನು ಹೇಳುತ್ತೇನೆ ಕೇಳು. ಈ ಕಪಾಲಿಯು

ಯುಕ್ತಂ ತೇ ಪುತ್ರ ವಕ್ಷ್ಯಾಮಿ ಯೇನ ಕಾರ್ಯೇಣ ತಚ್ಛೃಣು ।
ಕೃಷ್ಣೇತ್ಯುಕ್ತ್ವಾ ಹರೇಣಾಹಂ ಸ್ತಂಭಿತಾಪ್ಯವಮಾನಿತಾ ॥ ೩೦ ॥

ಸಾಹಂ ತಪಃ ಕರಿಷ್ಯಾಮಿ ಯೇನ ಗೌರೀತ್ವಮಾಪ್ನುಯಾಂ ।
ಏಷ ಸ್ತ್ರೀಲಂಪಟೋ ದೇವೋ ಯಾತಾಯಾಂ ಮಯ್ಯನಂತರಂ ॥ ೩೧ ॥

ದ್ವಾರರಕ್ಷಾ ತ್ವಯಾ ಕಾರ್ಯಾ ನಿತ್ಯಂ ರಂಧ್ರಾನ್ವವೇಕ್ಷಣಂ ।
ಯಥಾ ನ ಕಾಚಿತ್ಪ್ರವಿಶೇದ್ಯೋಷಿತ್ತತ್ರ ಹರಾಂತಿಕಂ ॥ ೩೨ ॥

ದೃಷ್ಟ್ವಾ ಪರಸ್ತ್ರಿಯಂ ಚಾಪಿ ವದೇಥಾ ಮಮ ಪುತ್ರಕ ।
ಶೀಘ್ರಮೇವ ಕರಿಷ್ಯಾಮಿ ಯಥಾ ಯುಕ್ತಮನಂತರಂ ॥ ೩೩ ॥

॥ ಪುಲಸ್ತ್ಯ ಉವಾಚ ॥

ಏವಮಸ್ತ್ವಿತಿ ದೇವೇಶೀಂ ವೀರಕೋವಾಚ ಸಾಂಪ್ರತಂ ।
ಮಾತುರಾಜ್ಞಾಮೃತಾಹಾರಾಪ್ಲಾವಿತಾಂಗೋ ಗತಜ್ವರಃ ॥ ೩೪ ॥

---

ನನ್ನನ್ನು ಕೃಷ್ಣೇ! (ಕಪ್ಪಗಿರುವವಳೆ) ಎಂದು ಕೂಗಿದನು. ಮಾತನಾಡದಂತೆ ಮಾಡಿ ಅವಮಾನ ಪಡಿಸಿದನು ಈ ರೀತಿ ಅವಮಾನಿತಳಾದ ನಾನು ತಪಸ್ಸುಮಾಡಿ ಗೌರತ್ವವನ್ನು (ಬೆಳ್ಳಗೆ ಆಗುವಿಕೆ) ಹೊಂದುತ್ತೇನೆ.

೩೧-೩೩. ಈ ಶಿವನು ಅತ್ಯಾಸೆಯುಳ್ಳನು. ನಾನು ಹೋದಮೇಲೆ ನೀನು ಬಾಗಿಲನ್ನು ಕಾದುಕೊಂಡಿರಬೇಕು. ಆ ಶಿವನು ಮಾಡತಕ್ಕ ಗುಟ್ಟೆಲ್ಲವನ್ನೂ ತಿಳಿದುಕೊಳ್ಳಬೇಕು. ಪರಸ್ತ್ರೀಯು ಯಾವಳೊಬ್ಬಳೂ ಹರನ ಹತ್ತಿರಕ್ಕೆ ಹೋಗದಂತೆ ನೋಡಿಕೊಳ್ಳಬೇಕು. ಅಂತಹ ಪರಸ್ತ್ರೀಯು ಹೋದುದನ್ನು ನೋಡಿದರೆ ಅದನ್ನು ನನ್ನಲ್ಲಿ ಹೇಳಬೇಕು. ಅದಕ್ಕೆ ಸರಿಯಾದ ಶಿಕ್ಷೆಯನ್ನು ಆಮೇಲೆ ಜಾಗ್ರತೆಯಲ್ಲಿಯೇ ಮಾಡುತ್ತೇನೆ.

೩೪ ಪುಲಸ್ತ್ಯನು ಹೇಳಿದನು- ಆ ವೀರಕನು ಆ ದೇವಿಯನ್ನು ಕುರಿತು ಈಗ ಹಾಗೆ ಮಾಡುವೆನೆಂದು ಹೇಳಿದನು. ತಾಯಿಯ ಅಪ್ಪಣೆಯೆಂಬ ಅಮೃತದಿಂದ ನೆನೆಯಲ್ಪಟ್ಟವನಾಗಿ ದುಃಖವನ್ನು ಬಿಟ್ಟು ತಾಯಿಗೆ ನಮಸ್ಕರಿಸಿ ಅವಳು ಹೇಳದಂತೆ ಕಾಯಲು ಅಲ್ಲಿಗೆ ಹೊರಟು ಹೋದನು.

ಜಗಾಮ ರಕ್ಷಾಂ ಸ ದ್ರಷ್ಟುಂ ಪ್ರಣಿಪತ್ಯ ತು ಮಾತರಂ ।
ದೇವೀ ಚಾಪಶ್ಯದಾಯಾಂತೀಂ ಸಖೀಮ್ಮಾತುರ್ವಿಭೂಷಿತಾಂ ॥ ೩೫ ॥

ಕುಸುಮಾಮೋದಿನೀಂ ನಾಮ ತಸ್ಯ ಶೈಲಸ್ಯ ದೇವತಾಂ ।
ಸಾಪಿ ದೃಷ್ಟ್ವಾ ಗಿರಿಸುತಾಂ ಸ್ನೇಹವಿಕ್ಲವಮಾನಸಾ ॥ ೩೬ ॥

ಕ್ವ ಪುತ್ರಿ ಗಚ್ಛಸೀತ್ಯುಚ್ಚೈರಾಲಿಂಗ್ಯೋವಾಚ ದೇವತಾ ।
ಸಾ ತಸ್ಯಾಸ್ಸರ್ವಮಾಚಖ್ಯೌ ಶಂಕರಾತ್ಕೋಪಕಾರಣಂ ॥ ೩೭ ॥

ಪುನಶ್ಚೋವಾಚ ಗಿರಿಜಾ ದೇವತಾಂ ಮಾತೃಸಮ್ಮಿತಾಂ । ॥ ೩೮ ॥

ನಿತ್ಯಂ ಶೈಲಾಧಿರಾಜಸ್ಯ ದೇವತಾ ತ್ವಮನಿಂದಿತೇ ।
ಸರ್ವತಸ್ಸನ್ನಿಧಾನಂ ತೇ ಮನಸಾತೀವವತ್ಸಲಾ ॥ ೩೯ ॥

ಅತಸ್ತು ತೇ ಪ್ರವಕ್ಷ್ಯಾಮಿ ಯದ್ವಿಧೇಯಂ ತ್ವಯಾಂಬಿಕೇ ।
ಅನ್ಯಸ್ತ್ರೀಸಂಪ್ರವೇಶಸ್ತು ತ್ವಯಾ ರಕ್ಷ್ಯಃ ಪ್ರಯತ್ನತಃ ॥ ೪೦ ॥

---

೩೫-೩೮. ಅನಂತರ ದೇವಿಯು ತನ್ನ ತಾಯಿಯ ಸ್ನೇಹಿತೆಯಾದ ಸುಂದರಿಯಾದ ಕುಸುಮಾಮೋದಿನಿಯೆಂಬ ಆ ಪರ್ವತದ ದೇವತೆಯು ಬರುತ್ತಿರುವುದನ್ನು ಕಂಡಳು. ಆ ದೇವತೆಯು ಪಾರ್ವತಿಯನ್ನು ನೋಡಿ ಸ್ನೇಹದಿಂದ ಕೂಡಿದ ಮನಸ್ಸುಳ್ಳವಳಾಗಿ ಆಲಿಂಗಿಸಿಕೊಂಡು ಅಮ್ಮ ಮಗಳೇ! ಎಲ್ಲಿ ಹೋಗುತ್ತೀಯೆ? ಎಂದು ಕೇಳಿದಳು. ಅದಕ್ಕೆ ಆ ಪಾರ್ವತಿಯು ಶಂಕರನಿಂದ ತನಗುಂಟಾದ ಅವಮಾನವನ್ನೂ ಕೋಪಕ್ಕೆ ಕಾರಣವನ್ನೂ ಎಲ್ಲವನ್ನೂ ಹೇಳಿದಳು. ಮತ್ತೆಯೂ ಕೂಡ ತಾಯಿಗೆ ಸಮಳಾದ ಆ ದೇವತೆಯನ್ನು ಕುರಿತು ಇಂತೆಂದಳು.

೩೯ ಅಮ್ಮ ! ನೀನು ನಮ್ಮ ತಂದೆಯಾದ ಪರ್ವತರಾಜನಿಗೆ ಮನೆದೇವತೆಯಾಗಿದ್ದೀಯೆ. ನೀನು ಎಲ್ಲಾ ಕಡೆಯಲ್ಲಿಯೂ ಇದ್ದೀಯೆ. ನಿನ್ನ ಮನಸ್ಸು ನನ್ನ ಮೇಲೆ ಬಹು ಸ್ನೇಹದಿಂದ ಕೂಡಿದೆ. ಆದ್ಧರಿಂದ ಅಮ್ಮ ! ನೀನು ಮಾಡತಕ್ಕ ಕೆಲಸವೊಂದಿದೆ. ಅದನ್ನು ನಿನಗೆ ಹೇಳುತ್ತೇನೆ.

೪೦-೪೧. ಆ ಶಿವನ ಬಳಿಗೆ ಬೇರೆ ಮತ್ತಾವ ಹೆಂಗಸರೂ ಹೋಗದಂತೆ ನೋಡಿಕೋ. ಈ ಬೆಟ್ಟದಲ್ಲಿ ಅವನಿಗೆ ಬೇಕಾದ ಅನುಕೂಲಗಳನ್ನು ಅವನಿಗೆ ತಿಳಿ

ಸ ರಹಸ್ಯೇ ಪ್ರಯತ್ನೇನ ನಿಷೇವ್ಯಸ್ಸತತಂ ಗಿರೌ ।
ಪಿನಾಕಿನಃ ಪ್ರವಿಷ್ಟಾಯಾಂ ವಕ್ತವ್ಯಂ ಮೇ ತ್ವಯಾನಘೇ
ತತೋಽಹಂ ಸಂವಿಧಾಸ್ಯಾಮಿ ಯತ್ ಕ್ಷೇಮಂ ತದನಂತರಂ ।　　॥ ೪೧ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ತಾಂ ತಥೇತ್ಯುಕ್ತಾ ಜಗಾಮ ಸಾ ಗಿರಿಂ ಶುಭಾ ।
ಉಮಾಪಿ ಪಿತುರುದ್ಯಾನಂ ಜಗಾಮಾದ್ರಿಸುತಾ ದ್ರುತಂ　　॥ ೪೨ ॥

ಅಂತರಿಕ್ಷಂ ಸಮಾವಿಶ್ಯ ಮೇಘಮಾಲಾವಿಲಪ್ರಭಂ ।
ಭೂಷಣಾನಿ ತತೋ ನ್ಯಸ್ಯ ವೃಕ್ಷವಲ್ಕಲಧಾರಿಣೀ　　॥ ೪೩ ॥

ಗ್ರೀಷ್ಮೇ ಪಂಚಾಗ್ನಿಸಂತಪ್ತಾ ವರ್ಷಾಸು ಚ ಜಲೋಷಿತಾ ।
ವನ್ಯಾಹಾರಾ ನಿರಾಹಾರಾ ಶುಷ್ಕಸ್ಥಂಡಿಲಶಾಯಿನೀ　　॥ ೪೪ ॥

---

ಯುದಂತೆ ಮಾಡಿಕೊಡು. ಅವನ ಗುಟ್ಟನ್ನು ಅದರಿಂದ ತಿಳಿದುಕೊ. ಯಾರಾದರೂ ಹೆಂಗಸರು ಒಳಗೆ ಹೋದರೆ ನೀನು ಅದನ್ನು ನನ್ನ ಸಂಗಡ ಹೇಳಬೇಕು. ಅನಂತರ ಅದಕ್ಕೆ ಯೋಗ್ಯವಾದುದನ್ನು ಮಾಡುತ್ತೇನೆ.

೪೨. ಪುಲಸ್ತ್ಯನು ಹೇಳಿದನು—ಆ ದೇವತೆಯು ಹಾಗೇ ಆಗಲೆಂದು ಹೇಳಿ ಆ ಬೆಟ್ಟಕ್ಕೆ ಹೊರಟುಹೋದಳು. ಇತ್ತ ಉಮೆಯು ತನ್ನ ತಂದೆಯ ಉದ್ಯಾನಕ್ಕೆ ಬೇಗ ಹೋದಳು.

೪೩-೪೪. ಆಕೆಯು ಮೇಘಮಾಲೆಗಳಿಂದ ಕೂಡಿದ ಮೇಲುಭಾಗದಲ್ಲಿ ತನ್ನ ಒಡವೆಗಳನ್ನು ಬಿಚ್ಚಿಟ್ಟು ನಾರುಡೆಯನ್ನುಟ್ಟು ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ ಮಳೆಗಾಲದಲ್ಲಿ ನೀರಿನಲ್ಲಿಯೂ ನಿಂತು ತಪಸ್ಸು ಮಾಡುತ್ತ ಕಾಡಿನಲ್ಲಿನ ಪದಾರ್ಥಗಳನ್ನು ತಿನ್ನುತ್ತ ಆ ಮೇಲೆ ಅದನ್ನೂ ಬಿಟ್ಟಳು. ಒಣಗಿದ ಬರಿಯ ನೆಲದ ಮೇಲೆ ಮಲಗುತ್ತಿದ್ದಳು. ಈ ರೀತಿ ತಪಸ್ಸನ್ನು ಮಾಡುತ್ತ ಆಕೆಯು ಇರುತ್ತಿದ್ದಳು.

ಏವಂ ಸಾಧಯತೀ ತತ್ರ ತಪಸಾ ಸಂವ್ಯವಸ್ಥಿತಾ ।
ಜ್ಞಾತ್ವಾ ಗತಾಂ ಗಿರಿಸುತಾಂ ದೈತ್ಯಸ್ತತ್ರಾಂತರೇ ಬಲೀ ॥ ೪೫ ॥

ಅಂಧಕಸ್ಯ ಸುತೋ ಹೃಷ್ಟಃ ಪಿತುರ್ವಧಮನುಸ್ಮರನ್ ।
ದೈತ್ಯಾನ್ಸರ್ವಾನ್ವಿಜಿತ್ಯಾಜೌ ಬಲಭ್ರಾತಾ ರಣೋತ್ಕಟಃ । ॥ ೪೬ ॥

ಆಡಿರ್ನಾಮಾಂತರಪ್ರೇಕ್ಷೀ ಸತತಂ ಚಂದ್ರಮೌಳಿನಃ ।
ಆಜಗಾಮಾಮರರಿಪುಃ ಪುರಂ ತ್ರಿಪುರಘಾತಿನಃ ॥ ೪೭ ॥

ಸ ತತ್ರಾಗತ್ಯ ದದೃಶೇ ವೀರಕಂ ದ್ವಾರ್ಯವಸ್ಥಿತಂ ।
ವಿಚಿಂತ್ಯ ಸೋಽಪಿ ಚ ವರಂ ದತ್ತಂ ಕಮಲಯೋನಿನಾ ॥ ೪೮ ॥

ಹತೇ ಕಿಲಾಂಧಕೇ ದೈತ್ಯೇ ಗಿರಿಶೇನಾಸುರದ್ವಿಷಾ ।
ಆಡಿಶ್ಚಕಾರ ವಿಪುಲಂ ತಪಃ ಪರಮದಾರುಣಂ ॥ ೪೯ ॥

ತಮಾಗತ್ಯಾಬ್ರವೀದ್ಬ್ರಹ್ಮಾ ತಪಸಾ ಪರಿತೋಷಿತಃ ।
ಕಿಮಾಡೇ ದಾನವಶ್ರೇಷ್ಠ ತಪಸಾ ಪ್ರಾಪ್ತುಮಿಚ್ಛಸಿ ॥ ೫೦ ॥

---

೪೫. ಇಷ್ಟರಲ್ಲಿ ಅಂಧಕನ ಮಗನು ಪಾರ್ವತಿಯು ಹೊರಟುಹೋದುದನ್ನು ತಿಳಿದು ಸಂತೋಷಪಟ್ಟು ತನ್ನ ತಂದೆಯನ್ನು ಶಿವನು ಕೊಂದುದನ್ನು ಜ್ಞಾಪಿಸಿ ಕೊಂಡನು.

೪೬-೪೭. ಬಲನೆಂಬುವನ ಸಹೋದರನಾದ ಈ ಆಡಿಯೆಂಬುವನು ದೇವತೆಗಳನ್ನೆಲ್ಲಾ ಜಯಿಸಿ ಈ ಶಿವನ ಛಿದ್ರವನ್ನು ಹುಡುಕುತ್ತ ಇದ್ದ ಈತನ ಪಟ್ಟಣಕ್ಕೆ ಬಂದನು.

೪೮. ಅಲ್ಲಿಗೆ ಅವನು ಬಂದು ಬಾಗಿಲಿನಲ್ಲಿ ವೀರಕನು ಕುಳಿತಿರುವುದನ್ನು ನೋಡಿದನು. ಬ್ರಹ್ಮನು ತನಗೆ ಕೊಟ್ಟಿರುವ ವರವನ್ನು ಯೋಚಿಸಿದನು.

೪೯. ಅಸುರರನ್ನು ನಾಶಮಾಡುವ ಗಿರಿಶನು ಅಂಧಕಾಸುರನನ್ನು ಕೊಂದ ಮೇಲೆ ಅವನ ಮಗನಾದ ಆಡಿಯು ಬಹು ಉಗ್ರವಾದ ತಪಸ್ಸನ್ನು ಮಾಡಿದನು.

೫೦-೫೧. ತಪಸ್ಸಿಗೆ ಸಂತೋಷಪಟ್ಟು ಬ್ರಹ್ಮನು ಬಂದು ಎಲೈ ದಾನವಶ್ರೇಷ್ಠನಾದ ಆಡಿಯೇ! ತಪಸ್ಸಿನಿಂದ ಏನನ್ನು ಹೊಂದಲು ಅಪೇಕ್ಷಿಸುತ್ತೀಯೆ? (ಪತಕ್ಕೆ

ಬ್ರಹ್ಮಾಣಮಾಹ ದೈತ್ಯಸ್ತು ನಿರ್ಮೃತ್ಯುತ್ವಮಹಂ ವೃಣೇ　　　॥ ೫೧ ॥

॥ ಬ್ರಹ್ಮೋವಾಚ ॥

ಜಾತಾನಾಮಿಹ ಸಂಸಾರೇ ವಿನಾ ಮೃತ್ಯುಂ ನ ಯುಜ್ಯತೇ ।
ಯತಸ್ತತೋಽಪಿ ದೈತ್ಯೇಂದ್ರ ಮೃತ್ಯುಃ ಪ್ರಾಪ್ಯಃ ಶರೀರಿಭಿಃ　　　॥ ೫೨ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತೋ ದೈತ್ಯಸಿಂಹಸ್ತು ಪ್ರೋವಾಚಾಂಬುಜಸಂಭವಂ ।　　　॥ ೫೩ ॥

॥ ಆಡಿರುವಾಚ ॥

ರೂಪಸ್ಯ ಪರಿವರ್ತೋ ಮೇ ಯದಾ ಸ್ಯಾತ್ಪದ್ಮಸಂಭವ ।
ತದಾ ಮೃತ್ಯುರ್ಮಮ ಭವೇದನ್ಯಥಾ ತ್ವಮರೋಽಹ್ಯಹಂ　　　॥ ೫೪ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಸ್ತು ತಥೋವಾಚ ತುಷ್ಟಃ ಕಮಲಸಂಭವಃ ।
ಯದಾ ದ್ವಿತೀಯೋ ರೂಪಸ್ಯ ವಿವರಸ್ತೇ ಭವಿಷ್ಯತಿ　　　॥ ೫೫ ॥

---

ತಪಸ್ಸು ಮಾಡುತ್ತೀಯೆ ?) ಎಂದು ಕೇಳಿದನು. ಅದಕ್ಕೆ ಆ ದೈತ್ಯನು ನಾನು ಸಾವಿಲ್ಲದಿರುವಿಕೆಯನ್ನು (ಮರಣವಿಲ್ಲದಿರುವಿಕೆಯನ್ನು) ಅಪೇಕ್ಷಿಸುತ್ತೇನೆ. ಎಂದನು.

೫೨. ಬ್ರಹ್ಮನು ಹೇಳಿದನು-ಎಲೈ ದೈತ್ಯನೇ ! ಈ ಸಂಸಾರದಲ್ಲಿ ಹುಟ್ಟಿದವರಿಗೆ ಮರಣವಾಗದೇ ಸಾಧ್ಯವಿಲ್ಲ. ಆದ್ದರಿಂದ ಶರೀರವನ್ನು ಹೊಂದಿದವರು ಸಾಯಲೇ ಬೇಕು.

೫೩. ಪುಲಸ್ತ್ಯನು ಹೇಳಿದನು—ಬ್ರಹನು ಹೀಗೆನ್ನಲು ದೈತ್ಯನು ಆ ಬ್ರಹ್ಮನನ್ನು ಕುರಿತು ಇಂತೆಂದನು.

೫೪. ಆಡಿಯು ಹೇಳಿದನು—ಎಲೈ ಬ್ರಹ್ಮನೇ ! ನನ್ನ ರೂಪವು ವ್ಯತ್ಯಾಸವಾದಾಗ ನನಗೆ ಮರಣವು ಬರಲಿ. ಅದಿಲ್ಲದಿದ್ದರೆ ನಾನು ಸಾವಿಲ್ಲದಿರುವೆನ

೫೫. ಪುಲಸ್ತ್ಯನು ಹೇಳಿದನು— ಆಡಿಯು ಹೀಗೆನ್ನುತ್ತಿರಲು ಬ್ರಹ್ಮನು ಸಂತೋಷಗೊಂಡು ಅಯ್ಯಾ ! ನಿನ್ನ ರೂಪವು ಬದಲಾಯಿಸಿದಾಗಲೇ ನಿನಗೆ ಮೃತ್ಯುವುಂಟಾಗಲಿ. ಇಲ್ಲದಿದ್ದರೆಬೇಡ ಎಂದನು.

ತದಾ ತೇ ಭವಿತಾ ಮೃತ್ಯುರನ್ಯಥಾ ನ ಭವಿಷ್ಯತಿ ।
ಇತ್ಯುಕ್ತೋಽಮರತಾಂ ಮೇನೇ ದೈತ್ಯಸೂನುರ್ಮಹಾಬಲಃ । ॥ ೫೬ ॥

ತಸ್ಮಿನ್ಕಾಲೇತ್ವಸಂಸ್ಮೃತ್ಯ ತದ್ವಧೋಪಾಯಮಾತ್ಮನಃ ।
ಪ್ರತೀಹರ್ತುರ್ದೃಷ್ಟಿಪಥಂ ವೀರಕಸ್ಯಾಭವತ್ತದಾ ॥ ೫೭ ॥

ಭುಜಂಗರೂಪೀ ರಂಧ್ರೇಣ ಪ್ರವಿವೇಶ ದೃಶಃ ಪಥಂ ।
ಪರಿಹೃತ್ಯ ಗಣೇಶಸ್ಯ ದಾನವೋ ರೌದ್ರದುರ್ಜಯಃ ॥ ೫೮ ॥

ಅಲಕ್ಷಿತೋ ಗಣೇಶೇನ ಪ್ರವಿಶ್ಯಾಥ ಪರಾಂ ತನುಂ ।
ಭುಜಂಗರೂಪಂ ಸಂತ್ಯಜ್ಯ ಜಗ್ರಾಹಾಥ ಮಹಾಸುರಃ ॥ ೫೯ ॥

ಉಮಾರೂಪೀ ರಮಯಿತುಂ ಗಿರೀಶಂ ಮೂಢಚೇತನಃ ।
ಕೃತ್ವಾಮಾಯಾಮಯಂ ರೂಪಮಪ್ರತರ್ಕ್ಯಂ ಮನೋಹರಂ ॥ ೬೦ ॥

ಸರ್ವೈರವಯವೈಃ ಪೂರ್ಣಂ ಸರ್ವಾಭಿಜ್ಞಾನಬೃಂಹಿತಂ ।
ಕೃತ್ವಾ ಭಗಾಂತರೇ ದಂತಂ ದೈತ್ಯೋ ವಜ್ರಮಯಂ ದೃಢಂ ॥ ೬೧ ॥

---

೫೬-೫೮. ಬ್ರಹ್ಮನು ಹೀಗೆ ಹೇಳುತ್ತಲೂ ಆ ಬಲಿಷ್ಠನಾದ ಆಡಿಯು ತಾನು ಸಾಯದಿರುವಿಕೆಯನ್ನು ಹೊಂದಿದನು. ಈ ವೀರಕನನ್ನು ನೋಡಿದಾಗ ತನ್ನ ವಧೆಯಾಗುವ ರೀತಿಯನ್ನು ಮರೆತು ವೀರಕನಿಗೆ ಮರೆಯಾಗಿ ಹರನ ಬಳಿಗೆ ಹೋಗಬೇಕೆಂದು ಯೋಚಿಸಿ ಆ ಗಣೇಶನ ಕಣ್ಣಿಗೆ ಕಾಣದಂತೆ ಹಾವಿನ ರೂಪವನ್ನು ಹೊಂದಿದನು.

೫೯-೬೦. ಗಣೇಶ್ವನಿಗೆ ಕಾಣದಂತೆ ಒಳಗೆ ಹೋಗಿ ಆ ರಾಕ್ಷಸನು ಆ ರೂಪವನ್ನು ಬಿಟ್ಟು ಉಮೆಯ ರೂಪದಿಂದ ಗಿರೀಶನನ್ನು ರಮಿಸಬೇಕೆಂದು ಮಾಯೆಯಿಂದ ಸುಂದರವಾದ ಆಕೆಯ ರೂಪದಂತೆ ರೂಪವನ್ನು ಹೊಂದಿದನು.

೬೧-೬೫. ಅವಳಂತೆಯೇ ಅವಯವಗಳನ್ನು ಹೊಂದಿ ಗುರುತುಗಳೆಲ್ಲವನ್ನೂ ಹೊಂದಿ ತನ್ನ ಯೋನಿಯಲ್ಲಿ (ಗುಹ್ಯದಲ್ಲಿ) ವಜ್ರದಂತೆ ಗಟ್ಟಿಯಾದ ಹಲ್ಲುಗಳನ್ನು

ತೀಕ್ಷ್ಣಾಗ್ರಂ ಬುದ್ಧಿಮೋಹೇನ ಗಿರೀಶಂ ಹಂತುಮುದ್ಯತಃ ।
ಕೃತ್ವೋಮಾರೂಪಸಂಸ್ಥಾನಂ ಗತೋ ದೈತ್ಯೋ ಹರಾಂತಿಕಂ ॥ ೬೨ ॥

ಪಾಪೋ ರಮ್ಯಾಕೃತಿಶ್ಚಿತ್ರಭೂಷಣಾಂಬರಸಂಯುತಃ ।
ತಂ ದೃಷ್ಟ್ವಾ ಗಿರಿಶಸ್ತುಷ್ಟಸ್ತಮಾಲಿಂಗ್ಯ ಮಹಾಸುರಂ ॥ ೬೩ ॥

ಮನ್ಯಮಾನೋ ಗಿರಿಸುತಾಂ ಸರ್ವೈರವಯವಾಂತರೈಃ ।
ಅಪೃಚ್ಛತ್ಸಾಧುಭಾವಂ ತೇ ಗಿರಿಪುತ್ರಿ ನ ಕೃತ್ರಿಮಂ ॥ ೬೪ ॥

ಯಾ ತ್ವಂ ಮದಾಶಯಂ ಜ್ಞಾತ್ವಾ ಪ್ರಾಪ್ತೇಹ ವರವರ್ಣಿನೀ ।
ತ್ವಯಾ ವಿರಹಿತಂ ಶೂನ್ಯಂ ಮಮ ಸ್ಥಾನಂ ಜಗತ್ರಯಂ ॥ ೬೫ ॥

ಪ್ರಾಪ್ತಾ ಪ್ರಸನ್ನವದನೇ ಯುಕ್ತಮೇವಂ ವಿಧಂ ತ್ವಯಿ ।
ಇತ್ಯುಕ್ತೋ ದಾನವೇಂದ್ರಸ್ತು ತಮಭಾಷತ್ ಸ್ಥಿತಂ ಶನೈಃ ।
ಸ ಚಾಬುದ್ಧ್ಯದಭಿಜ್ಞಾನೈಃ ಪ್ರಾಹ ತ್ರಿಪುರಘಾತಿನಂ ॥ ೬೬ ॥

---

ಹೊಂದಿ ದುರಭಿಪ್ರಾಯದಿಂದ ಶಿವನನ್ನು ಕೊಲ್ಲಲು ಪ್ರಯತ್ನಿಸಿದನು. ಈ ರೀತಿ ಉಮೆಯಂತೆ ರೂಪವನ್ನು ಹೊಂದಿದ ದೈತ್ಯನು ಮನೋಹರವಾದ ಆಕಾರವನ್ನು ಹೊಂದಿ ಚಿನ್ನಾಗಿರುವ ಒಡವೆಗಳನ್ನು ತೊಟ್ಟು ಹರನ ಬಳಿಗೆ ಹೋದನು. ಆತನನ್ನು ನೋಡಿ ಅವಯವಗಳ ಸನ್ನಿವೇಶದಿಂದ ಈಕೆಯು ಪಾರ್ವತಿಯೆಂದು ತಿಳಿದು ಸಂತೋಷಗೊಂಡು ಆ ದೈತ್ಯನನ್ನು ಆಲಂಗಿಸಿಕೊಂಡನು. 'ಮತ್ತು ಎಲೈ ಗಿರಿಜೆಯೇ! ನಿನಗೆ ಒಳ್ಳೆಯತನ ಬಂದಿತೇ ? ಕೃತ್ರಿಮತನವಲ್ಲವಷ್ಟೇ ? ನೀನು ನನ್ನ ಅಭಿಪ್ರಾಯವನ್ನು ತಿಳಿದು ಇಲ್ಲಿಗೆ ಬಂದೆಯಲ್ಲ! ಬಹು ಒಳ್ಳೆಯ ಕೆಲಸವನ್ನು ಮಾಡಿದೆ. ನೀನಿಲ್ಲದಿದ್ದರೆ ನನ್ನ ಸ್ಥಾನವೂ ಒಟ್ಟಿನಲ್ಲಿ ಪ್ರಪಂಚವೇ ಶೂನ್ಯವಾಗಿ ನನಗೆ ಆಗುತ್ತದೆ.

೬೬ ಪ್ರಸನ್ನಳಾಗಿ ಬಂದಿರುವೆಯಲ್ಲ! ಈ ರೀತಿ ಬರುವುದು ನಿನ್ನಂಥವಳಿಗೆ ಯೋಗ್ಯವಾದುದು. ಹೀಗೆನ್ನಲು ಆ ಅಡಿದಾನವನು ನಿದಾನವಾಗಿ ಅವನೊಡನೆ ಇಂತೆಂದನು. ಅಲ್ಲದೆ ತಾನು ತಿಳಿದುಕೊಂಡಿರುವ ಗುರುತುಗಳನ್ನು ಉಪಯೋಗಿಸಿ ಆ ಹರನಿಗಿಂತೆಂದನು.

॥ ದೈತ್ಯ ಉವಾಚ ॥

ಯಾತಾಸ್ಮಿ ತಪಸೇ ಬಾಲಾ ವರಂ ಲಬ್ಧುಂ ತವಾಕುಲಂ ।
ರತಿಶ್ಚ ತತ್ರ ಮೇ ನಾಭೂತ್ತತಃ ಪ್ರಾಪ್ತಾ ತ್ವದಂತಿಕಂ ॥ ೬೭ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಶ್ಶಂಕರಶ್ಶಂಕಾಂ ಕಾಂಚಿತ್ಪ್ರಾಪ್ತೋ ವಿಚಾರಯನ್ ।
ಹೃದಯೇನ ಸಮಾಧಾಯ ದೇವಃ ಪ್ರಹಸಿತಾನನಃ ॥ ೬೮ ॥

ಕುಪಿತಾ ಕುಪಿತಂ ಬುದ್ಧ್ವಾ ಪ್ರಕೃತ್ಯಾ ಚ ದೃಢವ್ರತಾ ।
ಅಪ್ರಾಪ್ತಕಾಮಾ ಸಂಪ್ರಾಪ್ತಾ ಕಿಮೇತತ್ಸಂವಿಜಾನಕೀ ॥ ೬೯ ॥

ಇತಿ ಚಿಂತ್ಯ ಹರಸ್ತಸ್ಯಾ ಅಭಿಜ್ಞಾನಂ ವಿಚಾರಯನ್ ।
ನಾಪಶ್ಯದ್ವಾಮಪಾರ್ಶ್ವೇ ತು ತದಂಕಂ ಪದ್ಮಲಕ್ಷಣಂ ॥ ೭೦ ॥

ಲೋಮ್ನಾಮಾವರ್ತರಚಿತಂ ತತೋ ದೇವಃ ಪಿನಾಕಧೃಕ್ ।
ಬುದ್ಧ್ವಾ ತಾಂ ದಾನವೀಮ್ಮಾಯಾಮಾಕಾರಂ ಗೂಹಯಂಸ್ತತಃ ॥ ೭೧ ॥

---

೬೭. ದೈತ್ಯನು ಹೇಳಿದನು– ಬಾಲೆಯಾದ ನಾನು ತಪಸ್ಸುಮಾಡಿ ನಿನ್ನಿಂದ ಉತ್ಕೃಷ್ಟವಾದ ವರವನ್ನು ಹೊಂದಲು ಹೋದೆನು. ಅಲ್ಲಿ ನನಗೆ ಸಂತೋಷವಾಗಲಿಲ್ಲ. ಆದ್ದರಿಂದ ಮತ್ತೆ ನಿನ್ನ ಬಳಿಗೆ ಬಂದೆನು.

೬೮. ಪುಲಸ್ತ್ಯನು ಹೇಳಿದನು– ಆ ದೈತ್ಯನು ಹೀಗೆನ್ನುತ್ತಲೂ ಶಂಕರನಿಗೆ ಸ್ವಲ್ಪ ಸಂದೇಹ ಬಂದು ಯೋಚಿಸುತ್ತ ಅದನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು ನಕ್ಕನು.

೬೯-೭೦. ನಾನು ಕೋಪಗೊಳ್ಳುತ್ತಲೂ ತಾನೂ ಕೋಪಗೊಂಡಳು. ಸ್ವಭಾವವಾಗಿಯೇ ಅವಳು ಹಠವಾದಿನಿಯು. ತನ್ನ ಇಷ್ಟವನ್ನು ಪೂರ್ತಿಮಾಡಿಕೊಳ್ಳದೇ ಬಂದಿರುವಳು. ಯಾತಕ್ಕೋಸ್ಕರ ಬಂದಿರಬಹುದು ? ಎಂದು ಅವಳ ಗುರುತುಗಳನ್ನು ನೋಡುತ್ತ ಎಡಪಾರ್ಶ್ವದಲ್ಲಿ ಅವಳಲ್ಲಿದ್ದ ಪದ್ಮದ ಗುರುತನ್ನು ಈಕೆಯಲ್ಲಿ ಕಾಣಲಿಲ್ಲ.

೭೧-೭೨. ಮತ್ತು ಕೂದಲುಗಳ ಸುಳಿಯನ್ನೂ ಕಾಣದೆ ಹರನು ಇದು ರಾಕ್ಷಸರ ಮಾಯೆಯೆಂದು ತಿಳಿದು ಅದನ್ನು ಹೊರಗೆಡವದೇ ಸುಮ್ಮನಾಗಿ ಮೇಢ್ರದಂಷ್ಟ್ರ

ಮೇಢ್ರದಂಷ್ಟ್ರಾಸ್ತ್ರಮಾದಾಯ ದಾನವಂ ತಮಸಾದಯತ್ ।
ನ ಚಾಬುಧ್ಯತ ತದ್ವೃತ್ತಂ ವೀರಕೋ ದ್ವಾರರಕ್ಷಕಃ ॥ ೭೨ ॥

ಕುಸುಮಾಮೋದಿನೀ ದಿಷ್ಟವಾಯುನಾ ಪ್ರತಿಬೋಧಿತಾ ।
ದೂತೇನ ಮಾರುತೇನಾಶು ಗಾಮಿನಾ ಹಿಮಶೈಲಜಾ ॥ ೭೩ ॥

ಶ್ರುತ್ವಾ ವಾಯುಮುಖಾದ್ದೇವೀ ಕ್ರೋಧರಕ್ತಾವಿಲೇಕ್ಷಣಾ ।
ಅಶಪದ್ವೀರಕಂ ಪುತ್ರಂ ಹೃದಯೇನೈವ ದೂಯತಾ ॥ ೭೪ ॥

॥ ದೇವ್ಯುವಾಚ ॥

ಮಾತರಂ ಮಾಂ ಪರಿತ್ಯಜ್ಯ ಯಸ್ಮಾತ್ತ್ವಂ ಸ್ನೇಹವಿಕ್ಲವಾಂ ।
ವಿಹಿತಾವಸರಸ್ತ್ರೀಣಾಂ ಶಂಕರಸ್ಯ ರಹೋ ವಿಧೌ ॥ ೭೫ ॥

ತಸ್ಮಾತ್ತೇ ಮಾನುಷೇ ರೂಕ್ಷಾ ಜಡಾ ಹೃದಯವರ್ಜಿತಾ ।
ಗಣೇಶಾಕಾರಸದೃಶಾ ಶಿಲಾ ಮಾತಾ ಭವಿಷ್ಯತಿ ॥ ೭೬ ॥

ನಿಮಿತ್ತ ಏಷ ವಿಖ್ಯಾತೋ ವೀರಕಸ್ಯ ಸುತಾದರಾತ್ ।
ಸಂಭವೇ ಪ್ರಕ್ರಮೋ ಚೈವ ವಿಚಿತ್ರಾಖ್ಯಾ ನ ಸಂಶಯಃ ॥ ೭೭ ॥

---

ವೆಂಬ ಅಸ್ತ್ರವನ್ನು ಉಪಯೋಗಿಸಿ ಆ ದಾನವನನ್ನು ಕೊಂದನು. ಈ ವಿಚಾರವು ದ್ವಾರಪಾಲಕನಾದ ವೀರಕನಿಗೆ ತಿಳಿಯಲೇ ಇಲ್ಲ.

೭೩-೭೪. ಕುಸುಮದ ವಾಸನೆಯನ್ನು ಹೊಂದಿರುವ ಜಾಗ್ರತೆ ಸಂಚರಿಸುವ ಗಾಳಿಯು ಅವಳಿಗೆ ಹೇಳಿದನು. ಗಾಳಿಯಿಂದ ಇದನ್ನು ತಿಳಿದು ಮನಸ್ಸಿನಲ್ಲಿ ಸಂಕಟ ಪಡುತ್ತ ಕೋಪದಿಂದ ಕಣ್ಣನ್ನು ಕೆಂಪುಮಾಡಿಕೊಂಡು ಆ ವೀರಕನಾದ ಪುತ್ರನನ್ನು ನೋಡಿದಳು.

೭೫-೭೬. ದೇವಿಯು ಹೇಳಿದಳು– ನೀನು ಸ್ನೇಹದಿಂದ ಕೂಡಿದ ತಾಯಿಯಾದ ನನ್ನನ್ನು ತಿರಸ್ಕರಿಸಿ ಶಂಕರನಿಗೆ ಗುಟ್ಟಾಗಿ ಹೆಂಗಸರನ್ನು ಒದಗಿಸುವುದರಲ್ಲಿ ಆಸಕ್ತನಾಗಿದ್ದೀಯೆ. ಆದ್ದರಿಂದ ನಿನಗೆ ಮನುಷ್ಯಲೋಕದಲ್ಲಿ ಕಠಿಣಳಾದ ಸ್ನೇಹ ದೂರಳಾದ ಗಣೇಶನ ಆಕಾರಕ್ಕೆ ಸದೃಶವಾದ ತಾಯಿಯು ಆಗಲಿ.

೭೭. ಮಗನೆಂಬ ಪ್ರೀತಿಯಿಂದ ಈ ಶಾಪವು ವೀರಕನಿಗೆ ನಿಮಿತ್ತಮಾತ್ರವೇ ಆಯಿತು. ಹುಟ್ಟುವುದು ಅದರಂತೆ ನಡೆಯುವುದು ಇವುಗಳಲ್ಲಿ ಈ ಪುತ್ರಶಾಪವು ವಿಚಿತ್ರವಾದುದು ಸಂದೇಹವಿಲ್ಲ.

॥ ಪುಲಸ್ತ್ಯ ಉವಾಚ ॥

ಏವಮುತ್ಸೃಷ್ಟಶಾಪಾಯಾ ಗಿರಿಪುತ್ರ್ಯಾಸ್ತ್ವನಂತರಂ ।
ನಿರ್ಜಗಾಮ ಮುಖಾತ್ಕ್ರೋಧಸ್ಸಿಂಹರೂಪೀ ಮಹಾಬಲಃ ॥ ೭೮ ॥

ಸ ತು ಸಿಂಹಃ ಕರಾಳಾಸ್ಯಸ್ಸಟಾಜಟಿಲಕಂಧರಃ ।
ಊರ್ಧ್ವಪ್ರೋಥಪ್ಲುತಲಾಂಗೂಲೋ ದಂಷ್ಟ್ರೋತ್ಕಟಮುಖಾವಟಃ ॥ ೭೯ ॥

ವ್ಯಾದಿತಾಸ್ಯೋ ಲಂಬಜಿಹ್ವಃ ಕ್ಷಾಮಃ ಕುಕ್ಷಿಗಳಾದಿಷು ।
ಅಸ್ಯಾಸ್ಯೇ ವರ್ತಿತುಂ ದೇವಿ ವ್ಯವಸ್ಯತವತೀ ತದಾ ॥ ೮೦ ॥

ಜ್ಞಾತ್ವಾ ಮನೋಗತಂ ತಸ್ಯಾ ಭಗವಾಂಶ್ಚತುರಾನನಃ ।
ನಿಜಗಾಮಾಶ್ರಮಪದಂ ಸಂಪದಾಮಾಶ್ರಯಂ ಯತಃ ॥
ಆಗಮ್ಯೋವಾಚ ದೇವೇಶೋ ಗಿರಿಜಾಂ ಸ್ಪಷ್ಟಯಾ ಗಿರಾ ॥ ೮೧ ॥

॥ ಬ್ರಹ್ಮೋವಾಚ ॥

ಕಿಂ ಪುನಃ ಪ್ರಾಪ್ತುಕಾಮಾಸಿ ಕಿಮಲಭ್ಯಂ ದದಾಮಿ ತೇ ।
ವಿರಮ್ಯತಾಮತಿಕ್ಲೇಶಾತ್ತಪಸೋಽಸ್ಮಾನ್ಮದಾಜ್ಞಯಾ ॥ ೮೨ ॥

---

೭೮. ಪುಲಸ್ತ್ಯನು ಹೇಳಿದನು-ಆಮೇಲೆ ಗಿರಿಪುತ್ರಿಯು ಶಾಪವನ್ನು ಕೊಡಲು ಅವಳ ಮುಖದಿಂದ ಆ ಶಾಪವು ಮಹಾಬಲವುಳ್ಳ ಸಿಂಹದ ರೂಪವನ್ನು ಹೊಂದಿ ಹೊರಟಿತು.

೭೯-೮೧. ಆ ಸಿಂಹವು ಭಯಂಕರಮುಖವುಳ್ಳದ್ದಾಗಿ ಕೇಸರದಿಂದ ಕೂಡಿದ ಕತ್ತುಳ್ಳದ್ದಾಗಿ ಬಾಲವನ್ನು ಮೇಲಕ್ಕೆತ್ತಿಕೊಂಡು ಕೋರೆದಾಡೆಯಿಂದ ಕೂಡಿದ ಮುಖವುಳ್ಳದ್ದಾಗಿ ಬಾಯನ್ನು ತೆರೆದುಕೊಂಡು ನಾಲಿಗೆಯನ್ನು ಜೋಲಾಡಿಸುತ್ತ ಇದ್ದಿತು. ಸೊಂಟ ಕತ್ತುಗಳು ಸಣ್ಣವಾಗಿದ್ದುವು. ಆ ಪಾರ್ವತಿಯು ಈ ಸಿಂಹದ ಮುಖದಲ್ಲಿ ಕುಳಿತುಕೊಳ್ಳಲು ಸಿದ್ಧಾಂತಮಾಡಿಕೊಂಡಳು. ಈಕೆಯ ಇಷ್ಟವನ್ನು ತಿಳಿದು ಬ್ರಹ್ಮನು ಸಂಪತ್ತಿಗೆ ಆಶ್ರಯವಾದ ಈಕೆಯ ಆಶ್ರಮಕ್ಕೆ ಬಂದನು. ಬಂದು ಆ ಬ್ರಹ್ಮನು ಸ್ಪಷ್ಟವಾದ ಮಾತಿನಿಂದ ಆಕೆಯನ್ನು ಕುರಿತು ಇಂತೆಂದನು.

೮೨. ಬ್ರಹ್ಮನು ಹೇಳಿದನು- ನಿನಗೇನು ಬೇಕು ? ನಿನಗೆ ಸಿಕ್ಕದಿರುವುದನ್ನು ಯಾವುದನ್ನು ಕೊಡಲಿ ? ನನ್ನ ಅಪ್ಪಣೆಯಿಂದ ಈ ಉಗ್ರವಾದ ತಪಸ್ಸನ್ನು ನಿಲ್ಲಿಸು.

॥ ಪುಲಸ್ತ್ಯ ಉವಾಚ ॥

ತಚ್ಛ್ರುತ್ವೋವಾಚ ಗಿರಿಜಾ ಗುರೋರ್ಗೌರವಯಂತ್ರಿತಂ ।
ವಾಕ್ಯಂ ವಾಚಾ ಹರೋದ್ಗೀರ್ಣವರ್ಣನಿರ್ಗಮವಾಂಛಿತಂ ॥ ೮೩ ॥

॥ ದೇವ್ಯುವಾಚ ॥

ತಪಸಾ ದುಷ್ಕರೇಣಾಪ್ತಃ ಪತಿರ್ವೈ ಶಂಕರೋ ಮಯಾ ।
ಸ ಮಾಂ ಶ್ಯಾಮಲವರ್ಣೇತಿ ಬಹುಶಃ ಪ್ರೋಕ್ತವಾನ್ಹರಃ ॥ ೮೪ ॥

ತಸ್ಮಾದಹಂ ಕಾಂಚನಾಭವರ್ಣಾ ತನ್ನಾಮಸಂಯುತಾ ।
ಭರ್ತುರ್ಭೂತಪತೇರಂಗಮೇಕತೋ ನಿರ್ವಿಷಂ ಭವೇತ್ ॥ ೮೫ ॥

॥ ಪುಲಸ್ತ್ಯ ಉವಾಚ ॥

ತಸ್ಯಾಸ್ತದ್ಭಾಷಿತಂ ಶ್ರುತ್ವಾ ಪ್ರೋವಾಚ ಜಗದೀಶ್ವರಂ ॥ ೮೬ ॥

॥ ಬ್ರಹ್ಮೋವಾಚ ॥

ಏವಂ ಭವ ತ್ವಂ ಭೂಯಶ್ಚ ಭರ್ತುರ್ದೇಹಾರ್ಧಧಾರಿಣೀ ॥ ೮೭ ॥

---

೮೩. ಪುಲಸ್ತ್ಯನು ಹೇಳಿದನು– ಆ ಮಾತನ್ನು ಕೇಳಿ ಗಿರಿಜೆಯು ಗೌರವದಿಂದ ಬ್ರಹ್ಮನಿಗೆ ಶಿವನು ಹೇಳಿದ ಆ ಕಪ್ಪುಬಣ್ಣದ ನಾಶವನ್ನೂ ಕೆಂಪುಗೂಡಿದ ಬಿಳಿಪುಬಣ್ಣದ ಪ್ರಾಪ್ತಿಯನ್ನೂ ತಿಳಿಸಿದಳು.

೮೪. ದೇವಿಯು ಹೇಳಿದಳು– ತಪಸ್ಸುಮಾಡಿ ಕಷ್ಟಪಟ್ಟು ಶಂಕರನನ್ನು ಗಂಡನನ್ನಾಗಿ ಹೊಂದಿದೆನು. ಅಂತಹ ಗಂಡನು ನನ್ನನ್ನು ಕಪ್ಪಗಿರುವವಳೇ! ಎಂದು ಅನೇಕ ಬಾರಿ ಹೇಳಿದನು.

೮೫. ಆದ್ದರಿಂದ ನಾನು ಚಿನ್ನದ ಬಣ್ಣದ ಬಣ್ಣವುಳ್ಳವಳಾಗಿ ಅದೇ ಹೆಸರನ್ನು ಹೊಂದಬೇಕು. ಅಲ್ಲದೆ ಭೂತಪತಿಯಾದ ನನ್ನ ಗಂಡನ ಅವಯುವವು ಒಂದು ಕಡೆಯಲ್ಲಿ ವಿಷವಿಲ್ಲದ್ದಾಗಬೇಕು.

೮೬. ಪುಲಸ್ತ್ಯನು ಹೇಳಿದನು– ಅವಳ ಆ ಮಾತನ್ನು ಕೇಳಿ ಜಗದೀಶ್ವರನು ಇಂತೆಂದನು.

೮೭. ಬ್ರಹ್ಮನು ಹೇಳಿದನು-- ನೀನು ಹಾಗೆಯೇ ಬಣ್ಣವನ್ನೂ ಹೊಂದು ಅಲ್ಲದೆ ಗಂಡನ ಅರ್ಧ ದೇಹವನ್ನೂ ಹೊಂದು.

॥ ಪುಲಸ್ತ್ಯ ಉವಾಚ ॥

ತತಸ್ತತ್ಯಾಜ ತಾಂ ಕೃಷ್ಣಾಂ ಪುಲ್ಲನೀಲೋತ್ಪಲತ್ವಚಂ ।
ತ್ವಕ್ಚ ಸಾಪ್ಯಭವದ್ಭೀಮಾ ಘಂಟಾಹಸ್ತಾ ತ್ರಿಲೋಚನಾ ॥ ೮೮ ॥

ನಾನಾಭರಣಸಂಪೂರ್ಣಾ ಪೀತಕೌಶೇಯಧಾರಿಣೀ ।
ತಾಮಬ್ರವೀತ್ತತೋ ಬ್ರಹ್ಮಾ ದೇವೀಂ ನೀಲಾಂಬುಜತ್ವಿಷಂ ॥ ೮೯ ॥

॥ ಬ್ರಹ್ಮೋವಾಚ ॥

ನಿಶೇ ಭೂಧರಜಾದೇಹಸಂಪರ್ಕಾತ್ತ್ವಂ ಮದಾಜ್ಞಯಾ ।
ಸಂಪ್ರಾಪ್ತಾ ಕೃತಕೃತ್ಯತ್ವಮೇಕಾನಂಶಾ ಪುರೋಹ್ಯಸಿ ॥ ೯೦ ॥

ಯ ಏಷ ಸಿಂಹಃ ಪ್ರೋದ್ಭೂತೋ ದೇವ್ಯಾಃ ಕೋಪಾದ್ವರಾನನೇ ।
ಸ ತೇಽಸ್ತು ವಾಹನಂ ದೇವಿ ಕೇತೌ ಚಾಸ್ತು ಮಹಾಬಲಃ ॥ ೯೧ ॥

---

೮೮-೮೯. ಪುಲಸ್ತ್ಯನು ಹೇಳಿದನು-- ಅನಂತರ ಆ ಪಾರ್ವತಿಯು ನೀಲೋತ್ಪಲದಂತಿದ್ದ ಕಪ್ಪು ಬಣ್ಣವನ್ನು ಬಿಟ್ಟಳು ತನ್ನ ಆ ವ್ಯೈಚರ್ಮವೂ ಉಗ್ರವಾಗಿ ಕೈಯಲ್ಲಿ ಘಂಟೆ ಕಟ್ಟಿಕೊಂಡು ಮೂರು ಕಣ್ಣುಗಳೂ ಬಂದುವು. ಅನಂತರ ಆ ಕಪ್ಪಿನ ಬಣ್ಣವುಳ್ಳ ದೇವಿಯನ್ನು ಕುರಿತು ಬ್ರಹ್ಮನು ಇಂತೆಂದನು.

೯೦. ಬ್ರಹ್ಮನು ಹೇಳಿದನು- ಎಲೈ ವಿಭಾವರಿಯೇ ! ನೀನು ನನ್ನ ಅಪ್ಪಣೆಯಿಂದ ಈ ಪಾರ್ವತಿಯಲ್ಲಿ ದೇಹಸಂಪರ್ಕವನ್ನು ಹೊಂದಿದ್ದೆ. ನಿನ್ನಿಂದಾಗಬೇಕಾದುದು ಆಯಿತು. ಧನ್ಯಳಾದೆ. ಇನ್ನುಮೇಲೆ ಅಂಶಭೂತಳಾಗಿ ಆಕೆಯಲ್ಲಿರುವುದನ್ನು ಬಿಡು.

೯೧. ಎಲೈ ನಿಶೆಯೇ ! ದೇವಿಯ ಕೋಪದಿಂದ ಹುಟ್ಟಿದ ಈ ಸಿಂಹವೇ ನಿನಗೆ ವಾಹನವಾಗಲಿ. ಅಲ್ಲದೆ ನಿನ್ನ ಧ್ವಜವೂ ಆಗಲಿ.

ಗಚ್ಛ ವಿಂಧ್ಯಾಚಲಂ ತತ್ರ ಸುರಕಾರ್ಯಂ ಕರಿಷ್ಯಸಿ ।
ಪಂಚಾಲೋ ನಾಮ ಯಕ್ಷೋಽಯಂ ಲಕ್ಷಯಕ್ಷಪದಾನುಗಃ ॥
ದತ್ತಸ್ತೇ ಕಿಂಕರೋ ದೇವಿ ಮಯಾ ಮಾಯಾಶತೈರ್ಯುತಃ ॥ ೯೨ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ಕೌಶಿಕೀ ದೇವೀ ವಿಂಧ್ಯಶೈಲಂ ಜಗಾಮ ಹ ।
ಉಮಾಪಿ ಪ್ರಾಪ್ತಸಂಕಲ್ಪಾ ಜಗಾಮ ಗಿರಿಶಾಂತಿಕಂ ॥ ೯೩ ॥

ಪ್ರವಿಶಂತೀಂ ತು ತಾಂ ದ್ವಾರಾದಪಹೃತ್ಯ ಸಮಾಹಿತಃ ।
ರುರೋಧ ವೀರಕೋ ದೇವೀಂ ಹೇಮವೇತ್ರಲತಾಧರಃ ॥
ತಾಮುವಾಚ ಚ ಕೋಪೇನ ರೂಪತ್ವವ್ಯಭಿಚಾರಿಣೀಂ ॥ ೯೪ ॥

॥ ವೀರಕ ಉವಾಚ ॥

ಪ್ರಯೋಜನಂ ನ ತೇತ್ರಾಸ್ತಿ ತನುಂ ಯಾವನ್ನ ತ್ಯಕ್ಷಸ್ಯಿ ।
ದೇವ್ಯಾ ರೂಪಧರೋ ದೈತ್ಯೋ ದೇವಂ ವಂಚಿತುಮಾಗತಃ ॥ ೯೫ ॥

---

೯೨. ವಿಂಧ್ಯಪರ್ವತಕ್ಕೆ ಹೋಗು. ಅಲ್ಲಿದ್ದುಕೊಂಡು ದೇವತೆಗಳ ಕೆಲಸವನ್ನು ಮಾಡು ಪಂಚಾಲನೆಂಬ ಯಕ್ಷನಿರುವನಲ್ಲ, ಇವನಿಗೆ ಲಕ್ಷಜನ ಆಳುಗಳಿರುವರು. ಅವರಿಗೆಲ್ಲಾ ಈತನು ಅಧಿಪತಿಯು. ಮತ್ತು ಇವರೆಲ್ಲರೂ ಅನೇಕ ಮಾಯೆಗಳನ್ನು ಬಲ್ಲವರು. ಇವರನ್ನು ನಿನಗೆ ಸೇವಕರನ್ನಾಗಿ ಕೊಟ್ಟಿದ್ದೇನೆ.

೯೩. ಪುಲಸ್ತ್ಯನು ಹೇಳಿದನು-- ಹೀಗೆನ್ನಲು ಆ ನಿಶೆಯಾದ ಕೌಶಿಕೀದೇವಿಯು ವಿಂಧ್ಯಪರ್ವತಕ್ಕೆ ಹೋದಳು. ಉಮೆಯೂ ಕೂಡ ಕಾರ್ಯ ಕೈಗೂಡಿದವಳಾಗಿ ಶಿವನ ಬಳಿಗೆ ಹೋದಳು.

೯೪. ಆಗ ಚಿನ್ನದ ಬೆತ್ತವನ್ನು ಕೈಯ್ಯಲ್ಲಿಟ್ಟುಕೊಂಡು ಕಾಯುತ್ತಿದ್ದ ಆ ವೀರಕನು ಜಾಗರೂಕನಾಗಿದ್ದು ಈಕೆಯು ಹರನ ಬಳಿಗೆ ಹೋಗುತ್ತಿರಲು ತಡೆದನು. ಮತ್ತು ಬದಲು ಬಣ್ಣವನ್ನು ಹೊಂದಿರುವ ಈಕೆಯನ್ನು ಕುರಿತು ಇಂತೆಂದನು.

೯೫. ಇಲ್ಲಿ ನಿನಗೆ ಪ್ರಯೋಜನವಿಲ್ಲ ಒಳಗೆ ಹೋಗಬೇಡ. ನೀನು ಸಾಯುತ್ತೀಯೆ. ಒಬ್ಬ ದೈತ್ಯನು ಪಾರ್ವತಿಯ ರೂಪವನ್ನು ಹೊಂದಿ ಸ್ವಾಮಿಯನ್ನು ಮೋಸಗೊಳಿಸಲು ಬಂದಿದ್ದನು.

ಪ್ರವಿಷ್ಟೋ ನ ಚ ದೃಷ್ಟೋಽಸೌ ಸ ಚ ದೇವೇನ ಘಾತಿತಃ ।
ಘಾತಿತೇ ಚಾಹಮಾಜ್ಞಪ್ತೋ ನೀಲಕಂಠೇನ ಕೋಪಿನಾ ॥ ೯೬ ॥

ದ್ವಾರೇ ತ್ವನವಧಾನಂ ತೇ ಯಸ್ಮಾತ್ಪಶ್ಯಾಮಿ ವೈ ತತಃ
ಭವಿಷ್ಯಸಿ ನ ಮೇ ದ್ವಾಸ್ಥೋ ವರ್ಷಪೂಗಾನನೇಕಶಃ ॥ ೯೭ ॥

ಅತಸ್ತೇ ನಾತ್ರ ದಾಸ್ಯಾಮಿ ಪ್ರವೇಶಂ ಗಮ್ಯತಾಂ ದ್ರುತಂ ।
ಏತಾಂ ಮುಕ್ತ್ವಾ ಗಿರಿಸುತಾಂ ಮಾತರಂ ಸ್ನೇಹವತ್ಸಲಾಂ ॥
ಪ್ರವೇಶಂ ಲಭತೇ ನಾನ್ಯಾ ನಾರೀ ಕಮಲಲೋಚನೇ ॥ ೯೮ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾ ತು ತದಾ ದೇವೀ ಚಿಂತಯಾಮಾಸ ಚೇತಸಾ ।
ನಾರೀ ನೈವ ಸ ದೈತೇಯೋ ವಾಯುರ್ಮೇ ಯಾಮಭಾಷತ ॥ ೯೯ ॥

ವೃಥೈವ ವೀರಕಶ್ಶಪ್ತೋ ಮಯಾ ಕ್ರೋಧಪರೀತಯಾ ।
ಅಕಾರ್ಯಂ ಕ್ರಿಯತೇ ಮೂಢೈಃ ಪ್ರಾಯಃ ಕ್ರೋಧಸಮನ್ವಿತೈಃ ॥ ೧೦೦ ॥

---

೯೬-೯೭. ಅವನ ಬಳಿಗೆ ಹೋದವನು ಕಾಣಲೇ ಇಲ್ಲ. ಸ್ವಾಮಿಯು ಅವನನ್ನು ಕೊಂದುಹಾಕಿದನು. ಕೊಂದಮೇಲೆ ನನಗೆ ಎಲೈ ವೀರಕನೆ! ನೀನು ಬಾಗಿಲಿನಲ್ಲಿ ಎಚ್ಚರಿಕೆಯಿಂದಿರುತ್ತಿಲ್ಲ. ಇನ್ನು ಅನೇಕ ದಿನಗಳು ನನ್ನ ಬಳಿ ಈ ಬಾಗಿಲು ಕಾಯುವವನಾಗಿರಲಾರೆ. ಎಂದಪ್ಪಣೆ ಮಾಡಿದ್ದಾನೆ.

೯೮. ಆದ್ದರಿಂದ ನಿನ್ನನ್ನು ಒಳಗೆ ಬಿಡುವುದಿಲ್ಲ. ಬೇಗ ಹೊರಡು. ಸ್ನೇಹದಿಂದ ಕೂಡಿರುವ ನನ್ನ ತಾಯಿಯಾದ ಪಾರ್ವತಿಯೊಬ್ಬಳನ್ನು ಬಿಟ್ಟು ಮತ್ತೊಬ್ಬ ಹೆಂಗಸು ಪ್ರವೇಶಿಸಲು ಸಾಧ್ಯವಿಲ್ಲ. ಹೊರಡು ಎಂದನು.

೯೯. ಪುಲಸ್ತ್ಯರು ಹೇಳಿದರು-- ಆಗ ಪಾರ್ವತಿಯು ಯೋಚಿಸಿದಳು. ನನಗೆ ವಾಯುವು ಹೇಳಿದವಳು ಹೆಂಗಸಲ್ಲ. ಅವನು ರಾಕ್ಷಸನು.

೧೦೦. ಕೋಪಗೊಂಡ ನಾನು ವ್ಯರ್ಥವಾಗಿ ವೀರಕನನ್ನು ಶಪಿಸಿದೆನು. ಕೋಪದಿಂದ ಕೂಡಿದವರು ಸಾಧಾರಣವಾಗಿ ಬುದ್ಧಿಗೆಟ್ಟು ಕೆಟ್ಟ ಕೆಲಸವನ್ನು ಮಾಡುತ್ತಾರೆ.

ಕ್ರೋಧೇನ ನಶ್ಯತೇ ಕೀರ್ತಿಃ ಕ್ರೋಧೋ ಹಂತಿ ಸ್ಥಿರಾಂ ಶ್ರಿಯಂ ।
ಅಪರಿಚ್ಛಿನ್ನವಾಕ್ಯಾರ್ಥೆ ಪುತ್ರಂ ಶಾಪಿತವತ್ಯಹಂ ॥ ೧೦೧ ॥

ವಿಪರೀತಾರ್ಥಬುದ್ಧೀನಾಂ ಸುಲಭೋ ವಿಪದೋದಯಃ ।
ಸಂಚಿಂತ್ಯೈವಮುವಾಚೇದಂ ವೀರಕಂ ಪ್ರತಿ ಶೈಲಜಾ ॥ ೧೦೨ ॥

ಸಜ್ಜಲಜ್ಜಾವಿಕಾರೇಣ ವದನೇನಾಂಬುಜತ್ವಿಷಾ ॥ ೧೦೩ ॥

॥ ದೇವ್ಯುವಾಚ ॥

ಅಹಂ ವೀರಕ ತೇ ಮಾತಾ ನ ತೇಸ್ತು ಮನಸೋ ಭ್ರಮಃ ।
ಶಂಕರಸ್ಯಾಸ್ಮಿ ದಯಿತಾ ಸುತಾ ತುಹಿನಭೂಭೃತಃ ॥ ೧೦೪ ॥

ಮಮ ಗಾತ್ರಚ್ಛವಿಭ್ರಾಂತ್ಯಾ ಮಾ ಶಂಕಾಂ ಪುತ್ರ ಧಾರಯ ।
ತುಷ್ಟೇನ ಗೌರತಾ ದತ್ತಾ ಮಮೇಯಂ ಪದ್ಮಜನ್ಮನಾ ॥ ೧೦೫ ॥

ಮಯಾ ಶಪ್ತೋಽಸ್ಯವಿದಿತೇ ವೃತ್ತಾಂತೇ ದೈತ್ಯನಿರ್ಮಿತೇ ।
ಜ್ಞಾತ್ವಾ ನಾರೀಪ್ರವೇಶಂ ಸಾ ಶಂಕರೇ ರಹಸಿ ಸ್ಥಿತೇ ॥ ೧೦೬ ॥

---

೧೦೧. ಕೋಪವು ಕೀರ್ತಿಯನ್ನು ಹಾಳುಮಾಡುತ್ತದೆ. ಸಂಪತ್ತನ್ನೂ ನಾಶ ಮಾಡುತ್ತದೆ. ವಿಷಯವು ತಿಳಿಯುವಷ್ಟರೊಳಗೆ ಮಗನಿಗೆ ಶಾಪ ಕೊಟ್ಟೆನಲ್ಲ.

೧೦೨-೧೦೩. ವಿಷಯವನ್ನು ವ್ಯತ್ಯಾಸವಾಗಿ ತಿಳಿದುಕೊಂಡವರಿಗೆ ವಿಪತ್ತುಗಳು ಸುಲಭವಾಗಿ ಬರುತ್ತವೆ. ಹೀಗೆಂದು ಯೋಚಿಸಿ ಆ ಪಾರ್ವತಿಯು ಲಜ್ಜೆಯಿಂದ ಕೂಡಿರುವ ಮುಖವುಳ್ಳವಳಾಗಿ ವೀರಕನನ್ನು ಕುರಿತು ಇಂತೆಂದಳು.

೧೦೪. ದೇವಿಯು ಹೇಳಿದಳು-ಎಲೈ ವೀರಕನೇ ! ನಾನು ನಿನ್ನ ತಾಯಿಯು, ಸಂದೇಹವನ್ನು ಬಿಡು. ಶಂಕರನ ಹೆಂಡತಿಯು, ಹಿಮವಂತನ ಮಗಳು.

೧೦೫. ನನ್ನ ದೇಹದ ಕಾಂತಿಯನ್ನು ನೋಡಿ ಸಂದೇಹಿಸಬೇಡ. ತಪಸ್ಸಿನಿಂದ ಸಂತೋಷಪಟ್ಟ ಬ್ರಹ್ಮನು ಈ ಹೊಂಬಣ್ಣವನ್ನು ಕೊಟ್ಟಿದ್ದಾನೆ.

೧೦೬-೧೦೭. ನಾನು ಈ ದೈತ್ಯನು ಮಾಡಿದ ಕೆಲಸದಲ್ಲಿ ಇದು ದೈತ್ಯನೆಂದು ತಿಳಿಯದೇ ಶಂಕರನು ರಹಸ್ಯದಲ್ಲಿರುವಾಗ ಹೆಂಗಸು ಪ್ರವೇಶಿಸಿದಳು. ನಿನ್ನ

ನ ನಿವರ್ತಯಿತುಂ ಶಕ್ಯಶ್ಶಾಪಃ ಕಿಂ ತು ಬ್ರವೀಮಿ ತೇ ।
ಶೀಘ್ರಮೇಷ್ಯತಿ ಮಾನುಷ್ಯಾತ್ಸರ್ವಕಾಮಸಮನ್ವಿತಃ ॥ ೧೦೭ ॥

॥ ಪುಲಸ್ತ್ಯ ಉವಾಚ ॥

ಶಿರಸಾ ತು ತತೋ ವಂದ್ಯ ಮಾತರಂ ಪೂರ್ಣಮಾನಸಃ ।
ಉವಾಚ ಸಾಧ್ವೀಂ ಪೂರ್ಣೇಂದುದ್ಯುತಿಂ ತು ಹಿಮಶೈಲಜಾಂ ॥ ೧೦೮ ॥

॥ ವೀರಕ ಉವಾಚ ॥

ನತಸುರಾಸುರಮೌಳಿಸನ್ಮಣಿ
ಪ್ರಚಯಕಾಂತಿಕರಾಳಿನಖಾಂಘ್ರಿಕೇ ।
ನಗಸುತೇ ಶರಣಾಗತವತ್ಸಲೇ
ತವ ನಮೋಽವನತಾರ್ತಿವಿನಾಶಿನಿ ॥ ೧೦೯ ॥

ತಪನಮಂಡಲಮಂಡಿತಕಂಧರೇ
ಪೃಥುಸುವರ್ಣನಗದ್ಯುತಿಹಾರಿಕೇ ।
ವಿಷಮಭಂಗವಿಷಂಗಮಭೀಷಿತೋ
ಗಿರಿಸುತೇ ಭವತೀಮಹಮಾಶ್ರಯೇ ॥ ೧೧೦ ॥

---

ಅಜಾಗರೂಕತೆಯೇ ಕಾರಣ ಎಂದು ತಿಳಿದು ನಿನಗೆ ಶಾಪವನ್ನು ಕೊಟ್ಟಿದ್ದೇನೆ. ಆ ಶಾಪವನ್ನು ಹಿಂತಿರುಗಿಸಲು ಸಾಧ್ಯವಿಲ್ಲ. ಆದರೆ ಇಷ್ಟನ್ನು ನಿನಗೆ ಹೇಳುತ್ತೇನೆ. ನೀನು ಆ ಮನುಷ್ಯಜನ್ಮದಿಂದ ಅನೇಕ ಇಷ್ಟಾರ್ಥಗಳನ್ನು ಪಡೆದು ಬರುತ್ತೀಯೆ.

೧೦೮. ಪುಲಸ್ತ್ಯನು ಹೇಳಿದನು– ಸಂತೋಷಪಟ್ಟು ಆ ವೀರಕನು ಆಕೆಗೆ ತಲೆಮುಟ್ಟಿ ನಮಸ್ಕರಿಸಿ ಪೂರ್ಣಚಂದ್ರಮುಖಿಯಾದ ಆ ಪಾರ್ವತಿಯನ್ನು ಕುರಿತು ಇಂತೆಂದನು.

೧೦೯. ವೀರಕನು ಹೇಳಿದನು- ನಮಸ್ಕರಿಸುತ್ತಿರುವ ದೇವದೈತ್ಯರ ಕಿರೀಟದ ಮಣಿಗಳ ಗುಂಪಿನ ಕಾಂತಿಯಿಂದ ಕೂಡಿದ ಪಾದಗಳುಳ್ಳವಳೇ ! ಪರ್ವತಪುತ್ರಿ ! ಶರಣಾಗತರಲ್ಲಿ ಪ್ರೀತಿಯುಳ್ಳವಳೇ ! ಶರಣಾಗತರ ದುಃಖವನ್ನು ನಾಶಮಾಡುವವಳೇ ! ನಿನಗೆ ನಮಸ್ಕಾರವು.

೧೧೦. ಸೂರ್ಯಮಂಡಲದಂತಿರುವ ಕತ್ತುಳ್ಳವಳೇ ! ಚಿನ್ನದ ಬೆಟ್ಟವಾದ ಮೇರುವಿನ ಕಾಂತಿಯನ್ನು ತಿರಸ್ಕರಿಸುವವಳೇ ! ಎಲೈ ಗಿರಿಜೆಯೇ ! ಕ್ರೂರವಾದ ಶಾಪವೆಂಬ ಸರ್ಪದಿಂದ ಹೆದರಿದವನಾಗಿ ನಿನ್ನನ್ನು ಆಶ್ರಯಿಸಿದ್ದೇನೆ.

ಜಗತಿ ಕಾ ಪ್ರಣತಾಭಿಮತಾಂ ದದೌ
ಝಟಿತಿ ಸಿದ್ಧಿಮೃತೇ ಭವತೀಂ ಯಥಾ ।
ಜಗತಿ ಕಾಂ ಪ್ರಣಮೇಚ್ಛಶಿಶೇಖರೋ
ಭುವನಭೃನ್ಮುನಯೋ ಭವತೀಂ ಯಥಾ ॥ ೧೧೧ ॥

ವಿಮಲಯೋಗವಿನಿರ್ಮಿತದುರ್ಜಯ
ಸ್ವತನುತುಲ್ಯಮಹೇಶ್ವರಮಂಡಲೀ ।
ವಿದಳಿತಾಂಧಕಬಾಂಧವಸಂಹತಿಃ
ಸುರವರೈಃ ಪ್ರಥಮಂ ತ್ವಮಭಿಷ್ಟುತಾ ॥ ೧೧೨ ॥

ಸಿತಸಟಾಪಟಲೋದ್ಧತಕಂಧರಾ
ಭವಮಹಾಮೃಗರಾಜರಥಸ್ಥಿತಾ ।
ವಿಮಲಶಕ್ತಿಮುಖಾನಲಪಿಂಗಳಾಽಽ
ಯತಭುಜೌಘನಿಪಿಷ್ಟಮಹಾಸುರಾ ॥ ೧೧೩ ॥

---

೧೧೧. ನಮಸ್ಕರಿಸಿದವರಿಗೆ ನೀನು ಇಷ್ಟಾರ್ಥವನ್ನು ಕೊಡುವಂತೆ ಲೋಕದಲ್ಲಿ ಮತ್ತಾರು ಕೊಡುತ್ತಾರೆ ? ಶಿವನೂ ಮಹಾಮುನಿಗಳೂ ನಿನ್ನನ್ನು ನಮಸ್ಕರಿಸುವಂತೆ ಮತ್ತಾರನ್ನು ನಮಸ್ಕರಿಸುವರು?

೧೧೨. ಮೊದಲು ಯೋಗದಿಂದಲೇ ನಿರ್ಮಿತರಾದ, ಶಕ್ತರಾದ, ನಿನ್ನಂತೆಯೇ ಇರುವ ಲೋಕೇಶ್ವರರುಳ್ಳ, ಅಂಧಕಾಸುರನ ಬಾಂಧವರನ್ನು ಕೊಂದ, ನೀನು, ದೇವಾದಿಗಳಿಂದ ಮೊದಲು ಹೊಗಳಲ್ಪಟ್ಟಿದ್ದೀಯೆ.

೧೧೩. ಬೆಳ್ಳಗಿರುವ ಕೇಸರಗಳಿಂದ ಕೂಡಿರುವ ಕತ್ತುಳ್ಳ ಈಶ್ವರನೆಂಬ ಸಿಂಹವುಳ್ಳ ರಥವನ್ನು ಹೊಂದಿರುವ, ಮಹಾಶಕ್ತಿಯೆ ! ಅಗ್ನಿಯನ್ನು ಮುಖದಲ್ಲಿ ಉಳ್ಳವಳಾಗಿ ದೊಡ್ಡದಾದ ಭುಜಗಳಿಂದ ಮಹಾಸುರನನ್ನು ಕೊಂದಿದ್ದೀಯೆ.

ನಿಗದಿತಾ ಭುವನೈರತಿಚಂಡಿಕಾ
ಜನನಿ ಶುಂಭನಿಶುಂಭನಿಷೂದಿನೀ ।
ಪ್ರಣತಚಿಂತಿತದಾ ಭವದಾನವ
ಪ್ರಶಮನೈಕರತಿಸ್ತ್ವರಸಾ ಭುವಿ ॥ ೧೧೪ ॥

ವಿಯತಿ ವಾಯುಪಥೇ ಜ್ವಲನಾಕುಲೇಽ
ವನಿತಲೇ ತವ ದೇವಿ ಚ ಯದ್ವಪುಃ ।
ತದಜಿತೇಽಪ್ರತಿಮೇ ಪ್ರಣಮಾಮ್ಯಯಂ
ಭುವನಭಾವಿನಿ ತೇ ಭವವಲ್ಲಭೇ ॥ ೧೧೫ ॥

ಜಲಧಯೋ ಲಲಿತೋದ್ಧತವೀಚಯೋ
ಹುತವಹದ್ಯುತಿದಗ್ಧಚರಾಚರಂ ।
ಫಣಸಹಸ್ರಭೃತಶ್ಚ ಭುಜಂಗಮಾ
ಸ್ತ್ವಮಭಿಧಾಸ್ಯತಿ ಮಾಮಭಯಂಕರಾ ॥ ೧೧೬ ॥

---

೧೧೪. ಈ ಪ್ರಪಂಚದಲ್ಲಿ ಅತಿಚಂಡಿಕೆಯೆಂದು ಹೆಸರನ್ನು ಹೊಂದಿದ್ದೀಯೆ. ಎಲೈ ತಾಯಿಯೆ! ಶುಂಭನಿಶುಂಭರನ್ನು ಕೊಂದು ಹಾಕಿದ್ದೀಯೆ. ನಮಸ್ಕರಿಸಿದವರಿಗೆ ಇಷ್ಟಾರ್ಥವನ್ನು ಕೊಡುತ್ತೀಯೆ. ಸಂಸಾರವೆಂಬ ದೈತ್ಯರನ್ನು ಕೊಲ್ಲುವುದರಲ್ಲಿ ಆಸಕ್ತಳಾಗಿದ್ದೀಯೆ, ಇಂತಹ ನಿನಗೆ ನಮಸ್ಕಾರವು.

೧೧೫. ಎಲೈ ಮಹಾತಾಯಿಯೇ! ಆಕಾಶ, ವಾಯುಮಂಡಲ, ಅಗ್ನಿಮಂಡಲ, ಭೂಮಂಡಲ, ಇವುಗಳಲ್ಲೆಲ್ಲಾ ನಿನ್ನ ದೇಹವಿದೆ. ನಿನು ಜಯಿಸಲು ಅಶಕ್ಯಳು. ನಿನ್ನ ಸಮಾನರಾರೂ ಇಲ್ಲ. ಪ್ರಪಂಚದಿಂದಲೇ ಗೌರವಿತಳು. ಇಂತಹ ಭವಾನಿಯೇ! ನಿನಗೆ ನಮಸ್ಕಾರವು.

೧೧೬. ದೊಡ್ಡದೊಡ್ಡ ಅಲೆಗಳುಳ್ಳ ಸಮುದ್ರವೂ ನಿನ್ನ ರೂಪವಾದುದೇ. ಈ ಬೆಂಕಿಯಿಂದ ನಾಶವಾದ ಚರಾಚರಗಳೂ ಸಾವಿರ ಹೆಡೆಗಳುಳ್ಳ ಸರ್ಪಗಳೂ ಎಲ್ಲವೂ ನೀನೇ ಆಗಿದ್ದೀಯೆ. ಇಂತಹ ನೀನು ಅಭಯವನ್ನು ಕೊಡುತ್ತಾ ನನಗೆ ಹೇಳುತ್ತಿದ್ದೀಯೆ.

ಭಗವತಿ ಸ್ಥಿತಭಕ್ತಜನಾಶ್ರಯೇ
ಪ್ರತಿಗತೋ ಭವತೀಚರಣಾಶ್ರಯಂ ।
ಕರಣಜಾತಮಿಹಾಸ್ತು ಮಮಾದ್ಯ ವೈ
ತವ ವಿಲಾಸಸುಖಾನುಭವಾಸ್ಪದಂ　　॥ ೧೧೭ ॥

॥ ಪುಲಸ್ತ್ಯ ಉವಾಚ ॥

ಸುಪ್ರಸನ್ನಾ ತತೋ ದೇವೀ ವೀರಕಸ್ಯೇತಿಸಂಸ್ತುತಾ ।
ಪ್ರವಿವೇಶ ಶುಭಂ ಭರ್ತುರ್ಭವನಂ ಭೂಧರಾತ್ಮಜಾ　　॥ ೧೧೮ ॥

ದ್ವಾಸ್ಥೋಽಪಿ ವೀರಕೋ ದೇವಾನ್ಹರದರ್ಶನಾಕಾಂಕ್ಷಿಣಃ ।
ವ್ಯಸರ್ಜಯತ್ಸ್ವಕಾನೇವ ಗೃಹಾನಾದರಪೂರ್ವಕಂ　　॥ ೧೧೯ ॥

ನಾಸ್ತ್ಯತ್ರಾವಸರೋ ದೇವಾ ದೇವ್ಯಾ ಸಹ ವೃಷಾಕಪಿಃ ।
ನಿಭೃತಃ ಕ್ರಿಡತೀತ್ಯುಕ್ತಾ ಯಯುಸ್ತೇ ಚ ಯಥಾಗತಂ　　॥ ೧೨೦ ॥

ಗತೇ ವರ್ಷಸಹಸ್ರೇ ತು ದೇವಾಸ್ತ್ವರಿತಮಾನಸಾಃ ।
ಜ್ವಲನಂ ಚೋದಯಾಮಾಸುರ್ಜ್ಞಾತುಂ ಶಂಕರಚೇಷ್ಟಿತಂ　　॥ ೧೨೧ ॥

---

೧೧೭. ಪೂಜ್ಯಳೇ! ದೃಢವಾಗಿಟ್ಟಿರುವ ಭಕ್ತಿಯುಳ್ಳವರನ್ನೇ ಆಶ್ರಯಿಸಿಕೊಂಡಿರುವಳೇ! ನಿನ್ನ ಪಾದಗಳನ್ನು ಆಶ್ರಯಿಸಿಕೊಂಡಿದ್ದೇನೆ. ನನ್ನ ಕೈಕಾಲುಗಳು ಉಳಿದ ಅವಯವಗಳೂ ಕೂಡ ನಿನ್ನ ಸೇವೆಯನ್ನು ಮಾಡಲಿ.

೧೧೮. ಪುಲಸ್ತ್ಯನು ಹೇಳಿದನು– ವೀರಕನ ಈ ಸ್ತೋತ್ರವನ್ನು ಕೇಳಿ ದೇವಿಯು ಸಂತೋಷಪಟ್ಟು ಅನಂತರ ಗಂಡನಿರುವ ಮನೆಯೊಳಕ್ಕೆ ಹೋದಳು.

೧೧೯. ಅನಂತರ ಬಾಗಿಲನ್ನು ಕಾಯುತ್ತಿದ್ದ ವೀರಕನು ಹರನನ್ನು ನೋಡಲು ಬಂದಿದ್ದ ದೇವತೆಗಳನ್ನು ಗೌರವದಿಂದ ಅವರವರ ಮನೆಗೆ ಕಳುಹಿಸಿದನು.

೧೨೦. ಎಲೈ ದೇವತೆಗಳಿರ! ಈಗ ಸ್ವಾಮಿಯು ದರ್ಶನವನ್ನು ಮಾಡಲಾಗುವುದಿಲ್ಲ. ಆ ಹರನು ದೇವಿಯೊಡನೆ ಕ್ರೀಡಿಸುತ್ತಿದ್ದಾನೆ. ಎಂದೆನಲು ದೇವತೆಗಳು ಬಂದಂತೆ ಹೊರಟುಹೋದರು.

೧೨೧. ಈ ರೀತಿಯಾಗಿ ಸಾವಿರವರ್ಷಗಳು ಕಳೆಯಲು ದೇವತೆಗಳು ಅವಸರಪಟ್ಟು ಶಂಕರನು ಏನು ಮಾಡುತ್ತಿದ್ದಾನೆಂದು ತಿಳಿಯಲು ಅಗ್ನಿಯನ್ನು ಕಳುಹಿಸಿದರು.

ಪ್ರವಿಶ್ಯ ಪಕ್ಷಿರಂಧ್ರೇಣ ಶುಕರೂಪೀ ಹುತಾಶನಃ ।
ಪದರ್ಶ ಶಯನೇ ಶರ್ವಂ ರತೌ ಗಿರಿಜಯಾ ಸಹ ॥ ೧೨೨ ॥

ದದರ್ಶ ತಂ ಚ ದೇವೇಶೋ ಹುತಾಶಂ ಶುಕರೂಪಿಣಂ ।
ತಮುವಾಚ ಮಹಾದೇವಃ ಕಿಂಚಿತ್ಕೋಪಸಮನ್ವಿತಃ ॥ ೧೨೩ ॥

॥ ಶರ್ವ ಉವಾಚ ॥

ನಿಷಿಕ್ತಮರ್ಧಂ ದೇವ್ಯಾಂ ಮೇ ವೀರ್ಯಂಚ ಶುಕವಿಗ್ರಹ ।
ಲಜ್ಜಯಾ ವಿರತಿಶ್ಚಾಸ್ಯ ತ್ವಮರ್ಧಂ ಪಿಬ ಪಾವಕ ॥ ೧೨೪ ॥

ಯಸ್ಮಾತ್ತು ತ್ವತ್ಕೃತೇ ವಿಘ್ನಂ ತಸ್ಮಾತ್ತ್ವಯ್ಯುಪಪದ್ಯತೇ ॥ ೧೨೫ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಃ ಪ್ರಾಂಜಲಿರ್ವಹ್ನಿರಪಿಬದ್ವೀರ್ಯಮಾಹಿತಂ ।
ತೇನಾಪ್ಲುತಾಸ್ತತೋ ದೇವಾಸ್ತನ್ಮುಖಾ ಋುಭವೋ ಯತಃ ॥ ೧೨೬ ॥

---

೧೨೨. ಆ ಅಗ್ನಿಯು ಗಿಳಿಯ ರೂಪವನ್ನು ತಾಳಿ ಗವಾಕ್ಷದಿಂದ ಒಳಗೆ ಹೋಗಿ ಈಶ್ವರನು ಗಿರಿಜೆಯೊಡನೆ ಹಾಸಿಗೆಯಲ್ಲಿ ಮಲಗಿರುವುದನ್ನು ನೋಡಿದನು.

೧೨೩. ಗಿಳಿಯರೂಪದಲ್ಲಿರುವ ಆ ಅಗ್ನಿಯನ್ನು ಮಹಾದೇವನು ನೋಡಿ ಕೋಪಗೊಂಡು ಅವನನ್ನು ಕುರಿತು ಇಂತೆಂದನು.

೧೨೪-೧೨೫. ಈಶ್ವರನು ಹೇಳಿದನು– ಎಲೈ ಶುಕರೂಪಿಯಾದ ಅಗ್ನಿಯೇ ! ಕ್ರೀಡಿಸುತ್ತಿದ್ದಾಗ ನನ್ನ ವೀರ್ಯದ ಅರ್ಧಭಾಗವು ಪಾರ್ವತಿಯ ಯೋನಿಯೊಳಗೆ ಹೋಯಿತು. ಲಜ್ಜೆಯಿಂದ ಅರ್ಧಭಾಗವು ಹೊರಗೆ ಚಲ್ಲಿತು. ಈ ಅರ್ಧವನ್ನು ನೀನು ಕುಡಿ. ನೀನು ಇದಕ್ಕೆ ವಿಘ್ನವನ್ನು ಮಾಡಿದುದರಿಂದ ನೀನು ಕುಡಿಯ ತಕ್ಕದ್ದು ಯೋಗ್ಯವಾಗಿದೆ.

೧೨೬. ಪುಲಸ್ತ್ಯನು ಹೇಳಿದನು– ಈಶ್ವರನು ಹೀಗೆನ್ನುತ್ತಲೂ ಆ ಉಳಿದ ವೀರ್ಯವನ್ನು ಅಗ್ನಿಯು ಕುಡಿದನು. ಅದನ್ನು ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ಹಂಚುವಂತೆ ಹಂಚಿದನು. ಅಗ್ನಿಯು ಮುಖವಷ್ಟೇ, ದೇವತೆಗಳು, ಅವರು ಶಂಕರ ನನ್ನು ನೋಡಲು ಗಲ್ಲಿಗೆ ಬಂದಿದ್ದರು.

ವಿಪಾಟ್ಯ ಜಠರಂ ತೇಷಾಂ ವೀರ್ಯಂ ಮಾಹೇಶ್ವರಂ ತತಃ ।
ನಿಷ್ಕ್ರಾಂತಂ ತಪ್ತಹೇಮಾಭಂ ಪತಿತೇ ಶಂಕರಾಶ್ರಮೇ ॥ ೧೨೭ ॥

ತಸ್ಮಿನ್ಸರೋ ಮಹಜ್ಜಾತಂ ವಿಮಲಂ ಬಹುಯೋಜನಂ ।
ಪ್ರೋತ್ಫುಲ್ಲಹೇಮಕಮಲಂ ನಾನಾವಿಹಗನಾದಿತಂ ॥ ೧೨೮ ॥

ತಚ್ಛ್ರುತ್ವಾ ತು ಸರೋ ದೇವೀ ಜಾತಂ ಹೇಮಮಹಾಂಬುಜಂ ।
ಜಗಾಮ ಕೌತುಕಾವಿಷ್ಟಾ ತತ್ಸರಃ ಕನಕಾಂಬುಜಂ ॥ ೧೨೯ ॥

ತತ್ರ ಕೃತ್ವಾ ಜಲಕ್ರೀಡಾಂ ತದಬ್ಜಕೃತಶೇಖರಾ ।
ಉಪವಿಷ್ಟಾ ತತಸ್ತಸ್ಯ ತೀರೇ ದೇವೀ ಸಖೀವೃತಾ ॥ ೧೩೦ ॥

ಪಾತುಕಾಮಾ ಚ ತತ್ತೋಯಂ ಸ್ವಾದುನಿರ್ಮಲಪಂಕಜಂ ।
ಅಪಶ್ಯತ್ಕೃತ್ತಿಕಾಸ್ತಾಸ್ಸಾ ಷಡರ್ಕದ್ಯುತಿಸನ್ನಿಭಾಃ ॥ ೧೩೧ ॥

ಪದ್ಮಪತ್ರೇ ತು ತದ್ವಾರಿ ಗೃಹೀತ್ವಾ ಪ್ರಸ್ಥಿತಾ ಗೃಹಂ ।
ಹರ್ಷಾತ್ತ್ವೋವಾಚ ಪಶ್ಯಾಮಿ ಪದ್ಮಪತ್ರೇ ಸ್ಥಿತಂ ಪಯಃ ॥ ೧೩೨ ॥

---

೧೨೭. ಆ ಮಹೇಶ್ವರನ ಚಿನ್ನದ ಬಣ್ಣವುಳ್ಳ ವೀರ್ಯವು ದೇವತೆಗಳ ಹೊಟ್ಟೆಯನ್ನು ಸೀಳಿಕೊಂಡು ಹೊರಕ್ಕೆ ಬಂದು ಆ ಶಂಕರಾಶ್ರಮದಲ್ಲಿಯೇ ಬಿದ್ದಿತು.

೧೨೮. ಆ ಆಶ್ರಮದಲ್ಲಿ ಒಂದು ಕೊಳವಿದ್ದಿತು. ಅದರ ನೀರು ನಿರ್ಮಲವಾಗಿಯೂ ಆ ಕೊಳವು ಬಹು ದೊಡ್ಡದಾಗಿಯೂ ಇದ್ದಿತು. ಅದರಲ್ಲಿ ಅನೇಕ ನೀರುಹಕ್ಕಿಗಳೂ ಇದ್ದುವು. ಆ ವೀರ್ಯವು ಅದರಲ್ಲಿ ಸೇರಿತು. ಅದು ಸೇರಿದಮೇಲೆ ಅನೇಕವಾದ ಚಿನ್ನದ ಕಮಲಗಳು ಹುಟ್ಟಿದುವು.

೧೨೯. ಆ ಸರೋವರದಲ್ಲಿ ಚಿನ್ನದ ಕಮಲಗಳು ಹುಟ್ಟಿದುದನ್ನು ಕೇಳಿ ಆ ಪಾರ್ವತಿಯು ಆ ಚಿನ್ನದ ಕಮಲಗಳನ್ನು ನೋಡಲು ಅಲ್ಲಿಗೆ ಹೋದಳು.

೧೩೦. ಆ ಕೊಳದಲ್ಲಿ ಸಖಿಯರೊಡನೆ ಜಲಕ್ರೀಡೆಯಾಡಿ ಅದರಲ್ಲಿದ್ದ ಕಮಲವನ್ನು ಮುಡಿದುಕೊಂಡು ಅದರ ತೀರದಲ್ಲಿ ಸಖಿಯರೊಡನೆ ಕುಳಿತುಕೊಂಡಿದ್ದಳು.

೧೩೧-೧೩೨. ಮತ್ತು ಅದರ ರುಚಿಯೂ ಸುವಾಸನೆಯೂ ಆದ ನೀರನ್ನು ಕುಡಿಯಲು ಅಪೇಕ್ಷಿಸಿದಳು. ಆಕೆಯು ಅಲ್ಲಿಗೆ ಬಂದಿದ್ದ ಸೂರ್ಯನಂತೆ ಕಾಂತಿಯುಳ್ಳ ಆರು ಜನ ಕೃತ್ತಿಕಾದೇವಿಯರನ್ನು ನೋಡಿದಳು. ಅವರು ಪದ್ಮದ ಎಲೆಯಲ್ಲಿ ನೀರನ್ನು ತೆಗೆದುಕೊಂಡು ಮನೆಗೆ ಹೆಕೇಗುತ್ತಿನ್ದರು ನೋಡೋಣ ಎಂದು ಪಾರ್ವ

ತತಸ್ತಾ ಊಚುರಖಿಲಾಃ ಕೃತ್ತಿಕಾ ಹಿಮಶೈಲಜಾಂ ॥ ೧೩೩ ॥

॥ ಕೃತ್ತಿಕಾ ಊಚುಃ ॥

ದಾಸ್ಯಾಮೋ ದಯಿತೇ ಗರ್ಭೇ ಸಂಭೂತೋ ಯೋ ಭವಿಷ್ಯತಿ ।
ಸೋಽಸ್ಮಾಕಮಪಿ ಪುತ್ರಸ್ಸ್ಯಾದಸ್ಮತ್ತ್ರಾತಾ ಚ ವೃತ್ತಿಮಾನ್ ।
ತ್ರಿಷು ಲೋಕೇಷು ವಿಖ್ಯಾತೋ ಸರ್ವೇಷ್ವಪಿ ಶುಭಾನನೇ ॥ ೧೩೪ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತೋವಾಚ ಗಿರಿಜಾ ಕಥಂ ಮದ್ಗಾತ್ರಸಂಭವೈಃ ।
ಸರ್ವೈರವಯವೈರ್ಯುಕ್ತೋ ಭವತೀಭ್ಯಃ ಸುತೋ ಭವೇತ್ ॥ ೧೩೫ ॥

ತತಸ್ತಾಂ ಕೃತ್ತಿಕಾ ಊಚುರ್ವಿಧಾಸ್ಯಾಮೋಽಸ್ಯ ವೈ ವಯಂ ।
ಉತ್ತಮಾನ್ಯುತ್ತಮಾಂಗಾನಿ ಯದ್ಯೇವಂ ತು ಭವಿಷ್ಯತಿ ॥ ೧೩೬ ॥

ಉಕ್ತಾ ವೈ ಶೈಲಜಾ ಪ್ರಾಹ ಭವತ್ವೇವಮನಿಂದಿತಾಃ ।
ತತಸ್ತಾ ಹರ್ಷಸಂಪೂರ್ಣಾಃ ಪದ್ಮಪತ್ರಸ್ಥಿತಂ ಪಯಃ ॥ ೧೩೭ ॥

---

ತಿಯು ಸಂತೋಷದಿಂದ ಈ ಎಲೆಯಲ್ಲಿರುವ ನೀರು ಎಷ್ಟು ಚೆನ್ನಾಗಿದೆ, ನೋಡೋಣ ಎಂದು ಕೇಳಿದಳು. ಆಗ ಕೃತ್ತಿಕಾದೇವಿಯರು ಆಕೆಯನ್ನು ಕುರಿತು ಇಂತೆಂದರು.

೧೩೪. ಕೃತ್ತಿಕೆಗಳು ಹೇಳಿದರು– ಅಮ್ಮ ! ನಿನಗೆ ಎರಡು ಗರ್ಭಗಳನ್ನು ಕೊಡುತ್ತೇವೆ. ಅವೆರಡರಿಂದಲೂ ಒಬ್ಬ ಮಗನು ಆಗುವನು. ಅವನು ನಮಗೂ ಮಗನಾಗುತ್ತಾನೆ. ನಮ್ಮನ್ನೂ ಕಾಪಾಡುತ್ತಾನೆ. ಒಳ್ಳೆಯ ಸ್ಥಿತಿಯಲ್ಲಿರುತ್ತಾನೆ. ಮೂರು ಲೋಕದಲ್ಲಿಯೂ ಎಲ್ಲರಲ್ಲಿಯೂ ಖ್ಯಾತನಾಗಿರುತ್ತಾನೆ.

೧೩೫. ಪುಲಸ್ತ್ಯನು ಹೇಳಿದನು- ಇದನ್ನು ಕೇಳಿ ಪಾರ್ವತಿಯು ನನ್ನ ದೇಹದಲ್ಲಿ ಎಲ್ಲಾ ಅವಯುವಗಳನ್ನೂ ಹೊಂದಿ ಹುಟ್ಟುವ ಅವನು ನಿಮಗೆಂತು ಮಗನಾಗುವನು ?

೧೩೬. ಆಗ ಕೃತ್ತಿಕೆಯರು ಅಮ್ಮ ! ಈತನಿಗೆ ನಾವು ಉತ್ತಮವಾಗಿರುವ ತಲೆಯನ್ನು ಮಾಡುತ್ತೇವೆ. ಅದರಿಂದ ನಮಗೆ ಮಗನಾಗುವನು. ಎಂದರು.

೧೩೭-೧೩೯. ಅವರು ಇಂತೆನ್ನಲು ಪಾರ್ವತಿಯು ನೀವು ಹೇಳಿದಂತೆಯೇ ಆಗಲಿ ಎಂದಳು. ಅದಕ್ಕೆ ಅವರು ಸಂತೋಷಪಟ್ಟು ಆ ಕಮಲದ ಎಲೆಯಲ್ಲಿದ್ದ

ತಸ್ಯೈ ದದುಸ್ತ್ರಯಾ ಚಾಪಿ ತತ್ಪೀತಂ ಕ್ರಮಶೋ ಜಲಂ ।
ಪೀತೇ ತು ಸಲಿಲೇ ಚೈವ ತಸ್ಮಿನ್ನೇವ ಕ್ಷಣೇ ವರಃ ॥ ೧೩೮ ॥

ವಿಪಾಟ್ಯ ದೇವ್ಯಾಶ್ಚ ತತೋ ದಕ್ಷಿಣಂ ಕುಕ್ಷಿಮುದ್ಗತಃ ।
ನಿಶ್ಚಕ್ರಾಮಾದ್ಭುತೋ ಬಾಲೋ ರೋಗಶೋಕವಿನಾಶನಃ ॥ ೧೩೯ ॥

ಪ್ರಭಾಕರಕರವ್ರಾತಪ್ರಕಾರಪ್ರಕರಪ್ರಭುಃ ।
ಗೃಹೀತ ನಿರ್ಮಲೋದಗ್ರಶಕ್ತಿಶೂಲಾಂಕುಶೋನಲಃ ॥ ೧೪೦ ॥

ದೀಪ್ತೋಮಾರಯಿತುಂ ದೈತ್ಯಾನುಸ್ಥಿತಃ ಕನಕದ್ಯುತಿಃ ।
ಏತಸ್ಮಾತ್ಕಾರಣಾದೇವ ಕುಮಾರಶ್ಚಾಪಿ ಸೋಭವತ್ ॥ ೧೪೧ ॥

ವಾಮಂ ವಿದಾರ್ಯ ನಿಷ್ಕ್ರಾಂತಸ್ತತೋ ದೇವ್ಯಾಶ್ಶುಭಶ್ಶಿಶುಃ ।
ಸ್ಕಂದೋಥ ವದನಾದ್ವಹ್ನೇಶ್ಶುಭ್ರಾಚ್ಛದ್ವದನೋರಿಹಾ ॥ ೧೪೨ ॥

---

ನೀರನ್ನು ಅವಳಿಗೆ ಕೊಟ್ಟರು. ಅವಳೂ ಕೂಡ ಆ ನೀರನ್ನು ಕುಡಿದಳು. ಆ ನೀರನ್ನು ಕುಡಿಯುತ್ತಲೂ ಒಡನೆಯೇ ಒಬ್ಬ ಉತ್ತಮನಾದ ಬಾಲನು ಆ ದೇವಿಯ ಬಲಭಾಗದ ಹೊಟ್ಟೆಯನ್ನು ಸೀಳಿ ಹೊರಗೆ ಬಂದನು. ಅವನು ರೋಗ ದುಃಖಗಳನ್ನು ನಾಶ ಮಾಡುವವನಾಗಿದ್ದನು.

೧೪೦-೧೪೧. ಸೂರ್ಯನ ಕಿರಣಗಳ ಗುಂಪಿನಂತೆ ಕಾಂತಿಯುಳ್ಳ ನಿರ್ಮಲವಾಗಿಯೂ ದೊಡ್ಡದಾಗಿಯೂ ಇರುವ, ಶಕ್ತಿಶೂಲಅಂಕುಶವೆಂಬ ಆಯುಧಗಳುಳ್ಳ, ಬೆಂಕಿಯಂತೆ ಪ್ರಕಾಶಮಾನನಾದ, ಹೊಂಬಣ್ಣವಾಗಿರುವ, ಒಬ್ಬ ಮಗನು ದೈತ್ಯರನ್ನು ಕೊಲ್ಲಲು ಹುಟ್ಟಿದನು. ಹೀಗೆ ಅವನು ಮನ್ಮಥನನ್ನು ತಿರಸ್ಕರಿಸುವ ಕಾಂತಿಯುಳ್ಳವನಾದುದರಿಂದಲೇ ಕುಮಾರ (ಮಾರ- ಮನ್ಮಥನ್ನು, ಕು- ತಿರಸ್ಕರಿಸುವವನು) ನೆನಿಸಿಕೊಂಡನು.

೧೪೨. ಅನಂತರ ಆ ಪಾರ್ವತಿಯ ಎಡ ಹೊಟ್ಟೆಯಿಂದ ಮತ್ತೊಂದು ಮಗುವು ಹುಟ್ಟಿತು. ಇದು ಅಗ್ನಿಯ ಬಾಯಿಂದ ಬಿದ್ದುದರಿಂದ ಸ್ಕಂದ (ಬಿದ್ದವ) ನೆಂದು ಹೆಸರಾಯಿತು. ಅದಕ್ಕೆ ಆರು ಮುಖಗಳಿದ್ದವು.

ಕೃತ್ತಿಕಾ ಸಲಿಲಾದೇವ ಶಾಖಾಭಿಸ್ಸವಿಶೇಷತಃ ।
ಶಾಖಾಶ್ಚಿವಾಸ್ಸಮಾಖ್ಯಾತಾಷ್ಷಡ್ವಕ್ತ್ರೇಷು ಚ ವಿಸ್ತೃತಾಃ ॥ ೧೪೩ ॥

ಯತಸ್ತತೋ ವಿಶಾಖೋಽಸೌ ಖ್ಯಾತೋ ಲೋಕೇಷು ಷಣ್ಮುಖಃ ।
ಸ್ಕಂಧೋ ವಿಶಾಖಷ್ಷಡ್ವಕ್ತ್ರಃ ಕಾರ್ತಿಕೇಯಶ್ಚ ವಿಶ್ರುತಃ ॥ ೧೪೪ ॥

ಪಕ್ಷೇ ಚೈತ್ರಸ್ಯ ಬಹುಳೇ ಪಂಚದಶ್ಯಾಂ ಮಹಾಬಲೌ ।
ಸಂಭೂತಾವರ್ಕಸದೃಶೌ ವಿಶಾಲೇ ಶರಕಾನನೇ ॥ ೧೪೫ ॥

ಸಿತಪಕ್ಷೇ ತು ಪಂಚಮ್ಯಾಂ ತಥೈತೌ ಪಾವಕಾನಲೌ ।
ಬಾಲಕಾಭ್ಯಾಂ ಚಕಾರೈಕಂ ಸಂಧ್ಯಾಯಾಮೇವ ಭೂತಯೇ ॥ ೧೪೬ ॥

ತಸ್ಯಾಮೇವ ತತಷ್ಷಷ್ಠ್ಯಾಮಭಿಷಿಕ್ತೋ ಗುಹಃ ಪ್ರಭುಃ ।
ಸರ್ವೈರಮಲಸಂಘಾತೈರ್ಬ್ರಹ್ಮೋಪೇಂದ್ರೇಂದ್ರಭಾಸ್ಕರೈಃ ॥ ೧೪೭ ॥

ಗಂಧಮಾಲ್ಯೈಶ್ಶುಭೈರ್ಧೂಪೈಸ್ತಥಾ ಕ್ರೀಡನಕೈರಪಿ ।
ಛತ್ರೈಶ್ಚಾಮರಜಾತೈಶ್ಚ ಭೂಷಣೈಶ್ಚ ವಿಲೇಪನೈಃ ॥ ೧೪೮ ॥

---

೧೪೩-೧೪೪. ಕೃತ್ತಿಕೆಯರು ಕೊಟ್ಟ ನೀರಿನಿಂದಲೂ ಶಾಖೆಗಳಿಂದಲೂ ಈತನು ಹುಟ್ಟಿದನು. ಶಾಖೆಗಳೆಂದರೆ ಮಂಗಳಗಳೆಂದು ಪ್ರಸಿದ್ಧವಾಗಿವೆ. ಆ ಮಂಗಳವು ಆರು ಮುಖಗಳಲ್ಲಿಯೂ ಹರಡಿಕೊಂಡಿತು. ಆದ್ದರಿಂದಲೇ ವಿಸ್ತಾರವಾದ, ಶಾಖೆ, ಮಂಗಳಗಳುಳ್ಳವನು ವಿಶಾಖನು ಎಂದು ಹೆಸರನ್ನು ಪಡೆದನು ಈತನಿಗೆ ಸ್ಕಂದ, ವಿಶಾಖ, ಷಡ್ವಕ್ತ್ರ, ಕಾರ್ತಿಕೇಯ, ಎಂದು ಹೆಸರುಗಳು ಬಂದುವು.

೧೪೫ ಚೈತ್ರ ಬಹುಳ ಅಮಾವಾಸ್ಯೆಯ ದಿನ ಈ ಬಲಿಷ್ಠರಾವ ಸೂರ್ಯಸದೃಶರಾದ ಮಕ್ಕಳು ಜೊಂಡಿನ ಕಾಡಿನಲ್ಲಿ ಹುಟ್ಟಿದರು.

೧೪೬. ವೈಶಾಖ ಶುದ್ಧ ಪಂಚಮಿಯ ದಿನ ಸಾಯಂಕಾಲದಲ್ಲಿ ಬೇರೆ ಬೇರೆಯಾದ ಆ ಎರಡು ಮಕ್ಕಳೂ ಒಂದು ಗೂಡಿದರು.

೧೪೭-೧೫೦. ಆ ವೈಶಾಖ ಶುದ್ಧ ಷಷ್ಠಿಯ ದಿನವೇ ಈ ಷಣ್ಮುಖನಿಗೆ ಬ್ರಹ್ಮ ಇಂದ್ರ, ವಿಷ್ಣು, ಸೂರ್ಯ, ಮುಂತಾದ ದೇವತೆಗಳು ಪಟ್ಟಾಭಿಷೇಕಮಾಡಿದರು ಗಂಧ ಹೂ, ಧೂಪ, ಆಟದ ಸಾಮಾನುಗಳು, ಛತ್ರಗಳೂ, ಚಾಮರಗಳೂ, ಒಡವೆಗಳೂ, ಅಂಗರಾಗಗಳೂ, ಇವುಗಳೆಲ್ಲವನ್ನೂ ಕೊಟ್ಟು ದೇವತೆಗಳು ಬಹು ಅಕ್ಕರೆಯಿಂದ

ಅಭಿಷಿಕ್ತೋಽವಧಾನೇನ ಯಥಾವತ್ ಷಣ್ಮುಖಃ ಪ್ರಭುಃ ।
ಸುತಾಮಸ್ಮೈ ದದೌ ಶಕ್ರೋ ದೇವಸೇನೇತಿ ವಿಶ್ರುತಾಂ ॥ ೧೪೯ ॥

ಪತ್ನ್ಯರ್ಥಂ ದೇವದೇವಸ್ಯ ದದೌ ವಿಷ್ಣುರಥಾಯುಧಂ ।
ಯಕ್ಷಾಣಾಂ ದಶಲಕ್ಷಾಣಿ ದದಾವಸ್ಯ ಧನಾಧಿಪಃ ॥ ೧೫೦ ॥

ದದೌ ಹುತಾಶನಸ್ತೇಜೋ ದದೌ ವಾಯುಶ್ಚ ವಾಹನಂ ।
ದದೌ ಕ್ರೀಡನಕಂ ತ್ವಷ್ಟಾ ಕುಕ್ಕುಟಂ ಕಾಮರೂಪಿಣಂ ॥ ೧೫೧ ॥

ಏವಂ ಸುರಾಸ್ತು ತೇ ಸರ್ವೇ ಪರಿವಾರಮನಂತರಂ ।
ದದೌ ಮುದಿತಚೇತಸ್ಕಾಃ ಸ್ಕಂದಾಯಾದಿತ್ಯವರ್ಚಸೇ ॥ ೧೫೨ ॥

ಜಾನುಭ್ಯಾಮವನೌ ಸ್ಥಿತ್ವಾ ಸುರಸಂಘಾಸ್ತಮಸ್ತುವನ್ ।
ಸ್ತೋತ್ರೇಣಾನೇನ ವರದಂ ಷಣ್ಮುಖಂ ಮುಖ್ಯತಸ್ಸುರಾಃ ॥ ೧೫೩ ॥

---

ಅಭಿಷೇಕಮಾಡಿದರು. ಅನಂತರ ಇಂದ್ರನು ದೇವಸೇನೆಯೆಂಬ ಮಗಳನ್ನು ಕೊಟ್ಟು ಮದುವೆಮಾಡಿದನು. ವಿಷ್ಣುವು ಆಯುಧವನ್ನು ಕೊಟ್ಟನು. ಕುಬೇರನು ಹತ್ತುಲಕ್ಷ ಯಕ್ಷರನ್ನು ಸೇವಕರನ್ನಾಗಿ ಕೊಟ್ಟನು.

೧೫೧. ಅಗ್ನಿಯು ತೇಜಸ್ಸನ್ನೂ, ವಾಯುವು ವಾಹನವನ್ನೂ, ತ್ವಷ್ಟನು ಕಾಮರೂಪವುಳ್ಳ ಆಟದ ಕೋಳಿಯನ್ನೂ ಕೊಟ್ಟರು.

೧೫೨. ಅನಂತರ ದೇವತೆಗಳೆಲ್ಲರೂ ಪರಿವಾರಗಳನ್ನು ಸಂತೋಷದಿಂದ ಆತನಿಗೆ ಕೊಟ್ಟರು.

೧೫೩. ಆ ದೇವತೆಗಳೆಲ್ಲರೂ ನೆಲಕ್ಕೆ ಮಂಡಿಯನ್ನೂರಿಕೊಂಡು ಆ ಷಣ್ಮುಖನನ್ನು ಮುಂದೆ ಹೇಳುವ ರೀತಿಯಲ್ಲಿ ಸ್ತೋತ್ರಮಾಡಿದರು.

॥ ದೇವಾ ಊಚುಃ ॥

ನಮಃ ಕುಮಾರಾಯ ಮಹಾಪ್ರಭಾಯ
ಸ್ಕಂದಾಯ ಚಾಸ್ಕಂದಿತದಾನವಾಯ ।
ನವಾರ್ಕಬಿಂಬಪ್ರತಿಮಪ್ರಭಾಯ
ನಮೋಽಸ್ತು ತೇ ಷಣ್ಮುಖ ಕಾಮರೂಪ ॥ ೧೫೪ ॥

ಪಿನದ್ಧನಾನಾಭರಣಾಯ ತುಭ್ಯಂ
ನಮೋ ರಣೋದಾರಮುದಾರಸಾಯ ।
ನಮೋಽಸ್ತು ತೇಽರ್ಕಪ್ರತಿಮಪ್ರಭಾಯ
ನಮೋಽಸ್ತು ಗುಹ್ಯಾಯ ಗುಹಾಯ ತುಭ್ಯಂ ॥ ೧೫೫ ॥

ನಮೋಽಸ್ತು ತೇ ಲೋಕಭಯಾಪಹಾಯ
ನಮೋಽಸ್ತು ತೇ ಲೋಕಕೃಪಾಪರಾಯ ।
ನಮೋ ವಿಶಾಲಾಮಲಲೋಚನಾಯ
ನಮೋ ವಿಶಾಖಾಯ ಮಹಾವ್ರತಾಯ ॥ ೧೫೬ ॥

---

೧೫೪. ದೇವತೆಗಳು ಹೇಳಿದರು– ಮಹಾಕಾಂತಿಯುಳ್ಳ ಕುಮಾರನಿಗೆ ನಮಸ್ಕಾರವು. ಸ್ಕಂದನಿಗೆ ನಮಸ್ಕಾರವು. ದಾನವರ ಮೇಲೆ ಬೀಳುವ ಸ್ವಾಮಿಗೆ ನಮಸ್ಕಾರವು. ಬಾಲಸೂರ್ಯನಂತೆ ಕಾಂತಿಗಳುಳ್ಳ ಸ್ವಾಮಿಗೆ ನಮಸ್ಕಾರವು. ಎಲೈ ಕಾಮರೂಪನಾದ ಷಣ್ಮುಖನೇ ! ನಿನಗೆ ನಮಸ್ಕಾರವು.

೧೫೫. ಅನೇಕ ಒಡವೆಗಳನ್ನು ಕಟ್ಟಿಕೊಂಡಿರುವ ನಿನಗೆ ನಮಸ್ಕಾರವು. ರಣದಲ್ಲಿ ಆಸಕ್ತಿಯುಳ್ಳ ಸ್ವಾಮಿಗೆ ನಮಸ್ಕಾರವು. ಸೂರ್ಯನಂತೆ ತೇಜಸ್ಸುಳ್ಳ ಸ್ವಾಮಿಗೆ ನಮಸ್ಕಾರವು. ಗುಹ್ಯನೂ ಗುಹನೂ ಆದ ನಿನಗೆ ನಮಸ್ಕಾರವು.

೧೫೬. ಲೋಕದ ಭಯುವನ್ನು ನಾಶಮಾಡುವ ನಿನಗೆ ನಮಸ್ಕಾರವು. ಲೋಕನ ಕೃಪೆಗೆ ಪಾತ್ರನಾದ ನಿನಗೆ ನಮಸ್ಕಾರವು. ದೊಡ್ಡದಾಗಿಯೂ ನಿರ್ಮಲವಾಗಿಯೂ ಇರುವ ಕಣ್ಣುಗಳುಳ್ಳ ಸ್ವಾಮಿಗೆ ನಮಸ್ಕಾರವು. ವಿಶಾಖನೂ ಮಹಾವ್ರತನೂ ಆದ ಸ್ವಾಮಿಗೆ ನಮಸ್ಕಾರವು.

ನಮೋ ನಮಸ್ತೇಽಸ್ತು ರಣೋತ್ಕಟಾಯ
ನಮೋ ಮಯೂರೋಜ್ವಲವಾಹನಾಯ ।
ನಮೋಽಸ್ತು ಕೇಯೂರಧರಾಯ ತುಭ್ಯಂ
ನಮೋ ಧೃತೋದಗ್ರಪತಾಕಿನೇ ತೇ ॥
ನಮಃ ಪ್ರಭಾವಪ್ರಣತಾಯ ತೇಽಸ್ತು
ನಮೋಽಸ್ತು ಘಂಟಾಧರ ಧೈರ್ಯಶಾಲಿನೇ ॥ ೧೫೭ ॥

॥ ಕುಮಾರ ಉವಾಚ ॥

ಕಂ ವಃ ಕಾಮಂ ಪ್ರಯಚ್ಛಾಮಿ ಭವತಾಂ ಬ್ರೂತ ನಿರ್ವೃತಾಃ ।
ಯದ್ಯಪ್ಯಸಾಧ್ಯಂ ಕೃತ್ಯಂ ವೋ ಹೃದಯೇ ಚಿಂತಿತಂ ಚಿರಂ ॥ ೧೫೮ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಾಸ್ತು ಸುರಾಸ್ತೇನ ಪ್ರೋಚುಃ ಪ್ರಣತಮೌಳಯಃ ।
ಸರ್ವ ಏವ ಮಹಾತ್ಮಾನಂ ಗುಹಂ ಮುದಿತಮಾನಸಾಃ ॥ ೧೫೯ ॥

---

೧೫೭. ರಣದಲ್ಲಿ ಆಸಕ್ತನಾದ ನಿನಗೆ ನಮಸ್ಕಾರವು. ಮಯೂರ ವಾಹನನಾದ ನಿನಗೆ ನಮಸ್ಕಾರವು ಭುಜಕೀರ್ತಿಯನ್ನು ಧರಿಸಿರುವ ನಿನಗೆ ನಮಸ್ಕಾರವು. ಉತ್ತಮವಾದ ಪತಾಕೆಯನ್ನು ಹಿಡಿದಿರುವ ನಿನಗೆ ನಮಸ್ಕಾರವು. ಪ್ರಭಾವಶಾಲಿಯಾದ ನಿನಗೆ ನಮಸ್ಕಾರವು. ಘಂಟೆಯನ್ನು ಧರಿಸಿರುವ ಧೈರ್ಯಶಾಲಿಯಾದ ನಿನಗೆ ನಮಸ್ಕಾರವು.

೧೫೮. ಕುಮಾರನು ಹೇಳಿದನು– ನಿಮಗೆ ಯಾವ ಇಷ್ಟಾರ್ಥವನ್ನು ಪೂರ್ತಿ ಮಾಡಲಿ. ಹೇಳಿ, ಯೋಚನೆ ಮಾಡಬೇಡಿ. ನೀವು ಅಸಾಧ್ಯವೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದರೂ ಕೂಡ ಹೇಳಿರಿ. ಅದನ್ನು ಮಾಡಿಕೊಡುತ್ತೇನೆ.

೧೫೯. ಪುಲಸ್ತ್ಯನು ಹೇಳಿದನು– ಅವನು ಹೀಗೆನ್ನುತ್ತಲೂ ಸಂತೋಷದಿಂದ ಆ ದೇವತೆಗಳು ಕೈಮುಗಿದುಕೊಂಡು ಆ ಗುಹನಿಗಿಂತೆಂದರು.

॥ ದೇವಾ ಊಚುಃ ॥

ದೈತ್ಯೇಂದ್ರಸ್ತಾರಕೋ ನಾಮ ಸರ್ವಾಮರಕುಲಾಂತಕೃತ್ ।
ಬಲವಾನ್ದುರ್ಜಯಸ್ತ್ರೀಕ್ಷ್ಣೋ ದುರಾಚಾರೋತಿಕೋಪನಃ ॥ ೧೬೦ ॥

ತಮೇವ ಜಹಿ ದುರ್ಧರ್ಷಂ ದೈತ್ಯಂ ಸರ್ವವಿನಾಶನಂ ।
ಉಪಸ್ಥಿತಃ ಕೃತ್ಯಶೇಷೋ ಅಸ್ಮಾಕಂ ಚ ಭಯಾವಹಃ ॥ ೧೬೧ ॥

ಹಿರಣ್ಯಕಶಿಪುಶ್ಚೋಗ್ರೋ ಅವಧ್ಯೋ ದೇವತಾಗಣೈಃ ।
ಯಜ್ಞಘ್ನಃ ಪಾಪಕರ್ಮಾ ವೈ ಯೇನ ಬ್ರಹ್ಮಾಪಿ ತಾಪಿತಃ ॥
ಏತೌ ಪರಸ್ವ ಭದ್ರಂ ತೇ ತಾವಕಂ ಚ ಮಹಾಬಲಂ ॥ ೧೬೨ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಸ್ತಥೇತ್ಯುಕ್ತ್ವಾ ಸರ್ವಾಮರಪದಾನುಗಃ ।
ಜಗಾಮ ಜಗತಾಂ ನಾಥಸ್ತೂಯಮಾನೋಽಸುರೇಶ್ವರೈಃ ॥ ೧೬೩ ॥

ತಾರಕಸ್ಯ ವಧಾರ್ಥಾಯ ಜಗತಾಂ ಕಂಟಕಸ್ಯ ಚ ।
ತತಶ್ಚ ಪ್ರೇಷಯಾಮಾಸ ಶಕ್ರೋ ಲಬ್ಧಸಮಾಶ್ರಯಃ ॥ ೧೬೪ ॥

---

೧೬೦. ದೇವತೆಗಳು ಹೇಳಿದರು– ತಾರಕನೆಂಬೊಬ್ಬ ದೈತ್ಯನಿರುವನು. ದೇವತೆಗಳಿಗೆಲ್ಲಾ ಶತ್ರುವು. ಬಲಿಷ್ಠನು. ಜಯಿಸಲಸಾಧ್ಯನು. ಕ್ರೂರಿಯು. ದುರಾಚಾರಿಯು. ಬಹು ಕೋಪಿಯು

೧೬೧. ಸರ್ವರನ್ನೂ ನಾಶಮಾಡುವ ಆ ಶಕ್ತನಾದ ದೈತ್ಯನನ್ನು ನಾಶಮಾಡು. ಅದೊಂದೇ ಕೆಲಸವು ಈಗ ನಿಂತಿರುವುದು. ನಮಗೆ ಬಹು ಭಯವಾಗಿದೆ.

೧೬೨. ಹಿರಣ್ಯಕಶಿಪು ಎಂಬ ಮತ್ತೊಬ್ಬ ದೈತ್ಯನಿರುವನು. ಅವನು ದೇವತೆಗಳಿಗೂ ಅವಧ್ಯನು. ಯಜ್ಞಗಳನ್ನೆಲ್ಲಾ ನಾಶಮಾಡುವನು. ಪಾಪಿಯು. ಬ್ರಹ್ಮನನ್ನೂ ತೊಂದರೆಪಡಿಸಿದನು. ಇವರಿಬ್ಬರನ್ನೂ ನಾಶಮಾಡು. ನಿನ್ನ ಬಲವು ಬಹು ಹೆಚ್ಚಾದುದು.

೧೬೩-೧೬೪. ಪುಲಸ್ತ್ಯನು ಹೇಳಿದನು- ಹೀಗೆನ್ನಲು ಹಾಗೆ ಆಗಲೆಂದು ಹೇಳಿ ದೇವತೆಗಳೆಲ್ಲರನ್ನೂ ಕರೆದುಕೊಂಡು ಅವರಿಂದ ಹೊಗಳಿಸಿಕೊಳ್ಳುತ್ತಾ ಲೋಕಕಂಟಕನಾದ ತಾರಕನ ವಧೆಗೋಸ್ಕರ ಹೊರಟನು. ಅನಂತರ ಹುಳುಕನ್ನೇ ಹುಡುಕುತ್ತಿದ್ದ ಇಂದ್ರನು ಕ್ರೂರವಾದ ಮಾತುಗಳನ್ನಾಡುವ ಒಬ್ಬ ದೂತನನ್ನು ಆ ತಾರಕನ

ದೂತಂ ದಾನವಸಿಂಹಸ್ಯ ಪರುಷಾಕ್ಷರನಾದಿನಂ ।
ಸ ತು ಗತ್ವಾಬ್ರವಿದ್ದೈತ್ಯಮಭಯೋ ಭೀಮದರ್ಶನಂ ॥ ೧೬೫ ॥

॥ ದೂತ ಉವಾಚ ॥

ಶಕ್ರಸ್ತ್ವಾಮಾಹ ದೇವೇಶೋ ದೈತ್ಯಕೇತುಂ ದಿವಸ್ಪತಿಃ ।
ತಾರಕಾಸುರ ತಚ್ಛೃತ್ವಾ ಘಟಯಸ್ವ ಯಥೇಚ್ಛಯಾ ॥ ೧೬೬ ॥

ಯಜ್ಜಗಜ್ಜ್ವಲನೋದ್ದೀಪ್ತಂ ಕಿಲ್ಬಿಷಂ ಚ ತ್ವಯಾ ಕೃತಂ ।
ತಸ್ಮಾಹಂ ಸಾದಕಸ್ತೇದ್ಯ ರಾಜಾಸ್ಮಿ ಭುವನತ್ರಯೇ ॥ ೧೬೭ ॥

॥ ಪುಲಸ್ತ್ಯ ಉವಾಚ ॥

ಶ್ರುತ್ವೈತದದ್ಭುತಂ ವಾಕ್ಯಂ ಕೋಪಸಂರಕ್ತಲೋಚನಃ ।
ಉವಾಚ ದೂತಂ ದುಷ್ಟಾತ್ಮಾ ನಷ್ಟಪ್ರಾಯವಿಭೂತಿಕಃ ॥ ೧೬೮ ॥

---

ಬಳಿಗೆ ಕಳುಹಿಸಿದನು. ಆ ದೂತನು ಅಲ್ಲಿಗೆ ಹೋಗಿ ಆ ಉಗ್ರನಾದ ರಾಕ್ಷಸನನ್ನು ಕುರಿತು ಭಯಪಡದೆ ಇಂತೆಂದನು.

೧೬೬. ದೂತನು ಹೇಳಿದನು– ದೇವತೆಗಳಿಗೆ ಒಡೆಯನೂ ಸ್ವರ್ಗಕ್ಕೆ ಅಧಿಪತಿಯೂ ಆದ ಇಂದ್ರನು ದೈತ್ಯರಿಗೆ ಒಡೆಯನಾದ ನಿನಗೆ ಇಂತೆಂದನು. ಎಲೈ, ತಾರಕಾಸುರನೇ ! ಅದನ್ನು ಕೇಳಿ ನಿನಗೆ ಇಷ್ಟಬಂದಂತೆ ಮಾಡು.

೧೬೭. ಎಲೈ ತಾರಕನೇ ! ನೀನು ಪ್ರಪಂಚವೇ ಹತ್ತಿಕೊಂಡು ಉರಿಯುವ ಎಷ್ಟೋ ಕೆಟ್ಟಕೆಲಸವನ್ನು ಮಾಡಿದ್ದೀಯೆ. ಅಂತಹ ನಿನ್ನನ್ನು ನಾನು ಕೊಲ್ಲುತ್ತೇನೆ. ನಾನು ಮೂರು ಲೋಕಕ್ಕೂ ರಾಜನು.

೧೬೮. ಪುಲಸ್ತ್ಯನು ಹೇಳಿದನು- ಆ ದೈತ್ಯನು ಈ ಆಶ್ಚರ್ಯಕರವಾದ ಮಾತನ್ನು ಕೇಳಿ ಕೋಪದಿಂದ ಕಣ್ಣನ್ನು ಕೆಂಪಗೆಮಾಡಿಕೊಂಡು ಮಹಿಮೆಯನ್ನು ಕಳೆದುಕೊಂಡಂತೆಯೇ ಇರುವ ಆತನು ದೂತನನ್ನು ಕುರಿತು ಇಂತೆಂದನು.

॥ ತಾರಕ ಉವಾಚ ॥

ದೃಷ್ಟಂ ತೇ ಪೌರುಷಂ ಶಕ್ರ ಶತಶೋಥ ಮಹಾರಣೇ ।
ನಿಸ್ತ್ರಪತ್ವಾನ್ನ ತೇ ಶಾಂತಿರ್ವಿದ್ಯತೇ ಶಕ್ರ ದುರ್ಮತೇ ॥ ೧೬೯ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೇ ಗತೇ ದೂತೇ ಚಿಂತಯಾಮಾಸ ದಾನವಃ ।
ನಾಲಬ್ಧಸಂಶ್ರಯಶ್ಶಕ್ರೋ ವಕ್ತುಮೇವಮಿಹಾರ್ಹತಿ ॥ ೧೭೦ ॥

ಜಾತಸ್ಸ್ಕಂದೋಧುನಾ ಶಕ್ರಾಜ್ಜಾಯತೇ ಸಮುಪಾಶ್ರಮಾತ್ ।
ನಿಮಿತ್ತಾನಿ ಚ ದುಷ್ಟಾನಿ ಸೋಪಶ್ಯನ್ನಾಶವೇದಿನಃ ॥ ೧೭೧ ॥

ಪಾಂಸುವರ್ಷಮಸೃಕ್ಪಾತಂ ಗಗನಾದವನೀತಲೇ ।
ವಾಮನೇತ್ರಪ್ರಕಂಪಂ ಚ ವಕ್ತ್ರಶೋಷಂ ಮನಸೋ ಭಯಂ ॥ ೧೭೨ ॥

ಸ್ವಕಾನಾಂ ವಕ್ತ್ರಪದ್ಮಾನಾಂ ಮ್ಲಾನತಾಂ ಚಾವಲೋಕಯತ್ ।
ದುಷ್ಟಾಂಶ್ಚ ಪ್ರಾಣಿನೋ ರೌದ್ರಾನ್ಸೋಪಶ್ಯದ್ದುಷ್ಟವಾದಿನಃ ॥ ೧೭೩ ॥

---

೧೬೯. ತಾರಕನು ಹೇಳಿದನು- ಎಲೈ ಇಂದ್ರನೇ ! ನಿನ್ನ ಪೌರುಷವನ್ನು ನೂರಾರುಬಾರಿ ಯುದ್ಧದಲ್ಲಿ ನೋಡಿದ್ದೇವೆ. ಎಲೈ ದುಷ್ಟನಾದ ಶಕ್ರನೇ ! ನಿನಗೆ ಲಜ್ಜೆಯಿಲ್ಲದಿರುವುದರಿಂದ ಸಮಾಧಾನವೇ ನಿನಗಿಲ್ಲ.

೧೭೦. ಪುಲಸ್ತ್ಯನು ಹೇಳಿದನು– ದೂತನು ಹೀಗೆ ಹೇಳಿ ಹೊರಟುಹೋದ ಮೇಲೆ ಆ ತಾರಕನು ಇಂತೆಂದು ಯೋಚಿಸಿದನು. ಇಂದ್ರನು ಆಶ್ರಯವು ಸಿಕ್ಕದಿದ್ದರೆ ಈ ರೀತಿ ಹೇಳುತ್ತಿರಲಿಲ್ಲ.

೧೭೧. ಶಕ್ರನು ಹೀಗೆ ಹೇಳುವುದರಿಂದ ಸ್ಕಂದನು ಹುಟ್ಟಿದಂತೆ ಕಾಣುತ್ತದೆ. ನನಗೆ ಶಕುನಗಳೂ ದುಷ್ಟವುಗಳಾಗಿ ನಾಶವನ್ನೇ ಸೂಚಿಸುತ್ತಿವೆ.

೧೭೨. ಆಗ ಆಕಾಶದಿಂದ ಧೂಳಿನ ಮಳೆಯೂ ರಕ್ತದ ಮಳೆಯೂ ಬಿದ್ದವು. ಎಡಗಣ್ಣು ಹಾರಿತು. ಮುಖವು ಒಣಗಿತು. ಮನಸ್ಸಿಗೆ ಭಯವಾಯಿತು.

೧೭೩. ತನ್ನವರ ಮುಖಪದ್ಮಗಳು ಬಾಡಿದುದನ್ನು ನೋಡಿದನು. ದುಷ್ಟ ಪ್ರಾಣಿಗಳು ಕ್ರೂರವಾಗಿ ಕೂಗುತ್ತಿದ್ದುದನ್ನು ಕೇಳಿದನು.

ತದಚಿಂತ್ಯೈವ ದಿತಿಜೋ ನ್ಯಸ್ತಚಿತ್ತೋಽಭವತ್ಕ್ಷಣಾತ್ ।
ಯಾವದ್ಗಜಘಟಾಘಂಟಾಝಣತ್ಕಾರರವೋತ್ಕಟಾಂ ॥ ೧೭೪ ॥

ತದ್ವತ್ತುರಂಗಸಂಘಾತ ಹೇಷೋತ್ಸಾಹವಿಭೂಷಿತಾಂ ।
ಸೈನ್ಯೈಸ್ಸೇನಾಬಲೋದಗ್ರಧ್ವಜರಾಜಿವಿರಾಜಿತಾಂ ॥ ೧೭೫ ॥

ವಿಮಾನೈಶ್ಛಾದ್ಭುತಾಕಾರೈಶ್ಚಲಿತಾಮರಚಾಮರೈಃ ।
ವಿಭೂಷಣವಿನದ್ಧಾಂ ಚ ಕಿನ್ನರೋದ್ಗೀತನಾದಿತಾಂ ॥ ೧೭೬ ॥

ನಾನಾನಾಕತರೂತ್ಫುಲ್ಲಕುಸುಮಾ ಪೀಡಧಾರಿಣೀಂ ।
ವಿಶೋಕಾಸ್ತ್ರಪರಿಸ್ಫಾರ ಚರ್ಮನಿರ್ಮಲದರ್ಶಿನೀಂ ॥ ೧೭೭ ॥

ವಿದ್ಯುತ್ಪಸ್ಪದ್ಯುತಿಧರಾಂ ನಾನಾವಾದ್ಯನಿನಾದಿತಾಂ ।
ಸೇನಾಂ ನಾಕಸದಾಂ ದೈತ್ಯಃ ಪ್ರಾಸಾದಸ್ಥೋಽ ವ್ಯಲೋಕಯತ್ ॥ ೧೭೮ ॥

ಸ ಚಿಂತಯಾಮಾಸ ತದಾ ಕಿಂಚಿದ್ವಿಭ್ರಾಂತಮಾನಸಃ ।
ಅಪೂರ್ವಃ ಕೋ ಭವೇದ್ಯೋದ್ಧಾ ಯೋ ಮಯಾ ನ ವಿನಿರ್ಜಿತಃ ॥ ೧೭೯ ॥

---

೧೭೪-೧೭೮. ಆ ತಾರಕನು ಇವೊಂದನ್ನೂ ನೋಡದೇ ಸುಮ್ಮನಾದನು. ಒಂದು ಸಾರಿ ಅರಮನೆಯ ಮಹಡಿಯ ಮೇಲೆ ಈ ತಾರಕನು ನಿಂತಿದ್ದಾಗ ಘಂಟೆಗಳ ಸದ್ದು ಮಾಡುತ್ತಿರುವ ಆನೆಗಳ ಗುಂಪುಳ್ಳ, ಕೆನೆಯುತ್ತ ಬರುತ್ತಿರುವ ಕುದುರೆಗಳುಳ್ಳ, ಸೇನಾಪತಿಯು ಎತ್ತರದಲ್ಲಿ ಹಿಡಿದಿರುವ ಧ್ವಜವುಳ್ಳ, ಚಾಮರಛತ್ರಿಗಳನ್ನು ಕಟ್ಟಿರುವ ಕಿನ್ನರರು ಹಾಡುತ್ತ ಮುಂದೆ ಬರುತ್ತಿರುವ, ಸ್ವರ್ಗದ ಬಗೆಬಗೆ ಹೂಗಳನ್ನು ಧರಿಸಿ ರುವ, ವಿಶೋಕಾಸ್ತ್ರದಿಂದ ಪ್ರಕಾಶಿಸುತ್ತಿರುವ, ನಿರ್ಮಲವಾದ ಗುರಾಣಿಯುಳ್ಳ ಮಿಂಚಿ ನಿಂದ ಕೂಡಿರುವ ಕಾಂತಿಯನ್ನು ಹೊಂದಿರುವ ಅನೇಕ ಬಗೆಯ ವಾದ್ಯಗಳನ್ನು ಬಾರಿ ಸುತ್ತಿರುವ, ದೇವತಾ ಸೈನ್ಯವನ್ನು ನೋಡಿದನು.

೧೭೯. ಆಗ ಅವನು ಸ್ವಲ್ಪ ಆಶ್ಚರ್ಯಪಟ್ಟು ನಾನು ಜಯಿಸದಿರುವ ಯಾವ ಭಟನು ಇದರಲ್ಲಿರುವನು ಎಂದು ಯೋಚಿಸಿದನು.

ತತಶ್ಚಿಂತಾಕುಲೋ ದೈತ್ಯಶ್ಶುಶ್ರಾವ ಕಟುಕಾಕ್ಷರಂ ।
ಸಿದ್ಧವಂದಿಭಿರುದ್ಘುಷ್ಟಮಿದಂ ಹೃದಯದಾರುಣಂ ॥ ೧೮೦ ॥

॥ ವಂದಿನ ಊಚುಃ ॥

ಜಯಾಕುಲಶಕ್ತಿದೀಧಿತಿಪಂಜರ
ಭುಜದಂಡಪ್ರಚಂಡತರರಭಸ ।
ಸುರವದನ ಕುಮುದ ವಿಕಾಶನ
ವಿಲಾಸನೇತ್ರಕುಮಾರವರ ॥ ೧೮೧ ॥

ಜಯ ದಿತಿಜಕುಲಮಹೋದಧಿ ಬಡಬಾನಲ
ಮಧುರರವ ಮಧುರಮಯೂರರಥ ।
ಸುರಮುಕುಟಕೋಟಿಕುಂಚಿತ
ಚರಣನಖಾಂಕುರ ಮಹಾಸೇನ ॥ ೧೮೨ ॥

ಜಯ ಚಲಿತಲಲಿತಚೂಡಾಕಲಾಪ ನವವಿಮಲ ।
ಕಮಲದಳಕಾಂತ ದೈತ್ಯೇಶವಂಶದುಸ್ಸಹ ದಾನವಾನಲ ॥ ೧೮೩ ॥

---

೧೮೦. ಹೀಗೆ ಆ ದೈತ್ಯನು ಯೋಚಿಸುತ್ತಿರಲು ಸಿದ್ಧರೆಂಬ ಹೊಗಳುಭಟರಿಂದ ಹೊಗಳಲ್ಪಡುತ್ತಿರುವ ಮನಸ್ಸಿಗೆ ಕಠಿಣವಾಗಿರುವ ಈ ಕಟುವಾದ ಅಕ್ಷರಗಳುಳ್ಳ ಮಾತನ್ನು ಕೇಳಿದನು.

೧೮೧-೧೮೨. ಹೊಗಳುಭಟರು ಹೇಳಿದರು- ಬಹಳ ಶಕ್ತಿಯುಳ್ಳ ಕಾಂತಿಮತ್ತಾದ ಭುಜಗಳಿಂದ ಪರಾಕ್ರಮಶಾಲಿಯಾದವನೇ ! ದೇವತೆಗಳ ಮುಖವೆಂಬ ಹೂವನ್ನು ಅರಳಿಸುವವನೇ ! ಅಂದವಾದ ಕಣ್ಣುಳ್ಳವನೇ ! ಕುಮಾರಶ್ರೇಷ್ಠನೇ ! ನಿನಗೆ ಜಯವಾಗಲಿ. ಆದಿತಿಗಳ ಮಕ್ಕಳೆಂಬ ಸಮುದ್ರಕ್ಕೆ ಬಡಬಾಗ್ನಿಯೇ ! ಮಧುರವಾಗಿ ಕೂಗುವವನೇ ! ದೇವತೆಗಳ ತಲೆಯ ಕಿರೀಟದ ಬೆಳಕಿನಿಂದ ಕಡಿಮೆ ಮಾಡಲ್ಪಟ್ಟ ಕಾಲಿನ ಉಗುರಿನ ಕಾಂತಿಯುಳ್ಳವನೇ ! ಮಹಾಸೇನನೇ ! ನಿನಗೆ ಜಯವಾಗಲಿ

೧೮೩. ಅಲ್ಲಾಡುತ್ತಿರುವ ಜುಟ್ಟಿನ ಕೂದಲುಳ್ಳವನೇ ! ಹೊಸದಾಗಿ ಅರಳಿರುವ ನಿರ್ಮಲವಾದ ಕಮಲದಳದಂತಿರುವವನೇ ! ದೈತ್ಯರಾಜನ ವಂಶಕ್ಕೆ ದೊಡ್ಡದಾದ ಕಾಳ್ಗಿಚ್ಚಿನಂತಿರುವವನೇ ! ನಿನಗೆ ಜಯವಾಗಲಿ.

ಜಯ ವಿಶಾಖ ವಿಭೋ ಜಯ ಬಾಲ ।
ಸಪ್ತವಾಸರ ಭುವನಾಖಿಶೋಕಶಮನ ॥
ಜಯಸಕಲಲೋಕ ದಿತಿಸುತಧುರಂಧರನಾಶ ಸ್ಕಂಧ ॥ ೧೮೪ ॥

॥ ಪುಲಸ್ತ್ಯ ಉವಾಚ ॥

ಶ್ರುತ್ವೈತತ್ತಾರಕಸ್ಸರ್ವಮುದ್ಘುಷ್ಟಂ ದೇವವಂದಿಭಿಃ ।
ಸಸ್ಮಾರ ಬ್ರಹ್ಮಣೋ ವಾಕ್ಯಂ ವಧಂ ಬಾಲಾದುಪಸ್ಥಿತಂ ॥ ೧೮೫ ॥

ಸ್ಮೃತ್ವಾ ಧರ್ಮೌಘವಿಧ್ವಂಸೀ ಪದಾ ವೀರಪದಾನುಗಃ ।
ಮಂದಿರಾನ್ನಿರ್ಜಗಾಮಾಶು ಶೋಕಗ್ರಸ್ತೇನ ಚೇತಸಾ ॥ ೧೮೬ ॥

ಕಾಲನೇಮಿಮುಖಾ ದೈತ್ಯಾಸ್ಸಂತ್ರಸ್ತಾ ಭ್ರಾಂತಚೇತಸಃ ।
ಸ್ವೇಷ್ವನೀಕೇಷು ಚ ತಥಾ ತ್ವರಾವಿಸ್ಮೃತಚೇತಸಃ ॥
ಹಿರಣ್ಯಕಶಿಪುಂ ಪ್ರಾಹ ದಾನವಾನಾಂ ಧುರಂಧರಃ ॥ ೧೮೭ ॥

---

೧೮೪. ವಿಶಾಖನೇ ! ನಿನಗೆ ಜಯವಾಗಲಿ. ವಿಭುವೇ ! ಜಯವಾಗಲಿ ಏಳುವಾರದ ಮಗುವೇ ! ನಿನಗೆ ಜಯವಾಗಲಿ. ಲೋಕಗಳ ದುಃಖನಾಶಕನೇ ! ನಿನಗೆ ಜಯವಾಗಲಿ. ಸಕಲ ಲೋಕಕ್ಕೂ ಒಡೆಯನೆ? ನಿನಗೆ ಜಯವಾಗಲಿ. ದಿತಿಯು ಹೆತ್ತು ಹೊಂದಿದ ಮಕ್ಕಳನ್ನು ಕೊಲ್ಲುವವನೇ ! ನಿನಗೆ ಜಯವಾಗಲಿ. ಸ್ಕಂದನೇ ! ನಿನಗೆ ಜಯವಾಗಲಿ.

೧೮೫. ಪುಲಸ್ತ್ಯನು ಹೇಳಿದನು- ದೇವವಂದಿಗಳು ಹೊಗಳಿದುದನ್ನೆಲ್ಲಾ ಈ ತಾರಕನು ಕೇಳಿ ಬ್ರಹ್ಮನು ಹೇಳಿದ ಮಗುವಿನಿಂದ ಮರಣ ಬರುತ್ತದೆಂಬ ಮಾತನ್ನು ಜ್ಞಾಪಿಸಿಕೊಂಡನು.

೧೮೬. ಧರ್ಮನಾಶಕನಾದ ಈ ತಾರಕನು ಇದನ್ನು ಕೇಳಿ ವೀರರನ್ನು ಕರೆದು ಕೊಂಡು ಕಾಲು ನಡಿಗೆಯಲ್ಲಿಯೇ ದುಃಖಗೊಂಡ ಮನಸ್ಸಿನಿಂದ ಮನೆಯಿಂದ ಹೊರಟನು.

೧೮೭. ಕಾಲನೇಮಿಯೇ ಮುಂತಾದವರು ಭಯಪಟ್ಟು ಕಳವಳಗೊಂಡ ಮನಸ್ಸುಳ್ಳವರಾಗಿ ತಮ್ಮ ತಮ್ಮ ಸೈನ್ಯಗಳನ್ನು ಜಾಗ್ರತೆಯಾಗಿ ಸಿದ್ಧಪಡಿಸಿಕೊಂಡರು. ಆಗ ಯಜಮಾನನಾದ ತಾರಕನು ಹಿರಣ್ಯಕಶಿಪುವನ್ನು ಕುರಿತು ಇಂತೆಂದನು.

॥ ತಾರಕ ಉವಾಚ ॥

ತ್ರಪಾಕರಂ ಭವೇನ್ಮೃತ್ಯಂ ಬಾಲಸ್ಯಾಸ್ಯ ಪಲಾಯನಂ ।
ಯದ್ಯಹಂ ಹಂತವೇ ಯಾಮಿ ಸೋಽಪಿ ವೈ ಕಮಲಾಶ್ರಿತಃ ॥ ೧೮೮ ॥

ಹತ್ವಾಹಂ ಬಾಲಕಂ ಚೈನಂ ದುಃಸ್ಪರ್ಶಸ್ಸ್ಯಾಮಕಾರಣಂ ।
ಯಾತ ಧಾವತ ಗೃಹ್ಣೀತ ಯೋಜಯದ್ವಂ ವರೂಥಿನೀಂ ॥ ೧೮೯ ॥

॥ ಪುಲಸ್ತ್ಯ ಉವಾಚ ॥

ಕುಮಾರಂ ತಾರಕೋ ದೃಷ್ಟ್ವಾ ಬಭಾಷೇ ಭೀಷಣಾಕೃತಿಃ ॥ ೧೯೦ ॥

॥ ತಾರಕ ಉವಾಚ ॥

ಕಿಂ ಬಾಲ ಯೋದ್ಧುಕಾಮೋಽಸಿ ಕ್ರೀಡ ಕಂದುಕಲೀಲಯಾ ।

ಯೇನಾತಪೋ ನಿಸ್ಸೃಷ್ಟಸ್ತೇ ಸತ್ಸಂಗರವಿಭಾಷಕ ॥
ಬಾಲತ್ವಾದಥ ತೇ ಬುದ್ಧಿರೇವಂ ಸ್ವಲ್ಪಾರ್ಥದರ್ಶಿನೀ ॥ ೧೯೧ ॥

---

೧೮೮-೧೮೯. ತಾರಕನು ಹೇಳಿದನು- ಈ ಹುಡುಗನಿಗೆ ಹೆದರಿಕೊಂಡು ಓಡಿಹೋಗುವುದೆಂದರೆ ನನಗೆ ನಾಚಿಕೆಯಾಗುವುದು. ಕೊಲ್ಲುವುದಕ್ಕೆ ಹೋದರೆ ಆ ಮಗುವು ಇನ್ನೂ ಹೊಕ್ಕಳು ಕೂಡ ಬಾಡದ ಮಗುವು. ಅದನ್ನು ಕೊಂದರೆ ನಾನು ಬಾಲವಧೆಗೆ ಒಳಗಾಗಿ ಲೋಕದಲ್ಲಿ ಪಾಪಿಯಾಗಿ ಇತರರು ನನ್ನನ್ನು ಮುಟ್ಟದಂತಾಗುವೆನು. ಆದ್ದರಿಂದ ನೀವು ಹೋಗಿರಿ. ಓಡಿರಿ. ಹುಡುಗನನ್ನು ಹಿಡಿಯಿರಿ. ಸೈನ್ಯವನ್ನು ಸಿದ್ಧಪಡಿಸಿರಿ.

೧೯೦. ಪುಲಸ್ತ್ಯನು ಹೇಳಿದನು- ಆ ಕುಮಾರನನ್ನು ತಾರಕನು ನೋಡಿ ಇಂತೆಂದನು.

೧೯೧. ತಾರಕನು ಹೇಳಿದನು-- ಏನು ಮಗುವೇ,! ಯುದ್ಧಮಾಡಬೇಕೆಂದಿರುವೆಯ ? ಚಂಡಾಟವನ್ನು ಆಡು ಹೋಗು. ಯುದ್ಧಮಾಡುತ್ತೇನೆಂದೆನ್ನುವಿಯಲ್ಲ.! ನೀನಿನ್ನೂ ಬಿಸಿಲನ್ನೇ ಕಾಣೆಯಲ್ಲ. ಒಂದುವೇಳೆ ಹುಡುಗತನದಿಂದ ನಿನ್ನ ಬುದ್ಧಿಯು ಈ ರೀತಿ ತಿಳಿವಳಿಕೆಯಿಲ್ಲದೇ ಯುದ್ಧದಲ್ಲಿ ಪ್ರವರ್ತಿಸಬಹುದು.

॥ ಪುಲಸ್ತ್ಯ ಉವಾಚ ॥

ಕುಮಾರೋಽಪಿ ತಮಗ್ರಸ್ಥಂ ಬಭಾಷೇ ಹರ್ಷವತ್ತರಂ ॥ ೧೯೨ ॥

॥ ಕುಮಾರ ಉವಾಚ ॥

ಶೃಣು ತಾರಕ ಶಾಸ್ತ್ರಾರ್ಥಮಿಹ ನೈವ ನಿರೂಪ್ಯತೇ ।
ಶಸ್ತ್ರೈರರ್ಥಾನುದೃಶ್ಯಂತೇ ಸಮರೇ ನಿರ್ಭರಂ ಭಯೇ ॥ ೧೯೩ ॥

ಶಿಶುತ್ವಂ ಮಾವಮಂಸ್ಥಾ ಮೇ ಶಿಶುಃ ಕಷ್ಟೋ ಭುಜಂಗಮಃ ।
ದುಷ್ಪ್ರೇಕ್ಷ್ಯೋ ಭಾಸ್ಕರೋ ಬಾಲಸ್ತಥಾಹಂ ದುರ್ಜಯಶ್ಶಿಶುಃ ।
ಅಲ್ಪಾಕ್ಷರೋ ನ ಮಂತ್ರಃ ಕಿಂ ಸಸ್ಫುರೋ ದೈತ್ಯ ದೃಶ್ಯತೇ ॥ ೧೯೪ ॥

॥ ಪುಲಸ್ತ್ಯ ಉವಾಚ ॥

ಕುಮಾರೇ ಪ್ರೋಕ್ತವತ್ಯೇವಂ ದೈತ್ಯಶ್ಚಿಕ್ಷೇಪ ಮುದ್ಗರಂ ।
ಕುಮಾರಸ್ತಂ ನಿರಾಸೋಗ್ರಂ ಚಕ್ರೇಣಾನೋಘವರ್ಚಸಾ ॥ ೧೯೫ ॥

---

೧೯೨. ಪುಲಸ್ತ್ಯನು ಹೇಳಿದನು-- ಆ ಕುಮಾರನೂ ಕೂಡ ಎದುರಿಗಿರುವ ಆ ತಾರಕನನ್ನು ನೋಡಿ ಸಂತೋಷದಿಂತೆಂದನು.

೧೯೩. ಕುಮಾರನು ಹೇಳಿದನು-- ಎಲೈ ತಾರಕನೇ, ಈ ಭಯಂಕರವಾದ ಯುದ್ಧದಲ್ಲಿ ಶಾಸ್ತ್ರಗಳ ಅರ್ಥವನ್ನು ಹೇಳುವುದಿಲ್ಲ. ಶಸ್ತ್ರಗಳ (ಕತ್ತಿಗಳ) ಪ್ರಯೋಜನವೇ ಇಲ್ಲಿ ಕಾಣತಕ್ಕದ್ದು.

೧೯೪. ಎಲೈ ತಾರಕನೇ! ನನ್ನ ಹುಡುಗತನವನ್ನು ತಿರಸ್ಕರಿಸಬೇಡ. ಹಾವು ಮರಿಯಾಗಿದ್ದರೆ ಬಹು ಕಷ್ಟಕರವಾದುದು. ಬಾಲನಾಗಿರುವಾಗ ಸೂರ್ಯನನ್ನು ನೋಡಲಾಗುವುದಿಲ್ಲ. ಅಂತೆಯೇ ನಾನು ಜಯಿಸಲಾಗದವನು. ಸ್ವಲ್ಪಾಕ್ಷರಗಳಿದ್ದರೆ ಅದು ಮಂತ್ರವಲ್ಲವೆ ? ಎಲೈ ದೈತ್ಯನೇ ! ಏನೇನೋ ಬಗುಳುವೆಯಲ್ಲ.

೧೯೫. ಪುಲಸ್ತ್ಯನು ಹೇಳಿದನು-- ಆ ಕುಮಾರನು ಹೀಗೆನ್ನಲು ತಾರಕನು ಅವನ ಮೇಲೆ ಮುದ್ಗರವನ್ನು ಎಸೆದನು. ಕುಮಾರನು ಅದನ್ನು ಚಕ್ರದಿಂದ ತಡೆದನು.

ತತಶ್ಚಿಕ್ಷೇಪ ದೈತ್ಯೇಂದ್ರೋ ಭಿಂದಿವಾಳಮಯೋಮಯಂ ।
ಕರೇಣ ತಂ ಚ ಜಗ್ರಾಹ ಕಾರ್ತಿಕೇಯೋಮುರಾರಿಹಾ ॥ ೧೯೬ ॥

ಗದಾಮುಮ್ಮೋಚ ದೈತ್ಯಾಯ ಸಮುತ್ಥಾಯ ಖರಸ್ವನೀಂ ।
ತಯಾ ಹತಸ್ತತೋ ದೈತ್ಯಶ್ಚಕಂಪೇಽಚಲರಾಡಿವ ॥ ೧೯೭ ॥

ಮೇನೇ ಚ ದುರ್ಜಯಂ ದೈತ್ಯಸ್ತದಾ ಬಾಲಂ ಸುದುಸ್ಸಹಂ ।
ಚಿಂತಯಾಮಾಸ ಬುದ್ಧ್ಯಾ ವೈ ಪ್ರಾಪ್ತಃ ಕಾಲೋ ನ ಸಂಶಯಃ ॥ ೧೯೮ ॥

ಕಂಪಿತಂ ಚ ಸಮಾಲೋಕ್ಯ ಕಾಲನೇಮಿಪುರಾಗಮಾಃ ।
ಸರ್ವೇ ದೈತ್ಯೇಶ್ವರಾ ಜಘ್ನುಃ ಕುಮಾರಂ ರಣದಾರುಣಂ ॥ ೧೯೯ ॥

ಸ ತೈಃ ಪ್ರಹಾರೈರಸ್ಪೃಷ್ಟಸ್ತಥಾಕ್ಲೇಶರ್ಮಹಾದ್ಯುತಿಃ ।
ಸ ಬಾಲೋ ಬಲಿಭಿರ್ವೇಗೈರಯುದ್ಧ್ಯದ್ದಾನವಾನ್ರಣೇ ॥ ೨೦೦ ॥

ರಣಶೌಂಡಾಶ್ಚ ದೈತ್ಯೇಂದ್ರಾಃ ಪುನರ್ಜಘ್ನುಃ ಶಿಲೀಮುಖೈಃ ।
ಕುಮಾರಂ ಸಮರೇ ದೈತ್ಯಾ ಬಲಿನೋ ದೇವಕಂಟಕಾಃ ॥ ೨೦೧ ॥

---

೧೯೬. ಅನಂತರ ತಾರಕನು ಕಬ್ಬಿಣದ ಭಿಂದಿವಾಳವನ್ನು ಎಸೆದನು. ದೈತ್ಯ ನಾಶಕನಾದ ಆ ಕುಮಾರನು ಅದನ್ನು ಕೈಯಿಂದಲೇ ಹಿಡಿದುಕೊಂಡನು.

೧೯೭. ಕುಮಾರನು ಕಠಿಣವಾಗಿ ಶಬ್ದಮಾಡುವ ಗದೆಯನ್ನು ತಾರಕನ ಮೇಲೆ ಬಿಡಲು ಅದರ ಏಟನ್ನು ತಡೆಯಲಾರದೆ ಅವನು ಬೆಟ್ಟದಂತೆ ಅಲುಗಿದನು.

೧೯೮. ಆಗ ಆ ತಾರಕನು ಆ ಹುಡುಗನು ಜಯಿಸಲಸಾಧ್ಯನೆಂದು ತಿಳಿದು ತನ್ನಲ್ಲಿಯೇ ತನಗೆ ಕಾಲವು ಒದಿಗಿತು ಸಂಶಯವಿಲ್ಲ ಎಂದು ಯೋಚಿಸಿದನು.

೧೯೯. ಆ ತಾರಕನು ಹೆದರಿದುದನ್ನು ನೋಡಿ ಕಾಲನೇಮಿಯೇ ಮುಂತಾದ ದೈತ್ಯಶ್ರೇಷ್ಠರು ಆ ಕುಮಾರನನ್ನು ಬಹುವಾಗಿ ಹೊಡೆದರು.

೨೦೦. ತಾರಕನಿಗೆ ಅವುಗಳ ಏಟೊಂದೂ ತಗಲದಿರಲು ಶಕ್ತನಾದ ಆ ಬಾಲನು ಆ ಬಲಿಷ್ಠರೊಡನೆ ಯುದ್ಧಮಾಡಿದನು.

೨೦೧. ಯುದ್ಧ ವಿಶಾರದರಾದ ಆ ದೈತ್ಯಶ್ರೇಷ್ಠರು ಮತ್ತೆ ಬಾಣಗಳಿಂದ ಹೊಡೆದರು

ಕುಮಾರಸ್ಯ ವ್ಯಥಾ ಮಾ ಭೂದ್ದೈತ್ಯಾಸ್ತ್ರ ನಿಹತಸ್ಯ ತು ।
ಪ್ರಾಣಾಂತಕರಣಂ ಜಾತಂ ದೇವಾನಾಂ ದಾನವಾಹವಂ　　॥ ೨೦೨ ॥

ದೇವಾನ್ನಿಷ್ಪೀಡಿತಾನ್ದೃಷ್ಟ್ವಾ ಕುಮಾರಂ ಕೋಪಮಾವಿಶತ್ ।
ತತೋಽಸ್ತ್ರೈರ್ದಾರಯಾಮಾಸ ದಾನಾವಾನಾಮನೀಕಿನೀಂ　　॥ ೨೦೩ ॥

ತೈರಸ್ತ್ರೈರ್ನಿಷ್ಪ್ರತೀಕಾರ್ಯೈಸ್ತಾಡಿತಾಸ್ಸುರಕಂಟಕಾಃ ।
ಕಾಲನೇಮಿಮುಖಾಸ್ಸರ್ವೇ ರಣೇಽಹ್ಯಾಸನ್ಪರಾಙ್ಮುಖಾಃ　　॥ ೨೦೪ ॥

ವಿದ್ರುತೇಷು ಚ ದೈತ್ಯೇಷು ಪ್ರಹತೇಷು ಸಮಂತತಃ ।
ಕಿನ್ನರೋದ್ಗಾರಗೀತೈಶ್ಚ ಹಾಸ್ಯಸನ್ಯಸ್ತ ಚೇತನಃ　　॥ ೨೦೫ ॥

ಜಘ್ನೇ ಕುಮಾರಂ ಗದಯಾ ನಿಷ್ಟಪ್ತ ಕನಕತ್ವಿಷಾ ।
ಶತೈರ್ಮಯೂರಂ ಚಿತ್ರೈಶ್ಚ ಚಕಾರ ವಿಮುಖಂ ರಣೇ　　॥ ೨೦೬ ॥

ದೃಷ್ಟ್ವಾ ಪರಾಙ್ಮುಖಂ ದೇವೋ ಮುಕ್ತರಕ್ತಂ ಸ್ವವಾಹನಂ ।
ಜಗ್ರಾಹ ಶಕ್ತಿಂ ವಿಮಲಾಂ ರಣೇ ಕನಕಭೂಷಣಾಂ　　॥ ೨೦೭ ॥

---

೨೦೨. ದೈತ್ಯರ ಅಸ್ತ್ರದಿಂದ ಏಟು ತಿಂದ ಆ ಕುಮಾರನಿಗೆ ವ್ಯಥೆಯಾಗಲೇ ಇಲ್ಲ. ದೇವತೆಗಳಿಗೆ ಮಾತ್ರ ಆ ಯುದ್ಧವು ಪ್ರಾಣನಾಶಕವಾಯಿತು.

೨೦೩. ದೇವತೆಗಳು ತೊಂದರೆಪಟ್ಟುದನ್ನು ನೋಡಿ ಸ್ಕಂದನಿಗೆ ಕೋಪ ಬಂದಿತು. ಆಗ ದೈತ್ಯರ ಸೇನೆಯನ್ನೆಲ್ಲ ಸ್ಕಂದನು ಅಸ್ತ್ರಗಳಿಂದ ಕೊಂದನು.

೨೦೪. ಒದಲು ಮಾಡಲು ಆಗದಂತಹ ಆ ಕುಮಾರದ ಅಸ್ತ್ರಗಳಿಂದ ನೊಂದ ಆ ಕಾಲನೇಮಿ ಮುಂತಾದ ದೈತ್ಯರು ಯುದ್ಧರಂಗದಿಂದ ಹಿಂತಿರುಗಿದರು.

೨೦೫-೨೦೬. ದೈತ್ಯರು ಹೊಡೆತವನ್ನು ತಿಂದು ಓಡಿಹೋಗುತ್ತಿರಲು ಕಿನ್ನರರು ಹಾಸ್ಯಮಾಡುತ್ತ ಹಾಡಿದರು. ಆಗ ತಾರಕನು ಮನನೊಂದು ಉತ್ತಮವಾದ ಗದೆಯಿಂದ ಕುಮಾರಸ್ವಾಮಿಯನ್ನು ಹೊಡೆದು ಚಿತ್ರತರವಾದ ಬಾಣಗಳಿಂದ ಅವನ ವಾಹನವಾದ ನವಿಲನ್ನು ಹೊಡೆದು ಹಿಂತಿರುಗುವಂತೆ ಮಾಡಿದನು.

೨೦೭. ರಕ್ತವನ್ನು ಸುರಿಸುತ್ತ ಹಿಂತಿರುಗಿದ ತನ್ನ ವಾಹನವನ್ನು ಕುಮಾರಸ್ವಾಮಿಯು ನೋಡಿ ಕೋಪಗೊಂಡನು.

ಬಾಹುನಾ ಹೇಮಕೇಯೂರರುಚಿರೇಣ ಷಡಾನನಃ ।
ತತೋಽಬ್ರವೀತ್ಸ್ಮಯಮಾನಸ್ತು ತಾರಕಂ ದಾನವಾಧಿಪಂ ॥ ೨೦೮ ॥

॥ ಮಹಾಸೇನ ಉವಾಚ ॥

ತಿಷ್ಠ ತಿಷ್ಠ ಸುದುರ್ಬುದ್ಧೇ ಜೀವಂಲ್ಲೋಕಂ ವಿಲೋಕಯ ।
ಹತೋಽಸ್ಯಸಿ ಮಯಾ ಶಕ್ತ್ಯಾ ಸ್ಮರ ತ್ವಂ ದೈತ್ಯಚೇಷ್ಟಿತಂ ॥ ೨೦೯ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ತು ತತಶ್ಶಕ್ತಿಂ ಮುಮೋಚ ದಿತಿಜಂ ಪ್ರತಿ ।
ಸಾ ಕುಮಾರಭುಜೋತ್ಸೃಷ್ಟಾ ತತ್ಕೇಯೂರರವಾನುಗಾ ॥ ೨೧೦ ॥

ಬಿಭೇದ ದೈತ್ಯಹೃದಯಂ ವಜ್ರಶೈಲೇಂದ್ರಕರ್ಕಶಂ ।
ಗತಾಸುಸ್ಸ ಪಪಾತೋರ್ವ್ಯಾಂ ಪ್ರಳಯೇ ಭೂಧರೋ ಯಥಾ ॥ ೨೧೧ ॥

ವಿಕೀರ್ಣಮುಕುಟೋಷ್ಣೀಷೋ ವಿಸ್ರಸ್ತಾಖಿಲಭೂಷಣಃ ।
ತಸ್ಮಿನ್ವಿನಿಹತೇ ದೈತ್ಯೇ ದಾನವಾನಾಂ ಧುರಂಧರೇ ॥ ೨೧೨ ॥

ನಾಭೂತ್ಕಶ್ಚಿತ್ತದಾ ದುಃಖೀ ನರಕೇಷ್ವಪಿ ಪಾಪಕೃತ್ ।
ಸ್ತುವಂತಃ ಷಣ್ಮುಖಂ ದೇವಾಃ ಪ್ರಾಕ್ರೀಡನ್ನಾಗತಸ್ಪೃಹಾಃ ॥ ೨೧೩ ॥

---

೨೦೮. ಆಮೇಲೆ ಶಕ್ತ್ಯಾಯುಧವನ್ನು ತೆಗೆದುಕೊಂಡು ದಾನವರಾಜನಾದ ಆ ತಾರಕನನ್ನು ಕುರಿತು ಇಂತೆಂದನು.

೨೦೯. ಮಹಾಸೇನನು ಹೇಳಿದನು– ಎಲೈ ದುಷ್ಟನೇ! ನಿಲ್ಲು ನಿಲ್ಲು. ಪ್ರಾಣವಿರುವಾಗಲೇ ಎಲ್ಲವನ್ನೂ ನೋಡಿಬಿಡು. ನಾನು ಈ ಶಕ್ತ್ಯಾಯುಧದಿಂದ ಕೊಂದೆನೆಂದೇ ತಿಳಿ. ನೀನು ಮಾಡಿದ ಅಕಾರ್ಯಗಳನ್ನು ಸ್ಮರಿಸಿಕೊ.

೨೧೦-೨೧೧. ಪುಲಸ್ತ್ಯನು ಹೇಳಿದನು– ಹೀಗೆಂದು ಹೇಳಿ ಕುಮಾರಸ್ವಾಮಿಯು ತಾರಕನಮೇಲೆ ಶಕ್ತಿಯನ್ನು ಬಿಟ್ಟನು. ಆ ಕುಮಾರಸ್ವಾಮಿಯು ಬಿಟ್ಟ ಆ ಶಕ್ತಿಯು ವಜ್ರದಂತೆ ಕಠಿಣವಾಗಿದ್ದ ಆ ತಾರಕನ ಎದೆಯನ್ನು ಹೊಕ್ಕು ಸೀಳಿತು. ಆತನು ಪ್ರಾಣಬಿಟ್ಟು ಪ್ರಳಯಕಾಲದಲ್ಲಿ ಪರ್ವತವು ಕೆಳಗೆ ಬೀಳುವಂತೆ ಭೂಮಿಯಲ್ಲಿ ಬಿದ್ದನು.

೨೧೨-೨೧೩. ಆತನು ಬೀಳಲು ಕಿರೀಟ, ರುಮಾಲು, ಹಾಕಿಕೊಂಡಿದ್ದ ಒಡವೆ, ಇವೆಲ್ಲವೂ ಚೆಲ್ಲಾಪಿಲ್ಲಿಯಾಗಿ ಬಿದ್ದುಹೋದುವು. ಈ ರೀತಿ ದಾನವಾಧಿಪನಾದ ತಾರಕನು ಸಾಯಲು ನರಕದಲ್ಲಿರುವ ಪಾಪಿಗಳು ಮೊದಲುಗೊಂಡು ಎಲ್ಲರೂ ಸುಖಗೊಂಡರು. ದೇವತೆಗಳಿಗೆ ಮತ್ತೆ ಜೀವ ಬಂದಂತಾಗಿ ಆ ಷಣ್ಮುಖನನ್ನು

ಜಗ್ಮುಸ್ಸ್ವಾನೇವ ಭುವನಾನ್ನಿರಸ್ಯಾಸಂಸ್ತಥೋತ್ಸುಕಾಃ ।
ದದುಶ್ಚಾಪಿ ವರಂ ಸರ್ವೇ ದೇವಾಶ್ಚ ಷಣ್ಮುಖಂ ಪ್ರತಿ ॥
ತುಷ್ಟಾಸ್ಸಂಪ್ರಾಪ್ತ ಸರ್ವಾರ್ಥಾಸ್ಸಹ ಸಿದ್ಧೈಸ್ತಪೋಧನೈಃ ॥ ೨೧೪ ॥

॥ ದೇವಾ ಊಚುಃ ॥

ಯಃ ಪಠೇತ್ಸ್ಕಂದಸಂಬಂಧಾಂ ಕಥಾಮೇತಾಂ ಮಹಾಮತಿಃ ।
ಶೃಣುಯಾಚ್ಛ್ರಾವಯೇದ್ವಾಪಿ ಸ ಭವೇತ್ಕೀರ್ತಿಮಾನ್ನರಃ ॥ ೨೧೫ ॥

ಬಹ್ವಾಯುಸ್ಸುಭಗಶ್ರೀಮಾನ್ಕಾಂತಿಮಾನ್ಶುಭದರ್ಶನಃ ।
ಭೂತೇಭ್ಯೋ ನಿರ್ಭಯಶ್ಚಾಪಿ ಸರ್ವದುಃಖವಿವರ್ಜಿತಃ ॥ ೨೧೬ ॥

ಸಂಧ್ಯಾಮುಪಾಸ್ಯ ಯಃ ಪೂರ್ವಾಂ ಸ್ಕಂದಸ್ಯ ಚರಿತಂ ಪಠೇತ್ ।
ಸ ಯುಕ್ತಃ ಕಿನ್ನರೈಸ್ಸರ್ವೈರ್ಮಹಾಧನಪತಿರ್ಭವೇತ್ ॥ ೨೧೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತಾರಕವಧ ನಿರೂಪಣಂ
॥ ನಾಮ್ನೈಕಚತ್ವಾರಿಂಶತ್ತಮೋಽಧ್ಯಾಯಃ ॥

---

ಹೊಗಳುತ್ತ ತಮ್ಮ ತಮ್ಮ ಲೋಕಗಳಿಗೆ ಹೋದರು. ಆಗ ಬಹು ಆಶ್ಚರ್ಯಪಟ್ಟವರಾಗಿ ಖೇದವನ್ನು ನಾಶಮಾಡಿಕೊಂಡು ಆ ಷಣ್ಮುಖನಿಗೆ ಎಲ್ಲರೂ ವರಗಳನ್ನು ಕೊಟ್ಟರು. ಇಂತು ಸಿದ್ಧರೂ ತಪಸ್ವಿಗಳೂ ದೇವತೆಗಳೂ ಇಷ್ಟಾರ್ಥವನ್ನು ಹೊಂದಿ ಸಂತೋಷದಿಂದಿದ್ದರು.

೨೧೫-೨೧೭. ದೇವತೆಗಳು ಹೇಳಿದರು-- ಸ್ಕಂದನ ಸಂಬಂಧವಾದ ಈ ಕಥೆಯನ್ನು ಓದಿದವನೂ ಕೇಳಿದವನೂ ಹೇಳಿದವನೂ ಲೋಕದಲ್ಲಿ ಕೀರ್ತಿವಂತರಾಗುತ್ತಾರೆ ಬಹಳ ಆಯುಸ್ಸನ್ನು ಹೊಂದುತ್ತಾರೆ. ಪುಣ್ಯವಂತರಾಗುತ್ತಾರೆ. ಕಾಂತಿಯನ್ನು ಹೊಂದುತ್ತಾರೆ ನೋಡಲು ಚೆನ್ನಾಗಿರುತ್ತಾರೆ. ಪ್ರಾಣಿಗಳಿಂದ ಹೆದರಿಕೆಯಿರುವುದಿಲ್ಲ. ದುಃಖಿಗಳಾಗುವುದಿಲ್ಲ. ಬೆಳಗಿನ ಸಂಧ್ಯಾವಂದನೆಯನ್ನು ಮಾಡಿಕೊಂಡು ಸ್ಕಂದನ ಈ ಚರಿತ್ರೆಯನ್ನು ಓದಿದರೆ ಅವನು ಕಿನ್ನರರೊಡಗೂಡಿದ ಕುಬೇರನಾಗುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ತಾರಕಾಸುರ ವಧೆಯ ನಿರೂಪಣ ಎಂಬ ನಾಲ್ವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
## ॥ ದ್ವಿಚತ್ವಾರಿಂಶತ್ತಮೋಽಧ್ಯಾಯಃ ॥



॥ ಭೀಷ್ಮ ಉವಾಚ ॥

ಇದಾನೀಂ ಶ್ರೋತುಮಿಚ್ಛಾಮಿ ಹಿರಣ್ಯಕಶಿಪೋರ್ವಧಂ ।
ನರಸಿಂಹಸ್ಯ ಮಾಹಾತ್ಮ್ಯಂ ತಥಾ ಪಾಪವಿನಾಶನಂ ॥ ೧ ॥

॥ ಪುಲಸ್ತ್ಯ ಉವಾಚ ॥

ಪುರಾ ಕೃತಯುಗೇ ರಾಜನ್ಹಿರಣ್ಯಕಶಿಪುಃ ಪ್ರಭುಃ ।
ದೈತ್ಯಾನಾಮಾದಿಪುರುಷೋ ಚಕಾರ ಸುಮಹತ್ತಪಃ ॥ ೨ ॥

ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ಜಲವಾಸೀ ಸಮಭವತ್ಸ್ನಾನಮೌನಧೃತವ್ರತಃ ॥ ೩ ॥

---

### ನಲವತ್ತೆರಡನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು– ಎಲೈ ಪುಲಸ್ತ್ಯನೇ! ಈಗ ಹಿರಣ್ಯಕಶಿಪುವಿನ ವಧೆಯನ್ನೂ, ಹಾಗೆಯೇ ನರಸಿಂಹನ ಮಹಿಮೆಯನ್ನೂ ಕೇಳಲಿಚ್ಛಿಸುತ್ತೇನೆ.

೨. ಪುಲಸ್ತ್ಯನು ಹೇಳಿದನು– ಪೂರ್ವದಲ್ಲಿ ಕೃತಯುಗದಲ್ಲಿ ದೈತ್ಯರಿಗೆಲ್ಲಾ ಆದಿಪುರುಷನಾದ ಹಿರಣ್ಯಕಶಿಪು ಎಂಬುವನು ಮಹಾತಪಸ್ಸನ್ನು ಮಾಡಿದನು.

೩-೪. ಆ ಹಿರಣ್ಯಕಶಿಪುವು ಶಮ ದಮಗಳನ್ನು ಹೊಂದಿ ಬ್ರಹ್ಮಚರ್ಯವನ್ನು ಕಾಪಾಡಿಕೊಂಡು ಮೌನವನ್ನು ಧರಿಸಿ ಸ್ನಾನಾದಿಗಳನ್ನು ಮಾಡುತ್ತಾ ನೀರಿನಲ್ಲಿದ್ದು

ವೃತಶ್ಚ ದುದವರ್ಯಭ್ಯಾಂ ಚ ಬ್ರಹ್ಮಚರ್ಯೇಣ ಚೈವ ಹಿ ।
ಬ್ರಹ್ಮಾ ಪ್ರೀತೋಽಭವತ್ತಸ್ಯ ತಪಸಾ ನಿಯಮೇನ ಚ ॥ ೪ ॥

ತತಸ್ಸ್ವಯಂಭೂರ್ಭಗವಾನ್ಸ್ವಯಮಾಗತ್ಯ ತತ್ರ ಹಿ ।
ವಿಮಾನೇನಾರ್ಕವರ್ಣೇನ ಹಂಸಯುಕ್ತೇನ ಭಾಸ್ವತಾ ॥ ೫ ॥

ಆದಿತ್ಯೈರ್ವಸುಭಿಸ್ಸಾಧ್ಯೈರ್ಮರುದ್ಭಿರ್ದೈವತೈಸ್ಸಹ ।
ರುದ್ರೈರ್ವಿಶ್ವಸಹಾಯೈಶ್ಚ ಯಕ್ಷರಾಕ್ಷಸಪನ್ನಗೈಃ ॥ ೬ ॥

ದಿಗ್ಭಿಶ್ಚೈವ ವಿದಿಗ್ಭಿಶ್ಚ ನದೀಭಿಸ್ಸಾಗರೈಸ್ತಥಾ ।
ನಕ್ಷತ್ರೈಶ್ಚ ಮುಹೂರ್ತೈಶ್ಚ ಖಚರೈಶ್ಚ ಮಹಾಗ್ರಹೈಃ ॥ ೭ ॥

ದೇವೈರ್ಬ್ರಹ್ಮರ್ಷಿಭಿಸ್ಸಾರ್ಧಂ ಸಿದ್ಧೈಸ್ಸಪ್ತರ್ಷಿಭಿಸ್ತಥಾ ।
ರಾಜರ್ಷಿಭಿಃ ಪುಣ್ಯಕೃದ್ಭಿರ್ಗಂಧರ್ವಾಪ್ಸರಸಾಂ ಗಣೈಃ ॥ ೮ ॥

ಚರಾಚರಗುರುಶ್ಶ್ರೀಮಾನ್ವೃತಸ್ಸರ್ವೈರ್ದಿವೌಕಸೈಃ ।
ಬ್ರಹ್ಮಾ ಬ್ರಹ್ಮವಿದಾಂ ಶ್ರೇಷ್ಠೋ ದೈತ್ಯಂ ವಚನಮಬ್ರವೀತ್ ॥ ೯ ॥

---

ಕೊಂಡು ಹನ್ನೊಂದುಸಾವಿರವರ್ಷಗಳವರೆಗೂ ತಪಸ್ಸುಮಾಡಿದನು. ಇಂತು ಮಾಡು ತ್ತಿರಲು ಅವನ ತಪಸ್ಸಿಗೂ ನಿಯಮಕ್ಕೂ ಬ್ರಹ್ಮನು ಪ್ರೀತನಾದನು.

೫-೯. ಆನಂತರ ಅವನ ತಪಸ್ಸಿಗೆ ಮೆಚ್ಚಿ ಸೂರ್ಯನ ಬಣ್ಣಕ್ಕಿರುವ ವಿಮಾನ ದಲ್ಲಿ ಹಂಸಗಳಿಂದ ಎಳೆಸಿಕೊಂಡು ಬ್ರಹ್ಮನು ಅಲ್ಲಿಗೆ ಬಂದನು. ಅವನ ಜೊತೆಯಲ್ಲಿ ಆದಿತ್ಯರು, ವಸುಗಳು, ಸಾಧ್ಯರು, ಮರುತ್ತುಗಳು, ದೇವತೆಗಳು, ರುದ್ರರು, ರಾಕ್ಷಸರು ಪನ್ನಗರು, ದಿಕ್ಕುಗಳು, ವಿದಿಕ್ಕುಗಳು, ನದಿಗಳು, ಸಾಗರಗಳು, ನಕ್ಷತ್ರಗಳು, ಮುಹೂ ರ್ತಗಳು, ಖಚರರು, ಗ್ರಹಗಳು, ದೇವರ್ಷಿಗಳು, ಬ್ರಹ್ಮರ್ಷಿಗಳು, ಸಿದ್ಧರು, ಸಪ್ತರ್ಷಿ ಗಳು, ರಾಜರ್ಷಿಗಳು, ಪುಣ್ಯವಂತರು, ಗಂಧರ್ವರು, ಅಪ್ಸರಸ್ಸುಗಳು, ಇನ್ನೂ ಎಲ್ಲಾ ಲೋಕದವರೊಡನೆ ಕೂಡಿಕೊಂಡು ಆ ಬ್ರಹ್ಮನು ಬಂದನು. ಬ್ರಹ್ಮಜ್ಞಾನವನ್ನು ಬಲ್ಲ ಆ ಬ್ರಹ್ಮನು ಆ ಹಿರಣ್ಯಕಶಿಪುವನ್ನು ಕುರಿತು ಇಂತೆಂದನು.

॥ ಬ್ರಹ್ಮೋವಾಚ ॥

ಪ್ರೀತೋಽಸ್ಮಿ ತವ ಭಕ್ತಸ್ಯ ತಪಸಾನೇನ ಸುವ್ರತ ।
ವರಂ ವರಯ ಭದ್ರಂ ತೇ ಯಥೇಷ್ಟಂ ಕಾಮಮಾಪ್ನುಹಿ ॥ ೧೦ ॥

॥ ಹಿರಣ್ಯಕಶಿಪುರುವಾಚ ॥

ನ ದೇವಾಸುರಗಂಧರ್ವಾ ನ ಯಕ್ಷೋರಗರಾಕ್ಷಸಾಃ ।
ನ ಮಾನುಷಾಃ ಪಿಶಾಚಾಶ್ಚ ಹನ್ಯುರ್ಮಾಂ ದೇವಸತ್ತಮ ॥ ೧೧ ॥

ಋಷಯೋ ಮಾನವಾಶ್ಚಾಪ್ಯೈರ್ನ ಶಪೇಯುಃ ಪಿತಾಮಹ ।
ಯದಿ ಮೇ ಭಗವಾನ್ಪ್ರೀತೋ ವರ ಏಷ ವೃತೋ ಮಯಾ ॥ ೧೨ ॥

ನ ಶಸ್ತ್ರೇಣ ನ ಚಾಸ್ತ್ರೇಣ ಗಿರಿಣಾ ಪಾದಪೇನ ವಾ ।
ನ ಶುಷ್ಕೇಣ ನ ಚಾರ್ದ್ರೇಣ ನ ಸ್ಯಾಚ್ಚಾನ್ಯೇನ ಮೇ ವಧಃ ॥ ೧೩ ॥

ಭವೇಯಮಹಮೇವಾರ್ಕಸ್ಸೋಮೋ ವಾಯುರ್ಹುತಾಶನಃ ।
ಸಲಿಲಂ ಚಾಂತರಿಕ್ಷಂ ಚ ನಕ್ಷತ್ರಾಣಿ ದಿಶೋ ದಶ ॥ ೧೪ ॥

ಅಹಂ ಕ್ರೋಧಶ್ಚ ಕಾಮಶ್ಚ ವರುಣೋ ವಾಸವೋ ಯಮಃ ।
ಧನದಶ್ಚ ಧನಾಧ್ಯಕ್ಷೋ ಯಕ್ಷಃ ಕಿಂಪುರುಷಾಧಿಪಃ ॥ ೧೫ ॥

---

೧೦. ಬ್ರಹ್ಮನು ಹೇಳಿದನು- ಎಲೈ ಭಕ್ತನೇ ! ನಿನ್ನ ಈ ತಪಸ್ಸಿಗೆ ಸಂತೋಷಗೊಂಡಿದ್ದೇನೆ. ನಿನಗೆ ಒಳ್ಳೆಯದಾಗಲಿ. ಬೇಕಾದ ವರವನ್ನು ಕೇಳಿಕೊ.

೧೧-೧೨. ಹಿರಣ್ಯಕಶಿಪುವು ಹೇಳಿದನು- ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ಉರಗರು, ರಾಕ್ಷಸರು, ಮನುಷ್ಯರು, ಪಿಶಾಚರು, ಇವರಿಂದ ನನಗೆ ಮರಣಬೇಡ. ಋಷಿಗಳಾಗಲೀ ಮಾನವರಾಗಲೀ ಶಾಪದಿಂದ ಶಪಿಸಬಾರದು. ನೀನು ನನ್ನ ತಪಸ್ಸಿಗೆ ತುಷ್ಟನಾಗಿದ್ದರೆ ಈ ವರವನ್ನು ಕೊಡು. ಕೇಳಿಕೊಳ್ಳುತ್ತೇನೆ.

೧೩. ಶಸ್ತ್ರ, ಅಸ್ತ್ರ, ಬೆಟ್ಟ, ಮರ, ಒಣಗಿದುದು, ಹಸಿಯದು, ಈ ರೀತಿಯದಾದವುತ್ತಾವುದೇ ಆದರೂ ಅಂತಹದರಿಂದ ನನಗೆ ಮರಣಕೂಡದು.

೧೪-೧೫. ಸೂರ್ಯ, ಚಂದ್ರ, ವಾಯು, ಅಗ್ನಿ, ನೀರು, ಆಕಾಶ, ನಕ್ಷತ್ರ, ಹತ್ತು ದಿಕ್ಕುಗಳು, ಕ್ರೋಧ, ಕಾಮ, ವರುಣ, ಇಂದ್ರ, ಯಮ, ಕುಬೇರ, ಯಕ್ಷ, ಕಿಂಪುರುಷರೊಡೆಯ, ಇವರೆಲ್ಲರೂ ನಾನೇ ಆಗಬೇಕು.

॥ ಬ್ರಹ್ಮೋವಾಚ ॥

ಏಷ ದಿವ್ಯೋ ವರಸ್ತಾತ ಮಯಾ ದತ್ತಸ್ತವಾದ್ಭುತಃ ।
ಸರ್ವಕಾಮಪ್ರದೋ ವತ್ಸ ಪ್ರಾಪ್ಸ್ಯಸಿತ್ವಂ ನ ಸಂಶಯಃ ॥ ೧೬ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ಸ ಭಗವಾನ್ ಜಗಾಮಾಕಾಶಮೇವ ಹಿ ।
ವೈರಾಜಂ ಬ್ರಹ್ಮಸದನಂ ಬ್ರಹ್ಮರ್ಷಿಗಣಸೇವಿತಂ ॥ ೧೭ ॥

ತತೋ ದೇವಾಶ್ಚ ಗಂಧರ್ವಾ ಋಷಿಭಿಸ್ಸಹ ಚಾರಣಾಃ ।
ವರಪ್ರದಾನಂ ಶ್ರುತ್ವೈವ ಪಿತಾಮಹಮುಪಸ್ಥಿತಾಃ ॥ ೧೮ ॥

॥ ದೇವಾ ಊಚುಃ ॥

ವರಪ್ರದಾನಾದ್ಭಗವಾನ್ವಧಿಷ್ಯತಿ ಸ ನೋಽಸುರಃ
ತತ್ಪ್ರಸಾದಶ್ಚ ಭಗವನ್ವಧೋಪ್ಯಸ್ಯ ವಿಚಿಂತ್ಯತಾಂ ॥ ೧೯ ॥

---

೧೬. ಬ್ರಹ್ಮನುಹೇಳಿದನು– ಅಯ್ಯಾ! ಈ ದಿವ್ಯವಾದ ವರಗಳನ್ನು ನಾನು ನಿನಗೆ ಕೊಟ್ಟಿದ್ದೇನೆ. ಇವೆಲ್ಲವೂ ಸರ್ವಕಾಮಗಳನ್ನೂ ಕೊಡುತ್ತವೆ. ಇವನ್ನು ನೀನು ಹೊಂದುತ್ತೀಯೆ. ಸಂಶಯವಿಲ್ಲ

೧೭. ಪುಲಸ್ತನು ಹೇಳಿದನು– ಆ ಹಿರಣ್ಯಕಶಿಪುವಿಗೆ ಈ ರೀತಿಯಾದ ವರವನ್ನು ಬ್ರಹ್ಮನು ಕೊಟ್ಟು ಅಂತರ್ಧಾನನಾಗಿ ಬ್ರಹ್ಮರ್ಷಿಗಳಿಂದ ಸೇವಿತವಾದ ವೈರಾಜವೆಂಬ ಅರಮನೆಯನ್ನು ಸೇರಿದನು.

೧೮. ಅನಂತರ ದೇವತೆಗಳೂ, ಗಂಧರ್ವರೂ, ಋಷಿಗಳೂ, ಚಾರಣರೂ, ಕೂಡ ಈ ರೀತಿಯಾಗಿ ಅವನಿಗೆ ವರವನ್ನು ಕೊಟ್ಟುದನ್ನು ಕೇಳಿ ಬ್ರಹ್ಮನ ಬಳಿಗೆ ಬಂದರು.

೧೯. ದೇವತೆಗಳುಹೇಳಿದರು-ಎಲೈ ಸ್ವಾಮಿಯೇ ! ನೀನು ವರ ಕೊಟ್ಟುದುದರಿಂದ ಆ ರಾಕ್ಷಸನುನಮ್ಮೆಲ್ಲರನ್ನೂ ಕೊಂದು ಹಾಕುತ್ತಾನೆ. ನಮ್ಮಲ್ಲಿ ಅನುಗ್ರಹವಿಟ್ಟು ಅವನ ವಧೆಗೂ ಒಂದು ಉಪಾಯವನ್ನು ಹುಡುಕು.

ಭಗವಾನ್ಸರ್ವಭೂತಾನಾಮಾದಿಕರ್ತಾ ಸ್ವಯಂ ಪ್ರಭುಃ ।
ಸ್ರಷ್ಟಾ ಚ ಹವ್ಯಕವ್ಯಾನಾಮವ್ಯಕ್ತಃ ಪ್ರಕೃತಿಃ ಪರಃ ॥ ೨೦ ॥

ಸರ್ವಲೋಕಹಿತಂ ವಾಕ್ಯಂ ಶ್ರುತ್ವಾ ದೇವಃ ಪ್ರಜಾಪತಿಃ ।
ಆಶ್ವಾಸಯಾಮಾಸ ತದಾ ಸುಶೀತೈರ್ವಚನಾಂಬುಭಿಃ ॥ ೨೧ ॥

॥ ಬ್ರಹ್ಮೋವಾಚ ॥

ಅವಶ್ಯಂ ತ್ರಿದಶಾನೇನ ಪ್ರಾಪ್ತವ್ಯಂ ತಪಸಃ ಫಲಂ ।
ತಪಸೋಂತೇಽಸ್ಯ ಭಗವಾನ್ಸ್ವಯಂ ವಿಷ್ಣುಃ ಕರಿಷ್ಯತಿ ॥ ೨೨ ॥

॥ ಪುಲಸ್ತ್ಯ ಉವಾಚ ॥

ತಚ್ಛ್ರುತ್ವಾ ವಿಬುಧಾ ವಾಕ್ಯಂ ಸರ್ವೇ ಪಂಕಜಜಾನನಾತ್ ।
ಸ್ವಾನಿ ಸ್ಥಾನಾನಿ ದಿವ್ಯಾನಿ ವಿಪ್ರಜಗ್ಮುಃ ಮುದಾನ್ವಿತಾಃ ॥ ೨೩ ॥

ಲಬ್ಧಮಾತ್ರೇ ವರೇ ಸೋಽಥ ಪ್ರಜಾಸ್ಸರ್ವಾ ಅಬಾಧತ ।
ಹಿರಣ್ಯಕಶಿಪುರ್ದೈತ್ಯೋ ವರದಾನೇನ ಗರ್ವಿತಃ । ॥ ೨೪ ॥

---

೨೦-೨೧. ಪೂಜ್ಯನೂ ಪಂಚಭೂತಗಳಿಗೂ ಕರ್ತನೂ ಹವ್ಯಕವ್ಯಗಳನ್ನು ಉಂಟು ಮಾಡಿದವನೂ ಅವ್ಯಕ್ತನೂ ಪ್ರಕೃತಿಸ್ವರೂಪನೂ ಪರನೂ ಆದ ಬ್ರಹ್ಮನು ಎಲ್ಲಾ ಲೋಕಕ್ಕೂ ಹಿತಕರವಾದ ಈ ಮಾತನ್ನು ಕೇಳಿ ತಣ್ಣಗಿರುವ ಮಾತೆಂಬ ನೀರಿನಿಂದ ಸಮಾಧಾನಪಡಿಸಿದನು.

೨೨. ಬ್ರಹ್ಮನು ಹೇಳಿದನು– ಎಲೈ ದೇವತೆಗಳಿರ ! ಅವನ ತಪಸ್ಸಿಗೆ ಸರಿಯಾದ ಫಲವನ್ನು ಕೊಟ್ಟೇ ಕೊಡಬೇಕು. ತಪಸ್ಸು ಅದಕ್ಕೆ ಫಲ ಕೊಡುವುದು. ಎಲ್ಲವೂ ಆದಮೇಲೆ ಅದರ ಪ್ರತೀಕಾರವನ್ನು ವಿಷ್ಣುವು ತಾನಾಗಿಯೇ ಯೋಚಿಸಿಕೊಳ್ಳುತ್ತಾನೆ.

೨೩. ಪುಲಸ್ತ್ಯನು ಹೇಳಿದನು– ಬ್ರಹ್ಮನ ಬಾಯಿಂದ ಆ ಮಾತನ್ನು ಕೇಳಿ ದೇವತೆಗಳೆಲ್ಲರೂ ತಮ್ಮ ತಮ್ಮ ಜಾಗಗಳಿಗೆ ಸಂತೋಷದಿಂದ ಹೊರಟುಹೋದರು.

೨೪. ಆ ಹಿರಣ್ಯಕಶಿಪುವು ವರವನ್ನು ಹೊಂದಿದೊಡನೆಯೇ ಆ ವರದಿಂದ ಗರ್ವಿತನಾಗಿ ಎಲ್ಲಾ ಪ್ರಜೆಗಳನ್ನೂ ತೊಂದರೆಪಡಿಸಿದನು.

ಆಶ್ರಮೇಷು ಮಹಾಭಾಗಾನ್ಮುನೀನ್ವೈ ಸಂಶಿತವ್ರತಾನ್ ।
ಸತ್ಯಧರ್ಮಪರಾನ್ದಾಂತಾನ್ಧರ್ಷಯಾಮಾಸ ದಾನವಃ ॥ ೨೫ ॥

ದೇವಾಂಸ್ತ್ರಿಭುವನಸ್ಥಾಂಶ್ಚ ಪರಾಜಿತ್ಯ ಮಹಾಸುರಃ ।
ತ್ರೈಲೋಕ್ಯಂ ವಶಮಾನೀಯ ಸ್ವರ್ಗೇ ವಸತಿ ದಾನವಃ ॥ ೨೬ ॥

ತದಾ ವರಮದೋತ್ಸಿಕ್ತಶ್ಚೋದಿತಃ ಕಾಲಧರ್ಮಣಾ ।
ಯಜ್ಞೀಯಾನಕರೋದ್ದೈತ್ಯಾನಯಜ್ಞೀಯಾಂಶ್ಚ ದೈವತಾನ್ ॥ ೨೭ ॥

ಯಥಾದಿತ್ಯಾಶ್ಚ ಸಾಧ್ಯಾಶ್ಚ ವಿಶ್ವೇ ಚ ವಸವಸ್ತಥಾ ।
ರುದ್ರಾ ದೇವಗಣಾ ಯಕ್ಷಾ ದೇವದ್ವಿಜಮಹರ್ಷಯಃ ॥ ೨೮ ॥

ಶರಣ್ಯಂ ಶರಣಂ ವಿಷ್ಣುಮುಪತಸ್ಥುರ್ಮಹಾಬಲಂ ।
ದೇವದೇವಂ ಯಜ್ಞಮಯಂ ವಾಸುದೇವಂ ಸನಾತನಂ । ॥ ೨೯ ॥

॥ ದೇವಾ ಊಚುಃ ॥

ನಾರಾಯಣ ಮಹಾಭಾಗ ದೇವಾಸ್ತ್ವಾಂ ಶರಣಂ ಗತಾಃ ।
ತ್ರಾಯಸ್ವ ಜಹಿ ದೈತ್ಯೇಂದ್ರಂ ಹಿರಣ್ಯಕಶಿಪುಂ ಪ್ರಭೋ ॥ ೩೦ ॥

---

೨೫. ಆತನು ಆಶ್ರಮದಲ್ಲಿ ಸತ್ಯಧರ್ಮಗಳನ್ನು ಅನುಸರಿಸಿ ಇಂದ್ರಿಯ ನಿಗ್ರಹದಿಂದ ವ್ರತವನ್ನು ಅನುಸರಿಸುತ್ತಿರುವ ಋಷಿಗಳನ್ನು ತೊಂದರೆಪಡಿಸಿದನು.

೨೬. ಸ್ವರ್ಗದಲ್ಲಿರುವ ದೇವತೆಗಳನ್ನು ಜಯಿಸಿ ಆ ಸ್ವರ್ಗವನ್ನು ವಶಪಡಿಸಿಕೊಂಡು ಮೂರು ಲೋಕಗಳನ್ನೂ ಆಳುತ್ತಾ ಅಲ್ಲಿ ವಾಸಮಾಡುತ್ತಿದ್ದನು.

೨೭. ವರದ ಬಲದಿಂದ ಕೊಬ್ಬಿದ ಆತನು ಕಾಲದ ಮಹಿಮೆಯಿಂದ ಪ್ರೇರಿತನಾಗಿ ಯಜ್ಞದ ಹವಿಸ್ಸನ್ನು ದಾನವರು ತಿನ್ನುವಂತೆಯೂ ದೇವತೆಗಳಿಗೆ ಆ ಯಜ್ಞದ ಪದಾರ್ಥಗಳು ಸಿಕ್ಕದಂತೆಯೂ ಮಾಡಿದನು.

೨೮-೨೯. ಆದಿತ್ಯರು, ಸಾಧ್ಯರು, ವಿಶ್ವೇದೇವರು, ವಸುಗಳು, ರುದ್ರರು, ದೇವತೆಗಳು, ಯಕ್ಷರು, ಬ್ರಾಹ್ಮಣರು, ಋಷಿಗಳು, ಎಲ್ಲರೂ ಕೂಡ ದೇವದೇವನೂ ಯಜ್ಞಮಯನೂ ಬಲಿಷ್ಠನೂ ನೊಂದವರನ್ನು ಕಾಪಾಡುವವನೂ ಆದ ವಿಷ್ಣುವನ್ನು ಮರೆಹೊಕ್ಕರು.

೩೦-೩೧. ದೇವತೆಗಳು ಹೇಳಿದರು- ಎಲೈ ಮಹಾತ್ಮನಾದ ನಾರಾಯಣನೇ! ದೇವತೆಗಳು ನಿನ್ನನ್ನು ಶರಣು ಹೊಂದಿದ್ದಾರೆ. ನಮ್ಮನ್ನು ಕಾಪಾಡು. ಆ ರಾಕ್ಷಸ

ತ್ವಂ ಹಿ ನಃ ಪರಮೋ ಧಾತಾ ತ್ವಂ ಹಿ ನಃ ಪರಮೋ ಗುರುಃ ।
ತ್ವಂ ಹಿ ನಃ ಪರಮೋ ದೇವಃ ಬ್ರಹ್ಮಾದೀನಾಂ ಸುರೋತ್ತಮಃ ॥ ೩೧ ॥

॥ ವಿಷ್ಣುರುವಾಚ ॥

ಭಯಂ ತ್ಯಜಧ್ವಮಮರಾ ಅಭಯಂ ವೋ ದದಾಮ್ಯಹಂ ।
ತಥೈವ ತ್ರಿದಿವಂ ದೇವಾಃ ಪ್ರತಿಪದ್ಯತ ಮಾ ಚಿರಂ ॥ ೩೨ ॥

ಏನಂ ಹಿ ಸಗಣಂ ದೈತ್ಯಂ ವರದಾನೇನ ಗರ್ವಿತಂ ।
ಅವಧ್ಯಮಮರೇಂದ್ರಾಣಾಂ ದಾನವೇಂದ್ರಂ ನಿಹನ್ಮ್ಯಹಂ ॥ ೩೩ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ತು ಭಗವಾನ್ವಿಶ್ವಪೋ ವಿಷ್ಣುರವ್ಯಯಃ ।
ಹಿರಣ್ಯಕಶಿಪುಸ್ಥಾನಂ ಜಗಾಮ ಹರಿರೀಶ್ವರಃ ॥ ೩೪ ॥

ತೇಜಸಾ ಭಾಸ್ಕರಾಕಾರಶ್ಶಶೀ ಕಾಂತ್ಯೇವ ಚಾಪರಃ ।
ನರಸ್ಯ ಕೃತ್ವಾರ್ಧತನುಂ ಸಿಂಹಸ್ಯಾರ್ಧತನುಂ ತಥಾ ॥ ೩೫ ॥

---

ನನ್ನು ಕೊಂದು ಹಾಕು. ನೀನೇ ನಮಗೆ ರಕ್ಷಕನು. ನೀನೇ ನಮಗೆ ಗುರುವು. ನೀನೇ ದೇವರು. ಬ್ರಹ್ಮನೇ ಮುಂತಾದ ನಮಗೆಲ್ಲಾ ನೀನಲ್ಲದೆ ಬೇರೆ ಗತಿಯಿಲ್ಲ.

೩೨. ವಿಷ್ಣುವು ಹೇಳಿದನು- ಎಲೈ ಅಮರರಿರಾ ! ಭಯವನ್ನು ಬಿಟ್ಟುಬಿಡಿ. ನಾನು ನಿಮಗೆ ಅಭಯವನ್ನು ಕೊಡುತ್ತೇನೆ. ಇನ್ನು ಸ್ವಲ್ಪ ಕಾಲದಲ್ಲಿಯೇ ನೀವು ಸ್ವರ್ಗವನ್ನು ಹೊಂದುತ್ತೀರಿ.

೩೩. ವರದಾನದಿಂದ ಮದಿಸಿರುವ, ದೇವತೆಗಳಿಂದ ಕೊಲ್ಲಲಾಗದ ಆ ದೈತ್ಯ ನನ್ನು ಪರಿವಾರದೊಡನೆ ಕೊಲ್ಲುತ್ತೇನೆ.

೩೪. ಪುಲಸ್ತ್ಯನು ಹೇಳಿದನು- ಹೀಗೆಂದು ಆ ಸ್ವಾಮಿಯು ಹೇಳಿ ಹಿರಣ್ಯ ಕಶಿಪುವಿನ ಸ್ಥಳಕ್ಕೆ ಹೋದನು.

೩೫ ಸೂರ್ಯನಂತೆ ತೇಜೋವಂತನಾಗಿಯೂ ಚಂದ್ರರಂತೆ ಕಾಂತಿಯುಳ್ಳವ ನಾಗಿಯೂ ಅರ್ಧದೇಹವನ್ನು ಮನುಷ್ಯರಂತೆಯೂ ಅರ್ಧದೇಹವನ್ನು ಸಿಂಹದಂ ತೆಯೂ ಮಾಡಿಕೊಂಡನು.

ನಾರಸಿಂಹೇನ ವಪುಷಾ ಪಾಣೀ ಸಂಗೃಹ್ಯ ಪಾಣಿನಾ ।
ತತೋಽಪಶ್ಯತ ವಿಸ್ತೀರ್ಣಾಂ ದಿವ್ಯಾಂ ರಮ್ಯಾಂ ಮನೋರಮಾಂ ॥ ೩೬ ॥

ಸರ್ವಕಾಮಯುತಾಂ ಶುಭ್ರಾಂ ಹಿರಣ್ಯಕಶಿಪೋಸ್ಸಭಾಂ ।
ವಿಸ್ತೀರ್ಣಾಂ ಯೋಜನಶತಂ ಶತಮಧ್ಯರ್ಧಮಾಯತಾಂ ॥ ೩೭ ॥

ವೈಹಾಯಸೀಂ ಕಾಮಗಮಾಂ ಪಂಚಯೋಜನಮುಚ್ಛ್ರಿತಾಂ ।
ಜರಾಶೋಕಕ್ಲಮಾಪೇತಾಂ ನಿಷ್ಕಂಪಾಂ ಸುಖದಾಂ ಶಿವಾಂ ॥ ೩೮ ॥

ವೇಶ್ಮಾಸನವತೀಂ ರಮ್ಯಾಂ ಜ್ವಲಂತೀಮಿವ ತೇಜಸಾ ।
ಅಂತಸ್ಸಲಿಲಸಂಯುಕ್ತಾಂ ವಿಹಿತಾಂ ವಿಶ್ವಕರ್ಮಣಾ ॥ ೩೯ ॥

ದಿವ್ಯವರ್ಣಮಯೈರ್ವೃಕ್ಷೈಃ ಫಲಪುಷ್ಪಪ್ರದೈರ್ಯುತಾಂ ।
ನೀಲಪೀತಾಸಿತಶ್ಯಾಮೈಶ್ಶ್ವೇತೈರ್ಲೋಹಿತಕೈರಪಿ ॥ ೪೦ ॥

ಅವದಾತೈಸ್ತಥಾ ಗುಲ್ಮೈರಕ್ತಮಂಜರಿಧಾರಿಭಿಃ ॥
ಸಿತಾಭ್ರಘನಸಂಕಾಶಾಂ ಪ್ಲವಂತೀಂ ಚಾಭ್ಯದೃಶ್ಯತ ॥ ೪೧ ॥

---

೩೬-೩೯. ಈ ರೀತಿ ನರಸಿಂಹಾವತಾರವನ್ನು ಮಾಡಿಕೊಂಡು ಕೈಯಿಂದ ಕೈಯನ್ನು ಅಮುಕಿಕೊಂಡು ಹೋಗಿ ದಿವ್ಯವಾದ ಮನೋಹರವಾದ ಎಲ್ಲಾ ಇಷ್ಟಾರ್ಥಗಳಿಂದ ಕೂಡಿರುವ ಆ ಹಿರಣ್ಯಕಶಿಪುವಿನ ಸಭೆಯನ್ನು ನೋಡಿದನು. ನೂರು ಯೋಜನಗಳ ಅಗಲವುಳ್ಳ, ನೂರೈವತ್ತು ಯೋಜನಗಳ ಉದ್ದವುಳ್ಳ, ಅಂತರಿಕ್ಷದಲ್ಲಿ ಇರುವ, ಯಥೇಚ್ಛವಾಗಿ ಸಂಚರಿಸುವ, ಐದುಯೋಜನ ಎತ್ತರವಿರುವ ಮುಪ್ಪುದುಃಖ ಕ್ಷಮೆಗಳಿಲ್ಲದ, ಸ್ಥಿರವಾದ, ಮಂಗಳಕರವಾದ, ಸುಖವನ್ನು ಕೊಡುವ, ಚಿಕ್ಕಮನೆಗಳುಳ್ಳ, ಆಸನಗಳನ್ನು ಹಾಕಿರುವ, ತೇಜಸ್ಸಿನಿಂದ ಜ್ವಲಿಸುತ್ತಿರುವ, ಒಳಗೆ ನೀರುಳ್ಳ ವಿಶ್ವಕರ್ಮನಿಂದ ರಚಿತವಾದ ಸಭೆಯನ್ನು ನೋಡಿದನು.

೪೦-೪೧. ಒಳ್ಳೊಳ್ಳೆಯ ಬಣ್ಣಗಳಿಂದ ಕೂಡಿ ಹಣ್ಣು ಹೂಗಳಿಂದ ಕೂಡಿದ ಮರಗಳುಳ್ಳ, ನೀಲಿ ಬಿಳುಪು ಹಳದಿ ಕಪ್ಪು ಬಿಳುಪು ಕೆಂಪುಗಳಿಂದ ಸೇರಿದ, ಹೊಂಬಣ್ಣವುಳ್ಳ ಶುಭ್ರವಾಗಿರುವ ಪೊದರುಗಳಿಂದಲೂ ಕೆಂಪಿನ ಹೂಗೊಂಚಲುಗಳಿಂದಲೂ ಕೂಡಿದ, ಬೆಳ್ಳಗಿರುವ ಮೇಘದಂತಿರುವ, ಹರಿಯುತ್ತಿರುವಂತೆ ಕಾಣುವ ಸಭೆಯನ್ನು ನೋಡಿದನು.

ರಶ್ಮಿಮತೀ ಸ್ವಭಾವೇನ ದಿವ್ಯಗಂಧಮನೋರಮಾ ।
ನ ಸುಖಾ ನ ಚ ದುಃಖಾ ಸಾ ನ ಶೀತಾ ನ ಚ ಘರ್ಮದಾ ॥ ೪೨ ॥

ನ ಕ್ಷುತ್ಪಿಪಾಸೇ ಗ್ಲಾನಿಂ ವಾ ಪ್ರಾಪ್ಯ ತಾಂ ಪ್ರಾಪ್ನುವಂತಿ ತೇ ।
ನಾನಾರೂಪೈರುಪಕೃತಾಂ ಸುಚಿತ್ರೈಶ್ಚ ಶುಭಸ್ವರೈಃ ॥ ೪೩ ॥

ಅತಿ ಚಂದ್ರಂ ಚ ಸೂರ್ಯಂ ಚ ಶಿಖಿನಂ ಚ ಸ್ವಯಂಪ್ರಭಾ ।
ದೀಪ್ಯತೇ ನಾಕಪೃಷ್ಠಸ್ಥಾ ಭಾಸಯಂತೀ ಚ ಭಾಸುರಾ ॥ ೪೪ ॥

ಸರ್ವೇ ಚಕಾಶಿರೇ ತಸ್ಯಾಂ ಮುದಿತಾಶ್ಚೈವ ಮಾನುಷಾಃ ।
ರಸವಂತಃ ಪ್ರಭೂತಾಶ್ಚ ಭಕ್ಷ್ಯಭೋಜ್ಯಾನ್ನಮುತ್ತಮಂ ॥ ೪೫ ॥

ಪುಣ್ಯಗಂಧಾ ಸ್ರಜಶ್ಚಾಪಿ ನಿತ್ಯಕಾಲಫಲದ್ರುಮಾಃ ।
ಉಷ್ಣೇ ಶೀತಾನಿ ತೋಯಾನಿ ಶೀತೇ ಚೋಷ್ಣಾನಿ ಸಂತಿ ವೈ ॥ ೪೬ ॥

ಪುಷ್ಪಿತಾಗ್ರಾನ್ಮಹಾಶಾಖಾನ್ಪ್ರವಾಳಾಂಕುರಧಾರಿಣಃ ।
ಲತಾವಿತಾನಸಂಛನ್ನಾನ್ಕಲ್ಪಯಾಮಾಸ ಸ ಪ್ರಭುಃ ॥ ೪೭ ॥

---

೪೨-೪೪. ಸ್ವಭಾವವಾದ ಕಾಂತಿಯುಳ್ಳದ್ದಾಗಿ ಸುವಾಸನೆಯಿಂದ ಮನೋಹರವಾಗಿದ್ದಿತು. ಅಲ್ಲಿಗೆ ಹೋದರೆ ಸುಖವಾಗಲೀ, ದುಃಖವಾಗಲೀ, ಶೀತವಾಗಲೀ, ಉಷ್ಣವಾಗಲೀ, ಹಸಿವು ಬಾಯಾರಿಕೆಗಳಾಗಲೀ, ಆಯಾಸವಾಗಲೀ, ಯಾವುದನ್ನೂ ಹೊಂದುವುದಿಲ್ಲ. ನಾನಾರೂಪಗಳುಳ್ಳದ್ದಾಗಿಯೂ, ಚಿತ್ರಗಳಿಂದಲೂ, ಒಳ್ಳೆಯ ಸ್ವರಗಳಿಂದಲೂ, ಕೂಡಿರುವ, ಸೂರ್ಯ ಚಂದ್ರ ಅಗ್ನಿಗಳಿಗೆ ಮೀರಿದ ಸ್ವಂತವಾದ ಕಾಂತಿಯುಳ್ಳ, ಆ ಸಭೆಯು ಸ್ವರ್ಗದ ಮೇಲಿದ್ದುಕೊಂಡು ಪ್ರಕಾಶಮಾನವಾಗಿದ್ದಿತು.

೪೫-೪೬. ಆದರಲ್ಲಿರುವವರೆಲ್ಲರೂ ಸಂತೋಷದಿಂದಲೇ ಪ್ರಕಾಶಿಸುತ್ತಿದ್ದರು. ಅಲ್ಲಿರುವ ಭಕ್ಷ್ಯ ಭೋಜ್ಯಗಳು ರುಚಿಯಾಗಿಯೂ, ಬಹಳವಾಗಿಯೂ ಇದ್ದಿತು. ಅಲ್ಲಿರುವ ಹೂಮಾಲೆಗಳು ಸುವಾಸನೆಗಳುಳ್ಳದ್ದಾಗಿದ್ದುವು. ಮರಗಳು ಯಾವಾಗಲೂ ಹಣ್ಣು ಬಿಡುತ್ತಿದ್ದುವು. ಅಲ್ಲಿರುವ ನೀರು ಬೇಸಿಗೆಯಲ್ಲಿ ತಣ್ಣಗೂ ಶೀತಕಾಲದಲ್ಲಿ ಬೆಚ್ಚಗೂ ಇದ್ದಿತು.

೪೭. ಅಲ್ಲಿರುವ ಮರದ ಕೊಂಬೆಗಳು ಹೂಬಿಟ್ಟು ಚಿಗುರಿಯೂ ಇದ್ದುವು. ಬಳ್ಳಿಗಳು ಅವುಗಳಿಗೆ ಸುತ್ತಿಕೊಂಡಿದ್ದುವು. ಈ ರೀತಿಯಾಗಿ ಆ ವಿಶ್ವಕರ್ಮನು ಕಲ್ಪಿಸಿದ್ದನು.

**ಗಂಧವತಿ ಚ ಪುಷ್ಪಾಣಿ ರಸವಂತಿ ಫಲಾನಿ ಚ ।**
**ತಾನಿ ಶೀತಾನಿ ಚೋಷ್ಣಾನಿ ತತ್ರ ತತ್ರ ಸರಾಂಸಿ ಚ　　॥ ೪೮ ॥**

**ಅಪಶ್ಯದ್ಭೂಪ ತೀರ್ಥಾನಿ ಸಭಾಯಾಂ ಯಸ್ಯ ಸ ಪ್ರಭುಃ ।**
**ನಳಿನೈಃ ಪುಂಡರೀಕೈಶ್ಚ ಶತಪತ್ರೈಸ್ಸುಗಂಧಿಭಿಃ　　॥ ೪೯ ॥**

**ರಕ್ತೈಃ ಕುವಲಯೈಶ್ಚೈವ ಕಲ್ಹಾರೈರುತ್ಪಲೈಸ್ತಥಾ ।**
**ನಾನಾಶ್ಚರ್ಯಸಮೋಪೇತೈಃ ಪುಷ್ಪೈರನ್ಯೈಶ್ಚ ಸುಪ್ರಿಯೈಃ　　॥ ೫೦ ॥**

**ಕಾರಂಡವೈಶ್ಚಕ್ರವಾಕೈಸ್ಸಾರಸೈಃ ಕುರರೈರಪಿ ।**
**ವಿಮಲಸ್ಫಾಟಿಕಾಭಾನಿ ಪಾಂಡುರಚ್ಛದನೈರ್ದ್ವಿಜೈಃ　　॥ ೫೧ ॥**

**ಬಹುಹಂಸೋಪಗೀತಾನಿ ಸಾರಸಾನಾಂ ರುತಾನಿ ಚ ।**
**ಗಂಧವತ್ಯೋ ಲತಾಸ್ತತ್ರ ಪುಷ್ಪಮಂಜರಿಧಾರಿಣೀಃ　　॥ ೫೨ ॥**

**ದೃಷ್ಟವಾನ್ನಗವಾನ್ಹೃಷ್ಟಃ ಖದಿರಾನ್ವೇತಸಾರ್ಜುನಾನ್ ।**
**ಚೂತಾ ನಿಂಬಾ ನಾಗವೃಕ್ಷಾ ಕದಂಬಾ ವಕುಳಾ ಧವಾಃ　　॥ ೫೩ ॥**

---

೪೮-೫೦. ಸುವಾಸನೆಯುಳ್ಳ ಹೂಗಳನ್ನೂ ರುಚಿಯಾಗಿರುವ ಹಣ್ಣುಗಳನ್ನೂ ಶೀತವಾಗಿರುವ, ಬಿಸಿಯಾಗಿರುವ ನೀರುಗಳುಳ್ಳ ಕೊಳಗಳನ್ನೂ ಆ ನರಸಿಂಹನು ನೋಡಿದನು. ಕಮಲಗಳು, ಪುಂಡರೀಕಗಳು, ಶತಪತ್ರಗಳು, ಕೆಂದಾವರೆಗಳು, ಕಲ್ಹಾರಗಳು, ನೈದಿಲೆಗಳು, ಇನ್ನೂ ಬಗೆಬಗೆಯಾದ ಚೆನ್ನಾಗಿರುವ ಪುಷ್ಪಗಳಿಂದ ಆ ಸಭೆಯು ಕೂಡಿದ್ದಿತು.

೫೧. ಬಣ್ಣದಿಂದ ಕೂಡಿದ ನೀರುಹಕ್ಕಿಗಳಿಂದಲೂ ಸಾರಸ ಕುರರಪಕ್ಷಿಗಳಿಂದಲೂ, ಮತ್ತು ಸ್ಫಟಿಕಮಣಿಯಂತೆ ಬೆಳ್ಳಗಿರುವ ರೆಕ್ಕೆಗಳುಳ್ಳ ಪಕ್ಷಿಗಳಿಂದಲೂ ಕೂಡಿದ್ದಿತು.

೫೨. ಹಂಸಗಳ ಗೀತಗಳೂ, ಸಾರಸಗಳ ಕೂಗುಗಳೂ ಕೇಳಿ ಬರುತ್ತಿದ್ದುವು. ಅಲ್ಲಿರುವ ಬಳ್ಳಿಗಳು ವಾಸನೆಯುಳ್ಳವುಗಳಾಗಿ ಹೂಗೊಂಚಲನ್ನು ಧರಿಸಿದ್ದುವು.

೫೩-೫೬. ಕಗ್ಗಲಿ, ಸೀರಂಜಿ, ಮತ್ತಿ, ಮಾವು, ಬೇವು, ಪುನ್ನಾಗ, ಕಡವ, ಪಗಡೆ, ಪ್ರಿಯಂಗು, ಪಾದರಿ, ಬೂರಗ, ಶಾಲ, ತಾಲ, ಹೊಂಗೆ, ಸಂಪಗೆ, ಇವುಗಳೆ

ಪ್ರಿಯಂಗವಃ ಪಾಟಲಾಖ್ಯಾಶ್ಯಾಲ್ಮಲ್ಯಸ್ಸಹರಿದ್ರವಾಃ ।
ಶಾಲಾಸ್ತಾಲಾಸ್ತಮಾಲಾಶ್ಚ ಚಂಪಕಾಶ್ಚ ಮನೋರಮಾಃ ॥ ೫೪ ॥

ತಥೈವಾನ್ಯೇ ವ್ಯರಾಜಂತ ಸಭಾಯಾಂ ಪುಷ್ಪಿತಾ ದ್ರುಮಾಃ ।
ಏಲಾ ಕಕುಭ ಕಂಕೋಲ ಲವಲೀ ಬೀಜಪೂರಕಾಃ ॥ ೫೫ ॥

ಮಧೂಕಾಃ ಕೋವಿದಾರಾಶ್ಚ ಬಹುತಾಳಸಮುಚ್ಛ್ರಯಾಃ ।
ಅಂಜನಾಶೋಕಪರ್ಣಾಸಾ ಬಹವಶ್ಚಿತ್ರಕಾ ದ್ರುಮಾಃ ॥ ೫೬ ॥

ವರುಣಾಶ್ಚ ಪಲಾಶಾಶ್ಚ ಪನಸಾಸ್ಸಹ ಚಂದನೈಃ ।
ನೀಲಾಸ್ಸುಮನಸಶ್ಚೈವ ನೀಪಾಶ್ಚಾತ್ವತ್ಥ ತಿಂದುಕಾಃ ॥ ೫೭ ॥

ಪಾರಿಜಾತಾಶ್ಚ ತರವೋ ಮಲ್ಲಿಕಾ ಭದ್ರದಾರವಃ ।
ಆಟರೂಷಾಃ ಪೀಲಕಾಶ್ಚ ತಥಾ ನ್ಯೈ ಚೈಲವಾಲುಕಾಃ ॥ ೫೮ ॥

ಮಂದಾರಕಾಃ ಕುರವಕಾಃ ಪತಂಗಾಃ ಕುಟಜಾಸ್ತಥಾ ।
ರಕ್ತಾಃ ಕುರವಕಾಶ್ಚೈವ ನೀಲಾಶ್ಚಾಗುರುಭಿಸ್ಸಹ ॥ ೫೯ ॥

ಕಿಂಶುಕಾಶ್ಚೈವ ಭವ್ಯಾಶ್ಚ ದಾಡಿಮಾ ಬೀಜಪೂರಕಾಃ ।
ಕಾಲೀಯಕಾ ದುಕೂಲಾಶ್ಚ ಹಿಂಗವಸ್ತೈಲವರ್ತಿಕಾಃ ॥ ೬೦ ॥

ಖರ್ಜೂರಾ ನಾರಿಕೇಳಾಶ್ಚ ಹರೀತಕ ಮಧೂಕರಾಃ ।
ಸಪ್ತಪರ್ಣಾಶ್ಚ ಬಿಲ್ವಾಶ್ಚ ಸಯಾವಾಶ್ಚ ಶರಾವತಾಃ ॥ ೬೧ ॥

---

ಲ್ಲವೂ ಹೂಬಿಟ್ಟಿರುವುದನ್ನು ಆ ಸಭೆಯಲ್ಲಿ ಸ್ವಾಮಿಯು ನೋಡಿದನು. ಏಲಕ್ಕಿ, ಕಕುಭ, ಕಂಕೋಲ, ಲವಲೀ, ಸೀಬೆ, ಹಿಪ್ಪೆ, ಕಂಚುವಾಳ, ತಾಳ, ಅಂಜನ, ಅಶೋಕ ಪರ್ಣಾಸ, ಮುಂತಾದ ಬಹು ಮರಗಳಿದ್ದುವು.

೫೭-೬೨. ಬಸಲೆ, ಮುತ್ತುಗ, ಹಲಸು, ಚಂದನ, ಮುಂತಾದ ಮರಗಳೂ ನೀಲಿಯಬಣ್ಣದ ಹೂಗಳೂ ಇದ್ದುವು. ನೀರಂಜಿ, ಅರಳಿ, ತೂಬರೆಗಿಡ, ಪಾರಿಜಾತ, ಮಲ್ಲಿಗೆ, ಭದ್ರದಾರು, ಆಡುಸೋಗೆ, ಪೀಲು, ಸುರಸುರಕೆ, ಪಾರಿಜಾತ, ಗೋರಂಟೆ, ಪತಂಗ, ಕಾಡುಮಲ್ಲಿಗೆ, ಕೆಂಪುಗೋರಂಟೆ, ನೀಲಿ, ಅಗುರು, ಮುತ್ತುಗ, ದಾಳಿಂಬೆ, ಮಾದಳ, ಕಸ್ತೂರಿಅರಿಶಿನ, ದುಕೂಲಕ, ಇಂಗು, ಎಣ್ಣೆಯ ಗಿಡಗಳು, ಖರ್ಜೂರ, ತೆಂಗು, ಹರೀತಕ, ಹಿಪ್ಪೆ, ಏಳಲೆಬಾಳೆ, ಬಿಲ್ಲುಪತ್ರೆ, ಅರಗಿನಮರ, ನೀರುಹಬ್ಬೆ,

ಅಸನಾಶ್ಚ ತಮಾಲಾಶ್ಚ ನಾನಾಗುಲ್ಮಸಮಾವೃತಾಃ ।
ಲತಾಶ್ಚ ವಿವಿಧಾಕಾರಾಃ ಪುಷ್ಪಪತ್ರಫಲೋಪಮಾಃ ॥ ೬೨ ॥

ಏತೇ ಚಾನ್ಯೇ ಚ ಬಹವೋ ತತ್ರ ಕಾನನಜಾ ದ್ರುಮಾಃ ।
ನಾನಾಪುಷ್ಪಫಲೋಪೇತಾ ವ್ಯರಾಜಂತ ಸಮಂತತಃ ॥ ೬೩ ॥

ಚಕೋರಾಶ್ಶತಪತ್ರಾಶ್ಚ ಮತ್ತಕೋಕಿಲಸಾರಿಕಾಃ ।
ಪುಷ್ಪಿತಾನ್ಪುಷ್ಪಿತಾಗ್ರಾಂಶ್ಚ ಸಂಪತಂತಿ ಮಹಾದ್ರುಮಾನ್ ॥ ೬೪ ॥

ರಕ್ತಪೀತಾರುಣಾಸ್ತತ್ರ ಪಾದಪಾಗ್ರಗತಾಃ ಖಗಾಃ ।
ಪರಸ್ಪರಮವೈಕ್ಷಂತ ಪ್ರಹೃಷ್ಟಾ ಜೀವಜೀವಕಾಃ ॥ ೬೫ ॥

ತಸ್ಯಾಂ ಸಭಾಯಾಂ ದೈತ್ಯೇಂದ್ರೋ ಹಿರಣ್ಯಕಶಿಪುಸ್ತದಾ ।
ಆಸೀನ ಆಸನೇ ಚಿತ್ರೇ ದಶನಲ್ವಪ್ರಮಾಣತಃ ॥ ೬೬ ॥

ದಿವಾಕರನಿಭೇ ದಿವ್ಯೇ ದಿವ್ಯಾಸ್ತರಣಸಂಸ್ತೃತೇ ।
ಹಿರಣ್ಯಕಶಿಪುರ್ದೈತ್ಯ ಆಸ್ತೇ ಜ್ವಲಿತಕುಂಡಲಃ ॥ ೬೭ ॥

---

ಹೊನ್ನೇಮರ, ಹೊಂಗೆ, ಇವುಗಳೂ ಇನ್ನೂ ಅನೇಕ ಲತೆಗಳೂ ಇದ್ದವು ನಾನಾ ಬಗೆಯ ಲತೆಗಳು ಹೂವು ಎಲೆ ಹಣ್ಣುಗಳನ್ನೂ ಹೊಂದಿದ್ದಿತು.

೬೩. ಇವೂ ಇನ್ನೂ ಅನೇಕವಾದ ಕಾಡುಮರಗಳೂ ಹೂಹಣ್ಣುಗಳಿಂದ ಕೂಡಿ ಅಲ್ಲೆಲ್ಲಾ ಪ್ರಕಾಶಿತವಾಗಿತ್ತು.

೬೪. ಚಕೋರಪಕ್ಷಿಗಳೂ ಮರಕುಟಕಹಕ್ಕಿ ಕೋಗಿಲೆ, ಸಾರಿಗೆ ಈ ಹಕ್ಕಿಗಳೂ, ಹೂಬಿಟ್ಟ ಮರಗಳಲ್ಲಿ ಬಂದು ಬಂದು ಕೂರುತ್ತಿದ್ದುವು.

೬೫. ಮತ್ತು ಮರದ ತುದಿಯಲ್ಲಿದ್ದ ಕೆಂಪು ಬಿಳುಪು ಹಳದಿಯ ಹಕ್ಕಿಗಳೂ, ಚಕೋರಗಳೂ ಒಂದಕ್ಕೊಂದನ್ನು ನೋಡುತ್ತಿದ್ದುವು.

೬೬. ಅಂತಹ ಸಭೆಯಲ್ಲಿ ದೈತ್ಯೇಂದ್ರನಾದ ಹಿರಣ್ಯಕಶಿಪುವು ಹತ್ತುಮೊಳ ಎತ್ತರದಲ್ಲಿರುವ ಚಿತ್ರವಾದ ಸಿಂಹಾಸನದಲ್ಲಿ ಕುಳಿತಿದ್ದನು.

೬೭. ದಿವ್ಯವಾದ ಸೂರ್ಯನಂತೆ ಹೊಳೆಯುವ ಒಳ್ಳೆಯ ನೆಲಹಾಸಿಗೆಯನ್ನು ಹಾಸಿರುವ ಆ ಆಸನದಲ್ಲಿ ಹಿರಣ್ಯಕಶಿಪುವು ಪ್ರಕಾಶಮಾನವಾದ ಕರ್ಣಾಭರಣಗಳನ್ನು ಧರಿಸಿ ಕುಳಿತಿದ್ದನು.

ಉಪಾಚೇರುರ್ಮಹಾದೈತ್ಯಾ ಹಿರಣ್ಯಕಶಿಪುಂ ತದಾ ।
ದಿವ್ಯತಾಳಾನಿ ಗೀತಾನಿ ಜಗುರ್ಗಂಧರ್ವಸತ್ತಮಾಃ ॥ ೬೮ ॥

ವಿಶ್ವಾಚೀ ಸಹಜನ್ಯಾ ಚ ಪ್ರಮ್ಲೋಚೇತಿ ಚ ವಿಶ್ರುತಾಃ ।
ದಿವ್ಯಾಥ ಸೌರಭೇಯೀ ಚ ಸಮೀಚೀ ಪುಂಜಿತಸ್ಥಳಾ ॥ ೬೯ ॥

ಮಿಶ್ರಕೇಶೀ ಚ ರಂಭಾ ಚ ಚಿತ್ರಭಾ ಶ್ರುತಿವಿಭ್ರಮಾ ।
ಚಾರುನೇತ್ರಾ ಘೃತಾಚೀ ಚ ಮೇನಕಾಚೋರ್ವಶೀ ತಥಾ ॥ ೭೦ ॥

ಏತಾಸ್ಸಹಸ್ರಶಶ್ಚಾನ್ಯಾ ನೃತ್ಯಗೀತವಿಶಾರದಾಃ ।
ಉಪಾತಿಷ್ಠಂತ ರಾಜಾನಂ ಹಿರಣ್ಯಕಶಿಪುಂ ಪ್ರಭುಂ ॥ ೭೧ ॥

ಉಪಾಸತೇ ದಿತೇಃ ಪುತ್ರಾಸ್ಸರ್ವೇ ಲಬ್ಧವರಾಸ್ತಥಾ ।
ಬಲಿರ್ವೈರೋಚನಿಸ್ತತ್ರ ನರಕಃ ಪೃಥಿವೀಸುತಃ ॥ ೭೨ ॥

ಪ್ರಹ್ಲಾದೋ ವಿಪ್ರಚಿತ್ತಿಶ್ಚ ಗವಿಷ್ಠಶ್ಚ ಮಹಾಸುರಃ ।
ಸುರಹಂತಾ ದುಃಖಹರ್ತಾ ಸುಮನಾಸ್ಸುಮತಿಸ್ತಥಾ ॥ ೭೩ ॥

ಘಟೋದರೋ ಮಹಾಪಾರ್ಶ್ವಃ ಕ್ರಥನಃ ಪಿಠರಸ್ತಥಾ ।
ವಿಶ್ವರೂಪಸ್ಸುರೂಪಶ್ಚ ವಿಶ್ವಕಾಯೋ ಮಹಾಬಲಃ ॥ ೭೪ ॥

---

೬೮-೭೧. ದೊಡ್ಡ ದೊಡ್ಡ ದೈತ್ಯರೆಲ್ಲರೂ ಆ ಹಿರಣ್ಯಕಶಿಪುವನ್ನು ಸೇವಿಸುತ್ತಿದ್ದರು. ಗಂಧರ್ವರು ತಾಳಗಳನ್ನು ಹಾಕುತ್ತ ಗೀತೆಗಳನ್ನು ಹಾಡುತ್ತಿದ್ದರು. ವಿಶ್ವಾಚಿ ಸಹಜನ್ಯೆ, ಪ್ರಮ್ಲೋಚೆ, ವಿಶ್ರುತೇ, ದಿವ್ಯೆ, ಸೌರಭೇಯಿ, ಸಮೀಚಿ, ಪುಂಜಿತಸ್ಥಳೆ, ಮಿಶ್ರಕೇಶಿ, ರಂಭೆ, ಚಿತ್ರಭೆ, ಶ್ರುತಿವಿಭ್ರಮೆ, ಚಾರುನೇತ್ರೆ, ಘೃತಾಚಿ, ಮೇನಕೆ, ಊರ್ವಶಿ, ಇವರೇ ಮುಂತಾಗಿ ಸಾವಿರಾರು ಜನ ನೃತ್ಯಗೀತ ವಿಶಾರದರು ಆ ಹಿರಣ್ಯಕಶಿಪುವನ್ನು ಸೇವಿಸುತ್ತಿದ್ದರು.

೭೨-೭೯. ಈ ದಿತಿಯ ಮಕ್ಕಳೆಲ್ಲರೂ ಆತನನ್ನು ಸೇವಿಸುತ್ತಿದ್ದರು. ಅವರೆಲ್ಲರೂ ವರವನ್ನು ಹೊಂದಿರುವವರು ವಿರೋಚನನ ಮಗನಾದ ಬಲಿ, ಭೂಮಿಯ ಮಗನಾದ ನರಕ, ಪ್ರಹ್ಲಾದ, ವಿಪ್ರಚಿತ್ತಿ, ಗವಿಷ್ಠ, ಸುರಹಂತ, ದುಃಖಕರ್ತ, ಸುಮನ, ಸುಮತಿ, ಘಟೋದರ, ಮಹಾಪಾರ್ಶ್ವ, ಕ್ರಥನ, ಪಿಠರ, ವಿಶ್ವರೂಪ, ಸುರೂಪ, ವಿಶ್ವ

ದಶಗ್ರೀವಶ್ಚ ವಾಲೀಚ ಮೇಘವಾಸಾ ಮಹಾಸುರಃ ।
ಘಟಾಭೋ ವಿಟರೂಪಶ್ಚ ಜ್ವಲನಶ್ಚೇಂದ್ರತಾಪನಃ ॥ ೭೫ ॥

ದೈತ್ಯದಾನವಸಂಘಾಸ್ತೇ ಸರ್ವೇ ಜ್ವಲಿತಕುಂಡಲಾಃ ।
ಸ್ರಗ್ವಿಣೋ ವರ್ಮಿಣಸ್ಸರ್ವೇ ಸರ್ವೇ ಚ ಚರಿತವ್ರತಾಃ ॥ ೭೬ ॥

ಸರ್ವೇ ಲಬ್ಧವರಾಶ್ಶೂರಾಸ್ಸರ್ವೇ ವಿಹಿತಮೃತ್ಯವಃ ।
ಏತೇ ಚಾನ್ಯೇ ಚ ಬಹವೋ ಹಿರಣ್ಯಕಶಿಪುಂ ಪ್ರಭುಂ ॥ ೭೭ ॥

ಉಪಾಸತೇ ಮಹಾತ್ಮಾನಂ ಸರ್ವೇ ದಿವ್ಯಪರಿಚ್ಛದಾಃ ।
ವಿಮಾನೈರ್ವಿವಿಧಾಕಾರೈರ್ಭ್ರಾಜಮಾನೈರಿವಾಗ್ನಿಭಿಃ ॥ ೭೮ ॥

ಮಹೇಂದ್ರವಪುಷಸ್ಸರ್ವೇ ವಿಚಿತ್ರಾಂಗದಬಾಹವಃ ।
ಭೂಷಿತಾಂಗಾ ದಿತೇಃ ಪುತ್ರಾಸ್ತಮುಪಾಸತ ಸರ್ವತಃ ॥ ೭೯ ॥

ತಸ್ಯಾಂ ಸಭಾಯಾಂ ದಿವ್ಯಾಯಾಮಸುರಾಸ್ಸರ್ವತೋತ್ತಮಾಃ ।
ಹಿರಣ್ಯಕಶಿಪೋಸ್ಸರ್ವೇ ದಿವಾಕರಸಮಪ್ರಭಾಃ ॥ ೮೦ ॥

---

ಕಾಯಿ, ದಶಗ್ರೀವ, ವಾಲೀ, ಮೇಘಭಾಸ, ಘಟಾಭ, ವಿಟರೂಪ, ಜ್ವಲನ, ಇಂದ್ರತಾಪನ, ಇವರೂ ಇದೂ ಅಲ್ಲದೆ ಇತರ ದೈತ್ಯರೂ ದಾನವರ ಗುಂಪೇ ಸೇವಿಸುತ್ತಿದ್ದರು. ಇವರೆಲ್ಲರೂ ಪ್ರಕಾಶಮಾನವಾದ ಕುಂಡಲಗಳನ್ನು ಹಾಕಿಕೊಂಡಿರುವರು. ಮಾಲೆಯನ್ನು ಧರಿಸಿದ್ದರು. ಕವಚವನ್ನು ಧರಿಸಿದ್ದರು. ಎಲ್ಲರೂ ತಪಸ್ವಿಗಳು. ಎಲ್ಲರೂ ವರವನ್ನು ಹೊಂದಿದವರು. ಶೂರರು. ಮರಣವನ್ನು ತಮಗೆ ಬೇಕಾದ ರೀತಿಯಲ್ಲಿ ಕೇಳಿಕೊಂಡಿರುವರು. ಇವರೂ ಇನ್ನೂ ಅನೇಕರು ಸ್ವಾಮಿಯಾದ ಹಿರಣ್ಯಕಶಿಪುವನ್ನು ಸೇವಿಸುತ್ತಿದ್ದರು. ಇವರೆಲ್ಲರೂ ಒಳ್ಳೆಯ ಬಟ್ಟೆಯನ್ನು ಹಾಕಿಕೊಂಡಿದ್ದರು. ಒಗೆಒಗೆಯಾದ ಅಗ್ನಿಯಂತೆ ಪ್ರಕಾಶಮಾನವಾದ ವಿಮಾನವುಳ್ಳವರು. ಉತ್ತಮವಾದ ದೇಹವುಳ್ಳವರು. ವಿಚಿತ್ರವಾದ ಭುಜಕೀರ್ತಿಯನ್ನು ಹಾಕಿಕೊಂಡಿರುವ ತೋಳುಗಳುಳ್ಳವರು. ಭೂಷಣವನ್ನು ತೊಟ್ಟಿರುವವರು. ಇಂತಹ ಇವರು ಆ ಮಹಾತ್ಮನಾದ ಹಿರಣ್ಯಕಶಿಪುವನ್ನು ಸೇವಿಸುತ್ತಿದ್ದರು.

೮೦-೮೧. ಈ ರೀತಿಯಾಗಿ ಆ ದಿವ್ಯವಾದ ಹಿರಣ್ಯಕಶಿಪುವಿನ ಸಭೆಯಲ್ಲಿ ಅಸುರೋತ್ತಮರು ಇದ್ದರು. ಇವರೆಲ್ಲರೂ ಸೂರ್ಯನಂತೆ ಕಾಂತಿಯುಳ್ಳವರು. ಹಿರಣ್ಯ

ನ ಶ್ರುತಂ ನೈವ ನೋ ದೃಷ್ಟಂ ಹಿರಣ್ಯಕಶಿಪೋರ್ಯಥಾ ।
ಐಶ್ವರ್ಯಂ ದೈತ್ಯಸಿಂಹಸ್ಯ ಯಥಾ ತಸ್ಯ ಮಹಾತ್ಮನಃ ।
ನ ಶ್ರುತಂ ನೈವ ದೃಷ್ಟಂ ಚ ಕಸ್ಯಾಪಿ ಭುವನತ್ರಯೇ ॥ ೮೧ ॥

ರಜತಕನಕಚಿತ್ರವೇದಿಕಾಯಾಂ
ಪರಿಕೃತರತ್ನವಿಚಿತ್ರವೀಥಿಕಾಯಾಂ ।
ಸ ದದರ್ಶ ಮೃಗಾಧಿಪಸ್ಸಭಾಯಾಂ
ಸುರುಚಿರ ಜಾಲಗವಾಕ್ಷಶೋಭಿತಾಯಾಂ ॥ ೮೨ ॥

ಕನಕವಲಯಹಾರಭೂಷಿತಾಂಗಂ
ದಿತಿತನಯಂ ಸ ಮೃಗಾಧಿಪೋ ದದರ್ಶ ।
ದಿವಸಕರಕರಪ್ರಭಂ ಜ್ವಲಂತಂ
ದಿತಿಜ ಸಹಸ್ರಶತೈರ್ನಿಷೇವ್ಯಮಾಣಂ ॥ ೮೩ ॥

ತತೋ ದೃಷ್ಟ್ವಾ ಮಹಾಭಾಗಂ ಕಾಲಚಕ್ರಮಿವಾಗತಂ ।
ನರಸಿಂಹವಪುಶ್ಛನ್ನಂ ಭಸ್ಮಚ್ಛನ್ನಮಿವಾನಲಂ ॥ ೮೪ ॥

---

ಕಶಿಪುವಿನ ಸಭೆಯಂತಹ ಸಭೆಯನ್ನು ನಾವು ನೋಡಿಯೂ ಇಲ್ಲ. ಕೇಳಿಯೂ ಇಲ್ಲ. ದೈತ್ಯಶ್ರೇಷ್ಠನಾದ ಆ ಹಿರಣ್ಯಕಶಿಪುವಿನ ಐಶ್ವರ್ಯದಂತಹ ಐಶ್ವರ್ಯವನ್ನು ಮೂರು ಲೋಕದಲ್ಲಿಯೂ ನೋಡಿಲ್ಲ. ಕಡೆಗೆ ಕೇಳಿಯೂ ಇಲ್ಲ.

೮೨. ಚಿನ್ನ ಬೆಳ್ಳಿಯ ಚಿತ್ರದ ಜಗುಲಿಯುಳ್ಳ ರತ್ನಗಳಿಂದ ಕೂಡಿದ ಬೀದಿಯುಳ್ಳ ಚೆನ್ನಾಗಿರುವ ಗವಾಕ್ಷಗಳುಳ್ಳ ಆ ಸಭೆಯಲ್ಲಿ ನರಸಿಂಹನು ಆ ದೈತ್ಯನನ್ನು ನೋಡಿದನು.

೮೩. ಚಿನ್ನದ ಬಳೆ ಹಾರಗಳನ್ನು ಹಾಕಿಕೊಂಡಿರುವ ಸೂರ್ಯನಂತೆ ಕಾಂತಿಯುಳ್ಳ ಅನೇಕಜನ ದೈತ್ಯರಿಂದ ಸೇವಿಸಲ್ಪಡುತ್ತಿರುವ ಆ ದಿತಿಯ ಮಗನಾದ ಹಿರಣ್ಯಕಶಿಪುವನ್ನು ಆ ಮೃಗಾಧಿಪನು ನೋಡಿದನು.

೮೪. ಕಾಲಚಕ್ರದಂತೆ ಬಂದಿರುವ ಮಹಾಭಾಗನಾದ, ಬೂದಿಯಿಂದ ಮುಚ್ಚಿದ ಕೆಂಡದಂತೆ ಇರುವ, ನರಸಿಂಹನ ಶರೀರದಿಂದ ಮುಚ್ಚಿಕೊಂಡಿರುವ ಆ ಸ್ವಾಮಿಯನ್ನು ಎಲ್ಲರೂ ನೋಡಿದರು.

ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ನಾಮ ವೀರ್ಯವಾನ್ ।
ದಿವ್ಯೇನ ವಪುಷಾ ಸಿಂಹಮಪಶ್ಯದ್ದೇವಮಾಗತಂ ॥ ೮೫ ॥

ತಂ ದೃಷ್ಟ್ವಾ ರುಕ್ಮಶೈಲಾಭಾಮಪೂರ್ವಾಂ ತನುಮಾಶ್ರಿತಾಂ ।
ವಿಸ್ಮಿತಾ ದಾನವಾಸ್ಸರ್ವೇ ಹಿರಣ್ಯಕಶಿಪುಶ್ಚ ಸಃ ॥ ೮೬ ॥

॥ ಪ್ರಹ್ಲಾದ ಉವಾಚ ॥

ಮಹಾರಾಜ ಮಹಾಬಾಹೋ ದೈತ್ಯಾನಾಮಾದಿಸಂಭವ ।
ನ ಶ್ರುತಂ ನೈವ ಮೇ ದೃಷ್ಟಂ ನಾರಸಿಂಹಮಿದಂ ವಪುಃ ॥ ೮೭ ॥

ಅವ್ಯಕ್ತಂ ಪರಮಂ ದಿವ್ಯಂ ಕಿಮಿದಂ ರೂಪಮಾಗತಂ ।
ದೈತ್ಯಾಂತಕರಣಂ ಘೋರಂ ಶಂಸತೀವ ಮನೋ ಮಮ ॥ ೮೮ ॥

ಅಸ್ಯ ದೇವಾಶ್ಶರೀರಸ್ಥಾಸ್ಸಾಗರಾಸ್ಸರಿತಸ್ತಥಾ ।
ಹಿಮವಾನ್ಪಾರಿಯಾತ್ರಶ್ಚ ಯೇಚಾನ್ಯೇ ಕುಲಪರ್ವತಾಃ ॥ ೮೯ ॥

ಚಂದ್ರಮಾಶ್ಚ ಸನಕ್ಷತ್ರೈರಾದಿತ್ಯಾ ರಶ್ಮಿಭಿಸ್ಸಹ ।
ಧನದೋ ವರುಣಶ್ಚೈವ ಯಮಶ್ಶಕ್ರಶ್ಶಚೀಪತಿಃ ॥ ೯೦ ॥

---

೮೫. ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನು ದಿವ್ಯಶರೀರದಿಂದ ಕೂಡಿ ಬಂದಿರುವ ದೇವನನ್ನು ನೋಡಿದನು.

೮೬. ಚಿನ್ನದಂತೆ ಇರುವ ಅಪೂರ್ವವಾದ ದೇಹವನ್ನು ಹೊಂದಿರುವ ಅವನನ್ನು ದಾನವರೂ ಆ ಹಿರಣ್ಯಕಶಿಪುವೂ ನೋಡಿದರು.

೮೭. ಎಲೈ ಮಹಾಬಾಹುವಾದ ಮಹಾರಾಜನೇ ! ದೈತ್ಯರಿಗೆಲ್ಲಾ ಮೊದಲನೆಯವನೇ ! ಈ ನರಸಿಂಹನ ಶರೀರವನ್ನು ನೋಡು. ನಾವು ಹಿಂದೆ ನೋಡಿಯೂ ಇಲ್ಲ, ಕೇಳಿಯೂ ಇಲ್ಲ.

೮೮. ತಿಳಿಯದಿರುವ ಉತ್ತಮವಾದ ರೂಪವೇತಕ್ಕೆ ಬಂದಿರುವುದು ? ಇದನ್ನು ನೋಡಿದರೆ ದೈತ್ಯರಿಗೆ ವಿನಾಶವನ್ನುಂಟುಮಾಡುವುದಕ್ಕಾಗಿ ಬಂದಿರುವ ಘೋರರೂಪವೆಂದು ನನ್ನ ಮನಸ್ಸು ಹೇಳುತ್ತದೆ.

೮೯-೯೪. ಈ ನರಸಿಂಹನ ಶರೀರದಲ್ಲಿ ದೇವತೆಗಳೂ, ಸಾಗರಗಳೂ, ನದಿಗಳೂ, ಕಾಣುತ್ತವೆ. ಹಿಮವಂತ, ಪಾರಿಯಾತ್ರ, ಮೊದಲಾದ ಕುಲಪರ್ವತಗಳೂ ಕಾಣುತ್ತವೆ. ಚಂದ್ರ, ನಕ್ಷತ್ರ, ಸೂರ್ಯ, ಕುಬೇರ, ವರುಣ, ಯಮ, ಇಂದ್ರ,

ಮರುತೋ ದೇವಗಂಧರ್ವಾ ಋಷಯಶ್ಚ ತಪೋಧನಾಃ ।
ನಾಗಾ ಯಕ್ಷಾಃ ಪಿಶಾಚಾಶ್ಚ ರಾಕ್ಷಸಾ ಭೀಮವಿಕ್ರಮಾಃ ॥ ೯೧

ಬ್ರಹ್ಮಾ ದೇವಾಃ ಪಶುಪತಿಃ ಲಲಾಟಸ್ಥಾಃ ಭ್ರಮಂತಿ ಹಿ ।
ಸ್ಥಾವರಾಣಿ ಚ ಸರ್ವಾಣಿ ಜಂಗಮಾನಿ ತಥೈವ ಚ ॥ ೯೨

ಭವಂತಸ್ಸಹಿತೋಽಸ್ಮಾಭಿಸ್ಸರ್ವೈರ್ದೈತ್ಯಗಣೈರ್ವೃತಃ ।
ವಿಮಾನಶತಸಂಕೀರ್ಣಾ ಸರ್ವಾ ಯಾ ಭವತಸ್ಸಭಾ ॥ ೯೩

ಸರ್ವಂ ತ್ರಿಭುವನಂ ರಾಜಂಲ್ಲೋಕಧರ್ಮಶ್ಚ ಶಾಶ್ವತಃ ।
ದೃಶ್ಯತೇ ನರಸಿಂಹೇಽಸ್ಮಿಂಸ್ತಥೇದಂ ನಿಖಿಲಂ ಜಗತ್ ॥ ೯೪

ಪ್ರಜಾಪತಿಶ್ಚಾತ್ರ ಮನುರ್ಮಹಾತ್ಮಾ
ಗ್ರಹಾಶ್ಚ ಯೋಗಾತ್ತು ಮಹೀ ನಭಶ್ಚ ।
ಉತ್ಪಾತಕಾಲಶ್ಚ ಧೃತಿರ್ಮತಿಶ್ಚ
ರತಿಶ್ಚ ಸತ್ಯಂ ಚ ತಪೋ ದಮಶ್ಚ. ॥ ೯೫ ॥

ಸನತ್ಕುಮಾರಶ್ಚ ಮಹಾನುಭಾವೋ
ವಿಶ್ವೇ ಚ ದೇವಾ ಋಷಯಶ್ಚ ಸರ್ವೇ ।
ಕ್ರೋಧಶ್ಚ ಕಾಮಶ್ಚ ತಥೈವ ಹರ್ಷೋ
ದರ್ಪಶ್ಚ ಮೋಹಃ ಪಿತರಶ್ಚ ಸರ್ವೇ ॥ ೯೬ ॥

---

ಮರುತ್ತುಗಳೂ, ದೇವರು, ಗಂಧರ್ವರು, ಋಷಿಗಳು, ನಾಗರು, ಯಕ್ಷರು, ಪಿಶಾಚರು ರಾಕ್ಷಸರು, ಇವರು ಅವನ ದೇಹದಲ್ಲಿ ಕಾಣುತ್ತಾರೆ. ಬ್ರಹ್ಮನೂ ರುದ್ರನೂ ಹಣೆಯಲ್ಲಿ ಓಡಾಡುತ್ತಾರೆ. ಸ್ಥಾವರ ಜಂಗಮವೆಲ್ಲವೂ ಅವನ ದೇಹದಲ್ಲಿವೆ. ನೀನೂ, ನಾವೂ, ಈ ದೈತ್ಯರುಗಳೂ, ಈ ವಿಮಾನಗಳೂ, ನಿನ್ನ ಸಭೆಯೂ, ಮೂರುಲೋಕವೂ ಕೂಡ ಈತನ ದೇಹದಲ್ಲಿದ್ದೇವೆ. ಶಾಶ್ವತವಾದ ಲೋಕಧರ್ಮವೂ ಕೂಡ ಈ ನರಸಿಂಹನಲ್ಲಿ ಕಾಣುತ್ತದೆ. ಒಟ್ಟಿನಲ್ಲಿ ಎಲ್ಲಾ ಪ್ರಪಂಚವೂ ಕಾಣುತ್ತದೆ.

೯೫-೯೬. ಪ್ರಜಾಪತಿ, ಮನು, ಗ್ರಹ, ಯೋಗ, ಭೂಮಿ, ಆಕಾಶ ಉತ್ಪಾತಕಾಲ, ಧೃತಿ, ಮತಿ, ರತಿ, ಸತ್ಯ, ತಪಸ್ಸು, ದಮ, ಸನತ್ಕುಮಾರ, ವಿಶ್ವೇದೇವರು, ಋಷಿಗಳು, ಕ್ರೋಧ, ಕಾಮ, ಹರ್ಷ, ದರ್ಪ, ಮೋಹ, ಪಿತೃಗಳೂ ಇವರೆಲ್ಲರೂ ಈತನ ದೇಹದಲ್ಲಿರುವರು.

॥ ಪುಲಸ್ತ್ಯ ಉವಾಚ ॥

ಪ್ರಹ್ಲಾದಸ್ಯ ವಚಶ್ಶ್ರುತ್ವಾ ಹಿರಣ್ಯಕಶಿಪುಃ ಪ್ರಭುಃ ।
ಉವಾಚ ದಾನವಾನ್ಸರ್ವಾನ್ಗಣಾಂಶ್ಚ ಸಗಣಾಧಿಪಾಃ ॥ ೯೭ ॥

॥ ಹಿರಣ್ಯಕಶಿಪುರುವಾಚ ॥

ಮೃಗೇಂದ್ರೋ ಗೃಹ್ಯತಾಮೇಃ ಅಪೂರ್ವಾಂ ವಷಂ ತನುಮಾಶ್ರಿತಃ ।
ಯದಿ ವಾ ಸಂಶಯಃ ಕಶ್ಚಿದ್ವಧ್ಯತಾಂ ವನಗೋಚರಃ ॥ ೯೮ ॥

॥ ಪುಲಸ್ತ್ಯ ಉವಾಚ ॥

ತೇ ದಾನವಗಣಾಸ್ಸರ್ವೇ ಮೃಗೇಂದ್ರಂ ಭೀಮವಿಕ್ರಮಂ ।
ಪರಿಕ್ಷಿಪಂತೋ ಮುದಿತಾಸ್ತ್ರಾಸಯಾಮಾಸುರೋಜಸಾ ॥ ೯೯ ॥

ಸಿಂಹನಾದಂ ವಿಮುಚ್ಯಾಥ ನರಸಿಂಹೋ ಮಹಾಬಲಃ ।
ಬಭಂಜ ತಾಂ ಸಭಾಂ ಸರ್ವಾಂ ವ್ಯಾದಿತಾಸ್ಯ ಇವಾಂತಕಃ ॥ ೧೦೦ ॥

ಸಭಾಯಾಂ ಭಜ್ಯಮಾನಾಯಾಂ ಹಿರಣ್ಯಕಶಿಪುಸ್ಸ್ವಯಂ ।
ಚಿಕ್ಷೇಪಾಸ್ತ್ರಾಣಿ ಸಿಂಹಸ್ಯ ರೋಷವ್ಯಾಕುಲಲೋಚನಃ ॥ ೧೦೧ ॥

---

೯೭. ಪುಲಸ್ತ್ಯನು ಹೇಳಿದನು— ಆ ಹಿರಣ್ಯಕಶಿಪುವು ಪ್ರಹ್ಲಾದನ ಈ ಮಾತನ್ನು ಕೇಳಿ ದಾನವರನ್ನೂ ಅವರ ಅನುಯಾಯಿಗಳನ್ನೂ ಕುರಿತು ಇಂತೆಂದನು

೯೮. ಹಿರಣ್ಯಕಶಿಪುವು ಹೇಳಿದನು— ಅಪೂರ್ವವಾದ ಈ ದೇಹವನ್ನು ಹೊಂದಿರುವ ಮೃಗವನ್ನು ಹಿಡಿಯಿರಿ. ನಿಮಗೇನಾದರೂ ಸಂಶಯವಿದ್ದಲ್ಲಿ ಈ ಕಾಡುಮೃಗವನ್ನು ಕಟ್ಟಿರಿ.

೯೯. ಪುಲಸ್ತ್ಯನು ಹೇಳಿದನು—ಆಗ ಆ ದಾನವರೆಲ್ಲರೂ ಪರಾಕ್ರಮಿಯಾದ ಆ ಸಿಂಹವನ್ನು ಓಡಿಯಾಡಿಸುತ್ತಾ ಹೆದರಿಸಿದರು.

೧೦೦. ಆಗ ಆ ಮಹಾಬಲಶಾಲಿಯಾದ ಸಿಂಹವು ಸಿಂಹನಾದಮಾಡುತ್ತ ಬಾಯಿಬಿಚ್ಚಿರುವ ಯಮನಂತೆ ಆ ಸಭೆಯನ್ನೆಲ್ಲಾ ನಾಶಮಾಡಿತು.

೧೦೧. ಆ ಸಭೆಯನ್ನು ನಾಶಮಾಡಲು ಹಿರಣ್ಯಕಶಿಪುವು ಕೋಪಗೊಂಡು ಅದರಮೇಲೆ ಅಸ್ತ್ರಗಳನ್ನು ಬಿಟ್ಟನು.

ಸರ್ವಾಸ್ತ್ರಾಣಾಮಥ ಶ್ರೇಷ್ಠಂ ದಂಡಮಸ್ತ್ರಂ ಸುದಾರುಣಂ ।
ಕಾಲಚಕ್ರಂ ತಥಾ ಘೋರಂ ವಿಷ್ಣುಚಕ್ರಂ ತಥಾಪರಂ ॥ ೧೦೨ ॥

ಪೈತಾಮಹಂ ಕಥಾತ್ಯುಗ್ರಂ ತ್ರೈಲೋಕ್ಯೇ ನಿರ್ಮಿತಂ ಮಹತ್ ।
ವಿಚಿತ್ರಮಶನಿಂ ಚೈವ ಶುಷ್ಕಾರ್ದ್ರೇ ಚಾಶನಿದ್ವಯಂ ॥ ೧೦೩ ॥

ರೌದ್ರಂ ತಥೋಗ್ರಶೀಲಂ ಚ ಹುಂಕಾರಂ ಮುಶಲಂ ತಥಾ ।
ಅಸ್ತ್ರಂ ಬ್ರಹ್ಮಶಿರಶ್ಚೈವ ಬ್ರಾಹ್ಮಮಸ್ತ್ರಂ ತಥೈವ ಚ ॥ ೧೦೪ ॥

ನಾರಾಯಣಾಸ್ತ್ರಮೈಂದ್ರಂ ಚ ಆಗ್ನೇಯಂ ಶೈಶಿಕಂ ತಥಾ ।
ವಾಯವ್ಯಂ ಮಂಥನಂ ಚೈವ ಕಾಪಾಲಮಥ ಕಿಂಕರಂ ॥ ೧೦೫ ॥

ತಥಾ ಪ್ರತಿಹತಾಂ ಶಕ್ತಿಂ ಕ್ರೌಂಚಮಸ್ತ್ರಂ ತಥೈವ ಚ ।
ಅಸ್ತ್ರಂ ಬ್ರಹ್ಮಶಿರಶ್ಚೈವ ಸೋಮಾಸ್ತ್ರಂ ಶೈಶಿರಂ ತಥಾ ॥ ೧೦೬ ॥

ಮೋಹನಂ ಶೋಷಣಂ ಚೈವ ಸಂತಾಪನವಿಲಾಪನಂ ।
ಕಂಪನಂ ಶಾತನಂ ಚೈವ ಮಹಾಸ್ತ್ರಂ ಚೈವ ರೋಧನಂ ॥ ೧೦೭ ॥

ಕಾಲಮುದ್ಗರಮಕ್ಷೋಭ್ಯಂ ತಾಪನಂ ಚ ಮಹಾಬಲಂ ।
ಸಂವರ್ತನಂ ಮೋಹನಂ ಚ ತಥಾ ಮಾಯಾಧರಂವರಂ ॥ ೧೦೮ ॥

ಗಂಧರ್ವಮಸ್ತ್ರಂ ದಯಿತಮಸಿರತ್ನಂ ಚ ನಂದಕಂ ।
ಪ್ರಸ್ವಾಪನಂ ಪ್ರಮಥನಂ ವಾರುಣಂ ಚಾಸ್ತ್ರಮುತ್ತಮಂ ॥ ೧೦೯ ॥

---

೧೦೨-೧೦೩. ಅಸ್ತ್ರಗಳಿಗೆಲ್ಲಾ ಶ್ರೇಷ್ಠವಾದ ದಂಡಾಸ್ತ್ರ, ಕಾಲಚಕ್ರ, ವಿಷ್ಣು ಚಕ್ರ, ಬ್ರಹ್ಮಾಸ್ತ್ರ, ಶುಷ್ಕಾಶನಿ, ಆರ್ದ್ರಾಶನಿಗಳು ಇವನ್ನೂ ಬಿಟ್ಟನು.

೧೦೪. ರೌದ್ರಾಸ್ತ್ರ, ಉಗ್ರಶೀಲಾಸ್ತ್ರ, ಹುಂಕಾರ, ಮುಶಲಾಸ್ತ್ರಗಳು, ಬ್ರಹ್ಮ ಶಿರಸ್ಸು, ಬ್ರಾಹ್ಮ ಈ ಅಸ್ತ್ರಗಳನ್ನೂ ಬಿಟ್ಟನು.

೧೦೫-೧೦೭. ನಾರಾಯಣ, ಇಂದ್ರ, ಆಗ್ನೇಯ, ಶೈಶಿರ, ವಾಯುವ್ಯ, ಮಥನ, ಕಾಪಾಲ, ಕಿಂಕರ್ಶ ಶಕ್ತಿ, ಕ್ರೌಂಚ, ಬ್ರಹ್ಮಶಿರ, ಸೋಮ, ಶೈಶಿರ, ಮೋಹನ, ಶೋಷಣ, ಸಂತಾಪನ, ವಿಲಾಪನ, ಕಂಪನ, ಶಾತನ, ಮಹಾಸ್ತ್ರ, ರೋಧನ ಈ ಅಸ್ತ್ರಗಳನ್ನೂ ಬಿಟ್ಟನು.

೧೦೮-೧೧೧. ಕಾಲಮುದ್ಗರ, ತಾಪನ, ಸಂವರ್ತನ, ಮೋಹನ, ಮಯಾಧರ' ಗಂಧರ್ವ, ಅಸಿರತ್ನ, ನಂದಕ, ಪ್ರಸ್ವಾಪನ, ಪ್ರಮಥನ, ವಾರುಣ, ಪಾಶುಪತ ಈ

ಅಸ್ತ್ರಂ ಪಾಶುಪತಂ ಚೈವ ಯಸ್ಯಾಪ್ರತಿಹತಾ ಗತಿಃ ।
ಏತಾನ್ಯಸ್ತ್ರಾಣಿ ದಿವ್ಯಾನಿ ಹಿರಣ್ಯಕಶಿಪುಸ್ತದಾ ॥ ೧೧೦ ॥

ಅಸೃಜನ್ನರಸಿಂಹಸ್ಯ ದೀಪ್ತಸ್ಯಾಗ್ನೇರಿವಾಹುತಿಂ ।
ಅಸ್ತ್ರೈಃ ಪ್ರಜ್ವಲಿತೈಸ್ಸಿಂಹಮಾವೃಣೋದಸುರೋತ್ತಮಃ ॥ ೧೧೧ ॥

ವಿವಸ್ವಾನ್ಘರ್ಮಸಮಯೇ ಹಿಮವಂತಮಿವಾಂಶುಭಿಃ ।
ಸಹ್ಯಮರ್ಷಾನಿಲೋದ್ಧೂತೋ ದೈತ್ಯಾನಾಂ ಸೈನ್ಯಸಾಗರಃ ॥ ೧೧೨ ॥

ಕ್ಷಣೇನಾಪ್ಲಾವಯತ್ಸರ್ವಂ ಮೈನಾಕಮಿವ ಸಾಗರಃ ।
ಪ್ರಾಸೈಃ ಪಾಶೈಶ್ಚ ಖಡ್ಗೈಶ್ಚ ಗದಾಭಿರ್ಮುಸಲೈಸ್ತಥಾ ॥ ೧೧೩ ॥

ವಜ್ರೈರಶನಿಭಿಶ್ಚೈವ ಬಹುಶಾಖೈರ್ಮಹಾದ್ರುಮೈಃ ।
ಮುದ್ಗರೈಃ ಕೂಟಪಾಶೈಶ್ಚ ಶಿಲೋಲೂಖಲಪರ್ವತೈಃ

ಶತಘ್ನೀಭಿಶ್ಚ ದೀಪ್ತಾಭಿಃ ದಂಡೈರಪಿ ಸುದಾರುಣೈಃ ॥ ೧೧೪ ॥

---

ಅಸ್ತ್ರಗಳನ್ನೂ ಆ ಸಿಂಹನ ಮೇಲೆ ಬಿಟ್ಟನು. ಈ ಅಸ್ತ್ರಗಳು ಉರಿಯುತ್ತಿರುವ ಬೆಂಕಿಯಲ್ಲಿ ಆಹುತಿಯು ಬಿದ್ದಂತಾಗುತ್ತಿದ್ದಿತು. ಅಂತೂ ಈ ಅಸ್ತ್ರಗಳಿಂದ ಆ ನರಸಿಂಹನನ್ನು ಮುಚ್ಚಿದನು.

೧೧೨-೧೧೪. ಆ ರಾಕ್ಷಸಸೈನ್ಯವೂ ಕೂಡ ಕ್ರೋಧದಿಂದ ಬಿಸಿಲುಕಾಲದಲ್ಲಿ ಸೂರ್ಯನು ಹಿಮವಂತನನ್ನು ಸುಡುವಂತೆ ಸುಡುತ್ತಿರಲು ಅವೆಲ್ಲವನ್ನೂ ಈ ನರಸಿಂಹನು ಸಮುದ್ರವು ಮೈನಾಕಪರ್ವತವನ್ನು ಮುಳುಗಿಸುವಂತೆ ಮುಳುಗಿಸಿದನು. (ನಾಶಮಾಡಿದನು.) ಪ್ರಾಸ, ಪಾಶ, ಖಡ್ಗ, ಗದೆ, ಮುಸಲ, ವಜ್ರ, ಅಶನಿ ಕೊಂಬೆಗಳುಳ್ಳ ಮರಗಳು, ಮುದ್ಗರ, ಕೂಟಪಾಶ, ಸಣ್ಣಪುಟ್ಟಕಲ್ಲುಗಳು, ಪರ್ವತಗಳು, ಬಂದೂಕಗಳು, ಫಿರಂಗಿಗಳು, ದಂಡಗಳು ಇವೆಲ್ಲದರಿಂದಲೂ ಆ ನರಸಿಂಹನನ್ನು ಹೊಡೆದನು.

ತೇ ದಾನವಾ ಪಾಶಗೃಹೀತಹಸ್ತಾ
ಮಹೇಂದ್ರತುಲ್ಯಾಶನಿತುಲ್ಯವೇಗಾಃ ।
ಸಮಂತತೋಭ್ಯುದ್ಯತ ಬಾಹುಕಾಯಾಃ
ಸ್ಥಿತಾಸ್ಸಶೀರ್ಷಾ ಇವ ನಾಗಪೋತಾಃ ॥ ೧೧೫ ॥

ಸುವರ್ಣಮಾಲಾಕುಲಭೂಷಿತಾಂಗಾಃ
ಸುತೀಕ್ಷ್ಣದಂಷ್ಟ್ರಾಕುಲವಕ್ತ್ರಗರ್ತಾಃ ।
ಸ್ಫುರತ್ಪ್ರಭಾಸ್ತೇ ಚ ಸಶೃಂಗದೇಹಾ
ಶ್ಚೀನಾಂಶುಕಾ ಭಾಂತಿ ಯಥೈವ ಹಂಸಾಃ ॥ ೧೧೬ ॥

ಸೋಽಸೃಜದ್ದಾನವೋ ಮಾಯಾಮಗ್ನಿಂ ವಾಯುಸಮೀರಿತಂ ।
ತಮಿಂದ್ರಸ್ತೋಯದೈಸ್ಸಾರ್ಥಂ ಸಹಸ್ರಾಕ್ಷೋ ಮಹಾದ್ಯುತಿಃ ॥ ೧೧೭ ॥

ಮಹತಾ ತೋಯವರ್ಷೇಣ ಶಾಮಯಾಮಾಸ ಪಾವಕಂ ।
ತಸ್ಯಾಂ ಪ್ರತಿಹತಾಯಾಂ ತು ಮಾಯಾಯಾಂ ಯುಧಿ ದಾನವಃ ॥ ೧೧೮ ॥

ಅಸೃಜದ್ಘೋರಸಂಕಾಶಂ ತಮಸ್ತೀವ್ರಂ ಸಮಂತತಃ ।
ತಮಸಾ ಸಂವೃತೇ ಲೋಕೇ ದೈತ್ಯೇಷ್ವಾತ್ತಾ ಯುಧೇಷು ಚ ॥ ೧೧೯ ॥

ಸ್ವತೇಜಸಾ ಪರಿವೃತೋ ದಿವಾಕರ ಇವೋದ್ಗತಃ ।
ತ್ರಿಶಿಖಾಂ ಭ್ರುಕುಟಿಂ ಚಾಸ್ಯ ದದೃಶುರ್ದಾನವಾ ರಣೇ ॥ ೧೨೦ ॥

---

೧೧೫. ಆಗ ಆ ದಾನವರು ಹಗ್ಗವನ್ನು ಹಿಡಿದುಕೊಂಡು ಜಾಗರೂಕತೆಯಿಂದ ಆ ಹಗ್ಗಗಳನ್ನು ಎತ್ತಿಕೊಂಡು ಆನೆಯ ಮರಿಗಳು ತಲೆ ಎತ್ತಿಕೊಂಡಿದ್ದಂತೆ ನಿಂತಿದ್ದರು.

೧೧೬. ಸುವರ್ಣದ ಮಾಲೆಯ ಒಡವೆಗಳುಳ್ಳ ಚೂಪಾದ ಕೋರೆದಾದೆಯಿರುವ ಬಾಯುಳ್ಳ, ಕಾಂತಿಯಿಂದ ಕೂಡಿರುವ ಕೊಂಬುಗಳುಳ್ಳ, ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡು ಇರುವ ಅವರು ಪ್ರಕಾಶಿಸುತ್ತಿದ್ದರು.

೧೧೭-೧೨೦. ಆಗ ಆ ಹಿರಣ್ಯಕಶಿಪುವು ಮಾಯೆಯಿಂದ ಅಗ್ನಿಯನ್ನು ಸೃಷ್ಟಿಸಿ ಅದನ್ನು ಗಾಳಿಯು ಉರಿಯಿಸುವಂತೆ ಮಾಡಲು ಇಂದ್ರನು ಮಳೆಗರೆಸಿ ಆ ಮಾಯೆಯನ್ನು ನಾಶಮಾಡಿದನು. ಆ ಮಾಯೆಯು ನಾಶವಾಗುತ್ತಲೂ ಹಿರಣ್ಯಕಶಿಪುವು ಎಲ್ಲೆಡೆಯಲ್ಲಿಯೂ ಮಹತ್ತರವಾದ ಕತ್ತಲೆಯನ್ನು ಸೃಷ್ಟಿಸಿದನು. ಲೋಕವು ಕತ್ತಲೆಯಿಂದ ಕೂಡಿಕೊಳ್ಳಲು ದೈತ್ಯರು ಆಯುಧಪಾಣಿಗಳಾದರು. ಆಗ ಈ ಸಿಂಹನ ಕಣ್ಣಿನಿಂದ ಅಗ್ನಿಯು ಹೊರಡುತ್ತಿರುವುದು ಕಂಡುಬಂದಿತು.

ಲಲಾಟಸ್ಥಾಂ ತ್ರಿಕೂಟಸ್ಥಾಂ ಗಂಗಾಂ ತ್ರಿಪಥಗಾಮಿವ ।
ತತಸ್ಸರ್ವಾಸು ಮಾಯಾಸು ಹತಾಸು ದಿತಿನಂದನಾಃ ॥ ೧೨೧ ॥

ಹಿರಣ್ಯಕಶಿಪುಂ ದೈತ್ಯಾ ವಿಶೇಷ್ಣಾಶ್ಯರಣಂ ಯಯುಃ
ತತಃ ಪ್ರಜ್ವಲಿತಃ ಕ್ರೋಧಾತ್ಪ್ರದಹನ್ನಿವ ತೇಜಸಾ ॥ ೧೨೨ ।

ತಸ್ಮಿನ್ಕ್ರುದ್ಧೇ ತು ದೈತ್ಯೇಂದ್ರೇ ತಮೋಭೂತಮಭೂಜ್ಜಗತ್ ।
ಆವಹಃ ಪ್ರವಹಶ್ಚೈವ ವಿವಹೋಥ ಸಮೀರಣಃ ॥ ೧೨೩ ॥

ಪರಾವಹಸ್ಸಂವಹಶ್ಚ ಉದ್ವಹಶ್ಚ ಮಹಾಬಲಃ ।
ತಥಾ ಪರಿವಹಶ್ಶ್ರೀಮಾನುತ್ಪಾತಭಯಶಂಸಿನಃ ॥ ೧೨೪ ॥

ಇತ್ಯೇವಂ ಕ್ಷುಭಿತಾಸ್ಸಪ್ತಮರುತೋ ಗಗನೇಚರಾಃ ।
ಯೇ ಗ್ರಹಾಸ್ಸರ್ವಲೋಕಸ್ಯ ಕ್ಷಯೇ ಪ್ರಾದುರ್ಭವಂತಿ ಹಿ ॥ ೧೨೫ ॥

ತೇ ಸರ್ವೇ ಗಗನೇ ಹೃಷ್ಟಾಃ ವ್ಯಚರಂಶ್ಚ ಯಥಾಸುಖಂ ।
ಅಯೋಗತಶ್ಚಾಪ್ಯಚರದ್ಯೋಗಂ ನಿಶಿ ನಿಶಾಚರಃ ॥ ೧೨೬ ॥

---

೧೨೧-೧೨೬. ಆ ಹಣೆಯಿಂದ ಹೊರಟ ಅಗ್ನಿಯು ಮೂರು ಶಿಖೆಯಾಗಿ ಹೊರಟು ಮೂರು ದಾರಿಯಿಂದ ಹೋಗುವ ಗಂಗೆಯಂತಿದ್ದಿತು. ಈ ರೀತಿಯಾಗಿ ದೈತ್ಯರ ಮಾಯೆಯೆಲ್ಲವೂ ನಾಶವಾಗಲು ಅವರು ದುಃಖದಿಂದ ಹಿರಣ್ಯಕಶಿಪುವಿನ ಬಳಿಗೆ ಓಡಿಹೋದರು. ಆಗ ಆ ಹಿರಣ್ಯಕಶಿಪುವು ಕೋಪಗೊಂಡು ಪ್ರಪಂಚವನ್ನೆಲ್ಲಾ ಮತ್ತೆ ಕತ್ತಲಾಗಿ ಮಾಡಿದನು. ಆವಹ, ಪ್ರವಹ, ವಿವಹ, ಪರಾವಹ, ಸಂವಹ, ಉದ್ವಹ, ಪರಿವಹ ಈ ಸಪ್ತಮಾರುತಗಳು ಬಹು ರಭಸದಿಂದ ಬೀಸಲು ಮೊದಲು ಮಾಡಿದುವು. ಲೋಕನಾಶಕಾಲದಲ್ಲಿ ಹುಟ್ಟುವ ಗ್ರಹಗಳೆಲ್ಲವೂ ಹುಟ್ಟಿ ಗಗನದಲ್ಲಿ ಸಂಚರಿಸುತ್ತಿದ್ದುವು. ಚಂದ್ರನು ಮತ್ತೊಂದರೊಡನೆ ಸಂಬಂಧವಿಲ್ಲದಂತೆಯೇ ಅಂತರಿಕ್ಷದಲ್ಲಿ ಸುತ್ತುತ್ತಿದ್ದನು. ಮತ್ತು ತಾನು ಸಂಬಂಧಿಸದಿರುವುವುಗಳೊಡನೆಯೂ ಸೇರುತ್ತಿದ್ದನು.

ಸ ಗ್ರಹಸ್ಸಹ ನಕ್ಷತ್ರೈಸ್ತಾರಾಪತಿರರಿಂದಮ ।
ವಿವರ್ಣತಾಂ ಚ ಭಗವಾನ್ಗತೋ ದಿವಿ ದಿವಾಕರಃ ॥ ೧೨೭ ॥

ಕೃಷ್ಣಃ ಕಬಂಧಶ್ಚ ತದಾ ಲಕ್ಷ್ಯತೇ ಸುಮಹಾನ್ದಿವಿ ।
ಅಸ್ಯಜಚ್ಚಾಪಿತಾಂ ಸೂರ್ಯೋ ಧೂಮವರ್ತೀ ವಿಭಾವಸುಃ ॥ ೧೨೮ ॥

ಗಗನಸ್ಥಶ್ಚ ಭಗವಾನಭೀಕ್ಷ್ಣಂ ಪರಿವಿಷ್ಯತೇ ।
ಸಪ್ತಧೂಮನಿಭಾ ಘೋರಾ ಸೂರ್ಯಾ ದಿವಿ ಸಮುತ್ಥಿತಾಃ ॥ ೧೨೯ ॥

ಸೋಮಸ್ಯ ಗಗನಸ್ಥಸ್ಯ ಗ್ರಹಾಸ್ತಿಂಷ್ಠಂತಿ ಶೃಂಗಗಾಃ ।
ವಾಮೇ ಚ ದಕ್ಷಿಣೇ ಚೈವ ಸ್ಥಿತೌ ಶುಕ್ರಬೃಹಸ್ಪತೀ ॥ ೧೩೦ ॥

ಶನೈಶ್ಚರೋ ಲೋಹಿತಾಂಗೋ ಲೋಹಿತಾಂಗ ಸಮದ್ಯುತಿಃ ।
ಸಮಂ ಸಮಧಿರೋಹನ್ತ ಸರ್ವೇ ವೈ ಗಗನೇಚರಾಃ ॥ ೧೩೧ ॥

ಶೃಂಗಾಣಿ ಶನಕೈರ್ಘೋರಾ ಯುಂಗಾತೆ ವರ್ತನಗ್ರಹಾಃ ।
ಚಂದ್ರಮಾಶ್ಚ ಸನಕ್ಷತ್ರೋ ಗ್ರಹೈಸ್ಸಹ ತಮೋನುದಃ ॥ ೧೩೨ ॥

---

೧೨೭ ನಕ್ಷತ್ರಗಳಿಂದ ಹಿಡಿಯಲ್ಪಟ್ಟವನಂತೆ ಚಂದ್ರನು ಕಾಣುತ್ತಿದ್ದನು. (ಗ್ರಹವಾದಂತೆ ಕಾಣುತ್ತಿದ್ದಿತು) ಸೂರ್ಯನೂ ಆಕಾಶದಲ್ಲಿ ತೇಜೋಹೀನನಾಗಿ ಕಂಡುಬಂದನು.

೧೨೮-೧೨೯. ಅಂತರಿಕ್ಷದಲ್ಲಿ ಕಪ್ಪಗಿರುವ ಮುಂಡವೂ ಕಾಣುತ್ತಿದ್ದಿತು. ಸೂರ್ಯನು ಕಪ್ಪಗಾದನು. ಆ ಸೂರ್ಯನು ಹೊಗೆಯಿಂದಲೂ ಆವರಿಸಲ್ಪಟ್ಟನು. ಸೂರ್ಯನು ಆಕಾಶದಲ್ಲಿಯೇ ಇದ್ದುಕೊಂಡು ಅಲ್ಲೇ ಸುತ್ತುತ್ತಿದ್ದನು. ಹೊಗೆಯಿಂದಾ ವೃತರಾದ ಏಳುಜನ ಸೂರ್ಯರು ಹುಟ್ಟಿದರು

೧೩೦-೧೩೧. ಆಕಾಶದಲ್ಲಿ ಚಂದ್ರನಿಗಿಂತಲೂ ಗ್ರಹಗಳು ಮುಂದುವರಿದು ಹೋಗುತ್ತಿದ್ದುವು. ಆ ಚಂದ್ರನ ಎಡಬಲಗಳಲ್ಲಿ ಶುಕ್ರ ಬೃಹಸ್ಪತಿಗಳು ಇದ್ದರು. ಶನಿಯೂ ಅಂಗಾರಕನೂ ಕೆಂಪಗಿದ್ದರು. ಆಕಾಶದಲ್ಲಿರುವ ಗ್ರಹಗಳು ಕೆಳ-ಮೇಲೆನ್ನದೆ ಒಂದೇ ಸಮವಾದುವು.

೧೩೨-೧೩೩. ಗ್ರಹಗಳಿಗೆ ತಲೆಯ ಹತ್ತಿರ ಕೋಡುಗಳಂತೆ ಹುಟ್ಟಿ ಅವು ಘೋರತೆಯನ್ನು ವ್ಯಕ್ತಪಡಿಸುತ್ತ ಪ್ರಳಯವನ್ನು ತೋರಿಸುತ್ತಿದ್ದವು. ಚಂದ್ರನೂ

ಚರಾಚರವಿನಾಶಾಯ ರೋಹಿಣೀಂ ನಾಭ್ಯನಂದಕ ।
ಗೃಹೀತೋ ರಾಹುಣಾ ಚಂದ್ರ ಉಲ್ಕಾಭೈರಭಿಹನ್ಯತೇ ॥ ೧೩೩ ॥

ಉಲ್ಕಾಃ ಪ್ರಜ್ವಲಿತಾಶ್ಚಂದ್ರೇ ವ್ಯಚರಂತ ಯಥಾಸುಖಂ ।
ದೇವಾನಾಮಧಿಪೋ ದೇವಸ್ಸೋಽಪ್ಯವರ್ಷತ ಶೋಣಿತಂ ॥ ೧೩೪ ॥

ಅಪತದ್ಗಗನಾದುಲ್ಕಾ ವಿದ್ಯುದ್ರೂಪಾ ಮಹಾಸ್ವನಾಃ ।
ಅಕಾಲೇ ಚ ದ್ರುಮಾಸ್ಸರ್ವೇ ಪುಷ್ಯಂತಿ ಚ ಫಲಂತಿ ಚ ॥ ೧೩೫ ॥

ಲತಾಶ್ಚ ಸಫಲಾಸ್ಸರ್ವಾ ಯಾ ಆಹುರ್ದೈತ್ಯನಾಶಿಕಾಃ ।
ಫಲೇ ಫಲಾನ್ಯಜಾಯಂತ ಪುಷ್ಪೇ ಪುಷ್ಪಂ ತಥೈವ ಚ ॥ ೧೩೬ ॥

ಉನ್ಮೀಲಂತಿ ನಿಮೀಲಂತಿ ಹಸಂತಿ ಪ್ರರುದಂತಿ ಚ ।
ವಿಕ್ರೋಶಂತಿ ಚ ಗಂಭೀರಂ ಧೂಮಾಯಂತಿ ಜ್ವಲಂತಿ ಚ ॥ ೧೩೭ ॥

ಪ್ರತಿಮಾಸ್ಸರ್ವದೇವಾನಾಂ ಕಥಯಂತ್ಯೋ ಮಹದ್ಭಯಂ ।
ಆರಣ್ಯೈಸ್ಸಹ ಸಂಸೃಷ್ಟಾ ಗ್ರಾಮ್ಯಾಶ್ಚ ಮೃಗಪಕ್ಷಿಣಃ ॥ ೧೩೮ ॥

---

ನಕ್ಷತ್ರಗಳೂ ಸೇರಿ ಕತ್ತಲೆಯನ್ನು ನಾಶಮಾಡುವಷ್ಟು ಪ್ರಕಾಶಿಸಿದರು. ಆ ಚಂದ್ರನು ಚರಾಚರಗಳನ್ನು ನಾಶಮಾಡುವ ಸೂಚನೆಯನ್ನು ಕೊಡುತ್ತ ರೋಹಿಣಿಯ ಜೊತೆಯನ್ನು ಬಿಟ್ಟನು. ಚಂದ್ರನು ರಾಹುವಿನಿಂದ ಹಿಡಿಯಲ್ಪಟ್ಟು ಉಲ್ಕಾಪಾತಗಳಿಂದ ಆವೃತನಾಗಿದ್ದನು.

೧೩೪. ಚಂದ್ರನಲ್ಲಿ ಕಂಡುಬಂದ ಉಲ್ಕಾಪಾತಗಳು ಇಷ್ಟಬಂದಂತೆ ಸಂಚರಿಸಿದುವು. ದೇವೇಂದ್ರನು ರಕ್ತದ ಮಳೆಯನ್ನು ಸುರಿಸಿದನು.

೧೩೫. ಅಂತರಿಕ್ಷದಿಂದ ಉಲ್ಕೆಗಳು ಕೂಗುತ್ತಾ ಮಿಂಚಿನಂತೆ ಬಿದ್ದುವು. ಅಕಾಲದಲ್ಲಿ ಮರಗಳೆಲ್ಲವೂ ಹೂವು ಹಣ್ಣುಗಳನ್ನು ಬಿಟ್ಟುವು.

೧೩೬-೧೩೮. ಬಲಿಯದ ಬಳ್ಳಿಗಳು ಫಲಗಳನ್ನು ಬಿಟ್ಟು ದೈತ್ಯನಾಶವನ್ನು ಸೂಚಿಸಿದುವು. ಹಣ್ಣಿನಲ್ಲಿ ಹಣ್ಣು, ಹೂವಿನಲ್ಲಿ ಹೂ, ಹುಟ್ಟಿದುವು. ದೇವತೆಗಳ ವಿಗ್ರಹಗಳು ದೊಡ್ಡದಾಗುತ್ತ, ಚಿಕ್ಕದಾಗುತ್ತ, ನಗುತ್ತ, ಅಳುತ್ತ, ಕೂಗುತ್ತ, ಗಂಭೀರವಾಗಿದ್ದು, ಹೊಗೆ ಕಟ್ಟಿಕೊಂಡಂತಾಗುತ್ತ, ಪ್ರಕಾಶಿಸುತ್ತ ಈ ರೀತಿಯಾಗಿ ಮಹಾಭಯವನ್ನು ಸೂಚಿಸುತ್ತಿದ್ದುವು. ಗ್ರಾಮವಾಸಿಗಳಾದ ಮೃಗಗಳೂ ಪಕ್ಷಿಗಳೂ ಅರಣ್ಯಪಕ್ಷಿ

ಚುಕ್ರುಶುರ್ಭೈರವಂ ತತ್ರ ಮೃಗಯುದ್ಧ ಉಪಸ್ಥಿತೇ ।
ನದ್ಯಶ್ಚ ಪ್ರತಿಕೂಲಾನಿ ವಹಂತಿ ಕಲುಷೋದಕಾಃ ॥ ೧೩೯ ॥

ನ ಪ್ರಕಾಶಂತಿ ಚ ದಿಶೋ ರಕ್ತರೇಣುಸಮಾಕುಲಾಃ ।
ವಾನಸ್ಪತ್ಯಾ ನ ಪೂಜ್ಯಂತೇ ಪೂಜನಾರ್ಹಾಃ ಕಥಂಚನ ॥ ೧೪೦ ॥

ವಾಯುವೇಗೇನ ಹನ್ಯಂತೇ ಭಜ್ಯಂತೇ ಪ್ರಣಮಂತಿ ಚ ।
ತಥಾ ಚ ಸರ್ವಭೂತಾನಾಂ ಛಾಯಾ ನ ಪರಿವರ್ತತೇ ॥ ೧೪೧ ॥

ಅಪರೇಣ ಗತೇ ಸೂರ್ಯೇ ಸಲೋಕಾನಾಂ ಯುಗಕ್ಷಯೇ ।
ತದಾ ಹಿರಣ್ಯಕಶಿಪೋರ್ದೈತ್ಯಸ್ಯೋಪರಿ ವೇಶ್ಮನಃ ॥ ೧೪೨ ॥

ಭಂಡಾಗಾರೇಽಯುಧಾಗಾರೇ ನಿವಿಷ್ಟಮಭವನ್ಮಧು ।
ಅಸುರಾಣಾಂ ವಿನಾಶಾಯ ಸುರಾಣಾಂ ವಿಜಯಾಯ ಚ ॥ ೧೪೩ ॥

ದೃಶ್ಯಂತೇ ವಿವಿಧೋತ್ಪಾತಾ ಘೋರಾ ಘೋರನಿದರ್ಶನಾಃ ।
ಏತೇ ಚಾನ್ಯೇಚ ಬಹವೋ ಘೋರರೂಪಾಸ್ಸಮುತ್ಥಿತಾಃ ॥ ೧೪೪ ॥

---

ಮೃಗಗಳೊಡನೆ ಸೇರಿಕೊಂಡು ಹೊಡೆದಾಡುತ್ತಾ ಭಯಂಕರವಾಗಿ ಕೂಗಿದುವು ನದಿಗಳು ಬಗ್ಗಡವಾದ ನೀರನ್ನು ಹೊಂದಿ ಹಿಂದುಮುಂದಾಗಿ ಹರಿದುವು.

೧೪೦. ದಿಕ್ಕುಗಳು ಕೆಂದೂಳಿನಿಂದ ಕೂಡಿಕೊಂಡು ಪ್ರಕಾಶಿಸಲಿಲ್ಲ. ಪೂಜೆಗೆ ಯೋಗ್ಯವಾದ ವನಸ್ಪತಿಗಳನ್ನು ಗೌರವಿಸಲಿಲ್ಲ.

೧೪೧-೧೪೩. ಆ ಮರಗಳು ವಾಯುವೇಗದಿಂದ ಮುರಿಯುತ್ತವೆ. ಚೂರು ಚೂರಾಗುತ್ತವೆ. ಮಲಗಿಹೋಗುತ್ತವೆ. ಪ್ರಾಣಿಗಳ ನೆರಳು ಸೂರ್ಯನು ತಿರುಗುವಂತೆ ತಿರುಗದೇ ಒಂದೇ ರೀತಿಯಾಗಿರುತ್ತವೆ. ಈ ರೀತಿಯಾಗಿ ಯುಗದ ನಾಶವನ್ನು ತೋರಿಸುತ್ತಿದ್ದಿತು ಆಗ ಹಿರಣ್ಯಕಶಿಪುವಿನ ಭಂಡಾರ್‍ಧದಲ್ಲಿ ಯುದ್ಧದ (ಆಯುಧದ) ಮನೆಗಳಲ್ಲಿ ಜೇನುಕಟ್ಟಿತು. ಇದು ಅಸುರರಿಗೆ ಅಪಜಯವನ್ನೂ ಸುರರಿಗೆ ಜಯವನ್ನೂ ತೋರಿಸುತ್ತಿದ್ದಿತು.

೧೪೪-೧೪೬. ನಾನಾಬಗೆಯಾದ ಉತ್ಪಾತಗಳೂ ಘೋರವಾಗಿಯೂ ಕ್ರೂರವಾದ ನೋಟವುಳ್ಳದ್ದಾಗಿಯೂ ಕಾಣುತ್ತಿದ್ದುವು. ಈ ರೀತಿಯಾಗಿ ಇನ್ನೂ ಅನೇಕ

ದೈತ್ಯೇಂದ್ರಸ್ಯ ವಿನಾಶಾಯ ದೃಶ್ಯಂತೇ ರಣಶಂಸಿನಃ ।
ಮೇದಿನ್ಯಾಂ ಕಂಪಮಾನಾಯಾಂ ದೈತ್ಯೇಂದ್ರೇಣ ಮಹಾತ್ಮನಾ ॥ ೧೪೫ ॥

ಮಹೀಧರಾ ನಾಗಗಣಾ ನಿಪೇತುರಮಿತೌಜಸಃ ।
ವಿಷಜ್ವಾಲಾಕುಲೈರ್ವಕ್ತ್ರೈರ್ವಿಮುಂಚಂತೋ ಹುತಾಶನಂ ॥ ೧೪೬ ॥

ಚತುಶ್ಶೀರ್ಷಾಃ ಪಂಚಶೀರ್ಷಾಃ ಸಪ್ತಶೀರ್ಷಾಶ್ಚ ಪನ್ನಗಾಃ ।
ವಾಸುಕಿಸ್ತಕ್ಷಕಶ್ಚೈವ ಕರ್ಕೋಟಕಧನಂಜಯೌ ॥ ೧೪೭ ॥

ಏಲಾಮುಖಃ ಕಾಲಿಯಶ್ಚ ಮಹಾಪದ್ಮಶ್ಚ ವೀರ್ಯವಾನ್ ।
ಸಹಸ್ರಶೀರ್ಷಶ್ಶುದ್ಧಾಂಗೋ ಹೇಮತಾಲಧ್ವಜಃ ಪ್ರಭುಃ ॥ ೧೪೮ ॥

ಶೇಷೋನಂತೋ ಮಹಾನಾಗೋ ಹ್ಯಪ್ರಕಂಪಶ್ಚ ಕಂಪಿತಃ ।
ದೀಪ್ಯಂತೇಂತರ್ಜಲಸ್ಥಾನಿ ಪೃಥಿವೀ ವಿವರಾಣಿ ವೈ ॥ ೧೪೯ ॥

ಸಪ್ತ ದೈತ್ಯೇಂದ್ರಕೋಪೇನ ಕಂಪಿತಾನಿ ಸಮಂತತಃ ।
ನಾನಾತೇಜೋಧರಾಶ್ಚಾಪಿ ಪಾತಾಳತಲಚಾರಿಣಃ ॥ ೧೫೦ ॥

ಪಾತಾಳೇ ಸಹಸಾ ಕ್ಷುಬ್ಧೇ ದುಷ್ಪ್ರಕಂಪ್ಯಾಃ ಪ್ರಕಂಪಿತಾಃ ।
ಹಿರಣ್ಯಕಶಿಪುರ್ದೈತ್ಯಸ್ತದಾ ಸಂಸ್ಪೃಷ್ಟವಾನ್ಮಹೀಂ ॥ ೧೫೧ ॥

---

ಘೋರಾಕಾರಗಳು ಕಂಡುಬಂದುವು. ಇವೆಲ್ಲವೂ ದೈತ್ಯೇಂದ್ರನ ನಾಶವನ್ನೂ ಯುದ್ಧದ ಸೂಚನೆಯನ್ನೂ ಕೊಡುತ್ತಿದ್ದುವು. ಹಿರಣ್ಯಕಶಿಪುವಿನೊಂದಿಗೆ ಭೂಮಿಯೂ ನಡುಗುತ್ತಿದ್ದಿತು. ಆಗ ಬೆಟ್ಟಗಳೂ, ಸರ್ಪಗಳೂ, ಬಲಿಷ್ಠಗಳಾಗಿದ್ದರೂ ಬಿದ್ದುವು. ಬಾಯಿಂದಾಗ ವಿಷಜ್ವಾಲೆಯನ್ನೂ ಬೆಂಕಿಯನ್ನೂ ಉಗುಳುತ್ತಲೇ ಬಿದ್ದುವು.

೧೪೭-೧೫೧. ನಾಲ್ಕುತಲೆ, ಐದುತಲೆ, ಏಳು ತಲೆಗಳುಳ್ಳ ಹಾವುಗಳೂ, ವಾಸುಕಿ, ತಕ್ಷಕ, ಕರ್ಕೋಟಕ, ಧನಂಜಯ, ಏಲಾಮುಖ, ಕಾಳಿಯ, ಮಹಾಪದ್ಮ ಸಹಸ್ರತಲೆಗಳುಳ್ಳವನೂ, ಶುದ್ಧದೇಹನೂ, ಹೇಮತಾಳವೇ ಧ್ವಜವಾಗಿ ಉಳ್ಳವನೂ, ಆದ ಶೇಷ, ಅನಂತ, ಅಪ್ರಕಂಪ, ಕಂಪಿತ, ಪಾತಾಳಲೋಕದಲ್ಲಿದ್ದ ಇವೆಲ್ಲವೂ ಹುತ್ತವನ್ನು ಬಿಟ್ಟು ನೀರಿನಲ್ಲಿ ಸಂಚರಿಸಿದುವು. ಸಪ್ತಲೋಕಗಳೂ ಆ ದೈತ್ಯೇಂದ್ರನ ಕೋಪದಿಂದ ನಡುಗಿದುವು. ಅನೇಕವಾದ ಪಾತಾಳದಲ್ಲಿದ್ದ ತೇಜೋವಂತರು ನಡುಗಿದರು. ಪಾತಾಳವು ಅಲ್ಲಾಡಲು ಅಲ್ಲಾಡದಿದ್ದುವೂ ಕೂಡ ಅಲ್ಲಾಡಿದುವು. ಆ ಹಿರಣ್ಯಕಶಿಪುವು ಕೆಳಕ್ಕೆ ಬಿದ್ದುಬಿಟ್ಟನು.

ಸಂದಷ್ಟೌಷ್ಠಂಪುಟಿ ಕ್ರುದ್ಧೋ ವರಾಹ ಇವ ಪೂರ್ವಜಃ ।
ಗಂಗಾಭಾಗೀರಥೀ ಚೈವ ಕೌಶಿಕೀ ಸರಯೂರಪಿ ॥ ೧೫೨ ॥

ಯಮುನಾಚಾಪಿ ಕಾವೇರೀ ಕೃಷ್ಣಾ ವೇಣಾ ಚ ನಿಮ್ನಗಾ ।
ತುಂಗಭದ್ರಾ ಮಹಾವೇಗಾ ನದೀ ಗೋದಾವರೀ ತಥಾ ॥ ೧೫೩ ॥

ಚರ್ಮಣ್ವತೀ ಚ ಸಿಂಧುಶ್ಚ ತಥಾ ನದನದೀಪತಿಃ ।
ಮೇಲಕಪ್ರಭವಶ್ಚೈವ ಶೋಣೋನ್ಮಣಿನಿಭೋದಕಃ ॥ ೧೫೪ ॥

ನರ್ಮದಾ ಚ ಶುಭಸ್ರೋತಾ ತಥಾ ವೇತ್ರವತೀ ನದೀ ।
ಗೋಮತೀ ಗೋಕುಲಾಕೀರ್ಣಾ ತಥಾ ಪೂರ್ವಾ ಸರಸ್ವತೀ ॥ ೧೫೫ ॥

ಮಹಾಕಾಲಮಹೀ ಚೈವ ತಮಸಾ ಪುಷ್ಪವಾಹಿನೀ ।
ಜಂಬೂದ್ವೀಪಂ ರತ್ನವಂತಂ ಸರ್ವರತ್ನೋಪಶೋಭಿತಂ ॥ ೧೫೬ ॥

ಸುವರ್ಣಪುಟಕಂ ಚೈವ ಸುವರ್ಣಾಕರಮಂಡಿತಂ ।
ಮಹಾನಂದಶ್ಚ ಲೌಹಿತ್ಯಂ ಶೈಲಃ ಕಾಂಚನಶೋಭಿತಃ ॥ ೧೫೭ ॥

ಪತ್ತನಂ ಕೋಷಕಾರಾಣಾಂ ಕುಶಿಂ ಚ ರಜತಾಕರಂ ।
ಮಗಧಾಶ್ಚ ಮಹಾಗ್ರಾಮಾಃ ಪುಂಡ್ರಾ ಉಗ್ರಾಸ್ತಥೈವ ಚ ॥ ೧೫೮ ॥

ಸುಂಹಾ ಮಲ್ಲಾ ವಿದೇಹಾಶ್ಚ ಮಾಲವಾಃ ಕಾಶಿಕೋಸಲಾಃ ।
ಭವನಂ ವೈನತೇಯಸ್ಯ ದೈತ್ಯೇಂದ್ರೇಣಾಪಿ ಕಂಪಿತಂ ॥ ೧೫೯ ॥

---

೧೫೨-೧೫೯. ಆಗ ಹಲ್ಲುಗಳನ್ನು ಕಡಿಯುತ್ತ ಹಿಂದಿನಕಾಲದ ವರಾಹನಂತೆ ಕೋಪಗೊಂಡನು. ಗಂಗೆ, ಭಾಗೀರಥಿ, ಕೌಶಿಕಿ, ಸರಯು, ಯಮುನಾ, ಕಾವೇರಿ, ಕೃಷ್ಣ, ವೇಣಿ, ತುಂಗಭದ್ರೆ, ಗೋದಾವರಿ, ಚರ್ಮಣ್ವತಿ, ಸಿಂಧು, ಸಮುದ್ರ, ಮೇಲಕ ಪರ್ವತದಿಂದ ಹುಟ್ಟುವ ನದಿಗಳು, ಶೋಣ, ನರ್ಮದೆ, ವೇತ್ರವತಿ, ಗೋಮತಿ, ಗೋಲುಕೆ, ಸರಸ್ವತಿ, ಮಹಾಕಾಲಮಹಿ, ತಮಸೆ, ಪುಷ್ಪವಾಹಿನಿ, ಈ ನದಿಗಳನ್ನೆಲ್ಲಾ ಆ ಹಿರಣ್ಯಕಶಿಪುವು ಅಲ್ಲಾಡುವಂತೆ ಮಾಡಿದನು. ಜಂಬೂದ್ವೀಪ, ರತ್ನವಂತ, ಸುವರ್ಣಪುಟಕ, ಮಹಾನದ, ಲೌಹಿತ್ಯ, ಕಾಂಚನಶೈಲ, (ಮೇರು) ಕೋಷಕಾರರಪಟ್ಟಣ ಕುಶೀ, ಮಗಧ, ಮಹಾದ್ರುಮ, ಪುಂಡ್ರ, ಉಗ್ರ, ಸುಂಹ, ಮಲ್ಲ, ವಿದೇಹ, ಮಾಲವ, ಕಾಶಿ, ಕೋಸಲ, ಗರುಡನಮನೆ, ಇವೆಲ್ಲವನ್ನೂ ಆ ಹಿರಣ್ಯಕಶಿಪುವು ಅಲ್ಲಾಡಿಸಿದನು.

ಕೈಲಾಸಶಿಖರಾಕಾರಂ ಯತ್ಕೃತಂ ವಿಶ್ವಕರ್ಮಣಾ ।
ರತ್ನತೋಯೋ ಮಹಾಭೀಮೋ ಲೋಹಿತೋ ನಾಮ ಸಾಗರಃ ॥ ೧೬೦ ॥

ಉದಯಶ್ಚ ಮಹಾಶೈಲ ಉಚ್ಛ್ರಿತಶ್ಶತಯೋಜನಃ ।
ಸುವರ್ಣವೇದಿಕಶ್ರೀಮಾನ್ಮೇಘಪಂಕ್ತಿನಿಷೇವಿತಃ ॥ ೧೬೧ ॥

ಭ್ರಾಜಮಾನೋರ್ಕಸದೃಶೈರ್ಜಾತರೂಪಮಯೈರ್ದ್ರುಮೈಃ ।
ಶಾಲೈಸ್ತಾಲೈಸ್ತಮಾಲೈಶ್ಚ ಕರ್ಣಿಕಾರೈಶ್ಚ ಪುಷ್ಪಿತೈಃ ॥ ೧೬೨ ॥

ಅಯೋಮುಖಶ್ಚ ವಿಖ್ಯಾತಸ್ಸರ್ವತೋ ಧಾತುಮಂಡಿತಃ ।
ತಮಾಲವನಗಂಧಶ್ಚ ಪರ್ವತೋ ಮಲಯಶ್ಶುಭಃ ॥ ೧೬೩ ॥

ಸುರಾಷ್ಟ್ರಶ್ಚ ಸಬಾಹ್ಲೀಕಾಶ್ಶೂದ್ರಾಭೀರಾಸ್ತಥೈವ ಚ ।
ಭೋಜಾಃ ಪಾಂಡ್ಯಾಶ್ಚ ವಂಗಾಶ್ಚ ಕಳಿಂಗಾಸ್ತಾಮ್ರಲಿಪ್ತಕಾಃ ॥ ೧೬೪ ॥

ತಥೈವ ಪೌಂಡ್ರಾಶ್ಶುಭ್ರಾಶ್ಚ ವಾಮಚೂಡಾಸ್ಸಕೇರಳಾಃ ।
ಕ್ಷೋಭಿತಾಸ್ತೇನ ದೈತ್ಯೇನ ದೇವಾಶ್ಚಾಪ್ಸರಸಾಂ ಗಣಾಃ ॥ ೧೬೫ ॥

ಅಗಸ್ತ್ಯಭವನಂ ಚೈವ ಯದಗಸ್ತ್ಯಕೃತಂ ಪುರಾ ।
ಸಿದ್ಧಚಾರಣಸಂಘೈಶ್ಚ ವಿಪ್ರಕೀರ್ಣಂ ಮನೋಹರಂ ॥ ೧೬೬ ॥

---

೧೬೦-೧೬೫. ಕೈಲಾಸಶಿಖರದಂತಹ ಪರ್ವತಗಳು, ರತ್ನತೋಯ, ಮಹಾಭೀಮ, ಲೋಹಿತ್ಯ, ಸಾಗರ, ಚಿನ್ನದ ಜಗುಲಿಯುಳ್ಳ ಚಿನ್ನದ ಮರಗಳುಳ್ಳ ಉದಯ ಪರ್ವತ, ಸಾಲ, ತಾಲ, ತಮಾಲ, (ಹೊಂಗೆ,) ಕರ್ಣಿಕಾರ ಮರಗಳಿಂದ ಕೂಡಿದ ಅಯೋಮುಖಪರ್ವತ, ತಮಾಲ ವನಗಳುಳ್ಳ ಮಲಯಪರ್ವತಗಳೂ, ಕಂಪಿತವಾದುವು. ಸುರಾಷ್ಟ್ರ, ಬಾಹ್ಲೀಕ, ಶೂದ್ರ, ಆಭೀರ, ಭೋಜ, ಪಾಂಡ್ಯ, ವಂಗ, ಕಳಿಂಗ, ತಾಮ್ರಲಿಪ್ತಿ, ಪೌಂಡ್ರ, ಶುಭ್ರ, ವಾಮಚೂಡ, ಕೇರಳ ಇವಲ್ಲವನ್ನೂ ಮತ್ತು ಅಪ್ಸರರ ಗುಂಪನ್ನೂ ಆ ದೈತ್ಯನು ಕಂಪಿಸುವಂತೆ ಮಾಡಿದನು.

೧೬೬-೧೬೯. ಅಪ್ಸರರೂ, ಸಿದ್ಧರೂ, ಚಾರಣರೂ, ಇರುವ, ನಾನಾಪಕ್ಷಿಗಳೂ, ಹೂ ಬಿಟ್ಟಿರುವ ಮರಗಳೂ, ಉಳ್ಳ, ಅಗಸ್ತ್ಯನು ಮಾಡಿಕೊಂಡಿರುವ ಮನೆ (ಅಗಸ್ತ್ಯ ಮಂಡಲ) ಪುಷ್ಪಿತಪರ್ವತವು ಇವೆಲ್ಲವೂ ಕೂಡ ಅವನ ಅಲ್ಲಾಡಿಸುವಿಕೆಯಿಂದ ಸಮು

ವಿಚಿತ್ರನಾನಾವಿಹಗಂ ಸಪುಷ್ಟಿತಮಹಾದ್ರುಮಂ ।
ಭೂತರೂಪಮಯೈಶ್ಶೃಂಗೈರಪ್ಸರೋಗಣಸೇವಿತಂ ॥ ೧೬೭ ॥

ಗಿರಿಃ ಪುಷ್ಪಿತಕಶ್ಚೈವ ಲಕ್ಷ್ಮೀವಾನ್ಪ್ರಿಯದರ್ಶನಃ ।
ಉತ್ಥಿತಸ್ಸಾಗರಂ ಭಿತ್ವಾ ವಿಶ್ರಾಮಶ್ಚಂದ್ರಸೂರ್ಯಯೋಃ ॥ ೧೬೮ ॥

ರರಾಜ ಸ ಮಹಾಶೃಂಗೈರ್ಗಗನಂ ವಿಲಿಖನ್ನಿವ ।
ಚಂದ್ರಸೂರ್ಯಾಂಶುಸಂಕಾಶೈಸ್ಸಾಗರಾಂಬುಸಮಾವೃತೈಃ ॥ ೧೬೯ ॥

ವಿದ್ಯುದ್ವಾಸೋ ಯತಶ್ರೀಮಾನಾಯತಶ್ಶತಯೋಜನಃ ।
ವಿದ್ಯುತಾಂ ಯತ್ರ ಸಂಪಾತಾ ನಿಪಾತ್ಯಂತೇ ನಗೋತ್ತಮೇ ॥ ೧೭೦ ॥

ಋಷಭಃ ಪರ್ವತಶ್ಚೈವ ಶ್ರೀಮಾನ್ವೃಷಭಸಂಸ್ಥಿತಃ ।
ಕುಂಜರಃ ಪರ್ವತಶ್ರೀಮಾನಗಸ್ತ್ಯಸ್ಯ ಗೃಹಂ ಶುಭಂ ॥ ೧೭೧ ॥

ವಿಮಲಾಖ್ಯಾ ಚ ದುರ್ಧರ್ಷಾ ಸರ್ಪಾಣಾಂ ಮಾಲತೀ ಪುರೀ ।
ತಥಾ ಭೋಗವತೀ ಚಾಪಿ ದೈತ್ಯೇಂದ್ರೇಣಾಭಿಕಂಪಿತಾ ॥ ೧೭೨ ॥

ಮಹಾಸೇನ ಗಿರಿಶ್ಚೈವ ಪಾರಿಯಾತ್ರಶ್ಚ ಪರ್ವತಃ ।
ಚಕ್ರವಾಂಶ್ಚ ಗಿರಿಶ್ರೇಷ್ಠೋ ವಾರಾಹಶ್ಚೈವ ಪರ್ವತಃ ॥ ೧೭೩ ॥

ಪ್ರಾಗ್ಜ್ಯೋತಿಷಪುರಂ ಚಾಪಿ ಜಾತರೂಪಮಯಂ ಶುಭಂ ।
ಯಸ್ಮಿನ್ನುವಾಸ ದುಷ್ಟಾತ್ಮಾ ನರಕೋ ನಾಮ ದಾನವಃ ॥ ೧೭೪ ॥

---

ಪ್ರುಂಡ ಮೇಲಕ್ಕೆದ್ದು ಚಂದ್ರಸೂರ್ಯರಿಗೆ ವಿಶ್ರಾಮಸ್ಥಾನವಾಯಿತು. ಶಿಖರಗಳಿಂದ ಅಂತರಿಕ್ಷವನ್ನು ಚುಚ್ಚುತ್ತಿದ್ದುವು. ಸೂರ್ಯಚಂದ್ರರಂತಿರುವ ನೀರಿನಿಂದ ಕೂಡಿ ಕೊಂಡು ಇದ್ದುವು.

೧೭೦. ವಿದ್ಯುದ್ವಾಸವೆಂಬ ಬೆಟ್ಟವೂ ಕೂಡ ನೂರು ಯೋಜನದಷ್ಟು ಎತ್ತರಕ್ಕೆ ಬಂದಿತು. ಅಲ್ಲಿ ಯಾವಾಗಲೂ ಮಿಂಚುಗಳು ಬೀಳುವಂತಾಯಿತು.

೧೭೧-೧೭೨. ಋಷಭಪರ್ವತ, ಕುಂಜರಪರ್ವತ, ವಿಮಲಪರ್ವತ, ಸರ್ಪಗಳ ಪಟ್ಟಣವಾದ ಮಾಲತಿ, ಭೋಗವತಿ, ಇವೆಲ್ಲವನ್ನೂ ಹಿರಣ್ಯಕಶಿಪುವು ಅಲ್ಲಾಡಿಸಿದನು.

೧೭೩-೧೭೬. ಮಹಾಸೇನಗಿರಿ, ಪಾರಿಯಾತ್ರ, ಚಕ್ರವಾಕ, ವಾರಾಹ, ನರಕನ ರಾಜಧಾನಿಯಾಗಿದ್ದ ಪ್ರಾಗ್ಜ್ಯೋತಿಷಪುರ, ಮೇಘಪರ್ವತ, ಒಟ್ಟಿನಲ್ಲಿ ಅರವತ್ತುಪರ್ವತ

ಮೇಘಶ್ಚ ಪರ್ವತಶ್ರೇಷ್ಠೋ ಮೇಘಗಂಭೀರ ನಿಸ್ವನಃ ।
ಷಷ್ಟಿಸ್ತತ್ರ ಸಹಸ್ರಾಣಿ ಪರ್ವತಾನಾಂ ವಿಶಾಂಪತೇ ॥ ೧೭೫ ॥

ತರುಣಾದಿತ್ಯಸಂಕಾಶೋ ಮೇರುಶ್ಚೈವ ಮಹಾಗಿರಿಃ ।
ಯಕ್ಷರಾಕ್ಷಸಗಂಧರ್ವೈರ್ನಿತ್ಯಂ ಸೇವಿತಕಂದರಃ ॥ ೧೭೬ ॥

ಹೇಮಗರ್ಭೋ ಮಹಾಸೇನಸ್ತಥಾ ಮೇಘಸಖೋ ಗಿರಿಃ ।
ಕೈಲಾಸಶ್ಚೈವ ಶೈಲೇಂದ್ರೋ ದಾನವೇಂದ್ರೇಣ ಕಂಪಿತಃ ॥ ೧೭೭ ॥

ಹೇಮಪುಷ್ಪರಸಚ್ಛನ್ನಂ ತೇನ ವೈಖಾನಸಂ ಸರಃ ।
ಕಂಪಿತಂ ಮಾನಸಂ ಚೈವ ಹಂಸಕಾರಂಡವಾಕುಲಂ ॥ ೧೭೮ ॥

ತ್ರಿಶೃಂಗಃ ಪರ್ವತಶ್ರೇಷ್ಠಃ ಕುಮಾರೀ ಚ ಸರಿದ್ವರಾ ।
ತುಷಾರಚಯಸಂಛನ್ನೋ ಮಂದರಶ್ಚಾಪಿ ಪರ್ವತಃ ॥ ೧೭೯ ॥

ಉಶೀರಬೀಜಶ್ಚ ಗಿರಿರ್ಭದ್ರಪ್ರಸ್ಥಸ್ತಥಾದ್ರಿರಾಟ್ ।
ಪ್ರಜಾಪತಿಗಿರಿಶ್ಚೈವ ತಥಾ ಪುಷ್ಕರಪರ್ವತಃ ॥ ೧೮೦ ॥

ದೇವಾಭಃ ಪರ್ವತಶ್ಚೈವ ತಥಾ ವೈ ವಾಲುಕಾಗಿರಿಃ ।
ಕ್ರೌಂಚಸ್ಸಪ್ತರ್ಷಿಶೈಲಶ್ಚ ಧೂಮ್ರವರ್ಣಶ್ಚ ಪರ್ವತಃ ॥ ೧೮೧ ॥

---

ಗಳು ಸೂರ್ಯನಂತಿರುವ ಯಕ್ಷರಾಕ್ಷಸರು ವಾಸವಾಗಿರುವ ಮೇರುಪರ್ವತ ಇವೆಲ್ಲವನ್ನೂ ನಡುಗಿಸಿದನು.

೧೭೭-೧೭೯. ಹೇಮಗರ್ಭ, ಹೇಮಸಖ, ಕೈಲಾಸಪರ್ವತ, ಚಿನ್ನದಹೂವುಳ್ಳ ವೈಖಾನಸ್ಸ ಸರಸ್ಸು, ತ್ರಿಶೃಂಗಪರ್ವತ, ಕುಮಾರೀನದಿ, ಮಂದರಪರ್ವತ, ಇವೆಲ್ಲವನ್ನೂ ಆ ಹಿರಣ್ಯಕಶಿಪುವು ನಡುಗಿಸಿದನು.

೧೮೦-೧೮೨. ಉಶೀರಬೀಜ, ಭದ್ರಪ್ರಸ್ಥ, ಪ್ರಜಾಪತಿಗಿರಿ, ಪುಷ್ಕರಪರ್ವತ, ದೇವಾಭ, ವಾಲುಕ, ಕ್ರೌಂಚ, ಸಪ್ತರ್ಷಿಶೈಲ ಧೂಮ್ರವರ್ಣ, ಇವೇ ಮುಂತಾದ

ಏತೇ ಚಾನ್ಯೇ ಚ ಗಿರಯೋ ದೇಶಾ ಜಾನಪದಾಸ್ತಥಾ ।
ನದ್ಯಸ್ಸಸಾಗರಾಸ್ಸರ್ವಾಸ್ಸೋಕಂಪಯತ ದಾನವಃ ॥ ೧೮೨ ॥

ಕಪಿಲಶ್ಚ ಮಹೀಪುತ್ರೋ ವ್ಯಾಘ್ರವಾಂಶ್ಚ ಪ್ರಕಂಪಿತಃ ।
ಖೇಚರಾಶ್ಚ ನಿಶಾಪುತ್ರಾಃ ಪಾತಾಳತಳವಾಸಿನಃ ॥ ೧೮೩ ॥

ಗಣಸ್ತಥಾ ಪರೋ ರೌದ್ರೋ ಮೇಘನಾಮಾಂಕುಶಾಯುಧಃ ।
ಊರ್ಧ್ವಗೋ ಭೀಮವೇಗಶ್ಚ ಸರ್ವ ಏತೇಭಿಕಂಪಿತಾಃ ॥ ೧೮೪ ॥

ಗದೀ ಶೂಲೀ ಕರಾಳಶ್ಚ ಹಿರಣ್ಯಕಶಿಪುಸ್ತಥಾ ।
ಜೀಮೂತಘನನಿರ್ಘೋಷೋ ಜೀಮೂತ ಇವ ವೇಗವಾನ್ ॥ ೧೮೫ ॥

ದೇವಾರಿರ್ದಿತಿಜೋ ದೃಪ್ತೋ ನೃಸಿಂಹಂ ಸಮುಪಾದ್ರವತ್ ।
ಸ ತು ತೇನ ತತಸ್ತೀಕ್ಷ್ಣೈರ್ಮೃಗೇಂದ್ರೇಣ ಮಹಾನಖೈಃ ॥
ತದೋಂಕಾರಸಹಾಯೇನ ವಿದಾರ್ಯ ನಿಹತೋ ಯುಧಿ ॥ ೧೮೬ ॥

---

ಪರ್ವತಗಳನ್ನೂ. ಅನೇಕ ಪರ್ವತಗಳನ್ನೂ, ನದಿಗಳನ್ನೂ, ಸಾಗರಗಳನ್ನೂ, ಆ ಹಿರಣ್ಯಕಶಿಪುವು ನಡುಗಿಸಿದನು,

೧೮೩-೧೮೪. ಭೂಪುತ್ರನಾದ ಕಪಿಲ, ವ್ಯಾಘ್ರವಂತ, ಖೇಚರರು ನಿಶಾಚರರು, ಪಾತಾಳವಾಸಿಗಳು, ರುದ್ರಗಣಗಳು, ಮೇಘವೆಂಬ ಆಯುಧ, ಮೇಲಕ್ಕೆ ಹೋಗುವ ಶಕ್ತಿಯುಳ್ಳ ಭಯಂಕರವಾದ ವೇಗವುಳ್ಳ ಅವನು ಇವೆಲ್ಲವನ್ನೂ ನಡುಗಿಸಿದನು.

೧೮೫. ಗದೆ ಶೂಲಗಳನ್ನು ಹಿಡಿದು ಮೇಘದಂತೆ ಕೂಗುತ್ತ ಮೇಘದಂತೆ ವೇಗವುಳ್ಳವನಾಗಿ ಭಯಂಕರನಾಗಿ ಹೆಮ್ಮೆಯಿಂದ ನೃಸಿಂಹನ ಮೇಲೆ ಯುದ್ಧಕ್ಕೆ ಬಂದನು.

೧೮೬. ಆಗ ಆ ಸಿಂಹವು ಚೂಪಾದ ಉಗುರುಗಳಿಂದ ಓಂಕಾರವನ್ನೇ ಸಹಾಯವಾಗಿಟ್ಟುಕೊಂಡು ಯುದ್ಧದಲ್ಲಿ ಹಿರಣ್ಯಕಶಿಪುವನ್ನು ಕೊಂದಿತು.

ಮಹೀ ಚ ಕಾಲಶ್ಚ ಶಶೀ ನಭಶ್ಚ
ಗ್ರಹಾಸ್ಸಸೂರ್ಯಶ್ಚ ದಿಶಶ್ಚ ಸರ್ವಾಃ ।
ನದ್ಯಶ್ಚ ಶೈಲಾಶ್ಚ ಮಹಾರ್ಣವಶ್ಚ
ಗತಾಃ ಪ್ರಸಾದಂ ದಿತಿಪುತ್ರನಾಶಾತ್ ॥ ೧೮೭ ॥

ತತಃ ಪ್ರಮುದಿತಾ ದೇವಾ ಋಷಯಶ್ಚ ತಪೋಧನಾಃ ।
ತುಷ್ಟುವುರ್ನಾಮಭಿರ್ದಿವ್ಯೈರಾದಿದೇವಂ ಸನಾತನಂ ॥ ೧೮೮ ॥

॥ ದೇವಾ ಊಚುಃ ॥

ಯತ್ತ್ವಯಾ ವಿಧೃತಂ ದೇವ ನಾರಸಿಂಹ ಮಿದಂ ವಪುಃ ।
ಏತದೇವಾರ್ಚಯಿಷ್ಯಂತಿ ಪರಾಪರವಿದೋ ಜನಾಃ ॥ ೧೮೯ ॥

ಭವಾನ್ಬ್ರಹ್ಮಾ ಚ ರುದ್ರಶ್ಚ ಮಹೇಂದ್ರೋ ದೇವಸತ್ತಮ ।
ಭವಾನ್ಕರ್ತಾ ವಿಕರ್ತಾ ಚ ಲೋಕಾನಾಂ ಪ್ರಭವೋವ್ಯಯಃ ॥ ೧೯೦ ॥

---

೧೮೭. ಭೂಮಿ, ಕಾಲ, ಚಂದ್ರ, ಆಕಾಶ, ಗ್ರಹಗಳು, ಸೂರ್ಯ, ದಿಕ್ಕುಗಳು ನದಿಗಳು, ಬೆಟ್ಟಗಳು, ಸಮುದ್ರಗಳು, ಇವೆಲ್ಲವೂ ಈ ಹಿರಣ್ಯಕಶಿಪುವು ಸತ್ತನಂತರ ನಿರ್ಮಲವಾದುವು.

೧೮೮. ಆಗ ದೇವತೆಗಳೂ, ಋಷಿಗಳೂ, ಸಂತೋಷಗೊಂಡು ದಿವ್ಯವಾದ ನಾಮಗಳಿಂದ ಆ ಸ್ವಾಮಿಯನ್ನು ಸ್ತೋತ್ರಮಾಡಿದರು.

೧೮೯. ದೇವತೆಗಳು ಹೇಳಿದರು– ಎಲೈ ದೇವನೇ! ನೀನು ಧರಿಸಿರುವ ಈ ನಾರಸಿಂಹ ಶರೀರವನ್ನು ಹಿಂದು ಮುಂದು ಬಲ್ಲ ಜನರು ಪೂಜಿಸಲಿ.

೧೯೦. ಬ್ರಹ್ಮನು ಹೇಳಿದನು– ಬ್ರಹ್ಮ, ರುದ್ರ, ಮಹೇಂದ್ರರೆಲ್ಲರೂ ನೀನೇ ಆಗಿದ್ದೀಯೆ. ನೀನೇ ಲೋಕವನ್ನು ಸೃಷ್ಟಿಸುವವನೂ ನಾಶಮಾಡುವವನೂ ಆಗಿದ್ದೀಯೆ. ನಾಶರಹಿತನೂ ಆಗಿದ್ದೀಯೆ.

ಪರಾಂ ಚ ಸಿದ್ಧಿಂ ಚ ಪರಂ ಚ ಸತ್ತ್ವಂ
ಪರಂ ರಹಸ್ಯಂ ಪರಮಂ ಹವಿಶ್ಚ ।
ಪರಂ ಚ ಧರ್ಮಂ ಪರಮಂ ಯಶಶ್ಚ
ತ್ವಾಮಾಹುರಗ್ರ್ಯಂ ಪರಮಂ ಪುರಾಣಂ ॥ ೧೯೧ ॥

ಪರಂ ಚ ಸತ್ಯಂ ಪರಮಂ ತಪಶ್ಚ
ಪರಂ ಪವಿತ್ರಂ ಪರಮಂ ಚ ಮಾರ್ಗಂ ।
ಪರಂ ಚ ಯಜ್ಞಂ ಪರಮಂ ಚ ಹೋತ್ರಂ
ತ್ವಾಮಾಹುರಗ್ರ್ಯಂ ಪರಮಂ ಪುರಾಣಂ ॥ ೧೯೨ ॥

ಪರಂ ಶರೀರಂ ಪರಮಂ ಚ ಬ್ರಹ್ಮ
ಪರಂ ಚ ಯೋಗಂ ಪರಮಾಂ ಚ ವಾಣೀಂ ।
ಪರಂ ರಹಸ್ಯಂ ಪರಮಾಂ ಗತಿಂ ಚ
ತ್ವಾಮಾಹುರಗ್ರ್ಯಂ ಪರಮಂ ಪುರಾಣಂ ॥ ೧೯೩ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ತು ಭಗವಾನ್ಸರ್ವಲೋಕಪಿತಾಮಹಃ ।
ಸ್ತುತ್ವಾ ನಾರಾಯಣಂ ದೇವಂ ಬ್ರಹ್ಮಲೋಕಂ ಗತಃ ಪ್ರಭುಃ ॥ ೧೯೪ ॥

ತತೋ ನದತ್ಸು ತೂರ್ಯೇಷು ನೃತ್ಯಂತೀಷ್ವಪ್ಸರಸ್ಸು ಚ ।
ಕ್ಷೀರೋದಸ್ಯೋತ್ತರಂ ಕೂಲಂ ಜಗಾಮ ಹರೀಶ್ವರಃ ॥ ೧೯೫ ॥

---

೧೯೧-೧೯೩. ಉತ್ತಮವಾದ ಸಿದ್ಧ, ಸತ್ವ, ರಹಸ್ಯ, ಹವಿಸ್ಸು, ಧರ್ಮ, ಯಶಸ್ಸು, ಪುರಾಣಪುರುಷ, ಸತ್ಯ, ತಪಸ್ಸು, ಪವಿತ್ರ, ಮಾರ್ಗ, (ಗತಿ) ಯಜ್ಞ, ಹೋತ್ರ, ಶರೀರ, ಬ್ರಹ್ಮಯೋಗ, ವಾಣಿ, ಗತಿ ಪುರಾಣ, ಇವೆಲ್ಲವೂ ನೀನೇ ಆಗಿದ್ದೀಯೆ. ನೀನೇ ಎಲ್ಲರಿಗೂ ಉತ್ತಮೋತ್ತಮನು.

೧೯೪. ಪುಲಸ್ತ್ಯನು ಹೇಳಿದನು– ಸರ್ವಲೋಕಕ್ಕೂ ಪಿತಾಮಹನಾದ ಬ್ರಹ್ಮನು ಈ ರೀತಿ ಸ್ತುತಿಸಿ ತನ್ನ ಲೋಕಕ್ಕೆ ಹೊರಟುಹೋದನು.

೧೯೫. ಆಮೇಲೆ ಮಂಗಳವಾದ್ಯಗಳು ಧ್ವನಿಮಾಡುತ್ತಿರಲು ಅಪ್ಸರಸ್ತ್ರೀಯರು ಕುಣಿಯುತ್ತಿರಲು ಆ ನಾರಸಿಂಹನು ಕ್ಷೀರಸಮುದ್ರದ ಉತ್ತರದ ದಡಕ್ಕೆ ಹೊರಟು ಹೋದನು.

ನಾರಸಿಂಹವಪುರ್ದೇವಸ್ತ್ಯಾಪಯಿತ್ವಾ ಸುದೀಪ್ತಿಮಾನ್ ।
ಪೌರಾಣಂ ರೂಪಮಾಸ್ಥಾಯ ಪ್ರಯಯೌ ಗರುಡಧ್ವಜಃ ॥ ೧೯೬ ॥

ಅಷ್ಟಚಕ್ರೇಣ ಯಾನೇನ ಭೂತಿಯುಕ್ತೇನ ಭಾಸ್ವತಾ ।
ಅವ್ಯಕ್ತಪ್ರಕೃತಿರ್ದೇವಃ ಸ್ವಸ್ಥಾನಂ ಗತವಾನ್ಪ್ರಭುಃ ॥ ೧೯೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ನಾರಸಿಂಹಪ್ರಾದುರ್ಭಾವೋ
॥ ನಾಮ ದ್ವಿಚತ್ವಾರಿಂಶೋಽಧ್ಯಾಯಃ ॥

---

೧೯೬. ಆ ಸ್ವಾಮಿಯು ನರಸಿಂಹನ ಶರೀರವನ್ನು ಅಲ್ಲೇ ಬಿಟ್ಟು ಹಿಂದಿನ ರೂಪವನ್ನೇ ಹೊಂದಿ ಹೊರಟುಹೋದನು.

೧೯೭. ಎಂಟು ಚಕ್ರಗಳುಳ್ಳ ಕಾಂತಿಮತ್ತಾದ ಯಾನದಿಂದ ಆ ಪರಾತ್ಪರನಾದ ಸ್ವಾಮಿ ಯು ತನ್ನ ಜಾಗಕ್ಕೆ ಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ನರಸಿಂಹನ ಪ್ರಾದುರ್ಭಾವವೆಂಬ
ನಾಲ್ವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
## ॥ ತ್ರಿಚತ್ವಾರಿಂಶತ್ತಮೋऽಧ್ಯಾಯಃ ॥



॥ ಭೀಷ್ಮ ಉವಾಚ ॥

ಅತೀವಾದ್ಭುತಮೇತದ್ಧಿ ನಾರಸಿಂಹಸ್ವರೂಪಿಣಃ ।
ಮಾಹಾತ್ಮ್ಯಂ ತ್ವನ್ಮುಖಾದ್ಬ್ರಹ್ಮನ್ ಶ್ರುತಂ ಪರಮಮದ್ಭುತಂ ॥ ೧ ॥

ಯಥಾ ಹಿರಣ್ಯಕಶಿಪುಂ ಜಘಾನ ಪ್ರಭುರೀಶ್ವರಃ ।
ಯದ್ಭಯಾದ್ದಿವಿ ದೇವಾನಾಂ ಹೃದಯಾನಿ ವಿಕಂಪತೇ ॥ ೨ ॥

ಯದ್ಭಯಾದ್ವಾತಿ ವಾತೋಽಪಿ ಮಂದಂ ಮಂದತರಯೋ ರವಿಃ ।
ನಾತಿಪ್ರತಾಪಂ ಕುರುತೇ ಪ್ರಜಾಸಂಯಮನೋ ಯಮಃ ॥ ೩ ॥

ಯತ್ಪ್ರಜಾಭ್ಯೋ ಬಿಭ್ಯತೀವ ತಥೇಂದ್ರೋ ವರುಣೋಽಪಿ ಚ ।
ತದಾಜ್ಞಾಯಾಂ ಸ್ಥಿತೌ ಸೇಂದ್ರದೇವಾಶ್ಚಾತ್ಯಂತಪೀಡಿತಾಃ ॥ ೪ ॥

---

## ನಾಲ್ವತ್ತಮೂರನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು- ಎಲೈ ಪುಲಸ್ತ್ಯನೇ ! ಈ ನಾರಸಿಂಹನ ಮಹಿಮೆಯು ಅದ್ಭುತವಾಗಿದೆ. ಈ ಅದ್ಭುತಚರಿತ್ರೆಯನ್ನೂ ನಿನ್ನ ಮುಖದಿಂದ ಕೇಳಿದೆನು.

೨-೬. ಹಿರಣ್ಯಕಶಿಪುವನ್ನು ಆ ನರಸಿಂಹನು ಹೇಗೆ ಕೊಂದನು ? ಯಾವನ ಭಯದಿಂದ ದೇವತೆಗಳ ಹೃದಯವು ನಡುಗುತ್ತಿದ್ದಿತೋ, ಯಾವನ ಭಯದಿಂದ ಗಾಳಿಯೂ ಕೂಡ ಮೆಲ್ಲಗೆ ಬೀಸುತ್ತಿದ್ದಿತೋ ಯಾವನ ಭಯದಿಂದ ಯಮನೂ ಕೂಡ ಪ್ರತಾಪವನ್ನು ಹೆಚ್ಚಾಗಿ ತೋರಿಸುತ್ತಿರಲಿಲ್ಲವೋ ಇಂದ್ರವರುಣರೂ ಯಾವನಿಗೆ ಹೆದರುತ್ತಿದ್ದರೋ, ದೇವತೆಗಳೂ ಯಾವನ ಆಜ್ಞೆಯನ್ನು ಮಿಾರುತ್ತಿರಲಿಲ್ಲವೋ ಯಾವನ

ಭವಂತಿ ಲೋಕತ್ರಿತಯಂ ಯದ್ವಶೇ ನಿಖಿಲಂ ಸ್ಥಿತಂ ।
ಏವಂ ವಿಧೋಽಪಿ ಯೋ ದೈತ್ಯೋ ಹಿರಣ್ಯಕಶಿಪುರ್ಮಹಾನ್ ॥ ೫ ॥

ವಿದಾರಿತೋ ನಖಾಗ್ರೈಶ್ಚ ನಾರಸಿಂಹೇನ ವಿಷ್ಣುನಾ ।
ನರಸಿಂಹಸ್ಯಮಾಹಾತ್ಮ್ಯಂ ವಿಸ್ತರೇಣ ತ್ವಯೇರಿತಂ ।
ಸಮಾಸಾದ್ಭವಮಾಹಾತ್ಮ್ಯಂ ಭೈರವಸ್ಯಾಭಿದೀಯತಾಂ ॥ ೬ ॥

॥ ಪುಲಸ್ತ್ಯ ಉವಾಚ ॥

ತಸ್ಯಾಪಿ ದೇವದೇವಸ್ಯ ಶೃಣು ತ್ವಂ ಕರ್ಮ ಚೋತ್ತಮಂ ।
ಆಸೀದ್ದೈತ್ಯೋಽನ್ಧಕೋ ನಾಮ ಭಿನ್ನಾಂಜನಚಯೋಪಮಃ ॥ ೭ ॥

ತಮಸಾ ಮಹತಾ ಯುಕ್ತೋ ಅವಧ್ಯಸ್ತ್ರಿದಿವೌಕಸಾಂ ।
ಸ ಕದಾಚಿನ್ಮಹಾದೇವಂ ಪಾರ್ವತ್ಯಾ ಸಹಿತಂ ವಿಭುಂ ॥ ೮ ॥

ಕ್ರೀಡಮಾನಂ ತದಾ ದೃಷ್ಟ್ವಾ ಹರ್ತುಂ ದೇವೀಂ ಪ್ರಚಕ್ರಮೇ ।
ಏತಾಂ ದೇವೀಂ ಹರಾಮ್ಯದ್ಯ ವಿಯೋಗೇ ಮೃತ್ಯುಮೇಷ್ಯತಿ ॥ ೯ ॥

---

ವಶದಲ್ಲಿ ಮೂರು ಲೋಕಗಳೂ ಇದ್ದುವೋ, ಇಂತಹ ಹಿರಣ್ಯಕಶಿಪುವನ್ನು ಆ ನರಸಿಂಹನಾದ ವಿಷ್ಣುವು ಉಗುರುಗಳಿಂದ ಸೀಳಿ ಕೊಂದನಲ್ಲಾ ! ಅದು ಆಶ್ಚರ್ಯವು. ನರಸಿಂಹನ ಮಹಿಮೆಯನ್ನು ವಿಸ್ತಾರವಾಗಿ ಹೇಳಿದ್ದೀಯೆ. ಕೇಳಿದೆನು ಈಶ್ವರನ ಮಹಿಮೆಯನ್ನು ಸಂಕ್ಷೇಪವಾಗಿ ಹೇಳು. ಕೇಳಬೇಕೆಂದಿದ್ದೇನೆ.

೭-೧೩. ಪುಲಸ್ತ್ಯನು ಹೇಳಿದನು– ಆ ಸ್ವಾಮಿಯ ಉತ್ತಮವಾದ ಕೆಲಸಗಳನ್ನು ಕೇಳು. ಹೇಳುತ್ತೇನೆ. ಅಂಜನಪರ್ವತದಂತೆ ಕಪ್ಪಾದ, ತಪಸ್ವಿಯಾದ. ದೇವತೆಗಳಿಗೆ ಕೊಲ್ಲಲಾಗದ ಅಂಧಕನೆಂಬ ರಾಕ್ಷಸನೊಬ್ಬನಿದ್ದನು. ಅವನು ಒಂದು ಸಲ ಪಾರ್ವತಿಯೊಡನೆ ಶಿವನು ಕ್ರೀಡಿಸುತ್ತಿರುವಾಗ ಇಬ್ಬರನ್ನೂ ನೋಡಿದನು. ಆಗ ಈ ಪಾರ್ವತಿಯ ಸೌಂದರ್ಯಕ್ಕೆ ಮೋಹಗೊಂಡು ಆಕೆಯನ್ನು ಕದಿಯಲು ಮನಸ್ಸುಮಾಡಿದನು. ಈ ಪಾರ್ವತಿಯನ್ನು ಕದ್ದರೆ ಈಕೆಯ ಅಗಲಿಕೆಯಿಂದ ಹರನು ಸತ್ತುಹೋಗು

ತತಃ ಸ್ಥಿರಾ ಭವಿತ್ರೀ ಮೇ ಭಾರ್ಯೈಷಾ ಲೋಕಸುಂದರೀ ।
ಬಿಂಬೋಷ್ಠಂ ಚಾರುವದನಂ ಚಾರುಕಾಂತತರಂ ಮುಖಂ ॥ ೧೦ ॥

ಯದ್ಯೇಷಾ ನ ಭವೇದ್ಭಾರ್ಯಾ ಜೀವಿತೇ ಕಿಂ ಪ್ರಯೋಜನಃ ।
ಏತಾವನ್ಮತಿಮುಥಾಸ್ಥಾಯ ಮಂತ್ರಿಭಿಸ್ಸಹ ಮಂತ್ರ್ಯ ಚ ॥ ೧೧ ॥

ಚಕ್ರೇ ಯೋಗಂ ಸ ಸೈನ್ಯಸ್ಯ ಸೇನಾಪತಿಮಭಾಷತ ॥ ೧೨ ॥

॥ ಅಂಧಕಾಸುರ ಉವಾಚ ॥

ಆನಯಸ್ವ ರಥಂ ಮಹ್ಯಂ ಜೈತ್ರಂ ದೇವನಿಪಾತಿನಂ ।
ಜಯಿಷ್ಯೇ, ತ್ರಿದಿವಾನ್ಸರ್ವಾನ್ವಿಷ್ಣುರುದ್ರಪುರೋಗಮಾನ್ ।
ಹರಿಷ್ಯೇ ಪರ್ವತಸುತಾಂ ತಯಾ ಮೇಽಪನೃತಂ ಮನಂ ॥ ೧೩ ॥

॥ ಪುಲಸ್ತ್ಯ ಉವಾಚ ।

ಮಂತ್ರಿಣಾ ತಸ್ಯ ಚಾಖ್ಯಾತಃ ಕನಕಸ್ಯ ವಧಸ್ಸುರೈಃ ।
ಪರಭಾರ್ಯಾನುರಕ್ತಸ್ಯ ಕೃತೋ ದೇವೈಸ್ಸನಾಶವೈಃ ॥ ೧೪ ॥

---

ತ್ತಾನೆ. ಅನಂತರ ಲೋಕಸುಂದರಿಯಾದ ಈಕೆಯು ನನಗೆ ಹೆಂಡತಿಯಾಗುತ್ತಾಳೆ. ಈಕೆಯ ಮುಖವು ತೊಂಡೆ ಹಣ್ಣಿನಂತಿರುವ ತುಟಿಗಳಿಂದ ಕೂಡಿದೆ. ಮನೋಹರವಾಗಿ ಸುಂದರವಾಗಿದೆ. ಈಕೆಯು ಹೆಂಡತಿಯಾಗದಿದ್ದರೆ ಜೀವಿಸುವುದು ಏತಕ್ಕೆ ? ಎಂದು ಯೋಚಿಸಿ ಮಂತ್ರಿಗಳೊಡನೆ ಆಲೋಚಿಸಿ ಸೈನ್ಯಗಳೆಲ್ಲವನ್ನೂ ಸೇರಿಸಿ ಸೇನಾಪತಿಗೆ ಇಂತೆಂದನು.

೧೩. ಅಂಧಕಾಸುರನು ಹೇಳಿದನು– ದೇವತೆಗಳನ್ನು ಸದೆಬಡಿಯುವ ಜಯಶಾಲಿಯಾದ ರಥವನ್ನು ನನಗೆ ತೆಗೆದುಕೊಂಡು ಬಾ. ಬ್ರಹ್ಮ, ವಿಷ್ಣು, ರುದ್ರರೇ ಮುಂತಾದ ದೇವತೆಗಳನ್ನೆ ಜಯಿಸುತ್ತೇನೆ. ಪಾರ್ವತಿಯನ್ನು ತರುತ್ತೇನೆ. ಆಕೆಯಲ್ಲಿ ನನ್ನ ಮನಸ್ಸು ನೆಟ್ಟಿದೆ.

೧೪. ಪುಲಸ್ತ್ಯನು ಹೇಳಿದನು– ಇತರರ ಹೆಂಡಿರಲ್ಲಿ ಮನಸ್ಸಿಟ್ಟ ಕನಕನನ್ನು ದೇವತೆಗಳು ಕೊಂದುದನ್ನು ಮಂತ್ರಿಗಳು ಹೇಳಿದರು.

ತತಃ ಕೋಪಪರೀತಾತ್ಮಾ ಹನ್ಮಿ ದೇವಾನ್ಸಶಂಕರಾನ್ ।
ತಂ ಹತ್ವಾ ದಾನವಂ ಶಕ್ರೋ ಭಯಾದಂಧಾಸುರಸ್ಯ ಚ ॥ ೧೫ ॥

ಜಗಾಮ ಶರಣಾನ್ವೇಷೀ ಕೈಲಾಸಂ ಶಂಕರಾಲಯಂ ।
ದೃಷ್ಟ್ವಾ ಪ್ರಣಮ್ಯ ದೇವೇಶಂ ಚಂದ್ರಾರ್ಧಕೃತಶೇಖರಂ ।
ಭೀತೋ ವಿಜ್ಞಾಪಯಾಮಾಸ ಸಹಸ್ರಧೃತಲೋಚನಃ ॥ ೧೬ ॥

॥ ಇಂದ್ರ ಉವಾಚ ॥

ಅಭಯಂ ದೇಹಿ ಮೇ ದೇವ ದಾನವಾದಂಧಕಾದಹಂ ।
ಬಿಭೇಮಿ ತಸ್ಯ ಪುತ್ರೋದ್ಯ ಮಯಾ ಯುಧಿ ನಿಪಾತಿತಃ ॥ ೧೭ ॥

ತದ್ಯಾವನ್ನ ಸ ಜಾನಾತಿ ಹತಂ ಪುತ್ರಂ ಮಹಾಸುರಃ ।
ತಾವತ್ತ್ರಸ್ಥ ಏವಾಶು ಹನ್ಯತಾಂ ಮದ್ಭಯಾವಹಃ ॥ ೧೮ ॥

ಸ್ತ್ರೀಲೌಲ್ಯಾದ್ದಾನವಃ ಕ್ರೂರಃ ಪರಭಾರ್ಯಾಪಹಾರಕಃ ।
ಸರ್ವಥಾ ಘಾತನೀಯಸ್ತೇ ಭವತಾ ಸುರಸತ್ತಮ ॥ ೧೯ ॥

---

೧೫-೧೬. ಅದನ್ನು ಕೇಳಿ ಆ ಅಂಧಕನು ಕೋಪದಿಂದ ಶಂಕರನೇ ಮುಂತಾದ ದೇವತೆಗಳನ್ನೆಲ್ಲಾ ಕೊಲ್ಲುತ್ತೇನೆಂದನು. ಇತ್ತ ಕನಕನನ್ನು ಕೊಂದ ಇಂದ್ರನು ಅಂಧಕನಿಗೆ ಹೆದರಿ ಭಯದಿಂದ ಮರೆಹೊಗಲು ಕೈಲಾಸಕ್ಕೆ ಹೋಗಿ ಶಂಕರನಿಗೆ ನಮಸ್ಕರಿಸಿ ಇಂತೆಂದನು.

೧೭. ಇಂದ್ರನು ಹೇಳಿದನು- ಎಲೈ ದೇವನೇ ! ನನಗೆ ಅಭಯವನ್ನು ಕೊಡು. ದಾನವನಾದ ಅಂಧಕನಿಂದ ನಾನು ಹೆದರುತ್ತಿದ್ದೇನೆ. ಅವನ ಮಗನನ್ನು ಯುದ್ಧದಲ್ಲಿ ನಾನು ಕೊಂದೆನು.

೧೮. ಅವನ ಮಗನನ್ನು ಕೊಂದಿರುವುದನ್ನು ಅವನಿಗೆ ತಿಳಿಸುವಷ್ಟರಲ್ಲಿಯೇ ನನ್ನ ಹೆದರಿಕೆಗೆ ಕಾರಣನಾದ ಆ ಅಂಧಕನನ್ನು ಕೊಂದುಹಾಕು.

೧೯. ಆ ಅಂಧಕನು ಸ್ತ್ರೀಲೋಲನು. ಕ್ರೂರನು. ಪರರ ಹೆಂಡಿರನ್ನು ಕದ್ದ ತರತಕ್ಕವನು. ಅಂತಹವನನ್ನು ನೀನು ಖಂಡಿತವಾಗಿ ಕೊಲ್ಲಬೇಕು.

॥ ಪುಲಸ್ತ್ಯ ಉವಾಚ ॥

ಶಕ್ರಸ್ಯೈವಂ ವಚಶ್ಶ್ರುತ್ವಾ ಶರಣ್ಯಶ್ಶಂಕರಸ್ತದಾ ।
ದದಾವಭಯಮೇವಾಸೌ ಮಾ ಭೈರಿತಿ ಶತಕ್ರತೋ ॥ ೨೦ ॥

ದತ್ವಾಭಯೋಥ ಕೈಲಾಸಾದಾಜಗಾಮ ಕುಶಸ್ಥಲೀಂ ।
ವೃತೋ ಭೂತಗಣೈರೀಶೋ ವಧಾರ್ಥಂ ಅಂಧಕಸ್ಯ ತು ॥ ೨೧ ॥

ಕೃತ್ವಾ ರೂಪಂ ಮಹಾಕಾಯಂ ವಿಶ್ವರೂಪಂ ಸಭೈರವಂ ।
ಸರ್ಪೈರ್ಜ್ವಲದ್ಭಿರ್ಧಾವದ್ಭಿರ್ಭೀಮಂ ಭೀಮಭುಜಂಗವತ್ ॥ ೨೨ ॥

ಜಟಾಸಟಾಭಿರಾಕಾಶಂ ಫಣರತ್ನಶಿಖಾರ್ಚಿಷಾ ।
ಜ್ವಲನ್ನಿತೀವ ತೇಜೋಭಿಃ ಕಾಲಾಗ್ನಿರಿವ ಸಂಕ್ಷಯೇ ॥ ೨೩ ॥

ಮುಖೈರ್ದಂಷ್ಟ್ರಾಕರಾಳೈಶ್ಚ ದ್ವಿತೀಯೇಂದುಕಲೋಜ್ಜ್ವಲೈಃ ।
ಪಾತಾಳೋದರರೂಪಾಭಿರ್ಭೈರವಾರಾವನಾದಿಭಿಃ ॥ ೨೪ ॥

---

೨೦. ಪುಲಸ್ತ್ಯನು ಹೇಳಿದನು– ಇಂದ್ರನ ಮಾತನ್ನು ಕೇಳಿ ಶರಣಾಗತರಕ್ಷಕನಾದ ಶಂಕರನು ಎಲೈ ಇಂದ್ರನೇ ! ನೀನು ಹೆದರಬೇಡ ಎಂದು ಅಭಯವನ್ನು ಕೊಟ್ಟನು.

೨೧ ಶಂಕರನು ಇಂದ್ರನಿಗೆ ಅಭಯವನ್ನು ಕೊಟ್ಟು ಕೈಲಾಸದಿಂದ ಕುಶಸ್ಥಲಿಗೆ ಬಂದು ಅಂಧಕನ ವಧೆಗೋಸ್ಕರ ಭೂತಗಳನ್ನೆಲ್ಲಾ ಸೇರಿಸಿದನು.

೨೨. ಆಗ ಭಯಂಕರವಾಗಿ ವಿಶ್ವರೂಪವಾದ ದೊಡ್ಡ ಶರೀರವನ್ನು ಹೊಂದಿದನು. ಜ್ವಲಿಸುತ್ತ ಓಡಾಡುವ ಸರ್ಪಗಳನ್ನು ಕಟ್ಟಿಕೊಂಡು ಅವರಂತೆ ಭಯಂಕರನಾದನು.

೨೩. ಜಟೆಗಳಿಂದಲೂ ಸರ್ಪಗಳ ಹೆಡೆಯ ರತ್ನಗಳಿಂದಲೂ ಆಕಾಶವನ್ನು ಪ್ರಕಾಶಪಡಿಸುತ್ತಾ ಕಲ್ಪಾಂತದ ಅಗ್ನಿಯಂತೆ ತೇಜಸ್ಸಿನಿಂದ ಪ್ರಕಾಶಿಸಿದನು.

೨೪. ಬಿದಿಗೆಯ ಚಂದ್ರನಂತೆ ವಕ್ರವಾಗಿರುವ ಕೋರೆದಾಡೆಗಳುಳ್ಳ ಬಾಯಿಗಳಿಂದ ಕೂಡಿದ್ದನು. ಆ ಬಾಯಿಯು ಪಾತಾಳಲೋಕದಂತೆ ಇದ್ದು ಭಯಂಕರವಾಗಿ ಧ್ವನಿಮಾಡುತ್ತಲಿದ್ದಿತು.

ಭುಜೈರನೇಕಸಾಹಸ್ರೈರ್ಬಹುಶಸ್ತ್ರಕೃತಗ್ರಹಃ ।
ಬಹ್ವಾಭರಣಭೂಷಾಢ್ಯೈ ರಣದ್ಘೋರನಿನಾದಿಭಿಃ ॥ ೨೫ ॥

ಸಿಂಹಚರ್ಮಪರೀಧಾನಂ ವ್ಯಾಘ್ರತ್ವಗುತ್ತರೀಯಕಂ ।
ಗಜಾಜಿನಕೃತಾಟೋಪಂ ಪತದ್ಭೃಂಗರವಾಕುಲಂ ॥ ೨೬ ॥

ಈದೃಗ್ರೂಪಂ ವಿಧಾಯೇಶೋ ದನುದೈತ್ಯಭಯಾವಹಂ ।
ಅವಾತರನ್ಮಹೀಂ ಭೀಮೋ ದನೂನಾಂ ಕ್ಷಯಕಾರಕಃ ॥ ೨೭ ॥

ಅಂಧಾಸುರೋಽಪಿ ದನುಜಃ ಪುತ್ರಂ ಶುತ್ವಾ ಹತಂ ಯುಧಿ ।
ಕ್ರೋಧೇನ ತಮಸಾವಿಷ್ಟೋ ರಣತೂರ್ಯಾಣ್ಯಚೋದಯತ್ ॥ ೨೮ ॥

ಸಂಹತ್ಯಾವಹಿತಃ ಪ್ರಾಪ್ತೋ ಯತ್ರ ತೇ ತ್ರಿದಶಸ್ಥಿತಾಃ ।
ಮಹತ್ಯಾ ಸೇನಯಾ ಸಾರ್ಧಂ ರಥವಾರಣಯುಕ್ತಯಾ ॥ ೨೯ ॥

ತೇ ದೇವಾ ದಾನವಾನ್ವೀಕ್ಷ್ಯ ಮಹಾಹವಕೃತಾದರಾನ್ ।
ನ್ಯಪಯಾತತನುತ್ರಾಣಾಶ್ಶಂಭುಂ ಶರಣಮನ್ವಯುಃ ॥ ೩೦ ॥

---

೨೫. ಅನೇಕವಾದ ಭುಜಗಳನ್ನು ಹೊಂದಿ ಅವುಗಳಿಗೆ ಕ್ರೂರವಾಗಿ ಶಬ್ದ ಮಾಡುವ ಅನೇಕಾಭರಣಗಳನ್ನು ಕಟ್ಟಿಕೊಂಡನು.

೨೬. ಸಿಂಹಚರ್ಮವನ್ನುಟ್ಟುಕೊಂಡು ಹುಲಿಯ ಚರ್ಮವನ್ನು ಹೊದ್ದು ಕೊಂಡನು. ಆನೆಯ ಚರ್ಮವನ್ನು ಮೇಲು ಹೊದಿಕೆಯಾಗಿ ಹೊದ್ದುಕೊಂಡನು.

೨೭. ಈಶ್ವರನು ಈ ರೀತಿಯಾಗಿ ದನುಗಳಿಗೂ ದೈತ್ಯರಿಗೂ ಹೆದರಿಕೆಯನ್ನುಂಟುಮಾಡುವ ರೂಪವನ್ನು ಹೊಂದಿ ದಾನವರನ್ನು ನಾಶಮಾಡಲು ಭೂಮಿಗೆ ಇಳಿದನು.

೨೮. ಇತ್ತ ಅಂಧಕಾಸುರನು ಮಗನ ಸಾವನ್ನು ಕೇಳಿ ಕೋಪದಿಂದ ಕೂಡಿ ರಣಭೇರಿಯನ್ನು ಹೊಡೆಸಿದನು.

೨೯. ರಥ ಆನೆಗಳಿಂದ ಕೂಡಿದ ಸೇನೆಯನ್ನು ಕೂಡಿಸಿಕೊಂಡು ಅದರೊಡನೆ ದೇವತೆಗಳು ಇರುವಲ್ಲಿಗೆ ಯುದ್ಧಕ್ಕೆ ಬಂದನು.

೩೦. ಯುದ್ಧದಲ್ಲಿ ಆಸಕ್ತಿಯುಳ್ಳ ಆ ದಾನವರು ಬಂದಿರುವುದನ್ನು ದೇವತೆಗಳು ನೋಡಿ ರಕ್ಷಕರಾರೂ ಇಲ್ಲದೆ ಶಂಭುವಿನ ಬಳಿಗೆ ಬಂದರು.

ಮಾ ಭೈರಿತಿ ಚ ತಾನ್ದೇವೋ ದೇವಾನುಕ್ತ್ವಾ ತ್ರಿಲೋಚನಃ ।
ಗೃಹೀತ್ವಾ ಶೂಲಮಾತಿಷ್ಠದ್ದಂಷ್ಟ್ರಾರವಧರೋ ರುಷಾ ॥ ೩೧ ॥

ಅಂಧಕೇನಾಥ ರುಷ್ಟೇನ ಶತಕೋಟಿಶರೈರ್ಗಣಾಃ ।
ನಿಹತಾಶ್ಚೋಪದೇವಾನಾಂ ಬಹೂನಾಮೇಕತಾಕೃತೀಃ ॥ ೩೨ ॥

ಸ ಸ್ಫುಲಿಂಗಾರ್ಚಿಷೋ ವಹ್ನೇರ್ಮುಂಚಮಾನಃ ಪಿನಾಕಧೃತ್ ।
ಶರೈಸ್ಸಮಾವೃತಂ ಚಕ್ರೇ ಅಂಧಕಂ ರಥಗಂ ತತಃ ॥ ೩೩ ॥

ದನುನಾಥೋ ರಥಸ್ಥೋಥ ಶಿಥಿಲಶ್ಶಿಥಿಲಾಯುಧಃ ।
ನಿಮಂತ್ರ್ಯ ದಾನವಾನ್ಸರ್ವಾನ್ಸ ಯೋದ್ಧುಮುಪಚಕ್ರಮೇ ॥ ೩೪ ॥

ಬಹುಧಾ ತದ್ಬಲಂ ಭಗ್ನಂ ವಿವಿಧಾಯುಧಯೋಧಿಭಿಃ ।
ಯುಧಿ ವೀರೈರ್ಹತಂ ದೇವೈಸ್ಸ್ಥಾಣುನಾ ಸಖ್ಯಮಾಶ್ರಿತೈಃ ॥ ೩೫ ॥

ದಾನವಶ್ಚಾಂಧಕಸ್ಸೈನ್ಯಂ ಭಿನ್ನಂ ದೃಷ್ಟ್ವಾ ಕೃತಂ ಸುರೈಃ ।
ಆತ್ಮಾನಂ ಚ ಮಹೇಶೇನ ನಿರುದ್ಧಂ ಬಾಣಕೋಟಿಭಿಃ ॥ ೩೬ ॥

---

೩೧. ಶಂಕರನು ದೇವತೆಗಳಿಗೆ ಹೆದರಬೇಡಿರೆಂದು ಹೇಳಿ ಶೂಲವನ್ನು ಹಿಡಿದು ಕೋಪದಿಂದ ಹಲ್ಲನ್ನು ಕಡಿಯುತ್ತ ನಿಂತನು.

೩೨. ಅಂಧಕನು ಕೋಪಗೊಂಡು ಹರಿತವಾದ ಬಾಣಗಳಿಂದ ಅನೇಕ ದೇವ ಗಣಗಳನ್ನು ಕೊಂದನು.

೩೩. ಆಗ ಈಶ್ವರನು ಬೆಂಕಿಯ ಕಿಡಿಗಳನ್ನುಗುಳುತ್ತಲಿರುವ ಬಾಣಗಳಿಂದ ಅಂಧಕನನ್ನು ಮುಚ್ಚಿದನು.

೩೪. ಇದನ್ನು ನೋಡಿ ದಾನವರು ಓಡುತ್ತಿರಲು ಅಂಧಕನು ಯುದ್ಧದಲ್ಲಿ ಸ್ವಲ್ಪ ಆಸೆಯನ್ನು ಬಿಟ್ಟು ಎಲ್ಲಾ ದಾನವರನ್ನೂ ಕರೆದು ಸೇರಿಸಿ ಮತ್ತೆ ಯುದ್ಧಕ್ಕೆ ಮೊದಲುಮಾಡಿದನು.

೩೫. ನಾನಾಬಗೆಯ ಆಯುಧವನ್ನು ಹಿಡಿದ ಆ ದೇವತೆಗಳ ಯೋಧರು ಈಶ್ವರನನ್ನು ಪ್ರಭುವಾಗಿ ಹೊಂದಿ ಯುದ್ಧದಲ್ಲಿ ದಾನವರನ್ನು ಬಹುವಾಗಿ ಕೊಂದರು.

೩೬-೩೭. ಆ ಅಂಧಕನು ದೇವತೆಗಳು ಸೈನ್ಯವನ್ನು ಹೊಡೆದುದನ್ನೂ ತನ್ನನ್ನು ಈಶನು ಬಾಣಗಳಿಂದ ಹೊಡೆದುದನ್ನೂ ನೋಡಿ ಬಹು ಧೈರ್ಯವನ್ನು

ವಿಹ್ವಲೀಭೂತದೇಹೋಽಸೌ ಧೈರ್ಯಮಾಲಂಬ್ಯ ಕೇವಲಂ ।
ಪಿನಾಕಂ ಚೈವ ರುದ್ರಸ್ಯ ಗೃಹ್ಯ ರುದ್ರಮತಾಡಯತ್ ॥ ೩೭ ॥

ಪಿನಾಕಸ್ಯಾಭಿಘಾತೇನ ರುದ್ರೋ ಭೂಮಿಮುಪಾಗಮತ್ ।
ಭೂಮೌ ನಿಪತಿತೇ ದೇವೇ ಚಲಿತಂ ಭುವನತ್ರಯಂ ॥ ೩೮ ॥

ತತ್ಯಜುಸ್ಸಾಗರಾ ವೇಲಾಂ ಪರ್ವತಾಶ್ಶಿಖರಾಣಿ ಚ ।
ನಕ್ಷತ್ರಾಣಿ ವಿಯೋಗೀನಿ ಜಗ್ಮುರ್ಮುಕ್ತಾನ್ಯನೇಕಶಃ ॥ ೩೯ ॥

ಪತಿತೇ ಭುವಿ ದೇವೇಶೇ ಅಂಧಕೋ ಗದಯಾ ಪುನಃ ।
ಜಘಾನ ರುಷಿತೋ ನಾಗಂ ಹತ್ವಾ ತಂ ಪಾತಯದ್ಭುವಿ ॥ ೪೦ ॥

ಶಿವಂ ತ್ಯಕ್ತ್ವಾ ನಾಗರಾಜಃ ಪ್ರಪಲಾಯ್ಯಾನ್ಯತೋ ಗತಃ ।
ಮುಹೂರ್ತಾಚ್ಚೇತನಂ ಲಬ್ಧ್ವಾ ಉತ್ಥಿತಃ ಪರಮೇಶ್ವರಃ ॥ ೪೧ ॥

ಗೃಹೀತ್ವಾ ಪರಶುಂ ದಿವ್ಯಂ ದಾನವಂ ನೈವ ಪಶ್ಯತಿ ।
ಕೃತ್ವಾ ತು ತಾಮಸೀಮ್ಮಾಯಾಂ ಮಾಯಾಶತವಿಶಾರದಃ ॥ ೪೨ ॥

---

ತಾಳಿ ರುದ್ರನ ಪಿನಾಕವೆಂಬ ಧನುಸ್ಸನ್ನು ಕಿತ್ತುಕೊಂಡು ಅವನನ್ನು ಅದರಿಂದ ಹೊಡೆದನು.

೩೮. ಪಿನಾಕದ ಏಟಿನಿಂದ ರುದ್ರನು ಭೂಮಿಗೆ ಬಿದ್ದನು. ಹೀಗೆ ಬೀಳಲು ಮೂರು ಲೋಕವೂ ನಡುಗಿತು.

೩೯. ಸಮುದ್ರವು ಎಲ್ಲೆಯನ್ನು ಬಿಟ್ಟು ಹಾರಿತು. ಪರ್ವತಗಳು ಅಲ್ಲಾಡಿದುವು. ಶಿಖರಗಳು ಬಿದ್ದವು. ನಕ್ಷತಗಳು ತಾವು ಬಿಟ್ಟ ಸ್ಥಳಗಳನ್ನು ಮತ್ತೆ ಮತ್ತೆ ಹೊಂದಿದುವು.

೪೦. ಆ ಶಿವನು ನೆಲಕ್ಕೆ ಬೀಳಲು ಅಂಧಕನು ಮತ್ತೆ ಗದೆಯಿಂದ ಹೊಡೆದನು. ಅನಂತರ ಕೋಪಗೊಂಡು ಆದಿಶೇಷನನ್ನು ಹೊಡೆದು ನೆಲಕ್ಕೆ ಕೆಡವಿದನು.

೪೧. ಆಗ ಆ ಆದಿಶೇಷನು ಶಿವನನ್ನು ಬಿಟ್ಟು ಬೇರೆ ಕಡೆಗೆ ಓಡಿಹೋದನು. ಕೊಂಚ ಹೊತ್ತಿನ ಮೇಲೆ ಜ್ಞಾನಬಂದು ಶಿವನು ಮೇಲಕ್ಕೆ ಎದ್ದನು.

೪೨-೪೩. ಈಶ್ವರನು ಎದ್ದು ಪರಶುವನ್ನು ಹಿಡಿದು ನೋಡಲು ಆ ದಾನವನು ಕಾಣಲೇ ಇಲ್ಲ. ಮಾಯಾವಿಯಾದ ಆತನು ಕತ್ತಲೆಯ ಮಾಯೆಯನ್ನು ಮಾಡಿ

ತಯಾ ತು ರಹಿತೇ ದೇವೇ ಕ್ವ ನು ವೈ ದಾನವೋ ಗತಃ ।
ಶಂಭೋರ್ಭಯಮಥೋ ಪ್ರಾಪ್ಯ ಕಿನ್ನು ಪಾಪಃ ಕರಿಷ್ಯತಿ ॥ ೪೩ ॥

ತಮಸಾ ಛಾದಿತಾ ಯಾವದ್ದೇವಾ ವ್ಯಾಕುಲತಾಂ ಗತಾಃ ।
ಸಂಭ್ರಾಂತಮನಸಾನೀಕಾಸ್ತದೋಚುಃ ಕಾರ್ಯಗೌರವಾತ್ ॥ ೪೪ ॥

ಏತಸ್ಮಿನ್ನಂತರೇ ಸೂರ್ಯಸ್ತೇಜೋರೂಪೋ ವ್ಯವಸ್ಥಿತಃ ।
ಉತ್ತಸ್ಥೌ ನರರೂಪೇಣ ಕುರ್ವನ್ವಿತಿಮಿರಾ ದಿಶಃ ॥ ೪೫ ॥

ನಷ್ಟೇ ತಮಸಿ ಹೃಷ್ಟಾಂಗೇ ಖದ್ಯೋತೇ ಪ್ರಕಟೇ ಸ್ಥಿತೇ ।
ದೇವಾ ಮುದಮವಾಪುಸ್ತೇ ಸ್ಪಷ್ಟಾ ನವವಿಲೋಚನಾಃ ॥ ೪೬ ॥

ಉದ್ದೀಪ್ತಾಸ್ತು ಸುರಾಸ್ಸರ್ವೇ ಗಣಾ ಸ್ಕಂಧಪುರೋಗಮಾಃ ।
ಸ್ತುವಂತಿ ವಿವಿಧೈಸ್ಸ್ತೋತ್ರೈರ್ನರರೂಪಂ ದಿವಾಕರಂ ॥ ೪೭ ॥

---

ಹೊರಟುಹೋಗಿದ್ದನು. ಆ ಮಾಯೆಯಿಂದ ಈಶ್ವರನು ಕಾಣದಿರಲು ಆ ರಾಕ್ಷಸನು ಎಲ್ಲಿಯೋ ಹೊರಟುಹೋದನು. ಶಂಭುವಿನಿಂದ ಹೆದರಿಕೆಯೊದಗಲು ಮತ್ತೇನು ಮಾಡಿಯಾನು ?

೪೪. ಕತ್ತಲೆಯಿಂದ ಕಣ್ಣು ಕಾಣಿಸದೆ ದೇವತೆಗಳು ದುಃಖ ಹೊಂದಿದರು. ಆದರಿಂದ ತೊಂದರೆಪಟ್ಟು ಸೈನ್ಯವನ್ನು ಕುರಿತು ಕಾರ್ಯಗಳ ಗೌರವದಿಂದ ಆ ದೇವತೆಗಳು ಇಂತೆಂದರು.

೪೫. ಇಷ್ಟರಲ್ಲಿ ತೇಜೋರೂಪಿಯಾದ ಸೂರ್ಯನು ಮನುಷ್ಯ ಆಕಾರದಿಂದೆದ್ದು ದಿಕ್ಕುಗಳ ಕತ್ತಲೆಯನ್ನು ನಾಶಮಾಡಿದನು.

೪೬. ಸೂರ್ಯನು ತೇಜಸ್ಸಿನಿಂದ ಅಂತರಿಕ್ಷದಲ್ಲಿ ನಿಂತು ಕತ್ತಲೆಯನ್ನು ನಾಶಮಾಡಲು ಕಣ್ಣು ಕಾಣಿಸಿದುದರಿಂದ ದೇವತೆಗಳು ಸಂತೋಷ ಹೊಂದಿದರು.

೪೭. ಕಣ್ಣು ಕಾಣಿಸಿದುದರಿಂದ ಸ್ಕಂಧನೇ ಮುಂತಾದ ದೇವತೆಗಳು ನರರೂಪನಾದ ದಿವಾಕರನನ್ನು ಸ್ತುತಿಗಳಿಂದ ಸ್ತುತಿಸಿದರು.

ಅನೌಪಮ್ಯಂ ಜಗದ್ವ್ಯಾಪಿ ಬ್ರಹ್ಮವಿಷ್ಣುಶಿವಾತ್ಮರಾ ।
ಸ್ನಿಗ್ಧವಿದ್ರುಮಸಚ್ಛಾಯಂ ಸಿಂಧೂರಾರುಣಸಪ್ರಭಂ ॥ ೪೮ ॥

ಪ್ರಭಾಸಂತಂ ತದಾ ದೃಷ್ಟ್ವಾ ಪಂಚಾಂಗಾಲಿಂಗಿತಾವನಿಃ ।
ಪುನಃ ಪ್ರಣಾಮಪ್ರವಣಂ ಪ್ರಣಿಧಾನಪುರಸ್ಸರಂ ॥ ೪೯ ॥

ಆಲೋಕ್ಯ ಸ್ನಿಗ್ಧಯಾ ದೃಷ್ಟ್ಯಾ ದೇವದೇವಂ ತ್ರಿಲೋಚನಃ ।
ಉವಾಚ ಸ್ನಿಗ್ಧಗಂಭೀರವಾಚಾ ದೇವಂ ಶನೈರ್ಹರಃ ॥ ೫೦ ॥

॥ ಹರ ಉವಾಚ ॥

ಪೂರಯನ್ನಿವ ತೇಜೋಭಿರ್ಭಗವಾನ್ಭುವನತ್ರಯಂ ।
ದೈತ್ಯಮಾಯಾಭಿಪನ್ನಾನಾಂ ದರ್ಶನಾಕುಲಚೇತಸಾಂ ॥ ೫೧ ॥

ಪ್ರಾಣಿನಾಮಿದಮೇವೈಕಮವಿಸಂವಾದಿ ದೈವತಂ ।
ಅಯಮೇವ ಚ ಸಂಸಾರಸಾಗರಾತ್ಸಕಲಾದಪಿ ॥ ೫೨ ॥

ಸತ್ತ್ವಾನುತ್ತಾರಯಂದೇವಃ ಕರ್ಣಧಾರಾಯತೇ ಪ್ರಭುಃ ।
ಯಜಂತೋ ಜಂತವೋ ಭಕ್ತ್ಯಾ ಯಂ ದೇವಂ ವಿವಿಧಾಸ್ಸದಾ ।
ನಿಶ್ರೇಯಸಾಯ ಕಲ್ಪಂತೇ ತಂ ನತೋ ಭಾಸ್ಕರಂ ಪ್ರಭುಂ ॥ ೫೩ ॥

---

೪೮-೫೦. ಅಸದೃಶವಾದ, ಜಗತ್ತನ್ನು ವ್ಯಾಪಿಸಿರುವ ಬ್ರಹ್ಮ, ವಿಷ್ಣು, ಶಿವ ರೂಪಿಯಾದ, ಹವಳದಂತಿರುವ, ಚಂದ್ರದ ಬಣ್ಣವುಳ್ಳ, ಪ್ರಕಾಶಿಸುತ್ತಿರುವ, ಸೂರ್ಯನನ್ನು ಹರನು ನೋಡಿ ಪಂಚಾಂಗಗಳಿಂದ ನಮಸ್ಕರಿಸಿ ಒಂದೇ ಮನಸ್ಸಿನಿಂದ ನೋಡುತ್ತ ಗಂಭೀರವಾದ ಮಾತಿನಿಂದ ಆ ಸೂರ್ಯನನ್ನು ಕುರಿತು ಇಂತೆಂದನು.

೫೧-೫೩. ಹರನು ಹೇಳಿದನು– ಭಗವಂತನಾದ ಸೂರ್ಯನು ತೇಜಸ್ಸಿನಿಂದ ಮೂರು ಲೋಕವನ್ನು ತುಂಬಿರುವವನಂತೆ ಕಾಣಿಸಿಕೊಂಡಿರುವನು. ದೈತ್ಯನ ಮಾಯೆಯಿಂದ ನೊಂದು ಕಣ್ಣು ಕಾಣದ ಈ ನಮಗೆ ಈತನು ಉತ್ತಮನಾದ ದೇವರು. ಇವನೇನೇ ಸಂಸಾರಸಾಗರದಿಂದ ಎಲ್ಲರನ್ನೂ ದಾಟಿಸುವವನು. ಯಾವ ದೇವರನ್ನು ಪ್ರಾಣಿಗಳು ಪೂಜಿಸುತ್ತ ಮೋಕ್ಷವನ್ನು ಹೊಂದುವುವೋ ಅಂತಹ ಸ್ವಾಮಿಯನ್ನು ನಮಿಸುತ್ತೇವೆ.

ಯಸ್ತೂದಯಾದ್ರಿಶಿಖರೇ ಮುಕುಟಾಯಮಾನ
ಲೀಲಾಗಭಸ್ತಿಭಿರಲಂ ಕುಸುಮಪ್ರಕಾಶೈಃ ।
ವ್ಯಾಪ್ಯ ಸ್ವದೀಧಿತಿಗಣೈಃ ಪ್ರದಿಶೋ ದಿಶಶ್ಚ
ದೇದೀಪ್ಯತೇ ಸ ಸವಿತಾ ವಿಭವಾಯ ಲೋಕೇ ॥ ೫೪ ॥

ಬ್ರಹ್ಮೇಂದ್ರರುದ್ರಮರುದಚ್ಯುತವಹ್ನಿ ಪಾಥೋ
ನಾಥಪ್ರಯೋಗನಿಪುಣೈಶ್ಚ ಋಷೀಂದ್ರಸಂಘೈಃ ।
ಶ್ರೇಯೋರ್ಥಿಭಿಃ ಪ್ರತಿದಿನಂ ದಿವಸಾಂಗರಾಗೈಃ
ದಿವ್ಯಾಂಗರಾಗ ಪರಿಲಿಪ್ತ ಸಮಸ್ತದೇಹೈಃ ॥ ೫೫ ॥

ಪೂಜ್ಯಂ ವಪುಸ್ತವ ಸದಾ ಪ್ರಳಯೇ ಹಿ ವೇದೈ
ರ್ಗೀರ್ಭಿರ್ವಿಚಿತ್ರಪದಮಂಡಲಮಂಡಿತಾಭಿಃ ।
ಯೇ ತ್ವಾಂ ಸ್ತುವಂತಿ ಪರಸದ್ಮನಿ ಸದ್ಮಹೀನಾ
ನಿತ್ಯಂ ಪ್ರಸಾರಿತಕರಾ ಭುವಿ ತೇ ಭವಂತಿ ॥ ೫೬ ॥

---

೫೪. ಯಾವನು ಉದಯಪರ್ವತದ ಮೇಲೆ ನಿಂತು ಹೂವಿನಂತೆ ಬೆಳ್ಳಗಿರುವ ಕಿರಣಗಳಿಂದ ದಿಕ್ಕುಗಳನ್ನು ವ್ಯಾಪಿಸಿ ಪ್ರಕಾಶಿಸುತ್ತಾನೆಯೋ ಅವನು ನಮಗೆ ಒಳ್ಳೆ ದನ್ನು ಮಾಡಲಿ.

೫೫-೫೬. ಬ್ರಹ್ಮ, ಇಂದ್ರ, ರುದ್ರ, ವಾಯು, ವಿಷ್ಣು, ಅಗ್ನಿ, ವರುಣ, ಋಷಿ ಶ್ರೇಷ್ಠರು, ಮತ್ತು ಶ್ರೇಯಸ್ಸನ್ನು ಅಪೇಕ್ಷಿಸುವವರು ತಾವು ದಿವ್ಯವಾದ ಅಂಗರಾಗ ವನ್ನು ಬಳಿದುಕೊಂಡು ನಿನ್ನನ್ನು ಭಕ್ತಿಯಿಂದ ಪೂಜಿಸುತ್ತಾರೆಯೋ ಅಂತಹ ನಿನಗೆ ನಮಸ್ಕಾರವು. ಪ್ರಳಯಕಾಲದಲ್ಲಿಯೂ ವೇದಗಳು ನಿನ್ನನ್ನು ತನ್ನಲ್ಲಿರುವ ನಾನಾಪದ ಗಳಿಂದ ಹೊಗಳುತ್ತವೆ. ಅಂತಹ ನೀನು ನಮಗೆ ಪೂಜ್ಯನು. ಯಾರು ನಿನ್ನನ್ನು ತಮಗೆ ಮನೆಯಿಲ್ಲದೆ ಹೆರರ ಮನೆಯಲ್ಲಿದ್ದುಕೊಂಡೂ ಸ್ತುತಿಸುತ್ತಾರೆಯೋ ಅವರು ಪ್ರಪಂಚ ವನ್ನು ಆಕ್ರಮಿಸಿಕೊಳ್ಳುತ್ತಾರೆ.

ಯೇ ದುಷ್ಟಕುಷ್ಠ ಪಿಟಿಕಾದಿಭಿರರ್ದಿತಾಂಗಾಃ
ಶೀರ್ಣತ್ವಚಃ ಕುನಖಿನಶ್ಚ್ಯುತಕೇಶನಾಸಾಃ ।
ದೇವೇಶ ತೇಽಪಿ ತವ ಪಾದನತಾ ಭವಂತಿ
ಸದ್ಯೋ ದ್ವಿರಷ್ಟಶರದಾಕೃತಯೋ ಮನುಷ್ಯಾಃ ॥ ೫೭ ॥

ಸಾಮೇತಿ ಸಾಮಗಗಣಾ ಹಿ ಮಖಾರ್ಥಕಂ ತ್ವಾ
ಮಧ್ವರ್ಯವಃ ಋಗಿತಿ ಬಹ್ವೃಚ ಮುಖ್ಯಪುಂಗಾಃ ।
ತ್ವಾಮೇವಮಾರ್ಯಮಿತಿ ಕಾರ್ಯವಿದೋಧಿಗಂತುಂ
ನಾಗಾಶ್ಚ ವೇತ್ತಿ ಪಿತರೋಽಪ್ಯಥ ಸರ್ವಗಂಧಂ ॥ ೫೮ ॥

ಮಾಯೇತಿ ಚೋಪನಿಷದರ್ಕ ಷಡೇವ ದೇವಾ
ಮರ್ತ್ಯಾಸ್ತಥಾ ವಯಮಿಮೇಹ ಉಪಾಸತೇಽಮೀ ।
ಗಂಧರ್ವಕಿನ್ನರಗಣಾಸ್ಸಹ ಚಾರಣೈಸ್ತು
ರೂಪಂ ತಥಾ ಚ ಭಗವನ್ಪ್ರತಿಪದ್ಯಸೇ ತ್ವಂ ॥ ೫೯ ॥

---

೫೭. ಕುಷ್ಠ, ಹುಣ್ಣು, ಶಿಡುಬು, ಮುಂತಾದುವುಗಳಿಂದ ಕೂಡಿದವರೂ ಚರ್ಮರೋಗಿಗಳೂ, ಉಗುರುಹುಳುಕರೂ, ಕೂದಲು ಹಲ್ಲು ಹೋಗಿರುವವರೂ ಇಂತಹ ರೋಗಿಗಳು ನಿನ್ನನ್ನು ನಮಸ್ಕರಿಸಿದರೆ ಅವರು ಹದಿನಾರುವರ್ಷದ ವಯಸ್ಸಿನ ವರಂತೆ ಒಡನೆಯೇ ಆಗುತ್ತಾರೆ.

೫೮-೫೯. ಸಾಮವೇದದವರು ಸಾಮವೇದವೆಂದೂ, ಅಧ್ವರ್ಯುಗಳು ಯಜುಸ್ಸೆಂದೂ, ಋಗ್ವೇದಿಗಳು ಋಕ್ಕೆಂದೂ, ಅಲ್ಲದೇ ಕಾರ್ಯವನ್ನಪೇಕ್ಷಿಸುವವರು ಆರ್ಯನೆಂದೂ ನಾಗರು ಅಮೃತನೆಂದೂ, ಪಿತೃಗಳು ಸರ್ವಗಂಧನೆಂದೂ, ಉಪನಿಷತ್ತುಗಳು ಮಾಯೆಯೆಂದೂ, ಮನುಷ್ಯರು ಆರು ಋತುಗಳ ಸ್ವರೂಪನೆಂದೂ, ನಿನ್ನನ್ನು ಭಜಿಸುತ್ತಾರೆ. ಅಂತೆಯೇ ದೇವತೆಗಳಾದ ನಾವೂ ನಿನ್ನನ್ನು ಭಜಿಸುತ್ತೇವೆ ಗಂಧರ್ವರು ಕಿನ್ನರರು, ಚಾರಣರು, ನಿನ್ನನ್ನು ಭಜಿಸಿ ಅಂತಹ ರೂಪವನ್ನು ಹೊಂದಿದ್ದಾರೆ.

ಯೇ ನಾರ್ಚಯಂತಿ ಸತತಂ ಭವತೋರ್ಚ್ಯಮರ್ಚಿ
ಸ್ತೇರ್ಚಿಷ್ಪ್ರತಾಪಿತ ದಿಗಂಬರ ವಿತ್ತಹೀನಾಃ ।
ಕ್ಷುತ್ಕ್ಷಾಮಕಂಠಜಠರಾಘಟಿಕರ್ಪರೇಣ
ಭಿಕ್ಷಾಮಟಂತಿ ಪರವೇಶ್ಮಸು ತೀರ್ಥಹೀನಾಃ ॥ ೬೦ ॥

ಉತ್ಫುಲ್ಲ ಕೋಕನದಕೋಶವಿಶಾಲನೇತ್ರ
ಮೀಷದ್ವಿಲಾಸ ಲಲಿತಾಲಕಪೋಲತಾರಂ ।
ಕಾಮಂ ಪ್ರಶಸ್ತತರ ಸುಂದರಹಾರ ರಮ್ಯ
ಮುತ್ತುಂಗ ಪೀವರ ಪಯೋಧರಭಾರಖಿನ್ನಂ ॥ ೬೧ ॥

ರಂಭೋಪಮೋರು ಪೃಥುಪೀನ ನಿತಂಬಬಿಂಬಾ
ನದ್ಧಕ್ವಣನ್ಮಣಿ ರಣದ್ರಶನಾಕಲಾಪಂ ।
ವೃಂದಂ ಲಲಾಟತಟಕೋಟಿಪಟಾಂತಲಂಬಿ
ಹೇಮಾಂಚಲಾಂಚಿತಮುಖಂ ಕುಲಪಾಲಿಕಾನಾಂ ॥ ೬೨ ॥

ಕಾಂತಂ ಗೃಹೇಷು ಕಲಗದ್ಗದಭಾಷಿತಾನಾಂ
ಝುಂಕಾರನೂಪುರರವೇಣವಿರಾಜಿತಾನಾಂ ।
ತೇಷಾಂ ಕೃಷಾನುಕರಮಿಂದುಸಮಾನಕಾಂತಂ
ಯೈರರ್ಚಿತೋಸಿ ಭಗವನ್ಭವಮೋಚನಸ್ತ್ವಂ ॥ ೬೩ ॥

---

೬೦. ಪೂಜ್ಯನಾದ ನಿನ್ನನ್ನು ಪೂಜಿಸದಿರುವವರು ಕಾಂತಿ ಶೌರ್ಯ ಹಣವಿಲ್ಲ ದವರಾಗಿ ಹಸಿವು ಬಾಯಾರಿಕೆಯಿಂದ ಕೂಡಿ ಒಕ್ಕರೆಯನ್ನು ಹಿಡಿದು ಇತರರ ಮನೆಗ ಳಲ್ಲಿ ಬಿಕ್ಷೆಯನ್ನು ಬೇಡುತ್ತಾರೆ.

೬೧-೬೩ ಕಮಲದಂತೆ ಕಣ್ಣುಳ್ಳ, ಮುಂಗುರುಳು ಜೋಲಾಡುತ್ತಿರುವ, ಒಳ್ಳೆಯ ಹಾರ ಹಾಕಿಕೊಂಡಿರುವುದರಿಂದ ಸುಂದರವಾದ, ಸ್ತನಗಳ ಭಾರದಿಂದ ಖಿನ್ನ ರಾದ, ಬಾಳೆಯ ಕಂಬದಂತಿರುವ ತೊಡೆಗಳ ಮೇಲಿರುವ ಸೊಂಟದಲ್ಲಿ ಒಡ್ಡಿಯಾಣ ವನ್ನು ಝುಲ್ಲೆನ್ನಿಸುತ್ತಿರುವ, ಮುಖದ ಮೇಲೆ ಜೋಲಾಡುವ ಸೆರಗುಳ್ಳ, ಗರತಿಯ ರಾದ, ಮಧುರವಾಣಿಗಳಾದ, ಕಾಲುಬಳೆಯನ್ನು ಝೇಂಕಾರ ಮಾಡುತ್ತಿರುವ, ಪ್ರಕಾಶ ಮಾನವಾದ ಚಂದ್ರನಂತಿರುವ ಮುಖವುಳ್ಳ ಸ್ತ್ರೀಯರು ನಿನ್ನನ್ನು ಪೂಜಿಸಿದವರಿಗೆ ಲಭಿಸುತ್ತಾರೆ. ಅಲ್ಲದೆ ಮೋಕ್ಷವನ್ನು ಹೊಂದುತ್ತಾರೆ.

ಬ್ರಹ್ಮಾ ತ್ವಮೇವ ಹರಿರಸ್ಯನಿಲೋಽನಲೋಽಸಿ
ರುದ್ರೋಽಂತಕೋಽಸಿ ವರುಣೋಽಸ್ಯಮರಾಧಿಪೋಽಸಿ ।
ಸೋಮೋಽಸಿ ವಾಯುರಸಿ ಭೂರಸಿ ಚೇಶ್ವರೋಽಸಿ
ಯಜ್ಞೋಽಸಿ ವಿತ್ತಪತಿರಸ್ಯಪರಾಜಿತೋಽಸಿ ॥ ೬೪ ॥

ಯೇ ಸಪ್ತಸಪ್ತಿಸುರವಾಹರಣೇನ ಮುಕ್ತಾ
ಭೂಮಾವಥೇತಿ ತರಸೋರುತರಂ ತರೀತಾಃ ।
ವ್ಯೋಮ್ನ್ಯೇತದಂತರಹಿತಂ ಪರಿತೋ ಹಿ ಗತ್ವಾ
ಗಚ್ಛಂತಿ ನ ಶ್ರಮಪದಂ ಹಿ ಮನಾಗಪೀಮೇ ॥ ೬೫ ॥

ಧ್ಯಾನೈಕಯೋಗನಿರತಾಶ್ಚ ಸಮಾಧಿಭಾವಾ
ದ್ಧ್ಯಾತ್ವಾ ಪದಾಂತರತುರೀಯಮನಂತಮೂರ್ತೇ ।
ಮುಕ್ತಾಮಯಾಸ್ತನುಭೃತೋ ನ ಭಿಯಾಭಿಯುಕ್ತಾ
ಸ್ತದ್ಬ್ರಹ್ಮಶಾಶ್ವತಮಚಿಂತ್ಯಮನಾದ್ಯನಂತಂ ॥ ೬೬ ॥

---

೬೪. ಬ್ರಹ್ಮ, ಹರಿ, ಅಗ್ನಿ, ವಾಯು, ರುದ್ರ, ಯಮ, ವರುಣ, ಇಂದ್ರ, ಸೋಮ, ಭೂಮಿ, ಈಶ್ವರ, ಯಜ್ಞ, ಕುಬೇರ, ಇವರೆಲ್ಲರೂ ನೀನೇ ಆಗಿದ್ದೀಯೆ. ನೀನು ಅಜೇಯನಾಗಿದ್ದೀಯೆ.

೬೫. ಎಲೈ ಸೂರ್ಯನೇ ! ನಿನ್ನ ಈ ಕುದುರೆಗಳು ಭೂಮಿಯಲ್ಲೆಲ್ಲಾ ಸುತ್ತಿ ಕೊನೆಮೊದಲಿಲ್ಲದ ಅಂತರಿಕ್ಷದಲ್ಲಿ ಎಲ್ಲಾ ಓಡಾಡಿಯೂ ಸ್ವಲ್ಪವೂ ಆಯಾಸವನ್ನು ಹೊಂದುವುದೇ ಇಲ್ಲ.

೬೬. ಧ್ಯಾನದಿಂದ ಸಮಾಧಿಯಲ್ಲಿ ನಿನ್ನನ್ನು ಕಾಣುವವರು ರೋಗವಿಲ್ಲದ ದೇಹವುಳ್ಳವರಾಗಿ ಹೆದರಿಕೆಯನ್ನು ಬಿಟ್ಟು ಶಾಶ್ವತವೂ ಅಚಿಂತ್ಯವೂ ಅನಾದಿಯೂ ಅಂತರಹಿತವೂ ಆದ ನಿನ್ನ ಮೋಕ್ಷಸ್ಥಾನವನ್ನು ಹೊಂದುತ್ತಾರೆ.

ಜನ್ಮಾಧಿರೋಗರಹಿತಂ ಪರಮಂ ಪುರಾಣ
ಮೀಶಂ ಜರಾಮರಣಶೋಕಭಯಾತಿರಿಕ್ತಂ ।
ಸ್ಥೌಲಾನುಭಾವನಗಣಾಗಣಿತಂ ವಿಶುದ್ಧಂ
ವೇದಾಂತವಾದಿಭಿರಲಂ ಪರಿಪಠ್ಯತೇ ಯತ್ ॥ ೬೭ ॥

ತ್ವಾಮಗ್ನಿಪುಂಜವಪುಷಂ ತಪಸಾಂ ನಿವಾಸಂ
ಯಾತಾ ದಿವಂ ಸುಚಿರಕಾಲಮುಪಾಸ್ಯ ಭಕ್ತಾಃ ।
ಭಾಸೋ ಸುರಾಸುರಸಮೂಹಶಿರೋನಿಘೃಷ್ಟ
ಪಾದಾರವಿಂದಯುಗಳಾಮಲಚಾರುಮೂರ್ತೇ ॥ ೬೮ ॥

ಭೂತೇಶ ಭೂತವರದಾಸಕೃದವ್ಯಯಾತ್ಮ
ನ್ವ್ಯೋಮಾಟ್ಟಹಾಸ ಸವಿತರ್ಭುವನೈಕದೀಪ ।
ಋಕ್ಸಾಮಮಂತ್ರಯಜುಷಾಮಧಿವಾಸ ನಾಮ
ಸೃಷ್ಟಿಸ್ಥಿತಿಪ್ರಳಯಕಾರಣ ಲೋಕಪಾಲ ॥ ೬೯ ॥

---

೬೭. ಆ ನಿನ್ನ ಸ್ಥಾನವು ಜನ್ಮಮನೋವ್ಯಥೆಗಳಿಲ್ಲದ್ದು. ಉತ್ತಮವಾದುದು ಮುಪ್ಪು, ಮರಣ, ಶೋಕ, ಭಯಗಳಿಲ್ಲದ್ದು. ಬಹು ದೊಡ್ಡದು. ಅಳತೆ ಮೀರಿದುದು. ಶುದ್ಧವಾದುದು. ವೇದಾಂತಿಗಳೂ ಅದನ್ನೇ ಹೇಳುವರು.

೬೮. ಅಗ್ನಿಯ ಉಂಡೆಯಂತಿರುವ, ತಪಸ್ಸಿಗೆ ಮನೆಯಾದ, ನಿನ್ನನ್ನು ಭಕ್ತರು ಬಹುಕಾಲ ಸೇವಿಸಿ ಸ್ವರ್ಗಕ್ಕೆ ಹೋಗುತ್ತಾರೆ. ಎಲೈ ಸೂರ್ಯನೇ ! ನೀನು ಸುರಾಸುರರಿಂದ ನಮಸ್ಕೃತನು. ಮನೋಹರ ಮೂರ್ತಿಯು.

೬೯-೭೦ ಪ್ರಾಣಿಗಳ ಒಡೆಯನೇ ! ಪ್ರಾಣಿಗಳಿಗೆ ವರವನ್ನು ಕೊಡತಕ್ಕವನೇ ! ಅವ್ಯಯನೇ ! ಅಂತರಿಕ್ಷದಲ್ಲಿ ಪ್ರಕಾಶಿಸುವವನೇ ! ಸವಿತನೇ ! ಪ್ರಪಂಚದ ದೀಪನೇ ! ಋಕ್, ಸಾಮ, ಯಜಸ್ಸುಗಳಿಗೆ ಅಧಿದೇವತೆಯೇ ! ಲೋಕದ ಸೃಷ್ಟಿಸ್ಥಿತಿ,

ದೀನಸ್ಯ ದೇವ ಕೃಪಣಸ್ಯ ಭವೇ ಭವೇಹ
ಮಗ್ನಸ್ಯ ಚಾರುದವಿಚಾರ ಮನೋರಥಾನಿ ।
ಶಶ್ವದ್ಯತೀಶ್ವರ ಶಶೀಕರಕಂಕಘೋರೋ
ತ್ಪಾತೋ ಜರಾಮರಣಶೋಕ ರುಗಾಂತರಸ್ಯ ॥ ೭೦ ॥

ಯಃ ಪ್ರಾತಸ್ಸಾಯಮಿದಂ ಮಧ್ಯಾಹ್ನೇ ವಾ ಪಠೇಚ್ಚದೀಪ್ತಾಂಶೋಃ
ಸಾಲೋಕ್ಯಂ ಯಾತಿ ರವೇಃ ಪ್ರಾಪ್ನೋತಿ ಧರ್ಮಾರ್ಥಕಾಮಾಂಶ್ಚ॥ ೭೧ ॥

ನಿತ್ಯಂ ತಸ್ಮಾಚ್ಚ ಸೂರ್ಯಾಚ್ಚ ಮನಸೋಭಿಹಿತಂ ಚ ಯತ್ ।
ನಮಸ್ತೇ ದೇವದೇವೇಶ ಭಕ್ತಾನಾಮಭಯಂಕರ ॥ ೭೨ ॥

ಸುಬ್ರಹ್ಮಣ್ಯ ನಮಸ್ತೇಸ್ತು ಸರ್ವದೇವನಮಸ್ಕೃತ ।
ತಿಗ್ಮಾಂಶೋ ವೈ ನಮಸ್ತುಭ್ಯಂ ಜಗತಶ್ಚಕ್ಷುಷೇ ನಮಃ ॥ ೭೩ ॥

---

ಲಯಗಳಿಗೆ ಕಾರಣನೇ ! ಲೋಕಪಾಲನೇ ! ಕೃಪಣನೂ ದೀನನೂ ಆದ ದುಃಖಗೊಂಡಿರುವ ನನ್ನ ಮನೋರಥವನ್ನು ಪೂರ್ತಿಮಾಡು. ಯತೀಶ್ವರನೇ ! ಚಂದ್ರನ ಕಿರಣಗಳಿಗೆ ನಾಶಕನೇ ! ಜರೆ ಮರಣ ಶೋಕ ರೋಗಗಳಿಂದ ಕೂಡಿದ ನನ್ನ ಮನೋರಥವನ್ನು ಈಡೇರಿಸು.

೭೧. ಈ ಸೂರ್ಯಸ್ತೋತ್ರವನ್ನು ಸಾಯಂಕಾಲ ಪ್ರಾತಃಕಾಲ ಮಧ್ಯಾಹ್ನಗಳಲ್ಲಿ ಪಠಿಸಿದರೆ ಧರ್ಮಾರ್ಥಕಾಮಗಳನ್ನು ಹೊಂದಿ ರವಿಯ ಸಾಲೋಕ್ಯವನ್ನು ಹೊಂದುತ್ತಾನೆ.

೭೨. ಹೀಗೆ ಸ್ತುತಿಸಿದವನು ಆ ಸೂರ್ಯನಿಂದ ಇಷ್ಟವನ್ನು ಹೊಂದುತ್ತಾನೆ. ದೇವದೇವನೇ! ನಿನಗೆ ನಮಸ್ಕಾರವು. ಭಕ್ತರಿಗೆ ಅಭಯವನ್ನು ಕೊಡುವವನೇ ನಿನಗೆ ನಮಸ್ಕಾರವು.

೭೩-೭೪. ಸುಬ್ರಹ್ಮಣ್ಯನೇ ! ನಿನಗೆ ನಮಸ್ಕಾರವು. ದೇವತೆಗಳಿಂದ ನಮಸ್ಕೃತನೇ ! ನಿನಗೆ ನಮಸ್ಕಾರವು. ತಿಗ್ಮಾಂಶುವೇ ! ನಿನಗೆ ನಮಸ್ಕಾರವು. ಲೋಕದ

ಪ್ರಭಾಕರ ನಮಸ್ತೇಽಸ್ತು ಭಾನೋ ಜಯ ಜಗತ್ಪತೇ ।
ಅನೇನ ದನುಮುಖ್ಯೇನ ಪೀಡಿತೋಽಹಂ ಜಗತ್ಪತೇ
ಕಿಂಕರೋಮಿ ಕಥಂ ಚೈನಂ ಘಾತಯಾಮಿ ದಿವಾಕರ ॥ ೭೪ ॥

॥ ಸೂರ್ಯ ಉವಾಚ ॥

ಜಹಿ ಶೂಲೇನ ಪಾಪಿಷ್ಠಂ ಮಾಯಾಶತವಿಶಾರದಂ ।
ಜಯಂ ಪ್ರಾಪ್ನುಹಿ ದೇವೇಶ ಹತ್ವಾ ಶೂಲೇನ ಚಾಂಧಕಂ ॥ ೭೫ ॥

॥ ಪುಲಸ್ತ್ಯ ಉವಾಚ ॥

ಗೃಹ್ಯ ಶೂಲಂ ತತೋ ದೂರಮಾಕ್ಷಿಪತ್ತೇಜಸಾ ಹರಃ ।
ತತೋಽಂಧಕಸ್ತ್ರಿಶೂಲೇಲ ಪಾಪಿಷ್ಠಃ ಪಾಪಕರ್ಮಕೃತ್ ॥ ೭೬ ॥

ತಸ್ಮಿನ್ಯುದ್ಧೇ ತದಾ ರುದ್ರೋ ಅಂಧಕೇನಾಭಿಪೀಡಿತಃ ।
ಮುಮೋಚ ಬಾಣಮತ್ಯುಗ್ರಂ ನಾಮ್ನಾ ಪಾಶುಪತಂ ಹಿ ಯತ್ ॥ ೭೭ ॥

ಪಿನಾಕಮಾನಮ್ಯ ದೋರ್ಭ್ಯಾಂ ಪಿನಾಕೀಶಂಕರಸ್ಸ್ವಯಂ ।
ರುದ್ರಬಾಣವಿನಿರ್ಭೇದಾದ್ರುಧಿರಾದಂಧಕಸ್ಯ ತು ॥ ೭೮ ॥

ಅಂಧಕಾಃ ಸಮುತ್ಪನ್ನಾಶ್ಶತಶೋಽಥ ಸಹಸ್ರಶಃ ।
ತೇಷಾಂ ವಿದೀರ್ಯಮಾಣಾನಾಮಪರಾದಪರೇ ಪುನಃ ॥ ೭೯ ॥

---

ಕರ್ಣ್ಣೇ! ನಿನಗೆ ನಮಸ್ಕಾರವು. ಪ್ರಭಾಕರನೇ! ಭಾನುವೇ! ನಿನಗೆ ನಮಸ್ಕಾರವು. ಈ ದಾನವನಿಂದ ತೊಂದರೆಪಡುತ್ತಿದ್ದೇನೆ. ಏನು ಮಾಡಲಿ? ಈತನನ್ನು ಹೇಗೆ ಕೊಲ್ಲಲಿ?

೭೫. ಸೂರ್ಯನು ಹೇಳಿದನು– ಮಾಯಾವಿಯಾದ ಈತನನ್ನು ಶೂಲದಿಂದ ಕೊಂದುಹಾಕು. ಶೂಲದಿಂದ ಈ ಅಂಧಕನನ್ನು ಕೊಂದು ಜಯವನ್ನು ಹೊಂದು.

೭೬-೭೭. ಪುಲಸ್ತ್ಯನು ಹೇಳಿದನು- ಅನಂತರ ಹರನು ಶೂಲವನ್ನು ತೆಗೆದು ಕೊಂಡು ಎಸೆಯಲು ಅಂಧಕನು ಅದನ್ನು ಅವನ ಮೇಲೆ ಎಸೆದನು ಆ ಶೂಲದಿಂದ ಏಟುತಿಂದ ರುದ್ರನು ಪಾಶುಪತಾಸ್ತ್ರವನ್ನು ಬಿಟ್ಟನು.

೭೮-೭೯. ಪಿನಾಕವನ್ನು ಬಗ್ಗಿಸಿ ಪಾಶುಪತಾಸ್ತ್ರವನ್ನು ಬಿಡಲು ಅದರ ಏಟಿನ ರಕ್ತದಿಂದ ಆ ಅಂಧಕನಿಂದ ಸಾವಿರಾರುಜನ ಅಂಧಕರು ಹುಟ್ಟಿದರು. ಅವರ ರಕ್ತ ದಿಂದಲೂ ಬೇರೆ ಬೇರೆಯ ಅಂಧಕರು ಹೀಗೆ ಹುಟ್ಟುತ್ತ ಬಂದರು.

ಬಭೂವುರಂಧಕಾ ಘೋರಾ ಯೈರ್ವ್ಯಾಪ್ತಮಖಿಲಂ ಜಗತ್ ।
ತಂ ತು ಮಾಯಾವಿನಂ ದೃಷ್ಟ್ವಾ ದೇವದೇವಸ್ತದಾಂಧಕಂ ॥ ೮೦ ॥

ಪಾನಾರ್ಥಮಂಧಕಸ್ಯಾಸ್ಯ ಸಸೃಜೇ ಮಾತರಸ್ತದಾ ।
ಮಾಹೇಶ್ವರೀಂ ತಥಾ ಬ್ರಾಹ್ಮೀಂ ಶೌರೀಂ ವಾ ಬಾಡಬೀಂ ತಥಾ ॥ ೮೧ ॥

ಸೌಪರ್ಣೀಮಥ ವಾಯವ್ಯಾಂ ಶಂಖಿನೀಂ ಕ್ಷೈತ್ರರೀಂ ತಥಾ ।
ಸೌರೀಂ ಸೌಮ್ಯಾಂ ಶಿವದೂತೀಂ ಚಾಮುಂಡಾಮಥವಾರುಣೀಂ ॥ ೮೨ ॥

ವಾರಾಹೀಂ ನಾರಸಿಂಹೀಂ ಚ ವೈಷ್ಣವೀಂ ಚ ವಿಭಾವರೀಂ ।
ಶತಾನಂದಾಂ ಭಗಾನಂದಾಂ ಪಿಚ್ಛಿಲಾಂ ಭಗಮಾಲಿನೀಂ ॥ ೮೩ ॥

ಬಲಾಮತಿಬಲಾಂ ರಕ್ತಾಂ ಸುರಭೀಂ ಮುಖಮಂಡಿತಾಂ ।
ಮಾತೃನಂದಾಂ ಸುನಂದಾಂ ಚ ಬಿಡಾಲೀಂ ಶಾಕುನೀಂ ತಥಾ ॥ ೮೪ ॥

ರೇವತೀಂ ಚ ಮಹಾಪುಣ್ಯಾಂ ತಥೈವ ಶಿಖಿಪಟ್ಟಿಕಾಃ ।
ಕಪಾಲೇನ ಚ ತತೋ ದೈತ್ಯಂ ಬಿಭೇದ ತ್ರಿಪುರಾಂತಕಃ ॥ ೮೫ ॥

ನಿರ್ಗತಂ ರುಧಿರಂ ತಸ್ಮಾತ್ಪಪುಸ್ತಾ ಮಾತರಸ್ತದಾ
ನೀರಕ್ತೋ ಹಿ ತದಾ ದೈತ್ಯಃ ಕೃಶತಾಂ ಪ್ರಾಪ ಭೂಪತೇ ॥ ೮೬ ॥

---

೮೦-೮೬. ಈ ರೀತಿ ಅಂಧಕರು ಹುಟ್ಟಿ ಪ್ರಪಂಚವನ್ನೇ ಆವರಿಸಿಕೊಂಡರು. ಆ ರೀತಿಯಾದ ಮಾಯಾವಿಯನ್ನು ರುದ್ರನು ತಿಳಿದು ಆ ರಕ್ತವನ್ನು ಕುಡಿಯಲು ಮಾತೃಗಣನ್ನು ಸೃಷ್ಟಿಸಿದನು. ಮಾಹೇಶ್ವರೀ, ಬ್ರಾಹ್ಮಿ, ಶೌರಿ, ಬಾಡಬಿ, ಸೌಪರ್ಣೀ, ವಾಯವೀ, ವಾರುಣಿ, ವಾರಾಹಿ, ನಾರಸಿಂಹೀ, ವೈಷ್ಣವೀ, ವಿಭಾವರಿ, ಶತಾನಂದೀ, ಭಗಾನಂದೀ, ಪಿಚ್ಛಿಲಾ, ಭಗಮಾಲಿನೀ, ಬಲೆ, ಅತಿಬಲೆ, ರಕ್ತೆ, ಸುರಭಿ, ಮುಖಮಂಡಿತೇ, ಮಾತೃನಂದೆ, ಸುನಂದೆ, ಬಿಡಾಲಿ, ಶಾಕುನಿ, ರೇವತಿ, ಶಿಖಿಪಟ್ಟಿಕೆ, ಇವರೇ ಆ ಮಾತೃಗಣ. ಅನಂತರ ಕಪಾಲದಿಂದ ಶಿವನು ಅಂಧಕನನ್ನು ಕೊಂದನು. ಅವನಿಂದ ಹೊರಟ ರಕ್ತವನ್ನು ಮಾತೃಕೆಗಳು ಕುಡಿದರು. ಅನಂತರ ರಕ್ತವೆಲ್ಲವೂ ನಾಶವಾಗಿ ಅಂಧಕನು ರಕ್ತಹೀನನಾದನು.

ಶೂಲೇ ಪ್ರೋತಸ್ತದಾ ದೈತ್ಯೋ ದಿವ್ಯಂ ವರ್ಷಸಹಸ್ರಕಂ ।
ಮಹಾಬಲೇನ ರುದ್ರೇಣ ವಿಧೃತೋಽಪಿ ಮೃತೋ ನ ಹಿ ॥ ೮೭ ॥

ಸ್ತುತಸ್ತೇನ ತದಾ ಶಂಭುರ್ಭಕ್ತ್ಯಾ ದೈತ್ಯೇನ ಸುವ್ರತ ॥ ೮೮ ॥

॥ ಅಂಧಕ ಉವಾಚ ॥

ನಮೋಽಸ್ತು ಶಂಭೋ ಭವನಾಶಹೇತೋ
ನಮೋಽಸ್ತು ತೇ ದೇವವರ ಪ್ರಸೀದ ।
ತ್ವಂ ಭೂಜಲಾಗ್ನೀರನಲೋಽರ್ಕಸೋಮ
ಯಜ್ವಾಷ್ಟಮೂರ್ತಿರ್ಭವ ಭಾವನೋಽಲಂ ॥ ೮೯ ॥

ತ್ವಾಂ ವೈ ಬಾಣೋ ಬಾಹುವಾದ್ಯೇನ ತೋಷ್ಯ
ಪ್ರಾಪ್ತೈಶ್ವರ್ಯಂ ಸ್ವೇ ಪುರೇ ತ್ವತ್ಸುರಕ್ಷ್ಯಂ ।
ರಕ್ಷೋಽಧೀಶೋ ಬಾಹುಭಿಸ್ತೋಲ್ಯ ಶೈಲಂ
ಯುಷ್ಮತ್ಕ್ರಾಂತಕ್ಲಿಷ್ಟರೂಪೋ ಹ್ಯಸೌಷೀತ್ ॥ ೯೦ ॥

---

೮೭-೮೮. ಅನಂತರ ಅಂಧಕನನ್ನು ಶೂಲದಲ್ಲಿ ದೇವತೆಗಳ ಸಾವಿರವರ್ಷಗಳು ಕಳೆಯುವವರೆಗೂ ಚುಚ್ಚಿಟ್ಟಿದ್ದನು. ಆದರೂ ಅವನು ಸಾಯಲೇ ಇಲ್ಲ. ಅನಂತರ ಆ ದೈತ್ಯನು ಭಕ್ತಿಯಿಂದ ಶಂಭುವನ್ನು ಸ್ತುತಿಸಿದನು.

೮೯. ಅಂಧಕನು ಹೇಳಿದನು- ಸಂಸಾರದಿಂದ ಮುಕ್ತಿಯನ್ನು ಕೊಡುವ ಶಂಭುವೇ ! ನಿನಗೆ ನಮಸ್ಕಾರವು. ದೇವೇಶನೇ ! ಪ್ರಸನ್ನನಾಗು. ನೀನೇ ಭೂಮಿಯು ನೀರು ಅಗ್ನಿಯು ವಾಯುವು ಆಕಾಶವು ಚಂದ್ರಸೂರ್ಯರು, ಯಜಮಾನನು ಈ ರೀತಿ ಯಾದ ಅಷ್ಟಮೂರ್ತಿಯೂ ಆಗಿದ್ದೀಯೆ.

೯೦. ಎಲೈ ಶಿವನೇ ! ನಿನ್ನನ್ನು ಬಾಣನು ಬಾಹುವಾದ್ಯದಿಂದ ಸಂತೋಷಪ ಡಿಸಿ ತನ್ನ ಪಟ್ಟಣದಲ್ಲಿ ಐಶ್ವರ್ಯವನ್ನು ಹೊಂದಿ ಅದನ್ನು ನೀನು ಕಾಪಾಡುವಂತೆ ಮಾಡಿಕೊಂಡಿರುತ್ತಾನೆ. ರಾವಣನು ತೋಳಿನಿಂದ ಕೈಲಾಸವನ್ನು ತೂಗಿ ನಿನ್ನಿಂದ ವೈರೂಪವನ್ನು ಹೊಂದಿದನು.

ಪ್ರಾಪ್ತೋಽಪ್ಯೈಶ್ಯಂ ಸರ್ವರಕ್ಷೋ ಗಣಾನಾಂ ।
ಪುತ್ರಂ ಚಾಪಿ ಪ್ರೋರ್ಜಿತಂ ಶಕ್ರಬಂಧಂ ॥ ೯೧ ॥

ಭವ ಭಯಹರ ಹರ ಪರಮ ಉದಾರ
ಮಮ ಸುಖಕರಣ ನಿಖಿಲಸುರಸಾರ ।
ಜಿತ ಮರುದಭಿಮತ ವಿತರಣಪಾರ
ತವ ಪದಕಮಲವಿಹಾರಣಮಾರ ॥ ೯೨ ॥

ತವೇಶ ಪಾದಪಂಕಜಂ ಕರೋತಿ ಯೋ ನರೋ ಹೃದಿ ।
ಸದೇಶ ತಸ್ಯ ವಾಂಛಿತಂ ದದಾಸಿ ಭಕ್ತಿಭಾವಿತಃ ॥
ಮುನೀಶ್ವರಾಃ ಪುರಾ ಹರಂ ಭವಂತಮೇವಮಾದರಾ
ತ್ಪ್ರಪೂಜ್ಯ ಲಿಂಗರೂಪಿಣಂ ಸಮಾಹಿತಾ ಮನೋರಥಾನ್॥೯೩॥

ಭವೋದ್ಭವೈಕರೂಪಿಣಂ ಪ್ರಪಂಚಪಂಚಕಾಕೃತಿಂ
ವಿಚಿಂತ್ಯ ವೃಕ್ಷಕೋಟರಸ್ಯ ಏಷ ಜೀವಜೀವನಂ ।
ಭವೇದ್ಭವಾಂಘ್ರಿಚಿಂತನಾಪ್ತ ಸರ್ವಕಾಮ ಈಶ್ವರ
ತ್ವದೀಯಕಿಂಕರಾನ್ವಿತೇ ಪದೇ ಪದೇ ಶಮಾಗತಃ ॥ ೯೪ ॥

---

೯೧. ಅನಂತರ ನಿನ್ನನ್ನು ಸ್ತುತಿಸಿ ರಾಕ್ಷಸರಿಗೆ ಅಧಿಪತಿಯಾಗಿರುವಿಕೆಯನ್ನು ಹೊಂದಿ ಇಂದ್ರನನ್ನು ಕಟ್ಟುವಂತಹ ಮಗನನ್ನು ಹೊಂದಿದನು.

೯೨. ಸಂಸಾರನಾಶಕನಾದ ಹರನೇ ! ಬೇಕಾದುದನ್ನು ಕೊಡುವವನೇ ! ನನಗೆ ಸುಖವನ್ನು ಕೊಡುವವನೇ ! ದೇವತೆಗಳಲ್ಲಿ ಶ್ರೇಷ್ಠನೇ ! ದೇವತೆಗಳನ್ನು ಗೆದ್ದವನೇ ! ಇಷ್ಟವನ್ನು ಕೊಡುವವನೇ ! ನಿನ್ನ ಪಾದಕಮಲವು ನನಗೆ ಸುಖವನ್ನು ಕೊಡಲಿ.

೯೩. ಎಲೈ ಈಶನೇ ! ನಿನ್ನ ಪಾದಕಮಲವನ್ನು ಧ್ಯಾನಿಸುವವನಿಗೆ ಮನಸ್ಸಿನ ಇಷ್ಟಾರ್ಥಗಳನ್ನು ಕೊಡುತ್ತೀಯೆ. ಪೂರ್ವದಲ್ಲಿ ಮುನಿಗಳು ಲಿಂಗರೂಪಿಯಾದ ನಿನ್ನನ್ನು ಪೂಜಿಸಿ ಮನೋರಥಗಳನ್ನು ಹೊಂದಿದರು.

೯೪. ಎಲೈ ಶಿವನೇ ! ನೀನು ಸಂಸಾರತಾರಕನು. ಪ್ರಪಂಚದ ಪಂಚಭೂತಗಳ ಸ್ವರೂಪಿಯಾದ ಇಂತಹ ನಿನ್ನನ್ನು ಧ್ಯಾನಿಸುತ್ತ ಮರದ ಪೊಟರೆಯಲ್ಲಿರುವ ಈತನು ಜೀವಿಸಿರುವನು. ಈಶ್ವರನನ್ನು ಚಿಂತಿಸುವುದರಿಂದ ಇಷ್ಟಾರ್ಥಗಳನ್ನೆಲ್ಲಾ ಹೊಂದಿ ನಿನ್ನ ಆಳುಗಳಿಂದ ಕೂಡಿಕೊಂಡಿರುವ ಸ್ಥಳದಲ್ಲಿ ಸುಖವಾಗಿರುವಿಕೆಯನ್ನು ಹೊಂದುವನು.

ಮೂಢೋಽಹಂ ನಾಭಿಜಾನಾಮಿ ತ್ವಾಂ ಸ್ತೋತುಂ ಭಕ್ತವತ್ಸಲ ।
ಸದೀಶ್ವರೇಣ ಮನಸಾಪ್ಯನುಕಂಪ್ಯೋ ರಣಂ ಗತಃ ॥ ೯೫ ॥

॥ ಪುಲಸ್ತ್ಯ ಉವಾಚ ॥

ಇತಿ ಸ್ತುತೋ ಮಹೇಶಸ್ತು ಭಕ್ತ್ಯಾ ದೈತ್ಯೇನ ಸಾದರಂ ।
ಗಣೇಶತಾಂ ದದೌ ತಸ್ಮೈ ನಾಮ ಭೃಂಗಿರಿಟೇತಿ ಚ ॥ ೯೬ ॥

ಏಷ ತೇ ಮಹಿಮಾ ಭೂಪ ಹರಸ್ಯ ಭವಹಾರಿಣಃ ।
ಕಥಿತೋ ವಿಘ್ನ ವಿಘ್ನಾಖ್ಯಸ್ತ್ವತ್ಪರಾಣಾಂ ಸುಖಾವಹಃ ॥ ೯೭ ॥

॥ ಭೀಷ್ಮ ಉವಾಚ ॥

ಮನುಷ್ಯಸ್ಯಾಪಿ ದೇವತ್ವಂ ಸುಖಂ ರಾಜ್ಯಂ ಧನಂ ಯಶಃ ।
ಜಯಂ ಭೋಗ್ಯಂ ತಥಾರೋಗ್ಯಮಾಯುರ್ವಿದ್ಯಾಂ ಶ್ರಿಯಂ ಸುತಂ ॥ ೯೮ ॥
ಬಂಧುವರ್ಗಶಿವಂ ಸರ್ವಂ ಬ್ರೂಹಿ ಮೇ ವಿಪ್ರಸತ್ತಮ ॥ ೯೯ ॥

॥ ಪುಲಸ್ತ್ಯ ಉವಾಚ ॥

ಏಭಿರ್ಗುಣೈರ್ಯುತಶ್ಚೈವಮಾನ್ಸ ದೇವೋ ಬ್ರಾಹ್ಮಣೋ ಭುವಿ ।
ತ್ರೈಲೋಕ್ಯೇ ತು ಸದಾ ಮೇಧೋ ವಿಪ್ರದೇವೋ ಯುಗೇ ಯುಗೇ ॥೧೦೦॥

---

೯೫. ಎಲೈ ಭಕ್ತವತ್ಸಲನೇ ! ನಾನು ದಡ್ಡ. ನಿನ್ನನ್ನು ಸ್ತೋತ್ರಮಾಡಲು ನನಗೆ ತಿಳಿಯದು. ನಾನು ಯುದ್ಧಮಾಡಿದರೂ ಒಳ್ಳೆಯ ಮನಸ್ಸಿನಿಂದ ದಯೆಯಿಡು.

೯೬. ಪುಲಸ್ತ್ಯನು ಹೇಳಿದನು– ಈ ರೀತಿ ದೈತ್ಯನು ಭಕ್ತಿಯಿಂದ ಸ್ತುತಿಸಲು ಈಶ್ವರನು ಅವನಿಗೆ ಗಣಾಧಿಪತ್ಯವನ್ನು ಕೊಟ್ಟು ಭೃಂಗಿರಿಟಿ ಎಂದು ಹೆಸರಿಟ್ಟನು.

೯೭. ಎಲೈ ಭೂಪನೇ ! ಸಂಸಾರೋತ್ತಾರಕವಾದ ವಿಘ್ನನಾಶಕವಾದ ಕೇಳಿದ ವರಿಗೆ ಸುಖವನ್ನುಂಟುಮಾಡುವ ಈಶ್ವರನ ಮಹಿಮೆಯನ್ನು ಹೇಳಿದೆನು.

೯೮-೯೯. ಭೀಷ್ಮನು ಹೇಳಿದನು– ದೇವತನ, ಸುಖ, ರಾಜ್ಯ, ಧನ, ಯಶಸ್ಸು ಜಯ, ಭೋಗ್ಯ, ಆರೋಗ್ಯ, ಆಯುಸ್ಸು, ವಿದ್ಯೆ, ಶ್ರೀ, ಮಕ್ಕಳು, ಬಂಧುವರ್ಗ ಮಂಗಳ, ಇವೆಲ್ಲವೂ ಮನುಷ್ಯನಿಗೆ ಬರುವ ರೀತಿಯನ್ನು ಹೇಳು.

೧೦೦. ಪುಲಸ್ತ್ಯನು ಹೇಳಿದನು– ಈ ಮುಂದೆ ಹೇಳುವ ಗುಣಗಳಿಂದ ಕೂಡಿದವನೇ ಉತ್ತಮನಾದ ಬ್ರಾಹ್ಮಣನು. ಮೂರು ಲೋಕದಲ್ಲಿಯೂ ಪೂಜ್ಯನು. ಯುಗ ಯುಗದಲ್ಲಿಯೂ ವಿಪ್ರದೇವನೆನಿಸುತ್ತಾನೆ.

ಪೂಜಯಿತ್ವಾ ದ್ವಿಜಾನ್ದೇವಾಸ್ಸ್ವರ್ಗಂ ಭುಂಜಂತಿ ಚಾಕ್ಷಯಂ ।
ಧರಾಮವಂತಿ ರಾಜಾನೋ ಲೋಕಾ ವಿತ್ತಂ ಸುಖಂ ಶಿವಂ ॥ ೧೦೧ ॥

ಲೋಕೇ ವಿಪ್ರಸಮೋ ನಾಸ್ತಿ ದೇವಾನಾಮಪಿ ದೈವತಂ ।
ಸ ಚ ಧರ್ಮಮಯಸ್ಸಾಕ್ಷಾದ್ಭುವಿ ಮುಕ್ತಿಪ್ರದೋ ಭೃಶಂ ॥ ೧೦೨ ॥

ಲೋಕಾನಾಂ ಸ ಗುರುಃ ಪೂಜ್ಯಸ್ತೀರ್ಥಭೂತೋಽನಘೋ ಜನಃ ।
ಸರ್ವದೇವಾಲಯಸ್ಸತ್ಯೋ ನಿರ್ಮಿತಾ ಬ್ರಹ್ಮಣಾ ಪುರಾ ॥ ೧೦೩ ॥

ಇದಮರ್ಥಂ ಪುರಾ ಪೃಷ್ಟೋ ನಾರದೇನ ಪಿತಾಮಹಃ ।
ಕಸ್ಮಿಂಸ್ತು ಪೂಜಿತೇ ಬ್ರಹ್ಮನ್ಪ್ರಸನ್ನೋ ಮಾಧವೋ ಭವೇತ್ ॥ ೧೦೪ ॥

॥ ಬ್ರಹ್ಮೋವಾಚ ॥

ಯಸ್ಯ ವಿಪ್ರಾಃ ಪ್ರಸೀದಂತಿ ತಸ್ಯ ವಿಷ್ಣುಃ ಪ್ರಸೀದತಿ ।
ತಸ್ಮಾದ್ಬ್ರಾಹ್ಮಣಶುಶ್ರೂಷುಃ ಪರಂ ಬ್ರಹ್ಮಾಧಿಗಚ್ಛತಿ ॥ ೧೦೫ ॥

---

೧೦೧. ಬ್ರಾಹ್ಮಣರನ್ನು ಪೂಜಿಸಿದುದರಿಂದಲೇ ದೇವತೆಗಳು ಸ್ವರ್ಗವನ್ನು ಅನುಭವಿಸುತ್ತಾರೆ. ರಾಜರು ಅವರನ್ನು ಪೂಜಿಸಿದರೇನೇ ಭೂಮಿಯನ್ನಾಳುವರು. ಜನರು ಹಣ ಸುಖ ಮಂಗಳಗಳನ್ನು ಅವರ ಪೂಜೆಯಿಂದಲೇ ಹೊಂದುತ್ತಾರೆ.

೧೦೨. ಲೋಕದಲ್ಲಿ ಬ್ರಾಹ್ಮಣನಿಗೆ ಸಮನಾದವನಿಲ್ಲ. ದೇವತೆಗಳಿಗೂ ದೇವರು. ಅವನೇ ಧರ್ಮಸ್ವರೂಪನು. ಮೋಕ್ಷವನ್ನು ಕೊಡತಕ್ಕವನು.

೧೦೩. ಲೋಕಕ್ಕೆಲ್ಲಾ ಅವನೇ ಗುರುವು. ತೀರ್ಥನು. ಉತ್ತಮವಾದ ಮನುಷ್ಯನು. ಪೂರ್ವದಲ್ಲಿ ಬ್ರಹ್ಮನು ಎಲ್ಲಾ ದೇವರಿಗೂ ಮನೆಯಾಗಿ ಈತನನ್ನು ಸೃಷ್ಟಿಸಿದನು.

೧೦೪. ಹಿಂದೆ ನಾರದನು ಬ್ರಹ್ಮನನ್ನು ಕುರಿತು ಬ್ರಹ್ಮನೇ ! ಯಾರನ್ನು ಪೂಜಿಸಿದರೆ ಮಾಧವನು ಪ್ರಸನ್ನನಾಗುತ್ತಾನೆಂದು ಕೇಳಿದನು.

೧೦೫. ಬ್ರಹ್ಮನು ಹೇಳಿದನು-- ಬ್ರಾಹ್ಮಣನು ಪ್ರಸನ್ನನಾದರೆ ವಿಷ್ಣುವು ಪ್ರಸನ್ನನಾಗುತ್ತಾನೆ ಆದ್ದರಿಂದ ಬ್ರಾಹ್ಮಣನನ್ನು ಪೂಜಿಸಿದವನು ಪರಬ್ರಹ್ಮನನ್ನು ಹೊಂದುತ್ತಾನೆ.

ವಿಷ್ಣುರ್ಬ್ರಾಹ್ಮಣದೇಹೇಷು ಸದಾ ವಸತಿ ನಾನ್ಯಥಾ ।
ತಸ್ಮಾದ್ಬ್ರಾಹ್ಮಣಪೂಜಾಯಾಂ ವಿಷ್ಣುಸ್ತುಷ್ಯತಿ ತತ್ಕ್ಷಣಾತ್ ॥ ೧೦೬ ॥

ವಿಪ್ರಾನ್ಯಃ ಪೂಜಯೇನ್ನಿತ್ಯಂ ದಾನಮಾನಾರ್ಚನಾದಿಭಿಃ ।
ಕೃತಂ ಕ್ರತುಶತಂ ತೇನ ವಿಧ್ಯುಕ್ತಂ ಪ್ರಿಯದಕ್ಷಿಣಂ ॥ ೧೦೭ ॥

ಬ್ರಾಹ್ಮಣಸ್ಯ ಮುಖಂ ಕ್ಷೇತ್ರಮನೂಷರಮಕಂಟಕಂ ।
ವಾಪಯೇತ್ಸರ್ವಬೀಜಾನಿ ಸಾ ಕೃಷಿಸ್ಸಾರ್ವಕಾಲಿಕೀ ॥ ೧೦೮ ॥

ಅಭಿಗಮ್ಯ ತು ಯದ್ದಾನಂ ತಚ್ಚ ದಾನಂ ಮನೋರಮಂ ।
ವಿದ್ಯತೇ ಸಾಗರಸ್ಯಾಂತೋ ದಾನಸ್ಯಾಂತೋ ನ ವಿದ್ಯತೇ ॥ ೧೦೯ ॥

ಮನಸಾಪಿ ನ ಹಿಂಸಂತಿ ಭೂದೇವಂ ಆತತಾಯಿನಂ ।
ಮನೋನುಕೂಲತಾಂ ಯಾಂತಿ ದೇವೈರಪಿ ಚ ದುರ್ಲಭಾಂ ॥ ೧೧೦ ॥

---

೧೦೬. ವಿಷ್ಣುವು ಬ್ರಾಹ್ಮಣ ಶರೀರದಲ್ಲಿ ಯಾವಾಗಲೂ ವಾಸಿಸುತ್ತಾನೆ. ಆದ್ದರಿಂದ ಬ್ರಾಹ್ಮಣನಿಗೆ ಪೂಜೆಮಾಡಿದರೆ ವಿಷ್ಣುವು ಒಡನೆಯೇ ತುಷ್ಟನಾಗುತ್ತಾನೆ.

೧೦೭. ಯಾವನು ದಾನ ಮಾನ ಅರ್ಚನೆಗಳಿಂದ ಬ್ರಾಹ್ಮಣರನ್ನು ಪೂಜಿಸುವನೋ ಅವನು ವಿಧ್ಯುಕ್ತವಾದ ದಕ್ಷಿಣೆ ಕೊಟ್ಟು ನೂರು ಯಾಗಗಳನ್ನು ಮಾಡಿದವನಾಗುತ್ತಾನೆ.

೧೦೮. ಬ್ರಾಹ್ಮಣನ ಮುಖವೆಂಬುದು ಚೌಳು ಅಲ್ಲದ ಮುಳ್ಳು ಗಿಡಗಳಿಲ್ಲದ ಫಲವತ್ತಾದ ಭೂಮಿಯು. ಅದರಲ್ಲಿ ಎಲ್ಲಾ ಬೀಜಗಳನ್ನೂ ಬಿತ್ತಬೇಕು. ಅದು ಯಾವಾಗಲೂ ಫಲವನ್ನು ಕೊಡುತ್ತದೆ.

೧೦೯. ನಾವಾಗಿಯೇ ಹೋಗಿ ಕೊಡುವ ದಾನವು ಬಹು ಉತ್ತಮವೂ ಮನೋಹರವೂ ಅದುದು. ನಾವು ಕೊಡಬೇಕಾದ ದಾನಗಳು ಅನೇಕವಿವೆ. ಸಮುದ್ರಕ್ಕೆ ಕೊನೆಯಿದೆ. ದಾನಕ್ಕೆ ಕೊನೆಯಿಲ್ಲವು.

೧೧೦ ಬ್ರಾಹ್ಮಣನು ಕೊಲ್ಲಲು ಕಾರಣವಾದ ತಪ್ಪನ್ನು ಮಾಡಿದರೂ ಅವನನ್ನು ಮನಸ್ಸಿನಿಂದಲೂ ಹಿಂಸಿಸಬಾರದು. ಅವರು ದೇವತೆಗಳಿಗೂ ಸಾಧ್ಯವಾಗದ ಅನುಕೂಲಗಳನ್ನು ಮಾಡುತ್ತಾರೆ.

ಗೃಹೇ ಯಸ್ಯ ಗತೋ ವಿದ್ವಾನ್ನೈರಾಶ್ಯಂ ನೋಪಗಚ್ಛತಿ ।
ಸರ್ವಪಾಪಕ್ಷಯಸ್ತಸ್ಯ ಚಾಕ್ಷಯಂ ಸ್ವರ್ಗಮಶ್ನುತೇ ॥ ೧೧೧ ॥

ಕಾಲೇ ದೇಶೇ ಚ ಪಾತ್ರೇ ಚ ವಿಪ್ರೇ ಯಚ್ಚಾರ್ಪಯೇದ್ವಸು ।
ತದ್ಧನಂ ಚಾಕ್ಷಯಂ ವಿದ್ಧಿ ಜನ್ಮ ಜನ್ಮಸು ತಿಷ್ಠತಿ ॥ ೧೧೨ ॥

ನ ಚ ದಾರಿದ್ರ್ಯತಾಮೇತಿ ನಾತುರೋ ನ ಚ ಕಾತರಃ ।
ಮನೋನುಕೂಲಾಂ ಪ್ರಮದಾಮರ್ಚಯಿತ್ವಾ ದ್ವಿಜಾಂಲ್ಲಭೇತ್ ॥ ೧೧೩ ॥

ಕೃತ್ವಾ ಸಾಹಸಕರ್ಮಾಣಿ ದದ್ಯಾದ್ವಿಪ್ರಾಯ ಪರ್ವಸು ।
ಶೋಧನ್ನೈಕಗುಣಂ ಪ್ರೋಕ್ತಮಭಯಂ ಲಾಭ ಏವ ಚ ॥ ೧೧೪ ॥

ವಿಪ್ರಪಾದತಲೋದ್ಘೃಷ್ಟಿಕ್ಷತೀ ಭವತಿ ಯಃ ಕರಃ ।
ಸ ಕರಶ್ರೀಕರೋ ನಾಮ ಅನ್ಯಃ ಕರ್ಮಕರಃ ಕರಃ ॥ ೧೧೫ ॥

---

೧೧೧. ಯಾವನ ಮನೆಗೆ ಬಂದು ಬ್ರಾಹ್ಮಣನು ಆಶೆಯನ್ನು ಪೂರ್ತಿಮಾಡಿಕೊಳ್ಳುವನೋ ಆ ಗೃಹಸ್ಥನಿಗೆ ಸರ್ವ ಪಾಪಗಳೂ ಹೋಗುತ್ತವೆ. ಅಕ್ಷಯವಾದ ಸ್ವರ್ಗವೂ ಸಿಕ್ಕುತ್ತದೆ.

೧೧೨. ಕಾಲದೇಶ ಪಾತ್ರಗಳನ್ನು ನೋಡಿ ಯಾವನು ಬ್ರಾಹ್ಮಣರಲ್ಲಿ ಹಣವನ್ನು ಅರ್ಪಿಸುವನೋ ಆ ಹಣವು ಅಕ್ಷಯವಾಗಿ ಜನ್ಮಜನ್ಮದಲ್ಲಿಯೂ ಇರುತ್ತದೆ

೧೧೩. ಬಡತನ ಬರುವುದಿಲ್ಲ. ರೋಗಿಯಾಗುವುದಿಲ್ಲ. ಹೆದರಿಕೆಯಿರುವುದಿಲ್ಲ. ತನ್ನ ಮನಸ್ಸಿನಂತೆ ನಡೆಯುವ ಹೆಂಡತಿಯನ್ನು ಹೊಂದುತ್ತಾನೆ. ಬ್ರಾಹ್ಮಣ ಪೂಜೆಯಿಂದ ಇವೆಲ್ಲವನ್ನೂ ಹೊಂದುತ್ತಾನೆ.

೧೧೪. ಸಾಹಸಕರ್ಮಗಳನ್ನು ಮಾಡಿಯಾದರೂ ಪರ್ವಕಾಲಗಳಲ್ಲಿ ಬ್ರಾಹ್ಮಣನಿಗೆ ದಾನಮಾಡಬೇಕು. ಅವನು ದಾನದ ಹಣಕ್ಕೋಸ್ಕರ ಕೆಟ್ಟ ಕೆಲಸ ಮಾಡಿದ್ದರೂ ಅದು ಶುದ್ಧಿಯಾಗಿ ಭಯವನ್ನು ಕಳೆದು ಲಾಭವನ್ನುಂಟುಮಾಡುತ್ತದೆ.

೧೧೫. ಬ್ರಾಹ್ಮಣನ ಪಾದಗಳನ್ನು ತಿಕ್ಕುವುದರಿಂದ ನೋವಾದ ಕೈಗೆ ಉತ್ತಮ ಕೈ (ಶ್ರೀಕರ) ವೆಂದು ಹೆಸರು. ಅದನ್ನು ಮಾಡದೇ ಇರುವ ಕೈ ಕೆಲಸದ ಕೈ ಎನ್ನಿಸುತ್ತದೆ.

ವಿಪ್ರಪಾದರಜಃ ಪೂತಾ ಶುಚಯೋ ಗೃಹಚತ್ವರಾಃ ।
ಪುಣ್ಯಕ್ಷೇತ್ರಸಮಾಸ್ತೇ ಸ್ಯುಃ ಪ್ರಶಸ್ತಾ ಯಜ್ಞಕರ್ಮಸು ॥ ೧೧೬ ॥

ವಿಪ್ರಪಾದರಜಃ ಪೂತಾಸ್ತಥೈವ ಜಲಬಿಂದುಭಿಃ ।
ವಿಪದ್ಭಿಶ್ಚ ಸದಾ ಪಾಪೈರ್ಮುಕ್ತಾ ಯಾಂತಿ ತ್ರಿವಿಷ್ಟಪಂ ॥ ೧೧೭ ॥

ಆದೌ ಬ್ರಹ್ಮಮುಖಾದ್ವಿಪ್ರಸ್ಸಮುದ್ಭೂತಃ ಪುರಾನಘ ।
ವೇದಾಸ್ತತ್ರೈವ ಸಂಜಾತಾಸ್ಸೃಷ್ಟಿಸಂಸ್ಥಿತಿಹೇತವಃ ॥ ೧೧೮ ॥

ತಸ್ಮಾದ್ವಿಪ್ರಮುಖೇ ವೇದಾಶ್ಚಾರ್ಪಿತಾಃ ಪುರುಷೇಣ ಹಿ ।
ಪೂಜಾರ್ಥಂ ಸರ್ವಲೋಕಾನಾಂ ಸರ್ವಯಜ್ಞಾರ್ಥದೋ ಧ್ರುವಂ ॥೧೧೯॥

ಪಿತೃಯಜ್ಞೇ ವಿವಾಹೇ ಚ ವಹ್ನಿಕಾರ್ಯೇಷು ಶಾಂತಿಷು ।
ಪ್ರಶಸ್ತಾ ಬ್ರಾಹ್ಮಣಾ ನಿತ್ಯಂ ಸರ್ವಸ್ವಸ್ತ್ಯಯನೇಷು ಚ ॥ ೧೨೦ ॥

---

೧೧೬. ಬ್ರಾಹ್ಮಣನ ಪಾದಧೂಳಿ ಬಿದ್ದ ಮನೆಯ ಅಂಗಳವು ಪುಣ್ಯ ಕ್ಷೇತ್ರಕ್ಕೆ ಸಮವಾದುದು. ಯಜ್ಞ ಮೊದಲಾದ ಕರ್ಮಗಳಲ್ಲಿ ಯೋಗ್ಯವಾಗುತ್ತದೆ.

೧೧೭. ಬ್ರಾಹ್ಮಣನ ಪಾದಧೂಳಿನಿಂದ ಕೂಡಿದ ನೀರು ವಿಪತ್ತುಗಳನ್ನು ನಾಶ ಮಾಡಿ ಪಾಪವನ್ನು ತೊಲಗಿಸಿ ಸ್ವರ್ಗವನ್ನು ಸೇರಿಸುತ್ತದೆ.

೧೧೮. ಪೂರ್ವದಲ್ಲಿ ಬ್ರಹ್ಮನ ಮುಖದಿಂದಲೇ ಬ್ರಾಹ್ಮಣನೂ ಹುಟ್ಟಿದನು. ವೇದಗಳೂ ಅಲ್ಲೇ ಹುಟ್ಟಿದುವು. ಇವೆರಡೂ ಪ್ರಪಂಚದ ಸೃಷ್ಟಿಸ್ಥಿತಿನಾಶಗಳಿಗೆ ಕಾರಣಗಳು.

೧೧೯. ಆದ್ದರಿಂದ ಆ ಬ್ರಹ್ಮನು ವೇದಗಳನ್ನು ಬ್ರಾಹ್ಮಣನ ಮುಖದಲ್ಲಿಟ್ಟನು. ದೇವತೆಗಳ ಪೂಜೆಗೂ ಯಜ್ಞಕ್ಕೂ ಅವು ಉಪಯೋಗವಾಗಬೇಕೆಂಬುದೇ ಅವನ ಅಭಿಪ್ರಾಯವು, ಖಂಡಿತ.

೧೨೦. ಪಿತೃಯಜ್ಞ (ಶ್ರಾದ್ಧಾದಿಗಳು) ಮದುವೆ, ಬೆಂಕಿಯಲ್ಲಿ ಮಾಡಬೇಕಾದ ಹೋಮಾದಿಗಳು. ಶಾಂತಿ ಸ್ವಸ್ತಿವಾಚನಗಳು ಇವುಗಳಲ್ಲಿ ಬ್ರಾಹ್ಮಣರು ಯೋಗ್ಯರಾದ ಪಾತ್ರವು.

ದೇವಾ ಭುಂಜಂತಿ ಹವ್ಯಾನಿ ಬಲಿಂ ಪ್ರೇತಾದಯೋಽಸುರಾಃ ।
ಪಿತರೋ ಹವ್ಯಕವ್ಯಾನಿ ವಿಪ್ರಸ್ಯೈವ ಮುಖಾದ್ಧ್ರುವಂ ॥ ೧೨೧ ॥

ದೇವೇಭ್ಯಶ್ಚ ಪಿತೃಭ್ಯಶ್ಚ ಯೋ ದದ್ಯಾದ್ಯಜ್ಞಕರ್ಮಸು ।
ದಾನಂ ಹೋಮಂ ಬಲಿಂ ಚೈವ ವಿನಾ ವಿಪ್ರೇಣ ನಿಷ್ಫಲಂ ॥ ೧೨೨ ॥

ಭುಂಜಂತಿ ಚಾಸುರಾಸ್ತತ್ರ ಪ್ರೇತಾ ದೈತ್ಯಾಶ್ಚ ರಾಕ್ಷಸಾಃ ।
ತಸ್ಮಾದ್ಬ್ರಾಹ್ಮಣಮಾಹೂಯ ತೇಷು ಕರ್ಮಾಣಿ ಕಾರಯೇತ್ ॥ ೧೨೩ ॥

ಕಾಲೇ ದೇಶೇ ಚ ಪಾತ್ರೇ ಚ ಲಕ್ಷಕೋಟಿಗುಣಂ ಭವೇತ್ ।
ಶ್ರದ್ಧಯಾ ಚ ದ್ವಿಜಂ ದೃಷ್ಟ್ವಾ ಪ್ರಕುರ್ಯಾದಭಿವಾದನಂ ॥ ೧೨೪ ॥

ದೀರ್ಘಾಯುಸ್ತಸ್ಯ ವಾಕ್ಯೇನ ಚಿರಜೀವೀ ಭವೇನ್ನರಃ ।
ಅನಭಿವಾದನಾದ್ವಿಪ್ರದ್ವೇಷಾದಶ್ರದ್ಧಯಾಪಿ ಚ ॥ ೧೨೫ ॥

---

೧೨೧. ಬ್ರಾಹ್ಮಣನ ಮುಖದಿಂದಲೇ ದೇವತೆಗಳೂ ಹವ್ಯಗಳನ್ನೂ ಪ್ರೇತ ರಾಕ್ಷಸಾದಿಗಳು ಬಲಿಯನ್ನೂ ಪಿತೃಗಳು ಹವ್ಯಕವ್ಯಗಳನ್ನೂ ತಿನ್ನುತ್ತಾರೆ. ಸತ್ಯವು.

೧೨೨. ದೇವತೆಗಳಿಗೆ ಪಿತೃಗಳಿಗೆ ಯಜ್ಞಾದಿಗಳಲ್ಲಿ ಕೊಡುವ ದಾನ ಹೋಮ ಬಲಿಗಳು ಬ್ರಾಹ್ಮಣನಿಲ್ಲದಿದ್ದರೆ ನಿಷ್ಫಲವಾಗುತ್ತವೆ.

೧೨೩. ಬ್ರಾಹ್ಮಣನಿಲ್ಲದ ದಾನಾದಿಗಳನ್ನು ಅಸುರರು ಪ್ರೇತಗಳು ದೈತ್ಯರು ರಾಕ್ಷಸರು ತಿನ್ನುತ್ತಾರೆ. ಆದ್ದರಿಂದ ಬ್ರಾಹ್ಮಣರನ್ನು ಕರೆದು ಆ ಕೆಲಸಗಳನ್ನು ಮಾಡಬೇಕು.

೧೨೪-೧೨೬. ಕಾಲ, ದೇಶ, ಪಾತ್ರಗಳ ಲಕ್ಷಣಗಳಿಂದ ಆ ದಾನವು ಕೋಟಿಯಷ್ಟು ಫಲವನ್ನು ಕೊಡುತ್ತದೆ. ಬ್ರಾಹ್ಮಣನನ್ನು ನೋಡಿದರೆ ಶ್ರದ್ಧೆಯಿಂದ ನಮಸ್ಕರಿಸಬೇಕು. ಆ ಬ್ರಾಹ್ಮಣನ ಆಶೀರ್ವಾದದಿಂದ ಮನುಷ್ಯನು ಚಿರಂಜೀವಿಯಾಗುತ್ತಾನೆ. ದ್ವೇಷದಿಂದಲೋ ಅಶ್ರದ್ಧೆಯಿಂದಲೋ ಆ ಬ್ರಾಹ್ಮಣನಿಗೆ ನಮಸ್ಕರಿಸದಿದ್ದರೆ

ಆಯುಃ ಕ್ಷೀಣಂ ಭವೇತ್ಪುಂಸಾಂ ಭೂತಿನಾಶಶ್ಚ ದುರ್ಗತಿಃ
ಆಯುರ್ವೃದ್ಧಿರ್ಯಶೋವೃದ್ಧಿರ್ವೃದ್ಧಿರ್ವಿದ್ಯಾ ಧನಸ್ಯ ಚ ।
ಪೂಜಯಿತ್ವಾ ದ್ವಿಜಾನ್ ಶ್ರೇಷ್ಠಾನ್ ಭವೇನ್ನಾಸ್ತ್ಯತ್ರ ಸಂಶಯಃ ॥ ೧೨೬ ॥

ನ ವಿಪ್ರಪಾದೋದಕಕರ್ದಮಾನಿ
ನ ವೇದಶಾಸ್ತ್ರಪ್ರತಿಘೋಷಿತಾನಿ ।
ಸ್ವಾಹಾ ಸ್ವಧಾ ಸ್ವಸ್ತಿವಿವರ್ಜಿತಾನಿ
ಸ್ಮಶಾನತುಲ್ಯಾನಿ ಗೃಹಾಣಿ ತಾನಿ ॥ ೧೨೭ ॥

॥ ನಾರದ ಉವಾಚ ॥

ಕಶ್ಚ ಪೂಜ್ಯತಮೋ ವಿಪ್ರೋ ಹ್ಯಪೂಜ್ಯೋ ವಾಥ ಕೋಭವೇತ್ ।
ವಿಪ್ರಸ್ಯ ಲಕ್ಷಣಂ ಬ್ರೂಹಿ ಯಾಥಾತಥ್ಯಂ ಗುರೋರಪಿ ॥ ೧೨೮ ॥

॥ ಬ್ರಹ್ಮೋವಾಚ ॥

ಪೂಜ್ಯಶ್ಶ್ರೋತ್ರಿಯಕೋ ನಿತ್ಯಂ ಸದಾಚಾರಸಮನ್ವಿತಃ ।
ಸದ್ವ್ರತಃ ಕಲುಷೈರ್ಮುಕ್ತಸ್ತೀರ್ಥಭೂತೋ ಜನೋನಘಃ ॥ ೧೨೯ ॥

---

ಆಯುಸ್ಸುನಾಶವೂ ಐಶ್ವರ್ಯನಾಶವೂ ಆಗಿ ನರಕಪ್ರಾಪ್ತಿಯಾಗುತ್ತದೆ. ಆ ಬ್ರಾಹ್ಮಣರನ್ನು ಪೂಜಿಸಿದರೆ ಆಯುರ್ವೃದ್ಧಿ ಯಶೋವೃದ್ಧಿ ಧನಧಾನ್ಯಗಳ ವೃದ್ಧಿಯಾಗುವುದರಲ್ಲಿ ಸಂಶಯವಿಲ್ಲ.

೧೨೭ ವಿಪ್ರನ ಪಾದೋದಕದಿಂದ ಕೆಸರಾಗದ, ವೇದಶಾಸ್ತ್ರಗಳ ಧ್ವನಿಯಿಲ್ಲದ ಸ್ವಾಹಾ ಸ್ವಧೆ ಸ್ವಸ್ತಿಗಳಿಲ್ಲದ, ಮನೆಗಳು ಸ್ಮಶಾನಕ್ಕೆ ಸಮಾನವಾದುವು.

೧೨೮. ನಾರದನು ಹೇಳಿದನು– ಎಲೈ ಪುಲಸ್ತ್ಯನೇ ! ಲೋಕದಲ್ಲಿ ಎಂತಹ ಬ್ರಾಹ್ಮಣನು ಪೂಜೆಗೆ ಯೋಗ್ಯನು ? ಯಾವನು ಅಯೋಗ್ಯನು ? ಬ್ರಾಹ್ಮಣನ ಲಕ್ಷಣವನ್ನು ಹೇಳು. ಗುರುವಿನ ಲಕ್ಷಣವನ್ನು ತಿಳಿಸು.

೧೨೯. ಬ್ರಹ್ಮನು ಹೇಳಿದನು– ಸದಾಚಾರದಿಂದ ಕೂಡಿದ ಶ್ರೋತ್ರಿಯನನ್ನು ಯಾವಾಗಲೂ ಪೂಜಿಸಬೇಕು. ಅವನು ಪಾಪಮಾಡದವನಾಗಿಯೂ ಇದ್ದರೆ ಅವನೇ ಉತ್ತಮವಾದ ತೀರ್ಥವು.

॥ ನಾರದ ಉವಾಚ ॥

ಜಾತಃ ಕಶ್ಶ್ರೋತ್ರಿಯಸ್ತಾತ ಸತ್ಕುಲೇ ವಾಪ್ಯಸತ್ಕುಲೇ ।
ಸದಸತ್ಕರ್ಮಕರ್ತಾ ವಾ ಕಃ ಪೂಜ್ಯೋ ಭುವಿ ಬಾಡಬಃ ॥ ೧೩೦ ॥

॥ ಬ್ರಹ್ಮೋವಾಚ ॥

ಸಚ್ಛ್ರೋತ್ರಿಯಕುಲೇ ಜಾತೋ ಅಕ್ರಿಯೋ ನೈವ ಪೂಜಿತಃ ।
ಅಸತ್ಕ್ಷೇತ್ರಕುಲೇ ಪೂಜ್ಯೋ ವ್ಯಾಸವೈಭಾಂಡಕೌ ಯಥಾ ॥ ೧೩೧ ॥

ಕ್ಷತ್ರಿಯಾಣಾಂ ಕುಲೇ ಜಾತೋ ವಿಶ್ವಾಮಿತ್ರೋಽಸ್ತಿ ಮತ್ಸಮಃ ।
ವೇಶ್ಯಾಪುತ್ರೋ ವಸಿಷ್ಠಶ್ಚ ಅನ್ಯೇ ಸಿದ್ಧಾ ದ್ವಿಜಾತಯಃ ॥ ೧೩೨ ॥

ತಸ್ಮಾತ್ಸಚ್ಛ್ರೋತ್ರಿಯಾದೀನಾಂ ಶೃಣು ಪುತ್ರಕ ಲಕ್ಷಣಂ ।
ಧರಾಯಾಂ ತೀರ್ಥಭೂತಾನಾಂ ಸರ್ವಪಾಪಹರಾಯ ಚ ॥ ೧೩೩ ॥

ಜನ್ಮನಾ ಬ್ರಾಹ್ಮಣೋ ಜ್ಞೇಯಸ್ಸಂಸ್ಕಾರೈರ್ದ್ವಿಜ ಉಚ್ಯತೇ ।
ವಿದ್ಯಯಾ ಯಾತಿ ವಿಪ್ರತ್ವಂ ತ್ರಿಭಿಶ್ಶ್ರೋತ್ರಿಯಲಕ್ಷಣಂ ॥ ೧೩೪ ॥

---

೧೩೦. ನಾರದನು ಹೇಳಿದನು– ಒಳ್ಳೆಯ ಕುಲವಾಗಲಿ, ಹೀನಕುಲವಾಗಲಿ ಅವರಲ್ಲಿ ಶ್ರೋತ್ರಿಯನಾಗಿ ಹುಟ್ಟಿದವನು ಯಾರು ? ಒಳ್ಳೆಯ ಮತ್ತು ಗಟ್ಟಿ ಕೆಲಸಗಳನ್ನು ಮಾಡಿದರೂ ಭೂಮಿಯಲ್ಲಿ ಪೂಜ್ಯನಾದ ಬ್ರಾಹ್ಮಣನಾರು ?

೧೩೧. ಬ್ರಹ್ಮನು ಹೇಳಿದನು– ಒಳ್ಳೆಯ ಶ್ರೋತ್ರಿಯಕುಲದಲ್ಲಿ ಹುಟ್ಟಿದ್ದರೂ ಆಚಾರಹೀನನನ್ನು ಪೂಜಿಸಬಾರದು. ಅಯೋಗ್ಯಕುಲದಲ್ಲಿ ಹುಟ್ಟಿದ್ದರೂ ಆಚಾರವಂತರಾದ ವ್ಯಾಸ ವೈಭಾಂಡಕರು ಪೂಜ್ಯರು.

೧೩೨. ಕ್ಷತ್ರಿಯಕುಲದಲ್ಲಿ ಹುಟ್ಟಿದರೂ ವಿಶ್ವಾಮಿತ್ರನು ಆಚಾರವಂತನಾಗಿ ನನಗೆ ಸಮನಾಗಿದ್ದಾನೆ. ಸೂಳೆಯ ಮಗನಾದರೂ ವಸಿಷ್ಠನು ಪೂಜ್ಯನಲ್ಲವೇ ! ಮಿಕ್ಕವರೂ ಕರ್ಮದಿಂದ ಬ್ರಾಹ್ಮಣರಾದವರು ಬಹು ಮಂದಿಯಿದ್ದಾರೆ.

೧೩೩-೧೩೪. ಶ್ರೋತ್ರಿಯಾದಿಗಳ ಲಕ್ಷಣವನ್ನು ಹೇಳುತ್ತೇನೆ ಕೇಳು. ಇವರು ಭೂಮಿಯಲ್ಲಿ ತೀರ್ಥಭೂತರು. ಪಾಪನಾಶಕರು. ಮನುಷ್ಯನು ಜನ್ಮದಿಂದ ಬ್ರಾಹ್ಮಣನಾಗಿ ಇದ್ದು ಸಂಸ್ಕಾರ ಹೊಂದಿದರೆ ದ್ವಿಜನಾಗುತ್ತಾನೆ ವಿದ್ಯಾಭ್ಯಾಸದಿಂದ ವಿಪ್ರನಾಗುತ್ತಾನೆ. ಜನ್ಮದ್ವಿಜತ್ವ ವಿಪ್ರತ್ವಗಳು ಸೇರಿದರೆ ಶ್ರೋತ್ರಿಯನಾಗುತ್ತಾನೆ.

ವಿದ್ಯಾಪೂತೋ ಮಂತ್ರಪೂತೋ ವೇದಪೂತಸ್ತಥೈವ ಚ ।
ತೀರ್ಥಸ್ನಾನಾದಿಭಿರ್ಮೇಧ್ಯೋ ವಿಪ್ರಃ ಪೂಜ್ಯತಮಸ್ಸ್ಮೃತಃ ॥ ೧೩೫ ॥

ನಾರಾಯಣೇ ಸದಾ ಭಕ್ತಶ್ಶುದ್ಧಾಂತಃಕರಣಸ್ತಥಾ ।
ಜಿತೇಂದ್ರಿಯೋ ಜಿತಕ್ರೋಧಃ ಸಮಸ್ಸರ್ವಜನೇಷು ಚ ॥ ೧೩೬ ॥

ಗುರು ವೇದಾತಿಥೀರ್ಭಕ್ತಃ ಪಿತ್ರೋಶ್ಶುಶ್ರೂಷಣೇ ರತಃ ।
ಪರದಾರೇ ಮನೋ ಯಸ್ಯ ಕದಾಚಿನ್ನೈವ ಮೋದತೇ ॥ ೧೩೭ ॥

ಪುರಾಣಕಥಕೋ ನಿತ್ಯಂ ಧರ್ಮಾಖ್ಯಾನಸ್ಯ ಸಂತತಿಃ ।
ಅಸ್ಯೈವ ದರ್ಶನಾನ್ನಿತ್ಯಮಶ್ವಮೇಧಾದಿಜಂ ಫಲಂ ॥ ೧೩೮ ॥

ಸಲ್ಲಾಪೇ ಗತಿಮೇತಸ್ಯ ಭಾಗೀರಥ್ಯಾ ಜಲಸ್ಯ ಚ ।
ವ್ರತೈಶ್ಚ ವಿವಿಧೈಃ ಪೂತೋ ನಿತ್ಯಸ್ನಾನದ್ವಿಜಾರ್ಚನೈಃ ॥ ೧೩೯ ॥

ಮಿತ್ರಾಮಿತ್ರೇ ದಯಾಳುಸ್ಸ್ಯಾತ್ಸಮಸ್ಸರ್ವಜನೇಷು ಚ ।
ಪರಸ್ವಂ ನ ಹರೇದ್ಯಸ್ತು ತೃಣಮಪ್ಯಟವೀಗತಂ ॥ ೧೪೦ ॥

---

೧೩೫. ವಿದ್ಯೆ ಮಂತ್ರ ವೇದಗಳನ್ನು ಅಭ್ಯಸಿಸಿ ತೀರ್ಥಸ್ನಾನಾದಿಗಳಿಂದ ಗುರಿ ಶುದ್ಧನಾದ ವಿಪ್ರನು ಪೂಜೆಗೆ ಬಹಳ ಯೋಗ್ಯನು.

೧೩೬-೧೩೮. ನಾರಾಯಣನಲ್ಲಿ ಭಕ್ತಿಯಿಟ್ಟಿರಬೇಕು. ಅಂತಃಕರಣವು ಶುದ್ಧವಾಗಿರಬೇಕು. ಜಿತೇಂದ್ರಿಯನಾಗಿ ಕೋಪಬಿಟ್ಟು ಎಲ್ಲರಲ್ಲಿಯೂ ಸಮನಾಗಿರಬೇಕು. ಗುರು ವೇದ ಅತಿಥಿಗಳಲ್ಲಿ ಭಕ್ತಿಯಿಟ್ಟಿರಬೇಕು. ತಾಯಿ ತಂದೆ ಗುರುಗಳಲ್ಲಿ ಶುಶ್ರೂಷೆ ಮಾಡುತ್ತಿರಬೇಕು. ಪರರ ಹೆಂಡಿರಲ್ಲಿ ಮನಸ್ಸು ಮಾಡಲೇ ಕೂಡದು. ಪುರಾಣವನ್ನೂ ಧರ್ಮವನ್ನೂ ಹೇಳುತ್ತಿರಬೇಕು. ಇಂತಹವನ ದರ್ಶನವನ್ನು ಮಾಡಿದರೆ ಅಶ್ವಮೇಧಾದಿಗಳ ಫಲವು ಒರುತ್ತದೆ.

೧೩೯. ಇಂತಹವನೂಡನೆ ಮಾತಾಡುವುದರಿಂದಲೇ ಒಳ್ಳೆಯ ಗತಿಯು ಬರುತ್ತದೆ. ಭಾಗೀರಥಿಯ ನೀರಿನಿಂದಲೂ ನಾನಾಬಗೆಯಾದ ವ್ರತಗಳಿಂದಲೂ ಮನುಜನು ಪವಿತ್ರನಾಗಬೇಕು. ನಿತ್ಯಸ್ನಾನ ಮಾಡಿ ಬ್ರಾಹ್ಮಣರನ್ನು ಪೂಜಿಸುತ್ತಿರಬೇಕು.

೧೪೦-೧೪೧. ಶತ್ರುಮಿತ್ರರಲ್ಲಿ ದಯೆಯುಳ್ಳವನಾಗಿರಬೇಕು. ಸರ್ವಜನರಲ್ಲಿಯೂ ಸಮಬುದ್ಧಿಯಿರಬೇಕು. ಇನ್ನೊಬ್ಬರ ಪದಾರ್ಥವು ಕಾಡಿನಲ್ಲಿದ್ದರೂ ಕದಿಯ

ಕಾಮಕ್ರೋಧಾದ್ವಿನಿರ್ಮುಕ್ತ ಇಂದ್ರಿಯೈರಜಿತಃ ಪುಮಾರ್ ।
ಪರದಾರಾನ್ನ ಗೃಹ್ಣಾತಿ ಮನಸಾಪಿ ಗೃಹಾಗತಾರ್ ॥ ೧೪೨ ॥

ಗಾಯತ್ರೀಂ ಚ ಜಪೇನ್ನಿತ್ಯಂ ತ್ರಿಪದಾಂ ಯಜುರೂಪ್ಯಗಾಂ ।
ಚತುರ್ವೇದಮಯೀಂ ಶುದ್ಧಾಂ ಚತುರ್ವಿಂಶತಿವರ್ಣಕಾಂ ॥
ಅಸ್ಯಾ ಭೇದಂ ಚ ಸಂಜ್ಞಾತ್ವಾ ಬ್ರಹ್ಮಣಃ ಪದವೀಂ ವ್ರಜೇತ್ ॥ ೧೪೩ ॥

॥ ನಾರದ ಉವಾಚ ॥

ಗಾಯತ್ರ್ಯಾ ಲಕ್ಷಣಂ ಕಿಂ ವಾ ಪ್ರತ್ಯೇಕಾಕ್ಷರಜಂ ಗುಣಂ ।
ಕುಕ್ಷಿಚರಣಗೋತ್ರಾಣಾಂ ತಸ್ಯಾ ಬ್ರೂಹಿ ಸುನಿಶ್ಚಯಂ ॥ ೧೪೩ ॥

॥ ಬ್ರಹ್ಮೋವಾಚ ॥

ಛಂದೋ ಗಾಯತ್ರೀ ಗಾಯತ್ರ್ಯಾಸ್ಸವಿತಾ ದೇವತಾ ಧ್ರುವಂ ।
ಶುಕ್ಲವರ್ಣಾ ಅಗ್ನಿಮುಖಾ ವಿಶ್ವಾಮಿತ್ರ ಋಷಿಸ್ತಥಾ ॥ ೧೪೪ ॥

---

ಬಾರದು. ಕಾಮಕ್ರೋಧಗಳನ್ನು ಬಿಟ್ಟು ಇಂದ್ರಿಯಗಳನ್ನು ಜಯಿಸಿರಬೇಕು. ಪರ ಸ್ತ್ರೀಯರು ಮನೆಗೆ ಬಂದರೂ ಅವರನ್ನು ಮನಸ್ಸಿನಲ್ಲಿಯೂ ಆಶಿಸಬಾರದು.

೧೪೩. ಮೂರು ಪಾದವುಳ್ಳ, ಯಜುಸ್ಸಿನ ರೂಪವಾದ, ನಾಶರಹಿತವಾದ, ಚತುರ್ವೇದಸ್ವರೂಪವಾದ, ಇಪ್ಪತ್ತುನಾಲ್ಕು ಅಕ್ಷರಗಳಿಂದ ಕೂಡಿದ ಗಾಯತ್ರಿಯನ್ನು ಜಪಿಸಬೇಕು. ಇದರ ಭೇದಗಳನ್ನು ತಿಳಿದು ಜಪಿಸಿದರೆ ಬ್ರಹ್ಮನ ಪದವಿಯು ಸಿಕ್ಕುತ್ತದೆ.

೧೪೩. ನಾರದನು ಹೇಳಿದನು- ಗಾಯತ್ರಿಯ ಲಕ್ಷಣವೇನು? ಅದರ ಪ್ರತಿ ಅಕ್ಷರಕ್ಕೂ ಇರುವ ಗುಣವೇನು? ಅದು ಹುಟ್ಟುವ ಸ್ಥಳ, ಅದರ ಚರಣ, ಗೋತ್ರ, ಇವುಗಳನ್ನು ಹೇಳು.

೧೪೪. ಬ್ರಹ್ಮನು ಹೇಳಿದನು- ಗಾಯತ್ರೀ ಎಂಬ ಛಂದಸ್ಸು, ಸವಿತೃವೇ ದೇವತೆಯು, ಬಣ್ಣವು ಬಿಳುಪು. ಅಗ್ನಿಯೇ ಮುಖವು. ವಿಶ್ವಾಮಿತ್ರನು ಋಷಿಯು.

ಬ್ರಹ್ಮಣಶ್ಶಿರಸಾರೂಢಾ ಶಿಖಾ ವಿಷ್ಣುಹೃದಿ ಸ್ಥಿತಾ ।
ಉಪನಯನೇ ನಿಯೋಗಸ್ಸ್ಯಾತ್ಸಾಂಖ್ಯಾಯನಸಗೋತ್ರಜಾ ॥ ೧೪೫ ॥

ತ್ರೈಲೋಕ್ಯಚರಣಾ ಜ್ಞೇಯಾ ಪೃಥಿವೀಕುಕ್ಷಿಸಂಸ್ಥಿತಾ ।
ಚತುರ್ವಿಂಶತಿಸ್ಥಾನೇ ಚ ಪಾದಾದೌ ಮಸ್ತಕಾಂತಕಂ ॥ ೧೪೬ ॥

ಚತುರ್ವಿಂಶತ್ಯಕ್ಷರಂ ನ್ಯಸ್ಯ ಬ್ರಹ್ಮಲೋಕಂ ಸ ವಿಂದತಿ ।
ಪ್ರತ್ಯರ್ಣದೇವತಾಂ ಜ್ಞಾತ್ವಾ ವಿಷ್ಣುಸಾಯುಜ್ಯತಾಂ ಲಭೇತ್ ॥ ೧೪೭ ॥

ಅಪರಂ ಚ ಪ್ರವಕ್ಷ್ಯಾಮಿ ಗಾಯತ್ರ್ಯಾ ಲಕ್ಷಣಂ ಧ್ರುವಂ ।
ಸಪ್ತಪಂಚ ತಥಾ ಷಟ್ಕ ಯಜುರುಷ್ಟಾದಶಾಕ್ಷರಂ ॥ ೧೪೮ ॥

ಜ್ವಲನಾದಿ ಹಕಾರಾಂತಂ ಜಲೇ ಸ್ಥಿತ್ವಾ ಶತಂ ಜಪೇತ್ ।
ಉಪಪಾತಕಕೋಟಿಸ್ತು ತಥಾತಿಪಾತಕಸ್ಯ ಚ ॥ ೧೪೯ ॥

---

೧೪೫. ಬ್ರಹ್ಮನ ಶಿರಸ್ಸಿನಲ್ಲಿಯೂ ವಿಷ್ಣುವಿನ ಹೃದಯದಲ್ಲಿಯೂ ಇರುವುದು. ಇದರ ವಿನಿಯೋಗವು ಉಪನಯನದಲ್ಲಿ ಇರುವುದು. ಇದರ ಗೋತ್ರವು ಸಾಂಖ್ಯಾಯನಸಗೋತ್ರವು.

೧೪೬. ಮೂರು ಲೋಕಗಳೇ ಇದರ ಚರಣಗಳು. ಭೂಮಿಯೇ ಕುಕ್ಷಿಯು. (ಹೊಟ್ಟೆಯು) ಪಾದ ಮೊದಲುಗೊಂಡು ತಲೆಯವರೆಗೂ ಇರುವ ಇಪ್ಪತ್ತುನಾಲ್ಕು ಸ್ಥಾನಗಳಲ್ಲಿ ಇದಿರುವುದು.

೧೪೭. ಇಪ್ಪತ್ತುನಾಲ್ಕು ಅಕ್ಷರಗಳನ್ನು ನ್ಯಾಸಮಾಡಿ ಜಪಿಸಿದರೆ ಬ್ರಹ್ಮ ಲೋಕವು ಸಿಕ್ಕುತ್ತದೆ. ಪ್ರತಿ ಅಕ್ಷರದ ದೇವತೆಯನ್ನೂ ತಿಳಿದು ಇಪ್ಪತ್ತುನಾಲ್ಕು ಅಕ್ಷರ ಗಳನ್ನು ಇಪ್ಪತ್ತುನಾಲ್ಕು ಸ್ಥಾನಗಳಲ್ಲಿಟ್ಟರೆ ಅವನು ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾನೆ.

೧೪೮-೧೫೦. ಗಾಯತ್ರಿಯ ಮತ್ತೊಂದು ಲಕ್ಷಣವನ್ನು ಹೇಳುತ್ತೇನೆ, ಕೇಳು. ಏಳು, ಐದು, ಆರು, ಎಂದರೆ ಹದಿನೆಂಟು. ಹದಿನೆಂಟು ಅಕ್ಷರಗಳುಳ್ಳ ಯಜುಸ್ಸು ಳ್ಳದ್ದು. ಈ ಮಂತ್ರವು ಓಂಕಾರ ಮೊದಲುಗೊಂಡು ಹಕಾರದವರೆಗೂ ಇರುವುದು. ಇದನ್ನು ನೀರಿನಲ್ಲಿ ನಿಂತು ಜಪಿಸಿದರೆ ಮಹಾಪಾತಕೋಪಪಾತಕಗಳೂ ಬ್ರಹ್ಮಹತ್ಯಾದಿ

ಬ್ರಹ್ಮಹತ್ಯಾದಿಭಿಃ ಪಾಪೈರ್ಮುಕ್ತಾ ಯಾಂತಿ ಮಮಾಲಯಂ ।
ಓಂ ಆಗ್ನೇರ್ವಾಕಸ್ಪಂಸಿ ಯಜುರ್ವೇದೇನ
ಜುಷ್ಟಾ ಸೋಮಂ ಪಿಬ ಸ್ವಾಹಾ ॥ ೧೫೦ ॥

ವಿಷ್ಣುಮಂತ್ರಂ ಮಹಾಮಂತ್ರಂ ತಥಾ ಮಾಹೇಶ್ವರಸ್ಯ ಚ ।
ದೇವೀಸೂರ್ಯಗಣೇಶಾನಾಂ ತಥಾ ಕ್ರತುಭುಜಾಂ ಸುತ ॥ ೧೫೧ ॥

ಯಸ್ಯ ಕಸ್ಯ ಕುಲೇ ಜಾತೋ ಗುಣವಾನೇವ ತೈರ್ಗುಣೈಃ ।
ಸಾಕ್ಷಾದ್ಬ್ರಹ್ಮಮಯೋ ವಿಪ್ರಃ ಪೂಜನೀಯಃ ಪ್ರಯತ್ನತಃ ॥ ೧೫೨ ॥

ದಾನಂ ದದ್ಯಾಚ್ಚ ವಿಧಿವತ್ಸದಾ ಪರ್ವಣಿ ಪರ್ವಣಿ ।
ಅಕ್ಷಯಂ ಲಭತೇ ದಾತಾ ಜನ್ಮಕೋಟಿಶತಾನಿ ವೈ ॥ ೧೫೩ ॥

ಸ್ವಾಧ್ಯಾಯನಿರತೋ ವಿಪ್ರೋ ಯಃ ಪಠೇತ್ಪಾಠಯೇತ್ಪರಾನ್ ।
ಧರ್ಮಂ ಚ ಶ್ರಾವಯೇಲ್ಲೋಕೇ ಸದಾಚಾರಂ ಶ್ರುತಿಂ ಸ್ಮೃತಿಂ ॥ ೧೫೪ ॥

---

ದೋಷಗಳೂ, ಹೋಗಿ ಬ್ರಹ್ಮಸಾಯುಜ್ಯವನ್ನು ಹೊಂದುತ್ತಾನೆ. ಇದೇ ಈ ಮಂತ್ರದ ಅನುಪೂರ್ವಿಯ ಲಕ್ಷಣವು.

೧೫೧. ವಿಷ್ಣು, ಮಹೇಶ್ವರ, ದೇವಿ, ಸೂರ್ಯ, ಗಣೇಶ ಮೊದಲಾದ ದೇವತೆಗಳ ಮಂತ್ರಗಳನ್ನು ಜಪಿಸಬೇಕು.

೧೫೨. ಯಾವ ಕುಲದಲ್ಲಿ ಬೇಕಾದರೂ ಹುಟ್ಟಲಿ, ಹಿಂದೆ ಹೇಳಿದ ಗುಣಗಳಿದ್ದರೆ ಅವನೇ ಗುಣವಂತನು. ಸಾಕ್ಷಾದ್ಬ್ರಹ್ಮಸ್ವರೂಪನು. ಅಂತಹವನನ್ನು ನಿತ್ಯವೂ ಪೂಜಿಸಬೇಕು.

೧೫೩. ಪ್ರತಿಪರ್ವಗಳಲ್ಲಿಯೂ ವಿಧ್ಯುಕ್ತವಾಗಿ ದಾನಮಾಡಬೇಕು. ಹಾಗೆ ಮಾಡಿದರೆ ಅಕ್ಷಯವಾದ ಫಲವನ್ನು ಹೊಂದಿ ಕೋಟಿ ಜನ್ಮಗಳವರೆಗೂ ಫಲವನ್ನು ಅನುಭವಿಸುತ್ತಾನೆ.

೧೫೪-೧೫೭. ಬ್ರಾಹ್ಮಣನು ವೇದಾಧ್ಯಯನವನ್ನು ಮಾಡುತ್ತ ಇತರರಿಗೂ ಹೇಳಿಕೊಡುತ್ತಿರಬೇಕು. ಎಲ್ಲಾ ಜನರಿಗೂ ಧರ್ಮವನ್ನುಪದೇಶಿಸಬೇಕು. ಸದಾಚಾರ

ಪುರಾಣಸಂಹಿತಾಂ ನೂನಂ ತಥೈವ ಧರ್ಮಸಂಹಿತಾಂ ।
ಶ್ರಾವಯಿತ್ವಾ ತು ಲೋಕೇಷು ಶ್ರಾವಯಿತ್ವಾ ದ್ವಿಜಾತಿಷು ॥ ೧೫೫ ॥

ಉರ್ವ್ಯಾಂ ವಿಷ್ಣುಸಮಸ್ಸೋಽಪಿ ಪೂಜನೀಯೋ ನರೈಸ್ಸುರೈಃ ।
ಯದ್ದತ್ತಂ ಚಾಕ್ಷಯಂ ತಸ್ಯ ತೀರ್ಥಭೂತಾನಘಸ್ಯ ಚ ॥ ೧೫೬ ॥

ಸಮಾನಮರ್ಚನಂ ಕೃತ್ವಾ ನರೋ ಯಾತ್ಯಚ್ಯುತಾಲಯಂ ।
ಕದಾಚಿತ್ಕ್ರಿಯತೇ ಪಾಪಂ ವಿಪ್ರಂ ಪಾಪೈರ್ನ ಲಿಪ್ಯತೇ ॥ ೧೫೭ ॥

ಚಾಂಡಾಲಸ್ಯ ಗೃಹೇ ತಿಷ್ಠನ್ಭಾಸ್ಕರಜ್ವಲನೌ ಯಥಾ ।
ಯಾಜನಾಧ್ಯಾಪನಾದ್ಯೌನಾತ್ತಥೈವಾಸತ್ಪ್ರತಿಗ್ರಹಾತ್ ॥ ೧೫೮ ॥

ವಿಪ್ರಾಣಾಂ ನ ಭವೇದ್ದೋಷೋಜ್ವಲನಾರ್ಕಸಮಾ ದ್ವಿಜಾಃ ।
ತಾನ್ಪ್ರತಿಗ್ರಹಜಾನ್ದೋಷಾನ್ಪ್ರಾಣಾಯಾಮವ್ಯವಸ್ಥಿತಾಃ ॥ ೧೫೯ ॥

---

ಶ್ರುತಿಸ್ಮೃತಿಗಳನ್ನು ಹೇಳುತ್ತಿರಬೇಕು. ಪುರಾಣವನ್ನೂ ಧರ್ಮವನ್ನೂ ಜನಗಳಿಗೂ ಬ್ರಾಹ್ಮಣರಿಗೂ ಹೇಳಿದರೆ ಭೂಮಿಯಲ್ಲಿ ಅವನು ವಿಷ್ಣುಸಮನಾಗುತ್ತಾನೆ. ಅವನಿಗೆ ನರರೂ ಸುರರೂ ಪೂಜೆಮಾಡುತ್ತಾರೆ. ತೀರ್ಥರೂಪಿಯಾದ ಆತನಿಗೆ ಕೊಟ್ಟದ್ದು ಅಕ್ಷಯವಾಗುತ್ತದೆ ಗೌರವಪೂರ್ವಕವಾದ ಅರ್ಚನೆಯನ್ನು ಮಾಡಿದರೆ ಅವನು ವಿಷ್ಣುಲೋಕವನ್ನು ಹೊಂದುತ್ತಾನೆ. ಅಂತಹ ಬ್ರಾಹ್ಮಣನು ಒಂದುವೇಳೆ ಪಾಪ ಮಾಡಿದರೂ ಆ ಪಾಪವು ಅವನಿಗೆ ಅಂಟುವುದಿಲ್ಲ.

೧೫೮-೧೬೧. ಸರಿಯಾದ ವಿಪ್ರನು ಚಂಡಾಲನ ಮನೆಯಲ್ಲಿದ್ದರೂ ಅಲ್ಲಿ ತಿಂದರೂ ಅಗ್ನಿ ಸೂರ್ಯರಂತೆ ದೋಷಭಾಗಿಯಾಗಲಾರನು. ಅಯೋಗ್ಯರಿಗೆ ಯಾಗ ಮಾಡಿಸಿದರೂ, ಅಧ್ಯಯನವನ್ನು ಹೇಳಿಕೊಟ್ಟರೂ, ಯೌವನದಿಂದ ಬರತಕ್ಕ ಸ್ತ್ರೀ ದೋಷಗಳಿಂದಾಗಲೀ, ಅಯೋಗ್ಯರಿಂದ ದಾನ ತೆಗೆದುಕೊಂಡರಾಗಲೀ, ದೋಷವನ್ನು ಹೊಂದಲಾರನು. ಅವನು ಸೂರ್ಯ ಅಗ್ನಿಗಳಿಗೆ ಸಮನು. ಅವನು ಆ ಪ್ರತಿಗ್ರಹಾದಿಗಳಿಂದಬರುವ ದೋಷಗಳನ್ನೂ ಪಾಪಗಳನ್ನೂ ಪ್ರಾಣಾಯಾಮಗಳಿಂದ ವಾಯುವು

ನಾಶಯಂತೀಹ ಪಾಪಾನಿ ವಾಯುರ್ಮೇಘಮಿವಾಂಬರೇ ।
ಗಾಯತ್ರೀಂ ಯೋ ಜಪೇನ್ನಿತ್ಯಂ ಪ್ರಾಣಾಯಾಮಸಮನ್ವಿತಾಂ ॥ ೧೬೦ ॥

ಪ್ರತ್ಯಕ್ಷರಾಮರ್ತೈರ್ಯುಕ್ತಾಂ ಸ್ವಾಂಗೇ ವಿನ್ಯಸ್ಯ ತಾಮಪಿ ।
ಸರ್ವಪಾಪಾದ್ವಿನಿರ್ಮುಕ್ತೋ ಜನ್ಮಕೋಟಿಕೃತಾದಪಿ ॥ ೧೬೧ ॥

ಬ್ರಹ್ಮಣಃ ಪದವೀಂ ಪ್ರಾಪ್ಯ ಸ ಗಚ್ಛೇತ್ಪ್ರಕೃತೇಃ ಪದಂ ।
ಪ್ರಾಣಾಯಾಮಯುತಾಂ ತಸ್ಮಾದ್ಗಾಯತ್ರೀಂ ಜಪ ನಾರದ ॥ ೧೬೨ ॥

॥ ನಾರದ ಉವಾಚ ॥

ಪ್ರಾಣಾಯಾಮಾಃ ಕಥಂ ಬ್ರಹ್ಮನ್ಪ್ರತ್ಯೇಕಾಕ್ಷರದೇವತಾಃ ।
ತೇಷಾಂ ನ್ಯಾಸಂ ತಥಾಂಗೇಷು ವದ ತಾತ ಯಥಾಕ್ರಮಂ ॥ ೧೬೩ ॥

॥ ಬ್ರಹ್ಮೋವಾಚ ॥

ಗುದದೇಶೇ ತ್ವಪಾನಸ್ಸ್ಯಾದ್ಧೃದಿ ಪ್ರಾಣೋಽಸ್ತಿ ದೇಹಿನಃ ।
ತಸ್ಮಾದ್ಗುದಂ ಸಮಾಕುಂಚ್ಯ ಪ್ರಾಣೇನ ಸಹ ಯೋಜಯೇತ್ ॥ ೧೬೪ ॥

ಮೇಘವನ್ನು ನಾಶಮಾಡುವಂತೆ ನಾಶಮಾಡುತ್ತಾನೆ. ಗಾಯತ್ರಿಯ ಪ್ರತಿ ಅಕ್ಷರದ ದೇವತೆಯನ್ನೂ ತಿಳಿದು ಅಂಗನ್ಯಾಸ ಕರನ್ಯಾಸಗಳ ಮೂಲಕ ನ್ಯಾಸಮಾಡಿಕೊಂಡು ಪ್ರಾಣಾಯಾಮ ಪೂರ್ವಕವಾಗಿ ಆ ಗಾಯತ್ರಿಯನ್ನು ಜಪಿಸಿದರೆ ಕೋಟಿ ಜನ್ಮಗಳಿಂದ ಮಾಡಿದ ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೧೬೨. ಅವನು ಬ್ರಹ್ಮನ ಪದವಿಯನ್ನು ಹೊಂದಿ ಪ್ರಕೃತಿಗಿಂತಲೂ ಉತ್ತಮ-ಸ್ಥಾನವನ್ನು ಹೊಂದುತ್ತಾನೆ. ಎಲೈ ನಾರದನೇ! ಆದ್ದರಿಂದ ಪ್ರಾಣಾಯಾಮದಿಂದ ಕೂಡಿದ ಗಾಯತ್ರಿಯನ್ನು ಜಪಿಸು.

೧೬೩. ನಾರದನು ಹೇಳಿದನು- ಎಲೈ ಬ್ರಹ್ಮನೇ! ಪ್ರಾಣಾಯಾಮವನ್ನು ಮಾಡುವುದು ಹೇಗೆ? ಗಾಯತ್ರಿಯ ಅಕ್ಷರಗಳ ಬೇರೆ ಬೇರೆ ದೇವತೆಗಳಾವುವು? ಅವುಗಳನ್ನು ಅಂಗಗಳಲ್ಲಿಡುವುದು ಹೇಗೆ? ಇದನ್ನು ಕ್ರಮವಾಗಿ ತಿಳಿಸು.

೧೬೪-೧೬೫. ಬ್ರಹ್ಮನು ಹೇಳಿದನು— ತಿಕಪಿರುವಲ್ಲಿ ಅಪಾನವಾಯುವಿದೆ. ಹೃದಯದಲ್ಲಿ ಪ್ರಾಣವಿದೆ. ಆದ್ದರಿಂದ ಆ ತಿಕವನ್ನು ಎಳೆದು ಸಣ್ಣದುಮಾಡಿ ಆ ಅಪಾನವನ್ನು ಪ್ರಾಣದೊಡನೆ ಸೇರಿಸಬೇಕು. ಅನಂತರ ಪೂರಕದಿಂದ (ಉಸಿರೆಳೆಯುವುದು)

ಪೂರಕೇಣ ತದಾ ಪುತ್ರ ಕೃತ್ವಾ ಕುಂಭಕಮುತ್ತಮಂ ।
ಪ್ರಾಣಾಯಾಮತ್ರಯಂ ಕೃತ್ವಾ ಗಾಯತ್ರೀಂ ಸಂಜಪೇದ್ದ್ವಿಜಃ ॥ ೧೬೫ ॥

ಅನೇನೈವ ಜಪೇದ್ಯಸ್ತು ಮಹಾಪಾತಕಸಂಚಯಃ ।
ಸಕೃದುಚ್ಚರಿತೇನೈವ ಕ್ಷಯಂ ಯಾತ್ಯನ್ಯಪಾತಕಂ ॥ ೧೬೬ ॥

ಪ್ರತಿವರ್ಣಸ್ವರಂ ಜ್ಞಾತ್ವಾ ವಿನ್ಯಸ್ಯ ಚ ಕಳೇಬರೇ ।
ಸ ಜನೋ ಬ್ರಹ್ಮತಾಮೇತಿ ಫಲಂ ವಕ್ತುಂ ನ ಶಕ್ನುಮಃ ॥ ೧೬೭ ॥

ಪ್ರತ್ಯಕ್ಷರಸ್ಯ ಯದ್ದೈವಂ ಶೃಣು ಪುತ್ರ ವದಾಮ್ಯಹಂ ।
ಯಜ್ಜಪ್ತ್ವಾ ಚ ಪುನರ್ಮಾತುಸ್ತನಂ ನ ಪಿಬತಿ ದ್ವಿಜಃ ॥ ೧೬೮ ॥

ಆಗ್ನೇಯಂ ಪ್ರಥಮಂ ಜ್ಞೇಯಂ ವಾಯವ್ಯಂ ತು ದ್ವಿತೀಯಕಂ ।
ತೃತೀಯಂ ಸೂರ್ಯದೈವತ್ಯಂ ಚತುರ್ಥಂ ವೈಯತಂ ತಥಾ ॥ ೧೬೯ ॥

---

ಕುಂಭಕ (ಒಳಗೆ ಗಾಳಿ ನಿಲ್ಲುವುದು) ವಾಗುತ್ತದೆ. ಈ ರೀತಿ ಮಾಡಿ ನಿದಾನವಾಗಿ ಬಿಡುವುದು. ಇದಕ್ಕೆ ಪ್ರಾಣಾಯಾಮವೆಂದು ಹೆಸರು. ಇಂತಹವನ್ನು ಮೂರು ಬಾರಿ ಮಾಡಿ ಅನಂತರ ಗಾಯತ್ರಿಯನ್ನು ಜಪಿಸಬೇಕು

೧೬೬. ಒಂದು ಬಾರಿ ಪ್ರಾಣಾಯಾಮ ಮಾಡುವುದರಿಂದ ಉಪಪಾತಕಗಳೂ ಮೂರು ಬಾರಿ ಮಾಡುವುದರಿಂದ ಮಹಾಪಾತಕವೂ ಹೋಗುತ್ತದೆ.

೧೬೭. ಪ್ರತಿವರ್ಣಕ್ಕೂ ಸ್ವರವನ್ನು ತಿಳಿದು ಅದನ್ನು ವಿನ್ಯಾಸಮಾಡಿ ಗಾಯತ್ರಿಯನ್ನು ಜಪಿಸಿದರೆ ಅವನು ಬ್ರಹ್ಮನಾಗುತ್ತಾನೆ. ಅದರ ಫಲವಿಷ್ಟೆಂದು ಹೇಳಲಾಗುವುದಿಲ್ಲ.

೧೬೮. ಪ್ರತಿ ಅಕ್ಷರಕ್ಕೂ ದೇವತೆಯನ್ನು ಹೇಳುತ್ತೇನೆ. ಕೇಳು. ಅದರಂತೆ ನ್ಯಾಸಮಾಡಿ ಜಪಿಸಿದರೆ ಪುನರ್ಜನ್ಮವಿರುವುದಿಲ್ಲ.

೧೬೯-೧೭೫. ಮೊದಲನೆಯ ವರ್ಣಕ್ಕೆ ಅಗ್ನಿಯೂ, ಎರಡನೆಯ ವರ್ಣಕ್ಕೆ ವಾಯುವೂ, ಮೂರನೆಯ ವರ್ಣಕ್ಕೆ ಸೂರ್ಯನೂ, ನಾಲ್ಕನೆಯದಕ್ಕೆ ಅಂತರಿಕ್ಷವೂ.

ಪಂಚಮಂ ಯಮುದ್ದೈವತ್ಯಂ ವಾರುಣಂ ಷಷ್ಠಮುಚ್ಯತೇ ।
ಬಾರ್ಹಸ್ಪತ್ಯಂ ಸಪ್ತಮಂ ತು ಪಾರ್ಜನ್ಯಂ ಚಾಷ್ಟಮಂ ವಿದುಃ ॥ ೧೭೦ ॥

ಐಂದ್ರಂ ಚ ನವಮಂ ಜ್ಞೇಯಂ ಗಂಧರ್ವಂ ದಶಮಂ ತಥಾ ।
ಪೌಷ್ಣಮೇತಾದಶಂ ವಿದ್ಧಿ ಮೈತ್ರಂ ದ್ವಾದಶಕಂ ಸ್ಮೃಶಂ ॥ ೧೭೧ ॥

ತ್ವಾಷ್ಟ್ರಂ ತ್ರಯೋದಶಂ ಜ್ಞೇಯಂ ವಾಸವಂ ತು ಚತುರ್ದಶಂ ।
ಮಾರುತಂ ಪಂಚದಶಕಂ ಸೌಮ್ಯಂ ಷೋಡಶಕಂ ಸ್ಮೃತಂ ॥ ೧೭೨ ॥

ಆಂಗೀರಸಂ ಸಪ್ತದಶಂ ವೈಶ್ವದೇವಮತಃ ಪರಂ ।
ಆಶ್ವಿನಂ ಚೈಕೋನವಿಂಶಂ ಪ್ರಾಜಾಪತ್ಯಂ ತು ವಿಂಶಕಂ ॥ ೧೭೩ ॥

ಸರ್ವದೇವಮಯಂ ಜ್ಞೇಯಮೇಕವಿಂಶಕಮಕ್ಷರಂ ।
ರೌದ್ರಂ ದ್ವಾವಿಂಶಕಂ ಜ್ಞೇಯಂ ಬ್ರಾಹ್ಮಂ ಜ್ಞೇಯಮತಃ ಪರಂ ॥ ೧೭೪ ॥

ವೈಷ್ಣವಂ ತು ಚತುರ್ವಿಂಶಮೇತಾ ಅಕ್ಷರದೇವತಾಃ ।
ಜಪಕಾಲೇತು ತು ಸಂಚಿಂತ್ಯ ತಾಸು ಸಾಯುಜ್ಯತಾಂ ವ್ರಜೇತ್ ॥ ೧೭೫ ॥

---

ಐದನೆಯದಕ್ಕೆ ಯಮನೂ, ಆರನೆಯದಕ್ಕೆ ವರುಣನೂ, ಏಳನೆಯದಕ್ಕೆ ಬೃಹಸ್ಪತಿಯೂ ಎಂಟನೆಯದಕ್ಕೆ ಪರ್ಜನ್ಯನೂ. ಒಂಭತ್ತನೆಯದಕ್ಕೆ ಇಂದ್ರನೂ, ಹತ್ತನೆಯದಕ್ಕೆ ಗಂಧರ್ವನೂ, ಹನ್ನೊಂದನೆಯದಕ್ಕೆ ಪೌಷ್ಣನೂ, ಹನ್ನೆರಡನೆಯದಕ್ಕೆ ಮಿತ್ರನೂ, ಹದಿಮೂರನೆಯದಕ್ಕೆ ತ್ವಷ್ಟೃವೂ, ಹದಿನಾಲ್ಕನೆಯದಕ್ಕೆ ವಾಸವನೂ, ಹದಿನೈದನೆಯದಕ್ಕೆ ಮರುತನೂ, ಹದಿನಾರನೆಯದಕ್ಕೆ ಸೋಮನೂ, ಹದಿನೇಳನೆಯದಕ್ಕೆ ಆಂಗೀರಸನೂ, ಹದಿನೆಂಟನೆಯದಕ್ಕೆ ವಿಶ್ವೇದೇವರೂ, ಹತ್ತೊಂಭತ್ತನೆಯದಕ್ಕೆ ಅಶ್ವಿನೀ ದೇವತೆಗಳೂ, ಇಪ್ಪತ್ತನೆಯದಕ್ಕೆ ಪ್ರಜಾಪತಿಯೂ, ಇಪ್ಪತ್ತೊಂದನೆಯದಕ್ಕೆ ಸರ್ವದೇವರೂ ಇಪ್ಪತ್ತೆರಡನೆಯದಕ್ಕೆ ರುದ್ರನೂ, ಇಪ್ಪತ್ಮೂರನೆಯದಕ್ಕೆ ಬ್ರಹ್ಮನೂ, ಇಪ್ಪತ್ನಾಲ್ಕನೆಯದಕ್ಕೆ ವಿಷ್ಣುವೂ, ಅಕ್ಷರ ದೇವತೆಗಳು. ಇವರನ್ನು ಜಪಕಾಲದಲ್ಲಿ ಅಂಗನ್ಯಾಸ ಕರನ್ಯಾಸಗಳಲ್ಲಿ ಇಟ್ಟುಕೊಂಡು ಅವರನ್ನು ಧ್ಯಾನಿಸಿ ಅವರಲ್ಲಿ ಐಕ್ಯನಾಗಿರಬೇಕು.

ಜ್ಞಾತ್ವಾ ತು ದೇವತಾಸ್ತಸ್ಯ ವಾಙ್ಮಯಂ ವಿದಿತಂ ಭವೇತ್ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಣಃ ಪದವೀಂ ವ್ರಜೇತ್ ॥ ೧೭೬ ॥

ಗಾಯತ್ರೀಂ ವಿನ್ಯಸೇತ್ಪೂರ್ವಂ ಶರೀರೇ ಚಾತ್ಮನೋ ಬುಧಃ ।
ಚತುರ್ವಿಂಶತಿಸ್ಥಾನೇಷು ಆಪಾದಮಸ್ತಕೇಷು ಚ ॥ ೧೭೭ ॥

ತತ್ಕಾರಂ ವಿನ್ಯಸೇದ್ಯೋಗೀ ಪಾದಾಂಗುಷ್ಠೇ ವಿಚಕ್ಷಣಃ ।
ಸಕಾರಂ ಗುಲ್ಫದೇಶೇ ತು ವಿಕಾರಂ ಜಂಘಯೋರ್ನ್ಯಸೇತ್ ॥ ೧೭೮ ॥

ತುಕಾರಂ ಜಾನುಮಧ್ಯೇ ಚ ರ್ವಕಾರಂ ಚೋರುದೇಶತಃ ।
ರೇಕಾರಂ ಗುಹ್ಯದೇಶೇ ತು ಣ್ಯಕಾರಂ ವೃಷಣೇ ನ್ಯಸೇತ್ ॥ ೧೭೯ ॥

ಮಕಾರಂ ಕಟಿದೇಶೇ ತು ಭಕಾರಂ ನಾಭಿಮಂಡಲೇ ।
ರ್ಗೋಕಾರಂ ಜಠರೇ ನ್ಯಸ್ಯ ದೇಕಾರಂ ಸ್ತನಯೋರ್ನ್ಯಸೇತ್ ॥ ೧೮೦ ॥

ವಕಾರಂ ಹೃದಯೇ ನ್ಯಸ್ಯ ಸ್ಯಕಾರಂ ಕಂಠದೇಶತಃ ।
ಧೀಕಾರಂ ವದನೇ ನ್ಯಸ್ಯ ಮಕಾರಂ ತಾಲುಕೇ ನ್ಯಸೇತ್ ॥ ೧೮೧ ॥

---

೧೭೬. ಅವುಗಳ ದೇವತೆಗಳನ್ನು ತಿಳಿದುಕೊಂಡರೆ ಮಾತಿನ ಸಮೂಹವನ್ನೇ ತಿಳಿದುಕೊಂಡಂತಾಗುತ್ತದೆ. ಇದರಿಂದ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಬ್ರಹ್ಮನ ಜಾಗವನ್ನು ಹೊಂದುತ್ತಾನೆ.

೧೭೭. ತಿಳಿದವನು ಕಾಲಿನಿಂದ ಹಿಡಿದು ತಲೆಯವರೆಗೂ ಇರುವ ಇಪ್ಪತ್ತು ನಾಲ್ಕು ಜಾಗಗಳಲ್ಲಿ ಶರೀರದಲ್ಲಿ ಮೊದಲು ಗಾಯತ್ರಿಯನ್ನು ಆವಾಹಿಸಿ ಇಟ್ಟು ಕೊಳ್ಳಬೇಕು.

೧೭೮–೧೮೫. ತತ್ ಎಂಬುದನ್ನು ಪಾದದ ಹೆಬ್ಬೆಟ್ಟಿನಲ್ಲಿ ಅಂಗುಷ್ಠದಲ್ಲಿಯೂ, ಸ ಕಾರವನ್ನು ಹಿಮ್ಮಡಿಯಲ್ಲಿಯೂ, ವಿ ಕಾರವನ್ನು ಕಣಕಾಲುಗಳ ಮೇಲೂ, ತು ಕಾರವನ್ನು ಮೊಣಕಾಲಿನ ಮಧ್ಯದಲ್ಲಿಯೂ, ರ್ವ ಕಾರವನ್ನು ಗುಹ್ಯದೇಶದಲ್ಲಿಯೂ, ಣ್ಯ ಕಾರವನ್ನು ತರುಡಿನಲ್ಲಿಯೂ, ಮ ಕಾರವನ್ನು ಸೊಂಟದಲ್ಲಿಯೂ, ಭ ಕಾರವನ್ನು ಹೊಕ್ಕಳಿನಲ್ಲಿಯೂ, ರ್ಗೋ ಕಾರವನ್ನು ಹೊಟ್ಟೆಯ ಪ್ರದೇಶದಲ್ಲಿಯೂ, ದೇ ಕಾರವನ್ನು ಮೊಲೆಯ ಪ್ರದೇಶದಲ್ಲಿಯೂ, ವ ಕಾರವನ್ನು ಹೃದಯದಲ್ಲಿಯೂ, ಸ್ಯ ಕಾರವನ್ನು ಕಂಠದಲ್ಲಿಯೂ, ಧೀ ಕಾರವನ್ನು ಮುಖದಲ್ಲಿಯೂ, ಮ ಕಾರವನ್ನು ದವಡೆಗಳಲ್ಲಿಯೂ, ಹಿ ಕಾರವನ್ನು

ಹಿಂಕಾರಂ ನಾಸಿಕಾಗ್ರೇ ಚ ಧಿಕಾರಂ ಚಕ್ಷುಷೋರ್ನ್ಯಸೇತ್ ।
ಯೋಕಾರಂ ತು ಭ್ರುವೋರ್ಮಧ್ಯೇ ಯೋಕಾರಂ ಚ ಲಲಾಟಕೇ ॥ ೧೮೨॥

ನಃಕಾರಂ ತು ಮುಖೇ ಪೂರ್ವೇ ಪ್ರಕಾರಂ ದಕ್ಷಿಣಾಮುಖೇ ।
ಚೋಕಾರಂ ಪಶ್ಚಿಮೇ ನ್ಯಸ್ಯ ದಕಾರಂ ಚೋತ್ತರೇ ನ್ಯಸೇತ್ ॥ ೧೮೩ ॥

ಯಾಕಾರಂ ಮೂರ್ಧ್ನಿ ವಿನ್ಯಸ್ಯ ಸರ್ವವ್ಯಾಪೀ ವ್ಯವಸ್ಥಿತಃ ।
ಏತಾನ್ವಿನ್ಯಸ್ಯ ಧರ್ಮಾತ್ಮಾ ಬ್ರಹ್ಮವಿಷ್ಣು ಶಿವಾತ್ಮಕಃ ॥ ೧೮೪ ॥

ಮಹಾಯೋಗೀ ಮಹಾಜ್ಞಾನೀ ಪರಂ ನಿರ್ವಾಣಕಂ ವ್ರಜೇತ್ ।
ಸಂಧ್ಯಾಕಾಲೇ ಪುನರ್ನ್ಯಾಸಂ ಶೃಣು ತ್ವಂ ತು ಯಥಾರ್ಥತಃ ।
ಓಂ ಭೂರಿತಿ ಹೃದಯೇ ನ್ಯಸ್ಯ ಓಂ ಭುವಶ್ಶಿರಸಿ ನ್ಯಸೇತ್ ॥ ೧೮೫ ॥

ಓಂ ಸ್ವಃ ಶಿಖಾಯೈ ತತ್ಸವಿತುರ್ವರೇಣ್ಯಮಿತಿ ಕಳೇಬರೇ ।
ಓಂ ಭರ್ಗೋದೇವಸ್ಯಧೀಮಹೀತಿ ನೇತ್ರಯೋಃ ।
ಓಂ ಧಿಯೋ ಯೋ ನಃ ಪ್ರಚೋದಯಾದಿತಿ ಕರಯೋರ್ನ್ಯಸೇತ್ ॥

---

ಮೂಗಿನ ತುದಿಯಲ್ಲಿಯೂ, ಧಿ ಕಾರವನ್ನು ಕಣ್ಣುಗಳಲ್ಲಿಯೂ, ಯೋ ಕಾರವನ್ನು ಹುಬ್ಬುಗಳ ಮಧ್ಯದಲ್ಲಿಯೂ, ಯೋ ಕಾರವನ್ನು ನೆತ್ತಿಯಲ್ಲಿಯೂ, ನಃ ಕಾರವನ್ನು ಮುಂದಿನ ಮುಖದಲ್ಲಿಯೂ, ಪ್ರ ಕಾರವನ್ನು ಹಿಂದಿನ ಮುಖದಲ್ಲಿಯೂ, ಚೋ ಕಾರ ವನ್ನು ತಲೆಯ ಪಶ್ಚಿಮ ಭಾಗದಲ್ಲಿಯೂ, ದ ಕಾರವನ್ನು ತಲೆಯ ಉತ್ತರದಲ್ಲಿಯೂ, ಯಾತ್ ಎಂಬುದನ್ನು ತಲೆಯ ಮೇಲೂ ವಿನ್ಯಾಸಮಾಡಿಕೊಂಡು ಸರ್ವವ್ಯಾಪಿ (ಎಲ್ಲ ಪರಿಂದಲೂ ಕೂಡಿಕೊಂಡವನು) ಆಗಿರಬೇಕು. ಇವನ್ನು ವಿನ್ಯಾಸ ಮಾಡಿಕೊಂಡರೆ ಬ್ರಹ್ಮ, ವಿಷ್ಣು ಶಿವಾತ್ಮಕನಾಗುತ್ತಾನೆ. ಮಹಾಯೋಗಿಯೂ, ಮಹಾಜ್ಞಾನಿಯೂ ಆಗಿ ಉತ್ತಮವಾದ ಮೋಕ್ಷವನ್ನು ಹೊಂದುತ್ತಾನೆ. ಸಂಧ್ಯಾಕಾಲದಲ್ಲಿ ಮಾಡತಕ್ಕ ನ್ಯಾಸವನ್ನು ಹೇಳುತ್ತೇನೆ ಕೇಳು. ಓಂ ಭೂಃ ಎಂಬುದಾಗಿ ಹೃದಯದಲ್ಲಿಯೂ, ಓಂ ಭುವಃ ಎಂದು ತಲೆಯಲ್ಲಿಯೂ ನ್ಯಾಸಮಾಡಬೇಕು.

೧೮೬. ಓಂ ಸ್ವಃ ಎಂದು ತಲೆಯಲ್ಲಿಯೂ, ತತ್ಸವಿತುರ್ವರೇಣ್ಯಂ ಎಂದು ಕಳೇ ಬರದಲ್ಲಿಯೂ, ಓಂ ಭರ್ಗೋ ದೇವಸ್ಯ ಧೀಮಹಿ ಎಂದು ಕಣ್ಣುಗಳಲ್ಲಿಯೂ, ಓಂ ಧಿಯೋ ಯೋ ನಃ ಪ್ರಚೋದಯಾತ್ ಎಂದು ಕೈಗಳಲ್ಲಿಯೂ, ಇಡಬೇಕು.

ಓಂ ಆಪೋಽಜ್ಯೋತಿ ರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಂ ।
ಇತ್ಯುದಕಸ್ಪರ್ಶಮಾತ್ರೇಣ ಪಾಪಾತ್ಪೂತೋ ವ್ರಜೇದ್ಧರಿಂ ॥
ಓಂ ಭೂಃ ಓಂ ಭುವಃ, ಓಂ ಸ್ವಃ, ಓಂ ಮಹಃ,
ಓಂ ಜನಃ, ಓಂ ತಪಃ, ಓಂ ಸತ್ಯಂ ಓಂ ತತ್ಸ
ವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ॥
ಓಂ ಓಮಾಪೋಽಜ್ಯೋತಿ ರಸೋಽಮೃತಂ ಬ್ರಹ್ಮ
ಭೂರ್ಭುವಸ್ಸ್ವರೋಂ ॥ ಇತಿ ಸವ್ಯಾಹೃತಿ ಸಪ್ರಣವದ್ವಾದಶೋಂಕಾರಾಂ
ಸಂಧ್ಯಾಕಾಲೇ ಕುಂಭಕೇನ ವಾರತ್ರಯಂ ಜಪ್ತ್ವಾ ಸೂರ್ಯೋ
ಪಸ್ಥಾನೇ ಸಾವಿತ್ರೀಂ ಚತುರ್ವಿಂಶತ್ಯಕ್ಷರಾಂ
ಜಪ್ತ್ವಾ ಮಹಾವಿದ್ಯಾಧಿಪೋ ಭವತಿ ॥
ಬ್ರಹ್ಮತ್ವಂ ಲಭತೇ ॥
ಷಟ್ಕುಕ್ಷಿಲಕ್ಷಣಾಂ ಪುತ್ರ ಗಾಯತ್ರೀಂ ಶೃಣು ಯತ್ನತಃ
ಯಾಂ ಜ್ಞಾತ್ವಾ ತು ಪರಂ ಬ್ರಹ್ಮ ಸ್ಥಾನಂ ಗಚ್ಛತಿ ವೈ ದ್ವಿಜಃ ॥ ೧೮೬ ॥

---

ಓಂ ಆಪೋ ಜ್ಯೋತಿರಸೋಽಮೃತಂ ಬ್ರಹ್ಮ ಭೂರ್ಭುವಸ್ವರೋಮ್ ಎಂದು ನೀರನ್ನು ಕುಡಿಯಬೇಕು. ಇಷ್ಟರಿಂದಲೇ ಶುದ್ಧನಾಗಿ ಪಾಪಗಳನ್ನು ಕಳೆದುಕೊಂಡು ಹರಿಯ ಲೋಕವನ್ನು ಹೊಂದುತ್ತಾನೆ. ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ಓಂ ತತ್ಸವಿತೃವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋ ಜ್ಯೋತಿರಸೋ ಮೃತಂ ಬ್ರಹ್ಮ ಭೂರ್ಭುವಸ್ವರೋಮ್ ॥ ಎಂಬುದಾಗಿ ಓಂಕಾರ ವ್ಯಾಹೃತಿ (ಭೂರ್ಭುವಸ್ಸ್ವಃ) ಗಳೊಡನೆ ಹನ್ನೆರಡು ಓಂಕಾರಗಳನ್ನುಳ್ಳ ಈ ಗಾಯತ್ರಿಯನ್ನು ಸಂಧ್ಯಾಕಾಲದಲ್ಲಿ ಕುಂಭಕದಿಂದ ಮೂರು ಬಾರಿ ಜಪಿಸಿ ಸೂರ್ಯನ ಪ್ರಾರ್ಥನೆಯಲ್ಲಿ ಇಪ್ಪತ್ತುನಾಲ್ಕು ಅಕ್ಷರಗಳುಳ್ಳ ಸಾವಿತ್ರಿಯನ್ನು ಜಪಿಸಿದರೆ ಮಹಾವಿದ್ಯೆಗಳಿಗೆ ಒಡೆಯನಾಗುತ್ತಾನೆ. ಬ್ರಹ್ಮನಾಗುತ್ತಾನೆ. ಷಟ್ಕುಕ್ಷಿ (ಆರು ನ್ಯಾಸ) ಯುಳ್ಳ ಗಾಯತ್ರಿಯನ್ನು ಹೇಳುತ್ತೇನೆ, ಕೇಳು. ಅದನ್ನು ತಿಳಿದರೆ ಬ್ರಾಹ್ಮಣನು ಪರಬ್ರಹ್ಮನ ಸ್ಥಾನವನ್ನು ಹೊಂದುತ್ತಾನೆ.

ಓಂ ತತ್ಸವಿತೃವರೇಣ್ಯಂ ಭರ್ಗೋದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ॥
॥ ಅಥ ಗಾಯತ್ರೀಪಂಚಶೀರ್ಷ ಲಕ್ಷಣಂ ॥
ಓಂ ಭೂಃ, ಓಂ ಭುವಃ, ಓಂ ಸ್ವಃ, ಓಂ ಮಹಃ, ಓಂ ಜನಃ
ಓಂ ತಪಃ, ಓಂ ಸತ್ಯಂ, ಓಂ ತತ್ಸವಿತೃವರೇಣ್ಯಂ
ಭರ್ಗೋದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ॥
ಸವ್ಯಾಹೃತಿಂ ತು ಗಾಯತ್ರೀಂ ಪುನರ್ನ್ಯಾಸಂ ತು ಕಾರಯೇತ್ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಸಾಯುಜ್ಯತಾಂ ವ್ರಜೇತ್
ಓಂ ಭೂಃ ಪಾದಾಭ್ಯಾಂ । ಓಂ ಭುವಃ ಜಾನುಭ್ಯಾಂ ।
ಓಂ ಸ್ವಃ ಕಟ್ಯಾಂ । ಓಂ ಮಹಃ ನಭೌ । ಓಂ ಜನಃ
ಹೃದಯೇ । ನ್ಯಸೇತ್ ॥ ಓಂ ತಪಃ ಕರಯೋಃ ಓಂ ಸತ್ಯಂ
ಲಲಾಟೇ । ಓಂ ತತ್ಸವಿತೃವರೇಣ್ಯಂ ಭರ್ಗೋ ದೇವಸ್ಯ
ಧೀಮಹಿ । ಧಿಯೋ ಯೋ, ನಃ ಪ್ರಚೋದಯಾತ್
ಇತಿ ಶಿಖಾಯಾಂ ॥ ॥ ೧೪೭ ॥

---

೧೪೭. ಓಂ ತತ್ಸವಿತೃವರೇಣ್ಯಂ ಭರ್ಗೋದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ಇದೇ ಷಟ್ಕುಕ್ಷಿ ಗಾಯತ್ರಿಯು. ಓಂ ಭೂಃ ಓಂ ಭುವಃ, ಓಂ ಸ್ವಃ, ಓಂ ಮಹಃ, ಓಂ ಜನಃ, ಓಂ ತಪಃ, ಓಂ ಸತ್ಯಂ, ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ ॥ ಎಂಬುದು ಪಂಚ ಶೀರ್ಷಕ ಗಾಯತ್ರಿಯೆನ್ನಿಸಿಕೊಳ್ಳುತ್ತದೆ. ಓಂ ಭೂರ್ಭುವಸ್ಸ್ವಃ ಎಂಬ ವ್ಯಾಹೃತಿಯೊಡನೆ ಕೂಡಿದ ಗಾಯತ್ರಿಯನ್ನು ಅಂಗನ್ಯಾಸಮಾಡಿಕೊಳ್ಳಬೇಕು. ಹಾಗೆ ಮಾಡಿದರೆ ಪಾಪದಿಂದ ಶುದ್ಧನಾಗಿ ವಿಷ್ಣುಸಾಯುಜ್ಯವನ್ನು ಹೊಂದುತ್ತಾನೆ. ಓಂ ಭೂಃ ಎಂದು ಪಾದಗಳಲ್ಲಿ, ಓಂ ಭುವಃ ಮೊಣಕಾಲುಗಳಲ್ಲಿ, ಓಂ ಸ್ವಃ ಸೊಂಟದಲ್ಲಿ, ಓಂ ಮಹಃ ಹೊಕ್ಕಳಿನಲ್ಲಿ, ಓಂ ಜನಃ ಹೃದಯದಲ್ಲಿ, ಓಂ ತಪಃ ಕೈಗಳಲ್ಲಿ, ಓಂ ಸತ್ಯಂ ಹಣೆಯಲ್ಲಿ, ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ಎಂದು ತಲೆಯಲ್ಲಿಯೂ ನ್ಯಾಸಮಾಡಿಕೊಳ್ಳಬೇಕು.

ಏವಂ ವಿಪ್ರೋ ನ ಜಾನಾತಿ ಸ ಏವ ಬ್ರಾಹ್ಮಣಾಧಮಃ ।
ನ ತಸ್ಯ ಕ್ಷೀಯತೇ ಪಾಪಾ ಭವೇದ್ಭೂರಿಗ್ರಹಃ ॥ ೧೮೮ ॥

ಇಮಾಂ ಯೋ ವೇತ್ತಿ ಗಾಯತ್ರೀಂ ಸರ್ವಬೀಜಸಮನ್ವಿತಾಂ ।
ಸ ವೇತ್ತಿ ಚತುರೋ ವೇದಾನ್ಯೋಗಜ್ಞಾನಂ ಜಪತ್ರಯಂ ॥ ೧೮೯ ॥

ಯ ಏನಾಂ ವೈ ನ ಜಾನಾತಿ ಸ ಶೂದ್ರಾತ್ಪರತಸ್ಸ್ಮೃತಃ ।
ತಸ್ಯಾಪೂತಸ್ಯ ವಿಪ್ರಸ್ಯ ನ ದೇಯಂ ಪಿತೃಪಾರ್ವಣಂ ॥ ೧೯೦ ॥

ನ ಸ್ನಾನಫಲದಃ ಕಶ್ಚಿತ್ಸರ್ವಂ ಚ ನಿಷ್ಫಲಂ ಭವೇತ್ ।
ವಿದ್ಯಾ ವಿತ್ತಂ ತಥಾ ಜನ್ಮ ದ್ವಿಜತ್ವಂ ಕಾರಣಂ ಯತಃ ॥ ೧೯೧ ॥

ನಿಷ್ಫಲಂ ಸಕಲಂ ತಸ್ಯ ಮೇಧ್ಯಂ ಪುಷ್ಪಂ ಯಥಾಶುಚೌ ।
ಚತುರ್ವೇದಾಶ್ಚ ಗಾಯತ್ರೀ ಪುರಾ ವೈ ತುಲಿತಾ ಮಯಾ ॥ ೧೯೨ ॥

ಚತುರ್ವೇದಾತ್ಪರಾ ಗುರ್ವೀ ಗಾಯತ್ರೀ ಮೋಕ್ಷದಾ ಸ್ಮೃತಾ ।
ದಶಭಿರ್ಜನ್ಮಜನಿತಂ ಶತೇನ ಚ ಪುರಾಕೃತಂ ॥ ೧೯೩ ॥

---

೧೮೮. ಇದನ್ನು ತಿಳಿಯದಿದ್ದರೆ ಅವನು ಅಧಮ ಬ್ರಾಹ್ಮಣನು. ಅವನು ತೆಗೆದುಕೊಂಡ ದಾನದ ಪಾಪವನ್ನು ನಾಶಮಾಡಿಕೊಳ್ಳಲಾರನು

೧೮೯. ಬೀಜದಿಂದ ಕೂಡಿದ ಈ ಗಾಯತ್ರಿಯನ್ನು ತಿಳಿದವನು ನಾಲ್ಕುವೇದಗಳನ್ನೂ ಯೋಗಜ್ಞಾನವನ್ನೂ ಜಪಜ್ಞಾನವನ್ನೂ ತಿಳಿದವನಾಗುತ್ತಾನೆ.

೧೯೦. ಇದನ್ನು ತಿಳಿಯದವನು ಶೂದ್ರನಿಗಿಂತಲೂ ಕಡೆಯಾಗಿರುವನು. ಇದರಿಂದ ಪವಿತ್ರನಾಗದವನನ್ನು ಶ್ರಾದ್ಧಾದಿಗಳಲ್ಲಿ ಊಟಕ್ಕೆ ನಿಮಂತ್ರಿಸಕೂಡದು.

೧೯೧-೧೯೩. ಅವನಿಗೆ ಯಾವ ಸ್ನಾನವೂ ಫಲವನ್ನು ಕೊಡುವುದಿಲ್ಲ. ಎಲ್ಲವೂ ನಿಷ್ಫಲವಾಗುತ್ತವೆ. ವಿದ್ಯೆ, ಹಣ, ಜನ್ಮ, ಬ್ರಾಹ್ಮಣ್ಯ, ಇವೆಲ್ಲಕ್ಕೂ ಈ ಗಾಯತ್ರಿಯೇ ಕಾರಣವಲ್ಲವೇ ! ಅಶುಚಿಯಲ್ಲಿ ಪವಿತ್ರವಾದ ಹೂವು ಹೇಗೆ ನಿಷ್ಫಲವಾಗುತ್ತವೆಯೋ ಹಾಗೆ ಇವನಲ್ಲಿಯೂ ನಿಷ್ಫಲವಾಗುತ್ತವೆ. ಚತುರ್ವೇದಗಳನ್ನು ಒಂದು ಕಡೆಗೂ ಗಾಯತ್ರಿಯನ್ನು ಮತ್ತೊಂದು ಕಡೆಗೂ ಹಾಕಿಕೊಂಡು ತಕ್ಕಡಿಯಲ್ಲಿ ಹಿಂದೆ ನಾನು ತೂಗಿದೆನು. ಗಾಯತ್ರಿಯು ಚತುರ್ವೇದಗಳಿಗಿಂತಲೂ ಭಾರವಾಗಿ (ಹೆಚ್ಚಾಗಿ) ಮೋಕ್ಷವನ್ನು ಕೊಡುವುದಾಗಿ ತಿಳಿಯಬಂದಿತು. ಹತ್ತುಬಾರಿಯ ಜಪದಿಂದ

ತ್ರಿಯುಗಂ ತು ಸಹಸ್ರೇಣ ಗಾಯತ್ರೀ ಹಂತಿ ಕಿಲ್ಬಿಷಂ ।
ಗಾಯತ್ರೀಮಕ್ಷಮಾಲಾಯಾಂ ಸಾಯಂ ಪ್ರಾತಶ್ಚಯೋಜಪೇತ್ ॥೧೯೪॥

ಚತುರ್ಣಾಮಪಿ ವೇದಾನಾಂ ಫಲಂ ಪ್ರಾಪ್ನೋತ್ಯಸಂಶಯಂ ।
ತ್ರಿಸಂಧ್ಯಂ ಯೋ ಜಪೇನ್ನಿತ್ಯಂ ಗಾಯತ್ರೀಂ ಹಾಯನಂ ದ್ವಿಜಃ ॥ ೧೯೫ ॥

ತಸ್ಯಪಾಪಂ ಕ್ಷಯಂ ಯಾತಿ ಜನ್ಮಕೋಟಿಸಮುದ್ಭವಂ ।
ಗಾಯತ್ರ್ಯುಚ್ಚಾರಮಾತ್ರೇಣ ಪಾಪಕೋಟ್ಯಾತ್ಪುನಾತಿ ಚ ॥ ೪೯೬ ॥

ಸ್ವರ್ಗಾಪವರ್ಗಮಾಪ್ನೋತಿ ಜಪ್ತ್ವಾ ನಿತ್ಯಂ ದ್ವಿಜೋತ್ತಮಃ ।
ವಾಸುದೇವಸ್ಯ ಮಂತ್ರಾಣಿ ಜಪೇದ್ಯಸ್ತು ದಿನೇ ದಿನೇ ॥ ೧೯೭ ॥

ಪ್ರಣಮೇಚ್ಚ ಹರೇಃ ಪಾದೌ ಸ ಗಚ್ಛೇದಪವರ್ಗಿಕಾಂ ।
ವಾಸುದೇವಸ್ಯ ಸ್ತೋತ್ರಾಣಿ ಮುಖೇ ಚಾಪಿ ಕಥೋತ್ತಮಾ ॥ ೧೯೮ ॥

ಪಂಕಸ್ಯ ಲವಮಾತ್ರಂ ತು ತಸ್ಯ ದೇಹೇ ನ ತಿಷ್ಠತಿ ।
ವೇದಶಾಸ್ತ್ರಾವಗಾಹೇನ ತ್ರಿಸ್ರೋತಸ್ನಾನಜಂ ಫಲಂ ॥ ೧೯೯ ॥

---

ಆಜನ್ಮದಲ್ಲಿ ಮಾಡಿದ, ನೂರುಬಾರಿಯ ಜಪದಿಂದ ಪೂರ್ವಜನ್ಮದ, ಸಾವಿರ ಜಪದಿಂದ ಮೂರು ಯುಗಗಳ, ಪಾಪಗಳನ್ನು ಈ ಗಾಯತ್ರಿಯು ನಾಶಮಾಡುತ್ತದೆ. ಸಾಯಂ ಕಾಲ ಪ್ರಾತಃಕಾಲಗಳಲ್ಲಿ ಅಕ್ಷಮಾಲೆಯನ್ನು ಹಿಡಿದು ಗಾಯತ್ರಿಯನ್ನು ಜಪಿಸಿದರೆ ನಾಲ್ಕು ವೇದಗಳ ಫಲವನ್ನು ಹೊಂದುತ್ತಾನೆ ಸಂಶಯವಿಲ್ಲ. ಯಾವ ಮನುಷ್ಯನು ಒಂದು ವರ್ಷದವರೆಗೆ ಮೂರು ಹೊತ್ತೂ ಗಾಯತ್ರಿಯನ್ನು ಜಪಿಸುತ್ತಾನೆಯೋ ಅವನ ಕೋಟಿ ಜನ್ಮಗಳ ಪಾಪವು ಹೋಗುತ್ತದೆ. ಗಾಯತ್ರಿಯನ್ನು ಉಚ್ಚಾರಮಾಡಿದರೇನೇ ಅನೇಕ ಪಾಪಗಳಿಂದ ಮುಕ್ತನಾಗುತ್ತಾನೆ.

೧೯೭-೨೦೦. ಗಾಯತ್ರಿಯನ್ನು ನಿತ್ಯವೂ ಜಪಿಸಿದರೆ ಸ್ವರ್ಗಮೋಕ್ಷಗಳು ಲಭಿಸುತ್ತವೆ. ವಾಸುದೇವನ ಮಂತ್ರಗಳನ್ನು ಪ್ರತಿದಿನವೂ ಜಪಿಸಿದರೆ ಅವನ ಪಾದಗಳನ್ನು ನಮಸ್ಕರಿಸಿದರೆ ಅವನಿಗೆ ಪರಮಪದವು ಸಿಕ್ಕುತ್ತದೆ. ವಾಸುದೇವನ ಸ್ತೋತ್ರಗಳನ್ನೂ ಕಥೆಗಳನ್ನೂ ಹೇಳುತ್ತಿದ್ದರೆ ಅವನಲ್ಲಿ ಸ್ವಲ್ಪ ಪಾಪವೂ ಇರುವುದೇ ಇಲ್ಲ. ವೇದಶಾಸ್ತ್ರಗಳನ್ನು ತಾನು ತಿಳಿದು ಓದುವುದರಿಂದ ಗಂಗಾಸ್ನಾನದ ಪುಣ್ಯವೂ

ಧರ್ಮಪಾಠಕೃತಾಲ್ಲೋಕೇ ಯಜ್ಞಕೋಟಿಫಲಂ ಲಭೇತ್ ।
ಏವಂ ವಿಪ್ರಗುಣಾನ್ವಕ್ತುಂ ನ ಶಕ್ತೋಽಹಂ ದ್ವಿಜೋತ್ತಮ ॥ ೨೦೦ ॥

ವಿಶ್ವರೂಪಸ್ಯ ಕೋ ದೇಹೀ ಸ ಮೂರ್ತೋ ಹರಿರೇವ ಚ ॥
ಯಸ್ಯ ಶಾಪಾದ್ವಿನಾಶಸ್ಸ್ಯಾದಾಯುರ್ವಿದ್ಯಾಯಶೋಧನಂ ॥ ೨೦೧ ॥

ವರದಾನಾತ್ಸಮಾಯಾಂತಿ ಸರ್ವಾಸ್ಸಂಪತ್ತಯಸ್ತಥಾ ।
ವಿಷ್ಣುರ್ಬ್ರಹ್ಮಣ್ಯತಾಮೇತಿ ಸದಾ ವಿಪ್ರಪ್ರಸಾದತಃ ॥ ೨೦೨ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥ ೨೦೩ ॥

ಮಂತ್ರೇಣೈವಂ ಹರಿಂ ಯಸ್ತು ಪೂಜಯೇತ್ಸತತಂ ನರಃ ।
ಪ್ರಸಾದೀ ಚ ಹರಿಸ್ತಸ್ಯ ವಿಷ್ಣುಸಾಯುಜ್ಯತಾಂ ವ್ರಜೇತ್ ॥ ೨೦೪ ॥

---

ಬರುತ್ತದೆ. ಧರ್ಮಶಾಸ್ತ್ರಗಳನ್ನು ಜನಗಳಿಗೆ ಹೇಳುತ್ತಿದ್ದರೆ ಕೋಟಿ ಯಜ್ಞಗಳನ್ನು ಮಾಡಿದ ಫಲವು ಬರುತ್ತದೆ. ಎಲೈ ನಾರದನೇ ! ಈ ರೀತಿಯಾಗಿ ಬ್ರಾಹ್ಮಣನ ಗುಣಗಳಿವೆ. ಆ ಬ್ರಾಹ್ಮಣನ ಗುಣಗಳನ್ನು ಸರಿಯಾಗಿ ಹೇಳಲು ನನಗೆ ಆಗುವುದಿಲ್ಲ.

೨೦೧-೨೦೨. ಹರಿಯು ವಿಶ್ವರೂಪದ ದೇಹವುಳ್ಳವನು. ಅವನ ಶಾಪದಿಂದ ಆಯುಸ್ಸು, ಯಶಸ್ಸು ಧನಗಳೆಲ್ಲವೂ ನಾಶವಾಗುತ್ತವೆ. ಅವನ ವರದಿಂದ ಅವೆಲ್ಲವೂ ಒಂದು ಸಂಪತ್ತಿನಿಂದ ಕೂಡಿಕೊಳ್ಳುತ್ತಾನೆ. ಅಂತಹ ವಿಷ್ಣುವು ವಿಪ್ರನ ಅನುಗ್ರಹದಿಂದ ಬ್ರಹ್ಮಭಾವವನ್ನು ಹೊಂದುತ್ತಾನೆ.

೨೦೩-೨೦೪. ಬ್ರಾಹ್ಮಣರ ದೇವನಿಗೆ ನಮಸ್ಕಾರವು. ಗೋ (ಧರ್ಮ) ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವ ಸ್ವಾಮಿಗೆ ನಮಸ್ಕಾರವು. ಜಗತ್ತಿಗೆ ಹಿತವನ್ನುಂಟು ಮಾಡುವ ಗೋವಿಂದನಿಗೆ ನಮಸ್ಕಾರವು. ಎಂದು ಈ ಮಂತ್ರವನ್ನು ಹೇಳಿಕೊಂಡು ಯಾವನು ನಿತ್ಯವೂ ಹರಿಯನ್ನು ಪೂಜಿಸುತ್ತಾನೆಯೋ ಅವನಿಗೆ ಹರಿಯು ಪ್ರಸನ್ನನಾಗುತ್ತಾನೆ. ಅವನು ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾನೆ.

ಯ ಇದಂ ಶೃಣುಯಾತ್ಪುಣ್ಯಮಾಖ್ಯಾನಂ ಧರ್ಮವಿಗ್ರಹಂ ।
ತಸ್ಯ ಪಾಪಂ ಕ್ಷಯಂ ಯಾತಿ ಜನ್ಮ ಜನ್ಮ ಕೃತಂ ಚ ಯತ್ ॥ ೨೦೫ ॥

ಯಃ ಪಠೇತ್ಪಾಠಯೇದ್ವಾಪಿ ಹ್ಯುಪದೇಷ್ಟಾ ಜನಸ್ಯ ಚ ।
ನ ತಸ್ಯ ಪುನರಾವೃತ್ತಿಸ್ಸ್ವರ್ಗಮಕ್ಷಯಮಶ್ನುತೇ ॥ ೨೦೬ ॥

ಧನಂ ಧಾನ್ಯಂ ಲಭೇದತ್ರ ರಾಜ್ಯಭೋಗಾನರೋಗತಾಂ ।
ಸತ್ಸುತಂ ಚ ಶುಭಾಂ ಕೀರ್ತಿಂ ದೇವವದ್ರಮತೇ ದಿವಿ ॥ ೨೦೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಬ್ರಾಹ್ಮಣಸಂಸ್ಕಾರಕಥನಂ
॥ ನಾಮ ತ್ರಿಚತ್ವಾರಿಂಶೋಽಧ್ಯಾಯಃ ॥

---

೨೦೫. ಧರ್ಮದಿಂದ ಕೂಡಿರುವ ಈ ಕಥೆಯನ್ನು ಕೇಳಿದವನಿಗೆ ಅನೇಕ ಜನ್ಮಗಳಲ್ಲಿ ಮಾಡಿದ ಪಾಪವು ನಾಶವಾಗುತ್ತದೆ.

೨೦೬. ಯಾವನು ತಾನೇ ಓದಿ ಇತರರಿಗೂ ಹೇಳಿಕೊಟ್ಟು ಜನಕ್ಕೆಲ್ಲಾ ಉಪದೇಶಿಸುತ್ತಾನೆಯೋ ಅವನು ಪುನಃ ಬರದಿರುವಂಥ ಅಕ್ಷಯಸ್ವರ್ಗವನ್ನು ಹೊಂದುತ್ತಾನೆ.

೨೦೭. ಅವನು ಧನ ಧಾನ್ಯ ರಾಜ್ಯಭೋಗ ರೋಗವಿಲ್ಲದಿರುವಿಕೆ, ಒಳ್ಳೆಯ ಮಗ, ಒಳ್ಳೆಯ ಕೀರ್ತಿಗಳನ್ನು ಹೊಂದಿ ಸ್ವರ್ಗದಲ್ಲಿ ದೇವತೆಗಳಂತೆ ರಮಿಸುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಬ್ರಾಹ್ಮಣಸಂಸ್ಕಾರಕಥನವೆಂಬ
ನಾಲ್ವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಚತುಶ್ಚತ್ವಾರಿಂಶೋಽಧ್ಯಾಯಃ ॥



॥ ನಾರದ ಉವಾಚ ॥

ತವ ಪ್ರಸಾದತೋ ಜ್ಞಾತೋ ವಿಪ್ರಃ ಪುಣ್ಯತಮಶ್ಚ ಯಃ ।
ಯಥಾ ಜಾನಾಮಿ ದೇವೇಶ ಕ್ರಿಯಯಾ ಬ್ರಾಹ್ಮಣಾಧಮಂ
ಬ್ರೂಹಿ ಶೀಘ್ರಂ ಸುರಶ್ರೇಷ್ಠ ಯದಿ ಪ್ರೀತಿಂ ಮಯೀಚ್ಛಸಿ ॥ ೧ ॥

॥ ಬ್ರಹ್ಮೋವಾಚ ॥

ಸ್ನಾನೈರ್ದಶವಿಧೈರ್ಮುಕ್ತಸ್ತಥೈವ ತರ್ಪಣಾದಿಭಿಃ ।
ಸಂಧ್ಯಾಸಂಯಮಹೀನಶ್ಚ ಸ ಏವ ಬ್ರಾಹ್ಮಣಾಧಮಃ ॥ ೨ ॥

ದೇವಪೂಜಾವ್ರತೈರ್ಮುಕ್ತೋ ವೇದವಿದ್ಯಾದಿಭಿಸ್ತಥಾ ।
ಸತ್ಯಶೌಚಾದಿಭಿಶ್ಚೈವ ಯೋಗಜ್ಞಾನಾಗ್ನಿತರ್ಪಣೈಃ ॥ ೩ ॥

---

## ನಾಲ್ವತ್ತನಾಲ್ಕನೆಯ ಅಧ್ಯಾಯವು

೧. ನಾರದನು ಹೇಳಿದನು– ಎಲೈ ಬ್ರಹ್ಮನೇ ! ನಿನ್ನ ಅನುಗ್ರಹದಿಂದ ಪುಣ್ಯವಂತನಾದ ಬ್ರಾಹ್ಮಣನನ್ನು ತಿಳಿದುಕೊಂಡೆನು. ಅವನು ಮಾಡುವ ಕೆಲಸದಿಂದಲೇ ಇವನು ಬ್ರಾಹ್ಮಣಾಧಮನು ಎಂಬುದನ್ನು ತಿಳಿಯುವುದು ಹೇಗೆ ? ಎಂಬುದನ್ನು ದಯವಿಟ್ಟು ಹೇಳು.

೨. ಬ್ರಹ್ಮನು ಹೇಳಿದನು–ಹತ್ತು ಬಗೆಯಾದ ಸ್ನಾನಗಳಿಂದಲೂ ಪಿತೃತರ್ಪಣಗಳಿಂದಲೂ, ಸಂಧ್ಯಾವಂದನೆಗಳಿಂದಲೂ, ಹೀನನಾದವನು ಬ್ರಾಹ್ಮಣಾಧಮನು.

೩. ದೇವರಪೂಜೆ ಮಾಡದವನು, ವೇದ ವಿದ್ಯೆಯನ್ನೋದದವನು, ಸತ್ಯಶೌಚಗಳಿಂದ ಹೀನನು, ಯೋಗ, ಜ್ಞಾನ, ಯಜ್ಞಾದಿಗಳಿಲ್ಲದವನು ಬ್ರಾಹ್ಮಣಾಧಮನು.

ಪಂಚ ಸ್ನಾನಾನಿ ವಿಪ್ರಾಣಾಂ ಕೀರ್ತಿತಾನಿ ಮಹರ್ಷಿಭಿಃ ।
ಆಗ್ನೇಯಂ ವಾರುಣಂ ಬ್ರಾಹ್ಮಂ ವಾಯವ್ಯಂ ದಿವ್ಯಮೇವ ಚ ॥ ೪ ॥

ಆಗ್ನೇಯಂ ಭಸ್ಮನಾ ಸ್ನಾನಮದ್ಭಿರ್ವಾರುಣಮುಚ್ಯತೇ ।
ಆಪೋ ಹಿಷ್ಠೇತಿ ವೈ ಬ್ರಾಹ್ಮಂ ವಾಯವ್ಯಂ ಗೋರಜಃ ಸ್ಮೃತಂ ॥ ೫ ॥

ಅದ್ಭಿರಾತಪವರ್ಷಾಭಿರ್ದಿವ್ಯಂ ಸ್ನಾನಮುದಾಹೃತಂ ।
ಏತೈಸ್ತು ಮಂತ್ರತಃ ಸ್ನಾನಾತ್ತೀರ್ಥಾನಾಂ ಫಲಮಾಪ್ನುಯಾತ್ ॥ ೬ ॥

ತುಲಸೀಪತ್ರಸಂಲಗ್ನಂ ಶಾಲಗ್ರಾಮಶಿಲಾಂಬು ಚ ।
ಗವಾಂ ಶೃಂಗೋದಕಂ ಚೈವ ವಿಪ್ರಪಾದೋದಕಂ ಚ ಯತ್ ॥ ೭ ॥

ಗುರೂಣಾಮೇವ ಮುಖ್ಯಾನಾಂ ಪೂತಾತ್ಪೂತಮಿತಿ ಸ್ಮೃತಿಃ ।
ತ್ಯಾಗತೀರ್ಥಾದಿಭಿರ್ಯಜ್ಞೈರ್ವ್ರತಹೋಮಾದಿಭಿಸ್ತಥಾ ॥ ೮ ॥

---

೪. ಸ್ನಾನಗಳು ಐದು ಬಗೆಯಾಗಿರುವುದೆಂದೂ ಅವು ಆಗ್ನೇಯ, ವಾರುಣ, ಬ್ರಾಹ್ಮ, ವಾಯುವ್ಯ, ದಿವ್ಯಗಳೆಂಬ ಹೆಸರುಳ್ಳವೆಂದೂ ಋಷಿಗಳು ಹೇಳಿದ್ದಾರೆ.

೫-೬. ವಿಭೂತಿಯನ್ನು ಮೈಗೆ ಹಚ್ಚಿಕೊಳ್ಳುವುದು. ಆಗ್ನೇಯ ಸ್ನಾನವೆನಿಸುತ್ತದೆ. ನೀರಿನಿಂದ ಸ್ನಾನ ಮಾಡುವುದು ವಾರುಣವೆನಿಸಿಕೊಳ್ಳುತ್ತದೆ, ಆಪೋಹಿಷ್ಠಾ, ವೆಂಬ ಮಂತ್ರವನ್ನು ಹೇಳಿ ಪ್ರೋಕ್ಷಿಸಿಕೊಳ್ಳುವುದು ಬ್ರಾಹ್ಮಸ್ನಾನ, ಗೋವುಗಳು ಬರುತ್ತಿರುವಾಗ ಅದರ ಕಾಲಿನಿಂದೆದ್ದ ಧೂಳಿನಲ್ಲಿ ಓಡಾಡುವುದು ವಾಯುವ್ಯ ಸ್ನಾನವು, ಬಿಸಿಲಿರುವಾಗ ಬಂದ ಮಳೆಯಲ್ಲಿ ಮಾಡುವ ಸ್ನಾನವು, ದಿವ್ಯವೆನಿಸಿಕೊಳ್ಳುತ್ತದೆ. ಇವುಗಳಲ್ಲಿ ಮಂತ್ರ ಪೂರ್ವಕವಾಗಿ ಸ್ನಾನಮಾಡಿದರೆ ತೀರ್ಥಸ್ನಾನದ ಫಲವನ್ನು ಹೊಂದುತ್ತಾನೆ.

೭-೧೩. ತುಲಸಿಯ ಎಲೆಯಲ್ಲಿರುವ ನೀರು, ಅಥವಾ ನೀರಿಗೆ ತುಳಸಿಯನ್ನು ಹಾಕಿಕೊಂಡು ಆ ನೀರಿನಲ್ಲಿ ಸ್ನಾನಮಾಡುವುದು, ಸಾಲಗ್ರಾಮವನ್ನು ತೊಳೆದ ನೀರು, ಗೋವಿನ ಕೊಂಬಿನಿಂದ ಬಂದ ನೀರು, ಬ್ರಾಹ್ಮಣನ ಕಾಲು ತೊಳೆದ ನೀರು, ಮುಖ್ಯರಾದ ಗುರುಗಳ ತೀರ್ಥ ಇವು ಪವಿತ್ರವಾದುವು. ಪವಿತ್ರಕ್ಕಿಂತಲೂ ಇವು ಪವಿತ್ರಗಳು. ದಾನ, ತೀರ್ಥ, ಯಜ್ಞ, ವ್ರತ, ಹೋಮ, ಮೊದಲಾದುವುಗಳಿಂದ ಮನುಷ್ಯನು

ಯತ್ಫಲಂ ಲಭತೇ ಧೀರಃ ಸ್ನಾನೈರೇತೈಸ್ತು ತತ್ಫಲಂ ।
ತರ್ಪಣೈಶ್ಚ ವಿನಿರ್ಮುಕ್ತಃ ಪಿತೃಹಾನೇವ ನಿತ್ಯಶಃ ॥ ೯ ॥

ಪಿತೃಹಾ ನರಕಂ ಯಾತಿ ಸಂಧ್ಯಾಹೀನಸ್ತು ವಿಪ್ರಹಾ ।
ಮಂತ್ರವ್ರತವಿಹೀನಶ್ಚ ವೇದವಿದ್ಯಾಗುಣೈರಪಿ ॥ ೧೦ ॥

ಯಜ್ಞದಾನಾದಿಭಿರ್ಯುಕ್ತೋ ಬ್ರಾಹ್ಮಣಶ್ಚಾಧಮಾಧಮಃ ।
ಯಜ್ಞಾರ್ಥಕಾ ದೇವಲಕಾ ನಾಕ್ಷತ್ರಾ ಗ್ರಾಮಯಾಜಕಾಃ ॥ ೧೧ ॥

ಪರದಾರರತಾ ನಿತ್ಯಂ ಪಂಚೈತೇ ಬ್ರಾಹ್ಮಣಾಧಮಾಃ ।
ಮಂತ್ರಸಂಸ್ಕಾರಹೀನಾಶ್ಚ ಶುಚಿಸಂಯಮವರ್ಜಿತಾಃ ॥ ೧೨ ॥

ಮೋಘಾಶಿನೋ ದುರಾತ್ಮನೋ ಬ್ರಾಹ್ಮಣಾಶ್ಚಾಧಮಾಧಮಾಃ ।
ಅಪಿ ಸ್ತೇಯರತಾ ಮೂಢಾಃ ಸರ್ವಧರ್ಮವಿವರ್ಜಿತಾಃ ॥ ೧೩ ॥

ಉನ್ಮಾರ್ಗಗಾಮಿನೋ ನಿತ್ಯಂ ಬ್ರಾಹ್ಮಣಾಶ್ಚಾಧಮಾಧಮಾಃ ।
ಶ್ರಾದ್ಧಾದಿಕರ್ಮರಹಿತಾ ಗುರುಸೇವಾವಿವರ್ಜಿತಾಃ ॥ ೧೪ ॥

---

ಯಾವ ಫಲಗಳನ್ನು ಹೊಂದುತ್ತಾನೆಯೋ, ಆ ಫಲವನ್ನು ಈ ಸ್ನಾನಗಳಿಂದ ಹೊಂದುತ್ತಾನೆ. ನಿತ್ಯವೂ ದೇವ ತರ್ಪಣಗಳನ್ನೂ, ಪಿತೃ ತರ್ಪಣಗಳನ್ನೂ, ಮಾಡದಿರುವವನು ತಂದೆಯನ್ನು ಕೊಂದಂತೆ ಆಗುವನು. ನರಕಕ್ಕೆ ಹೋಗುತ್ತಾನೆ. ಸಂಧ್ಯಾವಂದನೆ ಮಾಡದವನು ಬ್ರಾಹ್ಮಣನನ್ನು ಕೊಂದಂತಾಗುವನು. ಮಂತ್ರ ವ್ರತಗಳಿಲ್ಲದವನೂ, ವೇದ ಓದದವನೂ, ಯಜ್ಞ ದಾನಾದಿಗಳನ್ನು ಮಾಡದವನೂ, ಬ್ರಾಹ್ಮಣರಲ್ಲಿ ಅಧಮಾಧಮನು. ಯಾವಾಗಲೂ ಸಂಪಾದನೆಗೋಸ್ಕರ ಯಜ್ಞವನ್ನೇ ಮಾಡುವುದನ್ನು ಹುಡುಕುತ್ತಿರುವವರು, ಹಣಕ್ಕೋಸ್ಕರ ದೇವರ ಪೂಜೆ ಮಾಡುವವರು, ಜ್ಯೋತಿಷ್ಯವನ್ನು ಹೇಳುವವರು, ಪೌರೋಹಿತ್ಯ ಮಾಡಿಸುವವರು, ಪರರ ಹೆಂಡಿರಲ್ಲಿ ಆಸೆಯುಳ್ಳವರು, ಈ ಐವರು ಬ್ರಾಹ್ಮಣರಲ್ಲಿ ಅಧಮರಾದವರಲ್ಲಿಯೂ ಅಧಮರು. ಮಂತ್ರದಿಂದ ಸಂಸ್ಕಾರವನ್ನು ಹೊಂದದವರು, ಶುಚಿಯಾಗಿರದವರು, ದಾನ ಧರ್ಮಗಳನ್ನು ಮಾಡದೆ ವ್ಯರ್ಥವಾಗಿ ಊಟ ಮಾಡುವವರು, ಕಳ್ಳತನ ಮಾಡುವವರು, ಧರ್ಮವೊಂದನ್ನೂ ಮಾಡದಿರುವವರು, ಇವರು ಬ್ರಾಹ್ಮಣರಲ್ಲಿ ಅಧಮರಲ್ಲಿ ಅಧಮರು

೧೪-೧೫. ಯಾವಾಗಲೂ ಕೆಟ್ಟ ದಾರಿಯಲ್ಲಿ ಹೋಗುವವರು, ಶ್ರಾದ್ಧಾದಿ ಕರ್ಮಗಳನ್ನು ಮಾಡದವರು, ಗುರು ಸೇವೆಯನ್ನು ಬಿಟ್ಟವರು, ಮಂತ್ರವನ್ನು

ಅಮಂತ್ರಾ ಭಿನ್ನಮರ್ಯಾದಾ ಏತೇ ಸರ್ವೇಽಧಮಾಧಮಾಃ ।
ಅಸಂಭಾಷ್ಯಾ ಇಮೇ ದುಷ್ಟಾಃ ಸರ್ವೇ ನಿರಯಗಾಮಿನಃ　　॥ ೧೫ ॥

ಅಮೇಧ್ಯಾಸ್ತೇ ದುರಾಚಾರಾ ಅಪೂಜ್ಯಾಶ್ಚ ಸಮಂತತಃ ।
ಖಡ್ಗೋಪಜೀವಿಕಾಃ ಪ್ರೇಷ್ಯಾ ಗೋವಾಹನರತಾ ದ್ವಿಜಾಃ　　॥ ೧೬ ॥

ಕಾರುವೃತ್ತ್ಯುಪಜೀವಾಶ್ಚ ಋಣವಾರ್ಧುಷಿಕಾಶ್ಚ ಯೇ ।
ಬಾಲಾಪಣ್ಯಾಭಿಚಾರಾಶ್ಚ ಅಂತ್ಯಜಾಶ್ರಯಮಾಶ್ರಿತಾಃ　　॥ ೧೭ ॥

ಕೃತಘ್ನಾಶ್ಚ ಗುರುಘ್ನಾಶ್ಚ ಏತೇ ಸರ್ವಾಧಮಾಃ ಸ್ಮೃತಾಃ ।
ಯೇ ಚೈವಾನ್ಯೇ ಹತಾಚಾರಾಃ ಪಾಷಂಡಾ ಧರ್ಮನಿಂದಕಾಃ　　॥ ೧೮ ॥

ದೂಷಕಾ ದೇವಭೇದಾನಾಮೇತೇ ಬ್ರಹ್ಮದ್ವಿಷೋ ದ್ವಿಜಾಃ ।
ತಥಾಪಿ ಬ್ರಾಹ್ಮಣಶ್ಚೈವ ನ ಹಂತವ್ಯಃ ಕದಾಚನ　　॥ ೧೯ ॥

ಏನಂ ಹತ್ವಾ ದ್ವಿಜಶ್ರೇಷ್ಠ ಬ್ರಹ್ಮಹಾ ಪುರುಷೋ ಭವೇತ್ ।
ಅಂತ್ಯಜಾತಿಷು ಮ್ಲೇಚ್ಛೇಷು ತಥಾ ಚಂಡಾಲಜಾತಿಷು　　॥ ೨೦ ॥

---

ತಿಳಿಯದವರು, ಮರ್ಯಾದೆಯನ್ನು ಬಿಟ್ಟವರು, ಇವರೆಲ್ಲರೂ ಬ್ರಾಹ್ಮಣರಲ್ಲಿ ಅಧಮರಲ್ಲಿಯೂ ಅಧಮರು. ಇವರನ್ನು ಮಾತನಾಡಿಸಬಾರದು. ಇವರೆಲ್ಲರೂ ದುಷ್ಟರು. ನರಕಗಾಮಿಗಳು.

೧೬-೧೯. ಇವರೆಲ್ಲರೂ ಪವಿತ್ರರಲ್ಲದವರು, ದುಷ್ಟವಾದ ಆಚಾರವುಳ್ಳವರು, ಪೂಜೆಗೆ ಯೋಗ್ಯರಲ್ಲ. ಶಸ್ತ್ರವನ್ನು ಹಿಡಿದು ಜೀವಿಸುವವರು, ಸಂಬಳವನ್ನು ಹೊಂದಿ ಸೇವೆ ಸಲ್ಲಿಸುತ್ತಿರುವವರು, ಗೋವಿನ ವಾಹನದಲ್ಲಿ ಕೂತುಕೊಳ್ಳುವವರು, ಶಿಲ್ಪ ಕೆಲಸದಲ್ಲಿ ಜೀವಿಸುವವರು, ಬಡ್ಡಿಯಿಂದ ಜೀವಿಸುವವರು, ಹೆಂಗಸರಿಂದ ಜೀವಿಸುವವರು ಅಂಗಡಿಯಿಟ್ಟು ಜೀವಿಸುವವರು. ಮಾಟ ಮುಂತಾದುವನ್ನು ಮಾಡುವವರು, ನಿಕೃಷ್ಟನ ಆಶ್ರಯವನ್ನು ಹೊಂದಿರುವವರು, ಉಪಕಾರ ಸ್ಮರಣೆ ಇಲ್ಲದವರು, ಗುರುವಿಗೆ ದ್ರೋಹಮಾಡುವವರು, ಇವರೆಲ್ಲರೂ ಎಲ್ಲರಿಗಿಂತಲೂ ಅಧಮರು. ಇನ್ನೂ ಅನೇಕರಾದ ದುರಾಚಾರಿಗಳು, ಪಾಷಂಡಿಗಳು, ಧರ್ಮವನ್ನು ನಿಂದಿಸುವವರು, ದೇವತೆಗಳ ಭೇದವನ್ನು ನಿಂದಿಸುವವರು, ಇವರೆಲ್ಲರೂ ಬ್ರಹ್ಮ ದ್ವೇಷಿಗಳು. ಆದರೂ ಕೂಡ ಇವರನ್ನು ಯಾವ ಕಾರಣದಿಂದಲೂ ಕೊಲ್ಲಬಾರದು.

೨೦-೨೧. ಇಂತಹ ಅಯೋಗ್ಯನನ್ನು ಕೊಂದರೂ ಅವನಿಗೆ ಬ್ರಹ್ಮಹತ್ಯೆ ದೋಷವು ಬರುವುದು. ಅನ್ಯ ಜಾತಿಯರಲ್ಲಿ ಮ್ಲೇಂಛರಲ್ಲಿ ಚಂಡಾಲರಲ್ಲಿ, ಸೇರಿ ಅವರ

ಪತಿತೋ ವಾನ್ನಯೋನಿಭ್ಯಾಂ ನ ಹಂತವ್ಯಃ ಕಥಂಚನ ।
ಸರ್ವಜಾತಿಸ್ತ್ರಿಯಂ ಗತ್ವಾ ಸರ್ವಾಭಕ್ಷ್ಯಸ್ಯ ಭಕ್ಷಣಾತ್ ॥
ದ್ವಿಜತ್ವಂ ನ ವಿನಶ್ಯೇತ ಪುಣ್ಯಾದ್ವಿಪ್ರೋ ಭವೇತ್ಪುನಃ ॥ ೨೦ ॥

॥ ನಾರದ ಉವಾಚ ॥

ಈದೃಶಂ ದುಷ್ಕೃತಂ ಕೃತ್ವಾ ಪಶ್ಚಾತ್ಪುಣ್ಯಂ ಸಮಾಚರೇತ್ ।
ಕಾಂ ಗತಿಂ ಯಾತ್ಯಸೌ ವಿಪ್ರಃ ಸರ್ವಲೋಕಪಿತಾಮಹ ॥ ೨೨ ॥

॥ ಬ್ರಹ್ಮೋವಾಚ ॥

ಕೃತ್ವಾ ಸರ್ವಾಣಿ ಪಾಪಾನಿ ಪಶ್ಚಾದ್ಯಸ್ತು ಜಿತೇಂದ್ರಿಯಃ ।
ಮುಚ್ಯತೇ ಸರ್ವಪಾಪೇಭ್ಯಃ ಪುನರ್ಬ್ರಹ್ಮತ್ವಮರ್ಹತಿ ॥ ೨೩ ॥

ಶೃಣು ಪುತ್ರ ಕಥಾಂ ರಮ್ಯಾಂ ವಿಚಿತ್ರಾಂ ಚ ಪುರಾತನೀಂ ।
ಕಸ್ಯಚಿದ್ಬ್ರಾಹ್ಮಣಸ್ಯಾಪಿ ಯೌವನಾಢ್ಯಃ ಸುತೋಽಭವತ್ ॥ ೨೪ ॥

---

ಅನ್ನದಿಂದ ಅಥವಾ ಅವರ ಸ್ತ್ರೀ ಸಂಬಂಧದಿಂದ ಪತಿತನಾಗಿದ್ದರೂ ಅವನನ್ನು ಕೊಲ್ಲಬಾರದು. ಯಾವ ಜಾತಿಯ ಹೆಂಗಸಿನ ಸಂಬಂಧವನ್ನು ಮಾಡಿದರೂ ಯಾವ ಅಯೋಗ್ಯರ ಮನೆಯಲ್ಲಿ ಅನ್ನವನ್ನು ತಿಂದರೂ, ಅವನಿಗೆ ಬ್ರಾಹ್ಮಣ್ಯವು ಹೋಗುವುದಿಲ್ಲ, ಮತ್ತೆ ಪುಣ್ಯವಶದಿಂದ ವಿಪ್ರನಾಗಬಹುದು.

೨೨. ನಾರದನು ಹೇಳಿದನು– ಈ ರೀತಿಯಾದ ಕೆಟ್ಟಕೆಲಸಗಳನ್ನು ಮಾಡಿದನಂತರ ಪುಣ್ಯ ಕೆಲಸವನ್ನು ಮಾಡಿದ ಆ ಬ್ರಾಹ್ಮಣನು ಯಾವ ಗತಿಯನ್ನು ಹೊಂದುತ್ತಾನೆಂಬುದನ್ನು ತಿಳಿಸು.

೨೩. ಬ್ರಹ್ಮನು ಹೇಳಿದನು– ಆ ಮನುಷ್ಯನು ಅನೇಕವಾದ ಪಾಪಗಳನ್ನು ಮಾಡಿದರೂ ಆಮೇಲೆ ಇಂದ್ರಿಯ ನಿಗ್ರಹವನ್ನು ಮಾಡಿದರೆ ಆ ಪಾಪವೆಲ್ಲವನ್ನೂ ಕಳೆದುಕೊಂಡು ಮತ್ತೆ ವಿಪ್ರತ್ವವನ್ನು ಹೊಂದುತ್ತಾನೆ.

೨೪. ಎಲೈ ಮಗನೇ! ಒಂದು ವಿಚಿತ್ರವಾದ ಕಥೆಯನ್ನು ಹೇಳುತ್ತೇನೆ, ಕೇಳು. ಒಬ್ಬ ಬ್ರಾಹ್ಮಣನಿಗೆ ಒಬ್ಬ ಪ್ರಾಯದ ಮಗನಿದ್ದನು.

ತತೋ ಯೌವನಸಂಪತ್ತೇರ್ಮೋಹಾಚ್ಚ ಪೂರ್ವಕರ್ಮಣಃ ।
ಚಾಂಡಾಲೀಮಗಮತ್ಸದ್ಯಸ್ತಸ್ಯಾಃ ಪ್ರಿಯತರೋಽಭವತ್ ॥ ೨೫ ॥

ತಸ್ಯಾಮುತ್ಪಾದಿತಾಸ್ತೇನ ಪುತ್ರಾ ದುಹಿತರಸ್ತಥಾ ।
ಸ್ವಕುಟುಂಬಂ ಪರಿತ್ಯಜ್ಯ ಗೃಹೇ ತಸ್ಯಾಶ್ಚಿರಂ ಸ್ಥಿತಃ ॥ ೨೬ ॥

ಅನ್ಯಾಭಕ್ಷ್ಯಂ ನ ಚಾಶ್ನಾತಿ ಘೃಣಯಾ ಚ ಸುರಾಂ ತ್ಯಜೇತ್ ।
ತಮುವಾಚ ಸದಾ ಸಾ ಚ ಭಕ್ಷಸ್ವಾನ್ಯತರಾಂ ಸುರಾಂ ॥ ೨೭ ॥

ತಾಮುವಾಚ ತದಾಽಶೌಚಂ ಗದಿತುಂ ನಾರ್ಹಸಿ ಪ್ರಿಯೇ ।
ಉತ್ಕಾರೋ ಜಾಯತೇ ತಸ್ಯಾಃ ಶ್ರವಣಾತ್ಸತತಂ ಮಮ ॥ ೨೮ ॥

ಏಕದಾ ಸ ಮೃಗಾನ್ವೇಷಾಚ್ಛ್ರಾಂತಃ ಸುಪ್ತೋ ಗೃಹೇ ದಿವಾ ।
ಗೃಹೀತ್ವಾ ಸಾ ಸುರಾಂ ತಸ್ಯ ಹಸಿತ್ವಾ ಚ ಮುಖೇ ದದೌ ॥ ೨೯ ॥

---

೨೫. ಯೌವನದ ಭರದಿಂದಲೂ, ಪೂರ್ವಕರ್ಮದ ಬಲದಿಂದಲೂ, ಒಬ್ಬ ಚಂಡಾಲಜಾತಿಯ ಹೆಂಗಸನ್ನು ಮೋಹಿಸಿ ಅವಳಲ್ಲಿ ರಮಿಸಿ ಅವಳಿಗೆ ಪ್ರೀತಿಪಾತ್ರನಾದನು.

೨೬. ಆಕೆಯಲ್ಲಿ ಆವನಿಗೆ ಹೆಣ್ಣು ಮಕ್ಕಳೂ ಗಂಡು ಮಕ್ಕಳೂ ಆದರು. ಇದರಿಂದ ಅವನು ತನ್ನ ಬ್ರಾಹ್ಮಣ ಸಂಸಾರವನ್ನು ಬಿಟ್ಟು ಈ ಚಂಡಾಲಿಯ ಮನೆಯಲ್ಲಿಯೇ ನಿಂತನು.

೨೭. ನಾಚಿಕೆಯಿಂದ ತಿನ್ನಬಾರದ ಮಾಂಸ ಮುಂತಾದುವನ್ನು ತಿನ್ನುತ್ತಿರಲಿಲ್ಲ. ಹೆಂಡವನ್ನು ಕುಡಿಯುತ್ತಿರಲಿಲ್ಲ. ಯಾವಾಗಲೂ ಆಕೆಯು ಅವನಿಗೆ ಈ ತಿಂಡಿಗಳನ್ನು ತಿನ್ನುವಂತೆಯೂ ಹೆಂಡವನ್ನು ಕುಡಿಯುವಂತೆಯೂ ಪ್ರೇರೇಪಿಸುತ್ತಿದ್ದಳು.

೨೮. ಆಗ ಅವನು ಅವಳಿಗೆ ನೀನು ಈ ಅಶುಚಿಯಾದ ವಿಧಿಯನ್ನು ಹೇಳಬೇಡ ಅದನ್ನು ಕೇಳಿದೊಡನೆಯೇ ನನಗೆ ವಾಂತಿ ಬರುವಂತಾಗುತ್ತದೆ ಎನ್ನುತ್ತಿದ್ದನು.

೨೯. ಒಂದು ದಿನ ಮೃಗಗಳನ್ನು ಹುಡಿಕಿ ಸಾಕಾಗಿ ಬಳಲಿ ಮನೆಯಲ್ಲಿ ಹಗಲಿನಲ್ಲಿ ನೆಲಸಿ ಮಲಗಿಕೊಂಡನು. ಆಕೆಯು ಹೆಂಡವನ್ನು ತಂದು ನಗುತ್ತಾ ಆತನ ಬಾಯಿಗೆ ಬಿಟ್ಟಳು.

ತತೋ ವಿಪ್ರಮುಖಾದಗ್ನಿಃ ಪ್ರಜಜ್ವಾಲ ಸಮಂತತಃ ।
ಜ್ವಾಲಾ ತು ಸಕುಟುಂಬಾಂ ತಾಮದಹಚ್ಚ ಗೃಹಂ ವಸು ॥ ೩೦ ॥

ಹಾಹಾ ಕೃತ್ವಾ ಸಮುತ್ಥಾಯ ವಿಲಲಾಪ ತದಾ ದ್ವಿಜಃ ।
ವಿಲಾಪಾಂತೇ ಚ ಜಿಜ್ಞಾಸಾ ಸಮಾರಬ್ಧಾ ಚ ತೇನ ಹಿ ॥ ೩೧ ॥

ಕುತಶ್ಚಾಗ್ನಿಃ ಸಮುದ್ಭೂತೋ ಗೃಹೇ ದಾಹಃ ಕಥಂ ಮಮ ।
ತತಃ ಖೇ ತಮುವಾಚೇದಂ ತೇಜಸ್ತೇ ಬ್ರಾಹ್ಮಣಸ್ಯ ಚ ॥ ೩೨ ॥

ಕಥಿತೇ ತದ್ಯಥಾವೃತ್ತೇ ಬ್ರಾಹ್ಮಣೋ ವಿಸ್ಮಯಂ ಗತಃ ।
ವಿಮೃಶ್ಯಾರ್ಥಮುವಾಚೇದಮುಪದೇಶಹಿತಂ ವಚಃ ॥ ೩೩ ॥

॥ ಬ್ರಾಹ್ಮಣ ಉವಾಚ ॥

ವಿಪ್ರ ನಷ್ಟಂ ಸುತೇಜಸ್ತೇ ತಸ್ಮಾದ್ಧರ್ಮಚರೋ ಭವ ॥ ೩೪ ॥

---

೩೦. ಆಗ ಆ ಬ್ರಾಹ್ಮಣನ ಮುಖದಿಂದ ಬೆಂಕಿಯು ಹುಟ್ಟಿ ಸುತ್ತಲೂ ಜ್ವಲಿಸುತ್ತ, ಅವಳನ್ನೂ, ಅವಳ ಮಕ್ಕಳನ್ನೂ, ಅವಳ ಮನೆ, ಹಣ, ದಿನಸಿಗಳನ್ನೆಲ್ಲಾ ಸುಟ್ಟಿತು.

೩೧. ಹಾಹಾ ಎಂದು ಕೂಗುತ್ತ ಮೇಲಕ್ಕೆದ್ದು ಆ ಬ್ರಾಹ್ಮಣನು ದುಃಖಿಸಿದನು. ದುಃಖ ಮುಗಿದ ನಂತರ ಆತನು ವಿಚಾರ ಮಾಡುವುದಕ್ಕೆ ಮೊದಲು ಮಾಡಿದನು.

೩೨. ಅಗ್ನಿಯು ಎಲ್ಲಿಂದ ಬಂದಿತು? ಹೇಗೆ ಹುಟ್ಟಿತು? ನನ್ನ ಮನೆಯು ಸುಡಲು ಕಾರಣವೇನು? ಎಂದು ಯೋಚಿಸುತ್ತಿರಲು ಆಗ ಅಂತರಿಕ್ಷದಿಂದ ಎಲೈ ಬ್ರಾಹ್ಮಣನೇ! ಇದು ನಿನ್ನ ಬ್ರಹ್ಮ ತೇಜಸ್ಸು. ಎಂದು ಉತ್ತರ ಬಂದಿತು.

೩೩. ಆಕಾಶವಾಣಿಯು ಇದ್ದ ಸ್ಥಿತಿಯನ್ನು ಹೇಳಲು, ಬ್ರಾಹ್ಮಣನು ಆಶ್ಚರ್ಯ ಪಟ್ಟನು. ಚೆನ್ನಾಗಿ ಯೋಚಿಸಿ ಉಪದೇಶಕ್ಕೆ ಯೋಗ್ಯವಾದ ಈ ಮಾತನ್ನು ಹೇಳಿದನು.

೩೪. ಬ್ರಾಹ್ಮಣನು ಹೇಳಿಕೊಂಡನು- ಎಲೈ ಬ್ರಾಹ್ಮಣನೇ! ನಿನ್ನ ಬ್ರಹ್ಮ ತೇಜಸ್ಸು ನಾಶವಾಯಿತು. ಆದ್ದರಿಂದ ಇನ್ನು ಮೇಲೆ ಧರ್ಮವನ್ನು ಮಾಡು.

॥ ಬ್ರಹ್ಮೋವಾಚ ॥

ತತೋ ಮುನಿವರಾನ್ಗತ್ವಾ ಪಪ್ರಚ್ಛಾತ್ಮಹಿತಂ ದ್ವಿಜಃ ।
ತಮೂಚುರ್ಮುನಯಃ ಸರ್ವೇ ದಾನಧರ್ಮಂ ಸಮಾಚರ ॥ ೩೫ ॥

॥ ಋಷಯ ಊಚುಃ ॥

ಪೂಯಂತೇ ಸರ್ವಪಾಪೇಭ್ಯೋ ಬ್ರಾಹ್ಮಣಾ ನಿಯಮೈರ್ವ್ರತೈಃ ।
ನಿಯಮಾನ್ ಶಾಸ್ತ್ರದೃಷ್ಟಾಂಶ್ಚ ಪೂತತಾರ್ಥಮುಪಾಚರ । ॥ ೩೬ ॥

ಚಾಂದ್ರಾಯಣಾಂಶ್ಚ ಕೃಚ್ಛ್ರಾಂಶ್ಚ ತಪ್ತಕೃಚ್ಛ್ರಾನ್ಪುನಃಪುನಃ ।
ಪ್ರಾಜಾಪತ್ಯಾಂಶ್ಚ ದಿವ್ಯಾಂಶ್ಚ ದೋಷಶೋಷಾಯ ಸತ್ವರಂ ॥ ೩೭ ॥

ಗಚ್ಛ ತೀರ್ಥಾನಿ ಪೂತಾನಿ ಗೋವಿಂದಾರಾಧನಂ ಕುರು ।
ಕ್ಷಯಮೇಷ್ಯಂತಿ ಪಾಪಾನಿ ನಚಿರೇಣಾಸಮಂತತಃ ॥ ೩೮ ॥

ಪುಣ್ಯತೀರ್ಥಪ್ರಭಾವಾಚ್ಚ ಗೋವಿಂದಸ್ಯ ಪ್ರಭಾವತಃ ।
ಕ್ಷಯಮೇಷ್ಯಂತಿ ಪಾಪಾನಿ ಬ್ರಹ್ಮತ್ವಂ ಪ್ರಾಪ್ಸ್ಯತೇ ಭವಾನ್ ॥ ೩೯ ॥

---

೩೫. ಬ್ರಹ್ಮನು ಹೇಳಿದನು- ಅನಂತರ ಈತನು ಋಷಿಶ್ರೇಷ್ಠರ ಬಳಿಗೆಹೋಗಿ ತನಗೆ ಒಳ್ಳೆಯದಾಗುವ ರೀತಿಯನ್ನು ಕೇಳಲು ಅವರೆಲ್ಲರೂ ದಾನಧರ್ಮಗಳನ್ನು ಮಾಡೆಂದು ಹೇಳಿದರು.

೩೬. ಋಷಿಗಳು ಹೇಳಿದರು- ಬ್ರಾಹ್ಮಣರು ನಿಯಮಗಳಿಂದಲೂ, ವ್ರತಗಳಿಂದಲೂ ಪಾಪಗಳನ್ನು ಕಳೆದುಕೊಂಡು ಪರಿಶುದ್ಧರಾಗುತ್ತಾರೆ. ಆದ್ದರಿಂದ ಶಾಸ್ತ್ರದಲ್ಲಿ ಹೇಳಿರುವ ನಿಯಮಗಳನ್ನೂ ಪವಿತ್ರವಾದ ಕೆಲಸಗಳನ್ನೂ ಮಾಡು

೩೭. ಚಾಂದ್ರಾಯಣಗಳು, ಕೃಚ್ಛ್ರಗಳು, ತಪ್ತಕೃಚ್ಛ್ರಗಳು ಇವನ್ನು ಪದೇ ಪದೇ ಮಾಡು. ಪ್ರಾಜಾಪತ್ಯಗಳನ್ನೂ ದಿವ್ಯವಾದ ವ್ರತಗಳನ್ನೂ. ದೋಷನಾಶಕ್ಕೋಸ್ಕರ ಮಾಡು.

೩೮. ತೀರ್ಥಯಾತ್ರೆಗಳನ್ನು ಮಾಡುತ್ತ ಗೋವಿಂದನ ಪೂಜೆಯನ್ನು ಮಾಡು ಪಾಪಗಳೆಲ್ಲವೂ ನಾಶವಾಗುತ್ತವೆ.

೩೯. ಪುಣ್ಯತೀರ್ಥಗಳ ಮಹಿಮೆಯಿಂದಲೂ ಗೋವಿಂದನ ಪ್ರಭಾವದಿಂದಲೂ ಪಾಪಗಳು ನಾಶವಾಗುತ್ತವೆ. ಮತ್ತು ನಿನಗೆ ಬ್ರಹ್ಮತ್ವವು ಬರುತ್ತದೆ.

ಶೃಣು ತಾತ ಯಥಾವೃತ್ತಂ ಕಥಯಾಮಃ ಪುರಾತನಂ ।
ಆಹಾರಾರ್ಥೀ ಪುರಾ ವತ್ಸ ಗರುಡೋ ವಿನತಾಸುತಃ ॥ ೪೦ ॥

ಪತಂಗೋಽಪಿ ಬಹಿಃ ಸಾಕ್ಷಾದಂಡಾನ್ನಿಸ್ಸೃತ್ಯ ಶಾವಕಃ ।
ಕ್ಷುಧಾರ್ಥೀ ಮಾತರಂ ಪ್ರಾಹ ಭಕ್ಷ್ಯಂ ಮೇ ದೀಯತಾಮಿತಿ ॥ ೪೧ ॥

ತತಃ ಪರ್ವತಸಂಕಾಶಂ ಗರುಡಂ ಚ ಮಹಾಬಲಂ ।
ದೃಷ್ಟ್ವಾ ಮಾತಾ ಮಹಾಭಾಗಾ ತನಯಂ ಹೃಷ್ಟಮಾನಸಾ ॥ ೪೨ ॥

॥ ವಿನತೋವಾಚ ॥

ಕ್ಷುಧಾಂ ತೇ ಬಾಧಿತುಂ ಪುತ್ರ ನ ಶಕ್ನೋಮಿ ಸಮಂತತಃ ।
ತವ ತಾತಸ್ತಪಸ್ತೇಪೇ ಲೌಹಿತ್ಯಸ್ಯೋತ್ತರೇ ತಟೇ ॥ ೪೩ ॥

ಕಶ್ಯಪೋ ನಾಮ ಧರ್ಮಾತ್ಮಾ ಸಾಕ್ಷಾಲ್ಲೋಕಪಿತಾಮಹಃ ।
ತತ್ರ ಗಚ್ಛಸ್ವ ಪಿತರಮೂಹ ಕಾಮಂ ಯಥಾ ತವ ।
ತಸ್ಯೋಪದೇಶತಸ್ತಾತ ಕ್ಷುಧಾ ತೇ ಶಮಮೇಷ್ಯತಿ ॥ ೪೪ ॥

---

೪೦-೪೧. ಅಪ್ಪ! ಹಿಂದಿನ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು. ಪಕ್ಷಿಯಾದ ಗರುಡನು ಮೊಟ್ಟೆಯಿಂದ ಹೊರಗೆ ಮರಿಯಾಗಿ ಹೊರಟ ಕೂಡಲೇ ಹಸಿವುಗೊಂಡು ಆಹಾರವನ್ನು ಅಪೇಕ್ಷಿಸುತ್ತ ತಾಯಿಯನ್ನು ಕುರಿತು ಅಮ್ಮ! ನನಗೆ ತಿಂಡಿಯನ್ನು ಕೊಡೆಂದು ಕೇಳಿದನು.

೪೨. ಆಗ ತಾಯಿಯು ಪರ್ವತದಂತೆಯೂ ಮಹಾಬಲಿಷ್ಠನಾಗಿಯೂ ಇರುವ ಆ ಮಗನನ್ನು ನೋಡಿ ಸಂತೋಷಗೊಂಡು ಇಂತೆಂದಳು.

೪೩-೪೪. ವಿನತೆಯು ಹೇಳಿದಳು- ಎಲೈ ಮಗುನೇ! ನಿನ್ನ ಹಸಿವನ್ನು ನಾಶ ಮಾಡಲು ನನಗೆ ಶಕ್ತಿಯಿಲ್ಲ. ನಿನ್ನ ತಂದೆಯು ಲೋಹಿತ್ಯ ನದಿಯ ಉತ್ತರದಡದಲ್ಲಿ ತಪಸ್ಸು ಮಾಡುತ್ತಿರುವನು. ಅವನು ಧರ್ಮಾತ್ಮನಾದ ಕಶ್ಯಪನು ಲೋಕಕ್ಕೆಲ್ಲಾ ತಂದೆಯು. ಅಲ್ಲಿಗೆ ಹೋಗಿ ಆತನನ್ನು ಕುರಿತು ನಿನ್ನ ಇಷ್ಟವನ್ನು ತಿಳಿಸು. ಅವನ ಬೋಧನೆಯಿಂದ ನಿನ್ನ ಹಸಿವು ಹೋಗುತ್ತದೆ.

॥ ಋಷಯ ಊಚುಃ ॥

ತತೋ ಮಾತುರ್ವಚಃ ಶ್ರುತ್ವಾ ವೈನತೇಯೋ ಮಹಾಬಲಃ ।
ಆಗಮತ್ಪಿತುರಭ್ಯಾಸಂ ಸ ಮುಹೂರ್ತಾನ್ಮನೋಜವಃ ॥ ೪೫ ॥

ದೃಷ್ಟ್ವಾ ತಾತಂ ಮುನಿಶ್ರೇಷ್ಠಂ ಜ್ವಲಂತಮಿವ ಪಾವಕಂ ।
ಪ್ರಣಮ್ಯ ಶಿರಸಾ ವಾಕ್ಯಮುವಾಚ ಪಿತರಂ ಖಗಃ ॥ ೪೬ ॥

॥ ವೈನತೇಯ ಉವಾಚ ॥

ಕ್ಷುಧಾರ್ತಃ ಸಮನುಪ್ರಾಪ್ತಃ ಸುತೋಽಹಂ ತೇ ಮಹಾತ್ಮನಃ ।
ಕ್ಷುಧಯಾ ಪೀಡಿತೋ ನಾಥ ಭಕ್ಷ್ಯಂ ಮೇದೀಯತಾಂ ಪ್ರಭೋ ॥ ೪೭ ॥

॥ ಋಷಯ ಊಚುಃ ॥

ತತೋ ಧ್ಯಾನಂ ಸಮಾಲಭ್ಯ ಜ್ಞಾತ್ವಾ ತ್ವಂ ವಿನತಾಸುತಂ ।
ಪುತ್ರಸ್ನೇಹಾದ್ವಚಶ್ಚೇದಂ ಪ್ರೋವಾಚ ಮುನಿಸತ್ತಮಃ ॥ ೪೮ ॥

॥ ಕಶ್ಯಪ ಉವಾಚ ॥

ಅನೇಕಶತಸಾಹಸ್ರಾ ನಿಷಾದಾಃ ಸರಿತಾಂ ಪತೇಃ ।
ತೀರೇ ತಿಷ್ಠಂತಿ ಪಾಪಿಷ್ಠಾಸ್ತಾಂಸ್ತ್ವಂ ಭಕ್ಷ ಸುಖೀ ಭವ ॥ ೪೯ ॥

---

೪೫. ಋಷಿಗಳು ಹೇಳಿದರು- ಅನಂತರ ತಾಯಿಯ ಮಾತನ್ನು ಕೇಳಿ ಆ ಬಲಿಷ್ಠನಾದ ಗರುಡನು ಕ್ಷಣಕಾಲದಲ್ಲಿಯೇ ತಂದೆಯ ಬಳಿಗೆ ಹೋದನು.

೪೬. ಉರಿಯುತ್ತಿರುವ ಬೆಂಕಿಯಂತಿರುವ ಮುನಿ ಶ್ರೇಷ್ಠನಾದ ತಂದೆಯನ್ನು ನೋಡಿ, ಗರುಡನು ನಮಸ್ಕರಿಸಿ ಇಂತೆಂದನು.

೪೭. ವೈನತೇಯನು ಹೇಳಿದನು- ಅಪ್ಪ ! ನಾನು ನಿನ್ನ ಮಗನು. ಹಸಿವುಗೊಂಡು ಇಲ್ಲಿಗೆ ಬಂದಿದ್ದೇನೆ. ಹಸಿವುಗೊಂಡ ನನಗೆ ಸ್ವಾಮಿ ! ತಿಂಡಿಯನ್ನು ಕೊಡು.

೪೮. ಋಷಿಯು ಹೇಳಿದನು- ಆಗ ಆತನು ಧ್ಯಾನವನ್ನು ಮಾಡಿ ಈತನು ವಿನತೆಯ ಮಗನೆಂದು ತಿಳಿದು ಪುತ್ರ ಸ್ನೇಹದಿಂದ ಅವನನ್ನು ಕುರಿತು ಇಂತೆಂದನು.

೪೯. ಕಶ್ಯಪನು ಹೇಳಿದನು- ಸಮುದ್ರ ತೀರದಲ್ಲಿ ಅನೇಕ ಸಾವಿರ ನಿಷಾದರಿದ್ದಾರೆ. ಅವರನ್ನು ನೀನು ತಿಂದು ಸುಖಿಯಾಗು.

ತೀರ್ಥಮುತ್ಸಾದಯಂತಿ ಸ್ಮ ತೀರ್ಥಕಾಕಾ ದುರಾಸದಾಃ ।
ವಿನಾ ವಿಪ್ರಂ ನಿಷಾದೇಷು ವಸ ತ್ವಂ ಹ್ಯವಿಲಕ್ಷಿತಂ ॥ ೫೦ ॥

॥ ಋಷಯ ಊಚುಃ ॥

ಇತ್ಯುಕ್ತಃ ಪ್ರಯಯೌ ಪಕ್ಷೀ ಭಕ್ಷಯಾಮಾಸ ತಾಂಸ್ತತಃ ।
ಅಲಕ್ಷ್ಯಭಾವೋ ವಿಪ್ರೋಽಪಿ ಗಿಲಿತಸ್ತೇನ ಪಕ್ಷಿಣಾ ॥ ೫೧ ॥

ಸ ತಸ್ಯ ಗಲಕೇ ಗಾಢಂ ಲಾಲಪೀತಿ ದ್ವಿಜಸ್ತದಾ ।
ವಮಿತುಂ ಗಿಲಿತುಂ ಚಾಪಿ ನ ಶಶಾಕ ದ್ವಿಜೋತ್ತಮಃ ॥ ೫೨ ॥

ಗತ್ವಾಽಥ ಪಿತರಂ ಪ್ರಾಹ ಕಿಂ ತ್ವೇತದಿತಿ ಮೇ ಪಿತಃ ।
ಲಗ್ನಂ ಮೇ ಗಲಕೇ ಸತ್ತ್ವಂ ಪ್ರತಿಕರ್ತುಂ ನ ಶಕ್ನುಯಾಂ ॥ ೫೩ ॥

॥ ಋಷಯ ಊಚುಃ ॥

ತಸ್ಯ ತದ್ವಚನಂ ಶ್ರುತ್ವಾ ಕಶ್ಯಪಸ್ತಮುವಾಚ ಹ ॥ ೫೪ ॥

---

೫೦. ಅವರೆಲ್ಲರೂ ತೀರ್ಥದಲ್ಲಿ ಸೇರಿಕೊಂಡು ತೀರ್ಥವನ್ನು ನಾಶ ಮಾಡುತ್ತಾರೆ. ಅವರಲ್ಲಿ ಹೋಗಿ ವಾಸಮಾಡುತ್ತ ಬ್ರಾಹ್ಮಣನನ್ನು ಬಿಟ್ಟು ಉಳಿದವರನ್ನು ತಿನ್ನು.

೫೧. ಋಷಿಗಳು ಹೇಳಿದರು– ಹೀಗೆ ಹೇಳಲು ಆ ಗರುಡನು ಅಲ್ಲಿಗೆ ಹೊರಟು ಹೋಗಿ, ಅಲ್ಲಿ ಅವರನ್ನು ತಿಂದನು. ಆಗ ನೋಡಿದರೆ ಬ್ರಾಹ್ಮಣನೆಂದು ಗೊತ್ತಾಗದ ಒಬ್ಬನನ್ನು ಆ ಪಕ್ಷಿಯು ತಿಂದಿತು.

೫೨. ಆ ಬ್ರಾಹ್ಮಣನು ಆ ಹಕ್ಕಿಯ ಗಂಟಲಿನಲ್ಲಿ ಸಿಕ್ಕಿಕೊಂಡು ಉಗಿಯುವುದಕ್ಕಾಗಲೀ, ನುಂಗುವುದಕ್ಕಾಗಲಿ, ಸಾಧ್ಯವಾಗದಂತಾದನು.

೫೩. ಅನಂತರ ತಂದೆಯ ಬಳಿಗೆ ಹೋಗಿ ಎಲೈ ತಂದೆಯೇ! ಇದೇನು? ಯಾವುದೋ ಪ್ರಾಣಿಯು ನನ್ನ ಗಂಟಲಿನಲ್ಲಿ ಸಿಕ್ಕಿಕೊಂಡಿದೆ. ಅದಕ್ಕೆ ಪ್ರತೀಕಾರ ಮಾಡಲು ನನ್ನಿಂದಾಗುವಂತಿಲ್ಲ. ಎಂದನು

೫೪. ಋಷಿಗಳು ಹೇಳಿದರು– ಆಗ ಗರುಡನ ಮಾತನ್ನು ಕೇಳಿ ಕಶ್ಯಪನು ಇಂತೆಂದನು

॥ ಕಶ್ಯಪ ಉವಾಚ ॥

ಮಯೋಕ್ತಂ ತೇ ಪುರಾ ವತ್ಸ ಬ್ರಾಹ್ಮಣೋಽಯಂ ನ ಬುಧ್ಯಸೇ ॥ ೫೫ ॥

॥ ಋಷಯ ಊಚುಃ ॥

ಇತ್ಯುಕ್ತ್ವಾ ಚ ಮುನಿರ್ಧೀಮಾನ್ದ್ವಿಜಂ ಪ್ರಾಹ ಸ ಧಾರ್ಮಿಕಂ ॥ ೫೬ ॥

॥ ಕಶ್ಯಪ ಉವಾಚ ॥

ಆಗಚ್ಛತಾಂ ಮಮಾಸನ್ನಂ ಹಿತಂ ತೇ ಪ್ರವದಾಮ್ಯಹಂ ॥ ೫೭ ॥

॥ ಋಷಯ ಊಚುಃ ॥

ತಮುವಾಚ ತದಾ ವಿಪ್ರಃ ಕಶ್ಯಪಂ ಮುನಿಪುಂಗವಂ ॥ ೫೮ ॥

॥ ವಿಪ್ರ ಉವಾಚ ॥

ಮನ್ಯೇತೇ ಸುಹೃದೋ ನಿತ್ಯಂ ಸರ್ವೇ ಸಂಬಂಧಿನಃ ಪ್ರಿಯಾಃ ।
ಶ್ವಶುರಾಃ ಶ್ಯಾಲಕಾಶ್ಚಾಪ್ತಾಃ ಸಬಾಲಾಶ್ಚ ತಥಾಽಪರೇ ॥
ಏತೈಃ ಸಹ ಪ್ರಯಾಸ್ಯಾಮಿ ನಿರಯಂ ವಾಽಪಿ ವಾ ಶಿವಂ ॥ ೫೯ ॥

---

೫೫. ಕಶ್ಯಪನು ಹೇಳಿದನು- ಎಲೈ ಮಗುವೇ ! ಬ್ರಾಹ್ಮಣನನ್ನು ತಿನ್ನಬೇಡ ವೆಂದು ಮೊದಲೇ ಹೇಳಿದೆನು. ಇವನು ಬ್ರಾಹ್ಮಣನು. ನಿನಗೆ ಗೊತ್ತಾಗಲಿಲ್ಲ

೫೬. ಋಷಿಗಳು ಹೇಳಿದರು- ಹೀಗೆಂದು ಗರುಡನಿಗೆ ಹೇಳಿ ಒಳಗಿರುವ ಬ್ರಾಹ್ಮಣನನ್ನು ಕುರಿತು ಆ ಕಶ್ಯಪನು ಇಂತೆಂದನು.

೫೭. ಕಶ್ಯಪನು ಹೇಳಿದನು- ಎಲೈ ಬ್ರಾಹ್ಮಣನೇ ! ನನ್ನ ಹತ್ತಿರಕ್ಕೆ ಬಾ, ನಾನು ನಿನಗೆ ಒಳ್ಳೆಯದಾಗುವ ಮಾತನ್ನು ಹೇಳುತ್ತೇನೆ.

೫೮. ಋಷಿಗಳು ಹೇಳಿದರು- ಆಗ ಆ ಬ್ರಾಹ್ಮಣನು ಕಶ್ಯಪನನ್ನು ಕುರಿತು ಇಂತೆಂದನು.

೫೯. ವಿಪ್ರನು ಹೇಳಿದನು- ನನಗೆ ಇವರೆಲ್ಲರೂ ಸ್ನೇಹಿತರು, ಸಂಬಂಧಿಗಳು, ಪ್ರೀತಿಪಾತ್ರರು, ಮಾವಂದಿರು, ಮೈದಂದಿರು, ಆಪ್ತರು, ಮಕ್ಕಳು, ಇವರಾಗಿದ್ದಾರೆ. ಇವರ ಜೊತೆಯಲ್ಲಿಯೇ ಸ್ವರ್ಗವನ್ನಾಗಲಿ, ನರಕವನ್ನಾಗಲಿ, ಹೊಂದುತ್ತೇನೆ

॥ ಋಷಯ ಊಚುಃ ॥

ತಸ್ಯ ತದ್ವಚನಂ ಶ್ರುತ್ವಾ ವಿಸ್ಮಿತಃ ಕಶ್ಯಪೋಽಬ್ರವೀತ್ ॥ ೬೦ ॥

॥ ಕಶ್ಯಪ ಉವಾಚ ॥

ದ್ವಿಜಾನಾಂ ಚ ಕುಲೇ ಜಾತಶ್ಚಾಂಡಾಲೇ ಪತಿತೋ ಭವಾನ್ ।
ಪುರುಷಾಸ್ತೇ ಪ್ರತಿಷ್ಠಂತಿ ಘೋರೇ ಚ ನಿರಯೇ ಧ್ರುವಂ ॥ ೬೧ ॥

ಚಿರಾಯ ನಿಷ್ಕೃತಿಸ್ತೇಷಾಂ ನೈವಾಸ್ತೀತಿ ಕಥಂಚನ ।
ಸರ್ವಾಂಶ್ಚೈವ ದುರಾಚಾರಾಂಶ್ಚಾಂಡಾಲಾನ್ಪಾಪಿನಃ ॥ ೬೨ ॥

ದೋಷಾಂಸ್ತ್ಯಕ್ತ್ವಾ ನರಃ ಪಶ್ಚಾತ್ಸುಖೀ ಭವತಿ ನಾನ್ಯಥಾ ।
ಅಜ್ಞಾನಾದ್ಯದಿ ವಾ ಮೋಹಾತ್ಕೃತ್ವಾ ಪಾಪಂ ಸುದಾರುಣಂ ॥ ೬೩ ॥

ತತೋ ಧರ್ಮಂ ಚರೇದ್ಯಸ್ತು ಸೋಽಪಿ ಗಚ್ಛೇತ್ಪರಾಂ ಗತಿಂ ।
ಪಾಪಕೃನ್ನ ಚರೇದ್ಧರ್ಮಂ ಪಾಪೇ ಕುರ್ಯಾನ್ಮತಿಂ ಪುನಃ ॥ ೬೪ ॥

---

೬೦. ಋಷಿಗಳು ಹೇಳಿದರು-- ಈ ಬ್ರಾಹ್ಮಣನ ಈ ಮಾತನ್ನು ಕೇಳಿ ಆಶ್ಚರ್ಯಪಟ್ಟು ಕಶ್ಯಪನು ಇಂತೆಂದನು.

೬೧. ಕಶ್ಯಪನು ಹೇಳಿದನು-- ನೀನು ಬ್ರಾಹ್ಮಣರ ಕುಲದಲ್ಲಿ ಹುಟ್ಟಿದ್ದೀಯೆ ಚಂಡಾಲರಲ್ಲಿ ಜಾತಿಕೆಟ್ಟು ಸೇರಿದ್ದೀಯೆ, ಅವರೆಲ್ಲರೂ ಮಹಾ ನರಕದಲ್ಲಿ ಬೀಳುತ್ತಾರೆ, ಖಂಡಿತ.

೬೨-೬೪. ಇವರಿಗೆ ಬಹು ಕಾಲದವರೆಗೂ ಪಾಪಕ್ಕೆ ಪ್ರತೀಕಾರವೇ ಇರುವುದಿಲ್ಲ, ಇವರು ದುರಾಚಾರಿಗಳು, ಚಂಡಾಲರು, ಪಾಪಿಗಳು, ದೋಷಗಳನ್ನು ಬಿಟ್ಟರೆ ಆಮೇಲೆ ಮನುಷ್ಯನು ಸುಖ ಹೊಂದುತ್ತಾನೆ. ಅಜ್ಞಾನದಿಂದಲೋ ಆಸೆಯಿಂದಲೋ ಮಹತ್ತಾದ ಪಾಪವನ್ನು ಮಾಡಿದರೂ ಅನಂತರ ಧರ್ಮ ಕಾರ್ಯಗಳನ್ನು ಮಾಡಿದರೆ, ಅವನು ಉತ್ತಮ ಗತಿಯನ್ನು ಹೊಂದುತ್ತಾನೆ, ಪಾಪಿಯಾದವನು ಧರ್ಮವನ್ನು ಮಾಡುವುದಿಲ್ಲ. ಮತ್ತೆ ಪಾಪಕೆಲಸದಲ್ಲಿಯೇ ಅವನು ಮನಸ್ಸು ಮಾಡುತ್ತಾನೆ.

ಶಿಲಾನಾವಂ ಯಥಾಽರೂಢಃ ಸಾಗರೇ ಸನ್ನಿಮಜ್ಜತಿ ।
ಕೃತ್ವಾ ಸರ್ವಾಣಿ ಪಾಪಾನಿ ತಥಾ ದುರ್ಗತಿಸಂಚಯಂ ॥
ಉಪಶಾಂತೋ ಭವೇತ್ಪಶ್ಚಾತ್ತಂ ದೋಷಂ ಶಮಯಿಷ್ಯತಿ ॥ ೬೫ ॥

॥ ಋಷಯ ಊಚುಃ ॥

ತಮುವಾಚ ಮಹಾಪ್ರಾಜ್ಞಂ ದ್ವಿಜಂ ಮುನಿವರೋತ್ತಮಂ ॥ ೬೬ ॥

॥ ವಿಪ್ರ ಉವಾಚ ॥

ಯದಿ ಮಾಂ ನ ಜಹಾತೀತಿ ಖಗಃ ಸರ್ವಾಂಹಿ ಬಾಂಧವಾನ್ ।
ತತಃ ಪ್ರಾಣಂ ಚ ತ್ಯಕ್ಷ್ಯಾಮಿ ಖಗೇ ಮರ್ಮಾವಘಾತಿನಿ ॥
ನೋ ಚೇತ್ತ್ಯಜತು ಮೇ ಬಂಧೂನ್ ಪ್ರತಿಜ್ಞಾ ಮೇ ದೃಢಾತ್ಮನಃ ॥ ೬೭ ॥

॥ ಋಷಯ ಊಚುಃ ॥

ತತಸ್ತಾರ್ಕ್ಷ್ಯಮುವಾಚೇದಂ ಮುನಿರ್ಬ್ರಹ್ಮವಧಾದ್ಭಿಯಾ ॥ ೬೮ ॥

---

೬೫ ಅಂತಹವನು ಸಾಗರದಲ್ಲಿ ಕಲ್ಲಿನ ದೋಣಿಯಲ್ಲಿ ಹೋಗಿ ಮುಳುಗುತ್ತಾನೆ, ನರಕವೆಲ್ಲವನ್ನೂ ಕೂಡಿ ಹಾಕಿಕೊಂಡು ಇರುವವನು, ಅವನಿಗೆ ಶಾಂತಸ್ಥಿತಿ, ಬಂದನಂತರ, ಆವನು ಆ ದೋಷವನ್ನು ಹಾಳುಮಾಡಿಕೊಳ್ಳುತ್ತಾನೆ.

೬೬. ಋಷಿಗಳು ಹೇಳಿದರು– ಆಗ ಆ ಬ್ರಾಹ್ಮಣನು ಪ್ರಾಜ್ಞನಾದ ಋಷಿಯನ್ನು ಕುರಿತು ಇಂತೆಂದನು.

೬೭ ವಿಪ್ರನು ಹೇಳಿದನು-- ಆ ಪಕ್ಷಿಯು ನನ್ನ ಬಂಧುಗಳೆಲ್ಲರನ್ನೂ ನನ್ನನ್ನೂ ಬಿಡದಿದ್ದ ಪಕ್ಷದಲ್ಲಿ ಇದರ ಮರ್ಮವನ್ನು ಚುಚ್ಚುವಂತಹ ಜಾಗದಲ್ಲಿ ಪ್ರಾಣಗಳನ್ನು ಬಿಡುತ್ತೇನೆ. ನನ್ನ ಬಂಧುಗಳನ್ನು ಬಿಡದಿದ್ದರೆ ಹೀಗೆ ಮಾಡುವುದೇ ನನ್ನ ಪ್ರತಿಜ್ಞೆಯು.

೬೮. ಋಷಿಗಳು ಹೇಳಿದರು– ಆಗ ಬ್ರಹ್ಮಹತ್ಯಾದೋಷದ ಹೆದರಿಕೆಯಿಂದ, ಆ ಕಶ್ಯಪನು ಗರುಡನನ್ನು ಕುರಿತು ಇಂತೆಂದನು

॥ ಕಶ್ಯಪ ಉವಾಚ ॥

ಉದ್ವಮೈತಾನ್ಸವಿಪ್ರಾಂಶ್ಚ ಮ್ಲೇಚ್ಛಾನೇತಾನ್ಸಮಂತತಃ ॥ ೬೯ ॥

॥ ಋಷಯ ಊಚುಃ ॥

ವನೇಷು ಪರ್ವತಾಂತೇಷು ದಿಕ್ಷು ತಾನ್ಸತಗೇಶ್ವರಃ ।
ಉದ್ವಮಾಮ ತತಃ ಶೀಘ್ರಂ ದೋಷಜ್ಞಃ ಪಿತುರಾಜ್ಞಯಾ ॥ ೭೦ ॥

ತತಃ ಪೂರ್ವೇऽಭವನ್ಮ್ಲೇಚ್ಛಾ ಅಕೇಶಾಃ ಶ್ಮಶ್ರುವರ್ಜಿತಾಃ ।
ಯವನಾ ಭೋಜನಪ್ರೀತಾಃ ಕಿಂಚಿಚ್ಛ್ಮಶ್ರುಯುತಾಶ್ಚ ಯೇ ॥ ೭೧ ॥

ಅಗ್ನೌ ಚ ನಗ್ನಕಾಃ ಪಾಪಾ ದಕ್ಷಿಣಸ್ಯಾಮವಾಚಕಾಃ ।
ಘೋರಾಃ ಪ್ರಾಣಿವಧೇ ಪ್ರೀತಾ ದುರಾತ್ಮಾನೋ ಗವಾಶಿನಃ ॥ ೭೨ ॥

ನೈಋತೇ ಕುವದಾಃ ಪಾಪಾ ಗೋಬ್ರಾಹ್ಮಣವಧೋದ್ಯತಾಃ ।
ಖರ್ಪರಾಃ ಪಶ್ಚಿಮೇ ಪೂರ್ವೇ ನಿವಸಂತಿ ಚ ದಾರುಣಾಃ ॥ ೭೩ ॥

---

೬೯ ಕಶ್ಯಪನು ಹೇಳಿದನು– ಎಲೈ ಗರುಡನೇ ! ನೀನು ತಿಂದಿರುವ ಆ ಮ್ಲೇಂಛರನ್ನೂ ಈ ಬ್ರಾಹ್ಮಣನನ್ನೂ ಹೊರಗೆ ಉಗಿ, ಎಂದನು.

೭೦. ಋಷಿಗಳು ಹೇಳಿದರು– ಆಗ ದೋಷವನ್ನು ಬಲ್ಲ ಆ ಗರುಡನು ತಂದೆಯ ಅಪ್ಪಣೆಯಂತೆ ಅವರೆಲ್ಲರನ್ನೂ ವನಗಳಲ್ಲಿಯೂ, ಪರ್ವತ ಪ್ರದೇಶಗಳಲ್ಲಿಯೂ ದಿಕ್ಕು ದಿಕ್ಕುಗಳಲ್ಲಿಯೂ, ಉಗಿದನು.

೭೧-೭೩. ಹೀಗೆ ಉಗಿಯಲು ಪೂರ್ವ ದಿಕ್ಕಿನಲ್ಲಿ ಉಗಿದವರು ತಲೆಗೂದಲಿಲ್ಲದೆಯೂ, ಗಡ್ಡ ಮೀಸೆಗಳಿಲ್ಲದೆಯೂ, ಇರುವವರಾದರು. ಅವರು ಯವನರು ಎನ್ನಿಸಿಕೊಂಡರು. ಅವರು ಊಟದಿಂದ ಮಾತ್ರ ತೃಪ್ತಿ ಪಡೆತಕ್ಕವರು, ಆದರೆ ಸ್ವಲ್ಪ ಮೀಸೆಯನ್ನಿಟ್ಟಿರುತ್ತಾರೆ, ಆಗ್ನೇಯ ದಿಕ್ಕಿನಲ್ಲಿ ಉಗಿದವರು ಬೆತ್ತಲೆ ಇದ್ದುಕೊಂಡಿರುತ್ತಾರೆ, ದಕ್ಷಿಣದಲ್ಲಿ ಉಗಿದವರು ಹೆಸರು ಹೇಳಲು ಅನರ್ಹರು, ಕೆಟ್ಟವರು, ಪ್ರಾಣಿ ವಧೆಯಲ್ಲಿ ಸಂತೋಷವುಳ್ಳವರು, ದುಷ್ಟರು ಗೋವುಗಳನ್ನು ತಿನ್ನುತ್ತಾರೆ.

೭೩. ನೈರುತ್ಯದಲ್ಲಿ ಉಗಿದವರು ಕುವದರೆನ್ನಿಸಿಕೊಂಡರು. ಪಾಪಿಗಳು, ಗೋವು ಬ್ರಾಹ್ಮಣರ ವಧೆಯಲ್ಲಿ ಬಹು ಆಸೆಯುಳ್ಳವರು, ಪಶ್ಚಿಮದಲ್ಲಿ ಉಗಿದವರು ಖರ್ಪರರೆಂಬ ಹೆಸರಿನವರು. ಇವರು ಪೂರ್ವ ದಿಕ್ಕಿನಲ್ಲಿಯೂ ಇದ್ದಾರೆ. ಪಾಪಾಚಾರವುಳ್ಳವರು.

ವಾಯವ್ಯಾಂ ಚ ತುರುಷ್ಕಾಶ್ಚ ಶ್ಮಶ್ರುಪೂರ್ಣಾ ಗವಾಶಿನಃ ।
ಅಶ್ವಪೃಷ್ಠಸಮಾರೂಢಾಃ ಪ್ರಯುದ್ಧೇಷ್ವನಿವರ್ತಿನಃ ॥ ೭೪ ॥

ಉತ್ತರಸ್ಯಾಂ ಚ ಗಿರಯೋ ಮ್ಲೇಚ್ಛಾಃ ಪರ್ವತವಾಸಿನಃ ।
ಸರ್ವಭಕ್ಷಾ ದುರಾಚಾರಾ ವಧಬಂಧರತಾಃ ಕಿಲ ॥ ೭೫ ॥

ಐಶಾನ್ಯಾಂ ನಿರಯಾಃ ಸಂತಿ ಕೆತ್ವರ್ಣಾಂ ವೃಕ್ಷವಾಸಿನಃ ।
ಏತೇ ಮ್ಲೇಚ್ಛಾ ಸ್ಥಿತಾ ದಿಕ್ಷು ಘೋರಾಸ್ತೇ ಶಸ್ತ್ರಪಾಣಯಃ ॥ ೭೬ ॥

ಏಷಾಂ ಚ ಸ್ಪರ್ಶಮಾತ್ರೇಣ ಸಚೈಲೋ ಜಲಮಾವಿಶೇತ್ ।
ಏತೇಷಾಂ ಚ ಕಲೌ ಶೇಷೇಽಪ್ಯಕಾಲೇ ಧರ್ಮವರ್ಜಿತೇ ॥ ೭೭ ॥

ಸಂಸ್ಪರ್ಶಂ ಚ ಪ್ರಕುರ್ವಂತಿ ವಿತ್ತಲೋಭಾತ್ಸಮಂತತಃ ।
ಮ್ಲೇಚ್ಛಾಂಸ್ತಾನ್ಮೋಚಯಿತ್ವಾ ತು ಕ್ಷುಧಯಾ ಪರಿಪೀಡಿತಃ ॥ ೭೮ ॥

ಪುನರಾಹ ದ್ವಿಜಸ್ತಾತ ಕ್ಷುಧಾ ಮೇ ಬಾಧತೇತರಾಂ ।
ಅವದದ್ಗರುಡಂ ತತ್ರ ಕಶ್ಯಪಃ ಕೃಪಯಾಽದ್ಭುತಂ ॥ ೭೯ ॥

---

೭೪. ವಾಯುವ್ಯದಲ್ಲಿ ಉಳಿದವರು ತುರುಕರೆನಿಸಿಕೊಂಡರು, ಗಡ್ಡಗಳನ್ನು ಬಿಟ್ಟಿರುತ್ತಾರೆ. ಕುದುರೆ ಸವಾರಿ ಮಾಡುತ್ತಾರೆ. ಯುದ್ಧದಲ್ಲಿ ಶೂರರು.

೭೫. ಉತ್ತರ ದಿಕ್ಕಿನಲ್ಲಿ ಉಳಿದವರು ಗಿರಿಗಳೆಂದು ಹೆಸರು ಹೊಂದಿದವರು, ಈ ಮ್ಲೇಂಚ್ಛರು ಪರ್ವತಗಳಲ್ಲಿ ವಾಸಿಸುವವರು ಎಲ್ಲವನ್ನೂ ತಿನ್ನುತ್ತಾರೆ, ದುರಾಚಾರಿಗಳು, ಕೊಲ್ಲುವುದರಲ್ಲಿ ಸೆರೆ ಹಾಕುವುದರಲ್ಲಿ ಪ್ರಿಯರು.

೭೬. ಈಶಾನ್ಯದಲ್ಲಿ ನಿರಯರೆಂಬುವರಿದ್ದಾರೆ, ಇಲ್ಲಿರುವವರೆಲ್ಲರೂ ಮರದ ಕೆಳಗಿರುವವರು, ಈ ರೀತಿ ಮ್ಲೇಂಚ್ಛರು ದಿಕ್ಕುದಿಕ್ಕುಗಳಲ್ಲಿ ಹರಡಿದರು ಇವರು ಕೆಟ್ಟವರು ಶಸ್ತ್ರವನ್ನು ಹಿಡಿದಿರುತ್ತಾರೆ.

೭೭-೭೯. ಇವರನ್ನು ಮುಟ್ಟಿದರೆ ಉಟ್ಟಿರುವ ಬಟ್ಟೆಯೊಡನೆ ಸ್ನಾನಮಾಡಬೇಕು ಕಲಿಯುಗದ ಕೊನೆಯಲ್ಲಿ ಧರ್ಮ ನಾಶವಾದಾಗ ಇವರನ್ನು ಧನದಲ್ಲಿ ಆಸೆಯುಳ್ಳವರಾಗಿ ಸ್ಪರ್ಶ ಮಾಡುತ್ತಾರೆ. ಗರುಡನು ಹೀಗೆ ಮ್ಲೇಂಚ್ಛರನ್ನೆಲ್ಲಾ ಉಗಿದ ನಂತರ ಮತ್ತೆ ಹಸಿವಾಗಲು ತಂದೆಯೆ ! ಹಸಿವು ಬಾಧಿಸುತ್ತಿದೆ ಎಂದನು ಆಗ ಆ ಕಶ್ಯಪನು ಗರುಡನನ್ನು ಕುರಿತು ಇಂತೆಂದನು.

॥ ಕಶ್ಯಪ ಉವಾಚ ॥

ತಿಷ್ಠಂತಿ ವಿಪುಲೌ ತತ್ರ ಜಿಘಾಂಸೂ ಗಜಕಚ್ಛಪೌ ।
ಅಪ್ರಮೇಯೌ ಮಹಾಸತ್ತ್ವೌ ಸಾಗರಸ್ಯೈಕದೇಶತಃ ॥
ತಾವಪ್ಸು ಚ ದ್ರುತಂ ವತ್ಸ ಕ್ಷುಧಾಂ ತೇ ವಾರಯಿಷ್ಯತಃ ॥ ೮೦ ॥

॥ ಋಷಯ ಊಚುಃ ॥

ಸ ಪಿತುರ್ವಚನಂ ಶ್ರುತ್ವಾ ತತ್ರ ಗತ್ವಾಽಭಿಪದ್ಯ ತೌ ।
ನಖೈರ್ಭಿತ್ತ್ವಾ ಕೂರ್ಮಗಜೌ ಮಹಾಸತ್ತ್ವೌ ಮಹಾಜವಃ ॥ ೮೧ ॥

ಖಮುತ್ಪಪಾತ ತೌ ಧೃತ್ವಾ ವಿದ್ಯುದ್ವೇಗೋ ಮಹಾಬಲಃ ।
ಆಧಾರತಾಂ ನ ಗಚ್ಛಂತಿ ನಗಾಶ್ಚ ಮಂದರಾದಯಃ ॥ ೮೨ ॥

ತತೋ ಯೋಜನಲಕ್ಷೇ ದ್ವೇ ಗತ್ವಾ ಮಾರುತರಂಹಸಾ ।
ಮಹತ್ಯಾಂ ಜಂಬುಶಾಖಾಯಾಂ ನಿಪಪಾತ ಮಹಾಬಲಃ ॥ ೮೩ ॥

ಭಗ್ನಾ ಸಾ ಸಹಸಾ ಶಾಖಾ ತಾಂ ಪತಂತೀಂ ಖಗೇಶ್ವರಃ ।
ಗೋಬ್ರಾಹ್ಮಣವಧಾದ್ಭೀತೋ ದಧಾರ ತಪಸಾ ಬಲೀ ॥ ೮೪ ॥

---

೮೦. ಕಶ್ಯಪನು ಹೇಳಿದನು– ಈ ಸಮುದ್ರದ ಒಂದು ಪಕ್ಕದಲ್ಲಿ ಒಂದು ಆನೆ ಒಂದು ಆಮೆ ಎರಡೂ ಬಹಳ ಬಲಶಾಲಿಗಳಾಗಿ ಒಂದನ್ನೊಂದು ಕೊಲ್ಲಬೇಕೆಂದು ನೋಡುತ್ತಿವೆ. ಅಲ್ಲಿ ಅವುಗಳನ್ನು ಕೊಂದು ನಿನ್ನ ಹಸಿವನ್ನು ಅಡಗಿಸಿಕೊ.

೮೧. ಋಷಿಗಳು ಹೇಳಿದರು– ತಂದೆಯು ಹೇಳಿದಂತೆ ಅಲ್ಲಿಗೆ ಹೋಗಿ ಅವನ್ನು ಹಿಡಿದು ಉಗುರುಗಳಿಂದ ಆ ಆನೆ ಆಮೆಗಳನ್ನು ಸೀಳಿದನು.

೮೨. ಅವನ್ನು ಕಾಲಿನಲ್ಲಿ ಹಿಡಿದುಕೊಂಡು ಆಕಾಶಕ್ಕೆ ವೇಗದಿಂದ ಹಾರಿ ನೋಡಲು ಯಾವ ಮರವಾಗಲಿ, ಮಂದರವೇ ಮುಂತಾದ ಪರ್ವತಗಳಾಗಲಿ ಇವನು ಕೂರುವುದಕ್ಕೆ ಭಾರವನ್ನು ತಡೆಯಲಾರದುವಾದುವು.

೮೩. ಅನಂತರ ಎರಡು ಲಕ್ಷ ಯೋಜನಗಳು ಹೋಗಿ ಅಲ್ಲಿದ್ದ ಒಂದು ನೇರಳೆಯ ಮರದ ಕೊಂಬೆಯಲ್ಲಿ ಕುಳಿತನು.

೮೪. ಆ ಕೊಂಬೆಯು ಮುರಿದುಹೋಗಲು ಗರುಡನು ಗೋವುಗಳೂ ಬ್ರಾಹ್ಮಣರೂ, ಇದು ಬೀಳುವುದರಿಂದ ಸತ್ತಾರೆಂದು ಅದನ್ನು ಹಿಡಿದುಕೊಂಡನು.

ಧೃಷ್ಟ್ವಾ ತಾಂ ಸುಚಿರಂ ವೇಗಾದ್ಭ್ರಮಂತಂ ಖೇ ಮಹಾಬಲಂ ।
ಗತ್ವಾ ವಿಷ್ಣುರುವಾಚೇದಂ ನರರೂಪಧರೋ ಹರಿಃ ॥ ೮೫ ॥

॥ ವಿಷ್ಣುರುವಾಚ ॥

ಕಸ್ತ್ವಂ ಭ್ರಮಸಿ ಚಾಽಽಕಾಶೇ ಕಿಮರ್ಥಂ ಪತಗೇಶ್ವರ ।
ವಿಧೃತ್ಯ ಮಹತೀಂ ಶಾಖಾಂ ಮಹಾಂತೌ ಗಜಕಚ್ಛಪೌ ॥ ೮೬ ॥

ತಮುವಾಚ ದ್ವಿಜಸ್ತಸ್ಮಿನ್ನರರೂಪಧರಂ ಹರಿಂ ।
ಗರುಡೋಽಹಂ ಮಹಾಬಾಹೋ ಖಗರೂಪಃ ಸ್ವಕರ್ಮಣಾ ॥ ೮೭ ॥

ಕಶ್ಯಪಸ್ಯ ಮುನೇಃ ಸೂನುರ್ವಿನತಾಗರ್ಭಸಂಭವಃ ।
ಪಶ್ಯೈತೌ ಚ ಮಹಾಸತ್ತ್ವೌ ಭಕ್ಷಣಾರ್ಥಂ ಮಯಾ ಧೃತೌ ॥ ೮೮ ॥

ನ ಧರಾ ಚ ಮಮಾಧಾರೋ ನ ವೃಕ್ಷಾ ನ ಚ ಪರ್ವತಾಃ ।
ಅನೇಕಯೋಜನಾನ್ಯೂರ್ಧ್ವಂ ದೃಷ್ಟ್ವಾ ಜಂಬೂಮಹೀರುಹಂ ॥ ೮೯ ॥

---

೮೫. ಈ ಕೊಂಬೆಯನ್ನು ಹಿಡಿದುಕೊಂಡು ಹಾರಾಡುತ್ತಿರುವ ಈ ಗರುಡನನ್ನು ನೋಡಿ ನರರೂಪವನ್ನು ಧರಿಸಿದ ವಿಷ್ಣುವು ಅಲ್ಲಿಗೆ ಹೋಗಿ ಇಂತೆಂದನು.

೮೬. ವಿಷ್ಣುವು ಹೇಳಿದನು– ಆಕಾಶದಲ್ಲಿ ಓಡಾಡುತ್ತಿರುವ ನೀನಾರು ? ಎಲೈ ಪಕ್ಷಿಯೇ ! ಈ ದೊಡ್ಡ ಮರದಕೊಂಬೆಯನ್ನೂ ಆನೆ ಆನೆಗಳನ್ನೂ ಹಿಡಿದುಕೊಂಡೇಕೆ ಓಡಾಡುತ್ತಿದ್ದೀಯೆ ?

೮೭-೮೮. ಆಗ ಆ ಗರುಡನು ನರರೂಪವನ್ನು ಧರಿಸಿರುವ ವಿಷ್ಣುವನ್ನು ಕುರಿತು ಇಂತೆಂದನು. ಅಯ್ಯಾ ! ನನ್ನ ಹೆಸರು ಗರುಡನೆಂದು. ನನ್ನ ಪೂರ್ವಜನ್ಮದ ಕರ್ಮದಿಂದ ಪಕ್ಷಿಯಾಗಿ ಹುಟ್ಟಿದೆನು. ಕಶ್ಯಪನಿಂದ ವಿನತೆಯ ಗರ್ಭದಲ್ಲಿ ಹುಟ್ಟಿದವನು. ಇವೆರಡು ಪ್ರಾಣಿಗಳನ್ನೂ ತಿನ್ನುವುದಕ್ಕೋಸ್ಕರ ಹಿಡಿದುಕೊಂಡಿದ್ದೇನೆ.

೮೯-೯೦. ನಾನು ಕೂತು ಇವನ್ನು ತಿನ್ನಲು ಭೂಮಿಯಾಗಲಿ, ಮರಗಳಾಗಲಿ, ಪರ್ವತಗಳಾಗಲಿ, ನನ್ನ ಭಾರವನ್ನು ತಡೆಯಲಾರವು. ಬಹು ಯೋಜನಗಳ ಎತ್ತರವಾಗಿ ಬೆಳೆದಿದ್ದ ಈ ನೇರಳೆಯ ಮರವನ್ನು ನೋಡಿ ಅದರ ಕೊಂಬೆಯ ಮೇಲೆ

ಅಪತಂ ತಸ್ಯ ಶಾಖಾಯಾಂ ಸಹೇಮೌ ಭಕ್ಷಿತುಂ ಪ್ರತಿ ।
ಭಗ್ನಾ ಸಾ ಸಹಸಾ ಶಾಖಾ ತಾಂ ಚ ಧೃತ್ವಾ ಭ್ರಮಾಮ್ಯಹಂ ॥ ೯೦ ॥

ಕೋಟಿಕೋಟಿಸಹಸ್ರಾಣಾಂ ಬ್ರಾಹ್ಮಣಾನಾಂ ಗವಾಂ ವಧಾತ್ ।
ಭಯಂ ತತ್ರ ವಿಷಾದೋ ಮೇ ಸಹಸಾ ಪ್ರಾವಿಶದ್ಬುಧ ॥
ಕಿಂ ಕರೋಮಿ ಕಥಂ ಯಾಮಿ ಕೋ ಮೇ ವೇಗಂ ಸಹಿಷ್ಯತಿ ॥ ೯೧ ॥

॥ ಋಷಯ ಊಚುಃ ॥

ಇತ್ಯುಕ್ತೇ ಪತಗಶ್ರೇಷ್ಠಂ ಪ್ರೋವಾಚೇದಂ ಹರಿಸ್ತದಾ ॥ ೯೨ ॥

॥ ವಿಷ್ಣುರುವಾಚ ॥

ಅಸ್ಮದ್ಬಾಹುಂ ಸಮಾರುಹ್ಯ ಭಕ್ಷೇಮೌ ಗಜಕಚ್ಛಪೌ ॥ ೯೩ ॥

॥ ಗರುಡ ಉವಾಚ ॥

ಮಮಾಽಧಾರಂ ನ ಗಚ್ಛಂತಿ ಸಾಗರಾಶ್ಚ ನಗೋತ್ತಮಾಃ ।
ಅಥ ಚೈವಂ ಮಹಾಸತ್ತ್ವಂ ಕಥಂ ತ್ವಂ ಧಾರಯಿಷ್ಯಸಿ ॥ ೯೪ ॥

---

ಹೋಗಿ ಕುಳಿತು ತಿನ್ನಲು ಅದರ ಕೊಂಬೆಯ ಮೇಲೆ ಕುಳಿತೆ, ಆ ಕೊಂಬೆಯು ಮುರಿದುಹೋಯಿತು. ಅದನ್ನು ಹಿಡಿದುಕೊಂಡು ಸುತ್ತುತ್ತಿದ್ದೇನೆ.

೯೧. ಅನೇಕ ಕೋಟಿ ಬ್ರಾಹ್ಮಣರ ಮತ್ತು ಗೋವುಗಳ ವಧೆಯಾಗುತ್ತದೆಂಬ ಭಯವು ನನಗೆ ಉಂಟಾಯಿತು. ಏನು ಮಾಡಲಿ ? ಎಲ್ಲಿ ಹೋಗಲಿ ? ಯಾವುದು ನನ್ನ ವೇಗವನ್ನು ಸಹಿಸೀತು ?

೯೨. ಋಷಿಗಳು ಹೇಳಿದರು– ಗರುಡನು ಹೀಗೆನ್ನಲು ಆಗ ಹರಿಯು ಇಂತೆಂದನು.

೯೩. ವಿಷ್ಣುವು ಹೇಳಿದನು- ನನ್ನ ತೋಳಿನಮೇಲೆ ಕುಳಿತುಕೊಂಡು ಆ ಆನೆ ಆಮೆಗಳನ್ನು ತಿನ್ನು.

೯೪. ಗರುಡನು ಹೇಳಿದನು-- ಸಮುದ್ರಗಳಾಗಲಿ, ಸಾಗರಗಳಾಗಲಿ, ಪರ್ವತಗಳಾಗಲಿ, ನನಗೆ ಆಧಾರವಾಗದಿರುವಾಗ ಈ ದೊಡ್ಡ ಪ್ರಾಣಿಯನ್ನು ನೀನು ಹೇಗೆ ಹೊರುತ್ತೀಯೇ.

ಋತೇ ನಾರಾಯಣಾದನ್ಯಃ ಕೋ ಮಾಂ ಧಾರಯಿತುಂ ಕ್ಷಮಃ ।
ತ್ರೈಲೋಕ್ಯೇ ಕಃ ಪುಮಾಂಸ್ತಿಷ್ಠೇದ್ಯೋ ವೇಗಂ ಮೇ ಸಹಿಷ್ಯತಿ ॥ ೯೫ ॥

॥ ಹರಿರುವಾಚ ॥

ಸ್ವಕಾರ್ಯಮುದ್ಧರೇತ್ಪ್ರಾಜ್ಞಃ ಸ್ವಕಾರ್ಯಂ ಕುರು ಸಾಂಪ್ರತಂ ।
ಕೃತ್ವಾ ಕಾರ್ಯಂ ಖಗಶ್ರೇಷ್ಠ ವಿಜಾನೀಷೇ ಚ ಮಾಂ ಧ್ರುವಂ ॥ ೯೬ ॥

॥ ಋಷಯ ಊಚುಃ ॥

ಮಹಾಸತ್ವಂ ಚ ತಂ ದೃಷ್ಟ್ವಾ ವಿಮೃಶ್ಯ ಮನಸಾ ಖಗಃ ।
ಏವಮಸ್ತ್ವಿತಿ ಚೋಕ್ತ್ವಾ ಸ ಪಪಾತ ಹ ಮಹಾಭುಜೇ ॥ ೯೭ ॥

ನ ಚಚಾಲ ಭುಜಸ್ತಸ್ಯ ಸನ್ನಿಪಾತೇ ಖಗೇಶ್ವರೇ ।
ತತ್ರ ಸ್ಥಿತ್ವಾ ಚ ತಾಂ ಶಾಖಾಂ ಮುಮೋಚ ಪರ್ವತಾಲಯೇ ॥ ೯೮ ॥

ಶಾಖಾಪತನಮಾತ್ರೇಣ ಸಚರಾಚರಕಾನನಾ ।
ಚಚಾಲ ವಸುಧಾ ಚೈವ ಸಾಗರಾಃ ಪ್ರಚಕಂಪಿರೇ ॥ ೯೯ ॥

---

೯೫. ನಾರಾಯಣನೊಬ್ಬನನ್ನು ಬಿಟ್ಟರೆ ಯಾರು ನನ್ನನ್ನು ಧರಿಸಲು ಶಕ್ತರು? ನನ್ನ ವೇಗವನ್ನು ಧರಿಸುವ ಮನುಷ್ಯನು ಮೂರು ಲೋಕಗಳಲ್ಲಿಯೂ ಯಾವನು ತಾನೇ ಇರುವನು ?

೯೬. ಹರಿಯು ಹೇಳಿದನು- ಬುದ್ಧಿವಂತನಾದವನು ಮೊದಲು ತನ್ನ ಕೆಲಸವನ್ನು ಮಾಡಿಕೊಳ್ಳಬೇಕು. ಸಧ್ಯದಲ್ಲಿ ನಿನ್ನ ಕೆಲಸವನ್ನು ಮಾಡಿಕೋ. ನಿನ್ನ ಕೆಲಸವನ್ನು ಮಾಡಿಕೊಂಡಮೇಲೆ ನಾನೆಂತಹವನೆಂಬುದನ್ನು ತಿಳಿದುಕೊಳ್ಳುತ್ತೀಯೆ. ಖಂಡಿತ.

೯೭. ಋಷಿಗಳು ಹೇಳಿದರು- ಆಗ ಆ ಗರುಡನು ಈತನು ಮಹಾ ಬಲಶಾಲಿಯು ಇರಬಹುದೆಂದು ಮನಸ್ಸಿನಲ್ಲಿ ತಿಳಿದು ಹಾಗೇ ಆಗಲೆಂದು ಆವನ ಭುಜಗಳ ಮೇಲೆ ಕುಳಿತುಕೊಂಡನು.

೯೮. ಆ ಗರುಡನು ಕುಳಿತರೂ ಆ ಮಹಾ ಭುಜವು ಅಲ್ಲಾಡಲೇ ಇಲ್ಲ. ಅಲ್ಲಿ ಕುಳಿತು ಗರುಡನು ಆ ಮರದ ಕೊಂಬೆಯನ್ನು ಪರ್ವತಗಳ ಮೇಲೆಸೆದನು.

೯೯. ಆ ಕೊಂಬೆಯು ಬಿದ್ದೊಡನೆಯೇ ಚರಾಚರಗಳಿಂದ ಕೂಡಿದ ಭೂಮಿಯೂ ಸಮುದ್ರವೂ ನಡುಗಿದುವು.

ತತಶ್ಚ ಖಾದಿತೌ ಸತ್ವೌ ಸಹಸಾ ನಾಗಕಚ್ಛಪೌ ।
ತೃಪ್ತಿಂ ನೋ ಪ್ರಾಪ್ತವಾನ್ಸೋಽಪಿ ಕ್ಷುಧಾ ತಸ್ಯ ನ ಶಾಮ್ಯತಿ ॥
ಏತಜ್ಜ್ಞಾತ್ವಾ ತು ಗೋವಿಂದಸ್ತಮುವಾಚ ಖಗೇಶ್ವರಂ ॥ ೧೦೦ ॥

॥ ವಿಷ್ಣುರುವಾಚ ॥

ಭುಜಸ್ಯ ಮಮ ಮಾಂಸಂ ತು ಭಕ್ಷಯಿತ್ವಾ ಸುಖೀ ಭವ ॥ ೧೦೧ ॥

॥ ಋಷಯ ಊಚುಃ ॥

ಇತ್ಯುಕ್ತೇ ಪ್ರಚುರಂ ಮಾಂಸಂ ಭುಜಸ್ಯ ತಸ್ಯ ತೇನ ಹಿ ।
ಖಾದಿತಂ ಕ್ಷುಧಯಾ ಪುತ್ರ ವ್ರಣಂ ತಸ್ಯ ನ ವಿದ್ಯತೇ ॥
ತಮುವಾಚ ಮಹಾಪ್ರಾಜ್ಞಶ್ಚರಾಚರಗುರುಂ ಹರಿಂ ॥ ೧೦೨ ॥

॥ ವೈನತೇಯ ಉವಾಚ ॥

ಕಸ್ತ್ವಂ ಕಿಂ ವಾ ಪ್ರಿಯಂ ತೇಽದ್ಯ ಕರಿಷ್ಯಾಮಿ ಚ ಸಾಂಪ್ರತಂ ॥ ೧೦೩ ॥

---

೧೦೦. ಆಗ ಆ ದೊಡ್ಡ ಪ್ರಾಣಿಗಳಾಗಿದ್ದ ಆನೆ ಆಮೆಗಳನ್ನು ಆ ಗರುಡನು ತಿಂದನು. ಆದರೂ ಆತನು ತೃಪ್ತಿಹೊಂದಲೇ ಇಲ್ಲ. ಹಸಿವು ಇಂಗಲೇ ಇಲ್ಲ. ಇದನ್ನು ಆ ಗೋವಿಂದನು ತಿಳಿದು ಗರುಡನಿಗಿಂತೆಂದನು.

೧೦೧. ವಿಷ್ಣುವು ಹೇಳಿದನು- ಎಲೈ ಪಕ್ಷಿಯೇ ! ನನ್ನ ಭುಜದ ಮಾಂಸವನ್ನು ತಿಂದು ಸುಖಿಯಾಗು.

೧೦೨. ಋಷಿಗಳು ಹೇಳಿದರು- ಆ ಹರಿಯು ಹೀಗೆನ್ನಲು ಅವನ ಭುಜದ ಮಾಂಸವನ್ನೂ, ಗರುಡನು ತಿಂದನು. ಆದರೂ ಅವನ ಭುಜದಲ್ಲಿ ಒಂದು ಗಾಯವೂ ಉಂಟಾಗಲೇ ಇಲ್ಲ. ಆಗ ಚರಾಚರಗಳಿಗೆ ಗುರುವಾದ ಹರಿಯನ್ನು ಕುರಿತು ಈರೀತಿ ಹೇಳಿದನು.

೧೦೩. ವೈನತೇಯನು ಹೇಳಿದನು- ನೀನಾರು ? ಈಗ ನಾನು ನಿನಗೇನು ಉಪಕಾರ ಮಾಡಲಿ ?

॥ ನಾರಾಯಣ ಉವಾಚ ॥

ವಿದ್ಧಿ ನಾರಾಯಣಂ ಮಾಂ ಹಿ ತ್ವತ್ಪ್ರಿಯಾರ್ಥಂ ಸಮಾಗತಂ ॥ ೧೦೪ ॥

॥ ಋಷಯ ಊಚುಃ ॥

ರೂಪಂ ಸ್ವಂ ದರ್ಶಯಾಮಾಸ ಪ್ರತ್ಯಯಾರ್ಥಂ ಚ ತಸ್ಯ ವೈ ।
ಪೀತವಸ್ತ್ರಂ ಘನಶ್ಯಾಮಂ ಚತುರ್ಭುಜಮನೋರಮಂ ॥ ೧೦೫ ॥

ಶಂಖಚಕ್ರಗದಾಪದ್ಮಧರಂ ಸರ್ವಸುರೇಶ್ವರಂ ।
ತಂ ಚ ದೃಷ್ಟ್ವಾ ಗರುತ್ಮಾಂಶ್ಚ ಪ್ರಣಮ್ಯ ಶಿರಸಾ ಹರಿಂ ॥ ೧೦೬ ॥

॥ ವೈನತೇಯ ಉವಾಚ ॥

ಪ್ರಿಯಂ ಕಿಂ ತೇ ಕರಿಷ್ಯಾಮಿ ವದ ನಃ ಪುರುಷೋತ್ತಮ ॥ ೧೦೭ ॥

॥ ಋಷಯ ಊಚುಃ ॥

ತಮಬ್ರವೀನ್ಮಹಾತೇಜಾ ದೇವದೇವೇಶ್ವರೋ ಹರಿಃ ॥ ೧೦೮ ॥

---

೧೦೪. ನಾರಾಯಣನು ಹೇಳಿದನು- ನಾನೇ ನಾರಾಯಣನೆಂದು ತಿಳಿ. ನಿನ್ನ ಇಷ್ಟಾರ್ಥವನ್ನು ಕೈಗೂಡಿಸಲು ಬಂದಿದ್ದೇನೆ.

೧೦೫-೧೦೬. ಋಷಿಗಳು ಹೇಳಿದರು- ಆಗ ಹರಿಯು ತನ್ನ ರೂಪವನ್ನು ಆ ಗರುಡನ ನಂಬಿಕೆಗೋಸ್ಕರ ತೋರಿಸಿದನು. ಹೊಂಬಣ್ಣದ ಬಟ್ಟೆಯನ್ನುಟ್ಟು ಮೇಘದ ಬಣ್ಣವುಳ್ಳವನಾಗಿ ನಾಲ್ಕು ಭುಜವನ್ನು ಹೊಂದಿ ಅವುಗಳಲ್ಲಿ ಶಂಖ, ಚಕ್ರ, ಗದೆ, ಪದ್ಮಗಳನ್ನು ಹಿಡಿದಿರುವ ಆ ದೇವದೇವನನ್ನು ಗರುಡನು ನೋಡಿ ಸಾಷ್ಟಾಂಗ ನಮಸ್ಕರಿಸಿದನು.

೧೦೭. ವೈನತೇಯನು ಹೇಳಿದನು- ಎಲೈ ಪುರುಷೋತ್ತಮನೇ ! ನಿನಗೇನು ಪ್ರಿಯವಾದ ಕೆಲಸವನ್ನು ಮಾಡಲಿ ? ಹೇಳು.

೧೦೮. ಋಷಿಗಳು ಹೇಳಿದರು- ದೇವದೇವನಾದ ಹರಿಯು ಆ ಗರುಡನನ್ನು ಕುರಿತು ಇಂತೆಂದನು.

॥ ವಿಷ್ಣುರುವಾಚ ॥

ಭವ ಮೇ ವಾಹನಂ ಶೂರ ಸಖೇ ತ್ವಂ ಸಾರ್ವಕಾಲಿಕಂ ॥ ೧೦೯ ॥

॥ ಋಷಯ ಊಚುಃ ॥

ತಮುವಾಚ ಖಗಶ್ರೇಷ್ಠೋ ಧನ್ಯೋಽಹಂ ವಿಬುಧೇಶ್ವರ ।
ಸಫಲಂ ಜನ್ಮ ಮೇ ನಾಥ ತ್ವಾಂ ಚ ದೃಷ್ಟ್ವಾಽದ್ಯ ಮೇ ಪ್ರಭೋ ॥ ೧೧೦ ॥

ಪ್ರಾರ್ಥಯಿತ್ವಾ ಚ ಪಿತರಾವಾಗಮಿಷ್ಯಾಮಿ ತೇಽಂತಿಕಂ ।
ಪ್ರೀತೋ ವಿಷ್ಣುರುವಾಚೇದಂ ಭವ ತ್ವಮಜರಾಮರಃ ॥ ೧೧೧ ॥

ಅವಧ್ಯಃ ಸರ್ವಭೂತೇಭ್ಯೋ ಕರ್ಮ ತೇಜಶ್ಚ ಮತ್ಸಮಂ ।
ಸರ್ವತ್ರ ತೇ ಗತಿಶ್ಚಾಸ್ತು ನಿಖಿಲಂ ತು ಸುಖಂ ಧ್ರುವಂ ॥ ೧೧೨ ॥

ಸಮ್ಮಿಲತು ದ್ರುತಂ ಸರ್ವಂ ಯತ್ತೇ ಮನಸಿ ವರ್ತತೇ ।
ಯಥೇಷ್ಟಂ ಪ್ರೀತಿಮಾಹಾರಮಕಷ್ಟೇನ ಪ್ರಲಪ್ಸ್ಯಸೇ ॥ ೧೧೩ ॥

ವ್ಯಸನಾನ್ಮಾತರಂ ಸದ್ಯೋ ಮೋಚಯಿಷ್ಯಸಿ ನಾನ್ಯಥಾ ।
ಏವಮುಕ್ತ್ವಾ ಹರಿಃ ಸದ್ಯಸ್ತತ್ರೈವಾಂತರಧೀಯತ ॥ ೧೧೪ ॥

---

೧೦೯. ವಿಷ್ಣುವು ಹೇಳಿದನು- ಎಲೈ ಶೂರನೆ ! ನೀನು ನನಗೆ ವಾಹನವಾಗು. ಮತ್ತೆ ಯಾವಾಗಲೂ ಸ್ನೇಹಿತನಾಗಿರು.

೧೧೦. ಋಷಿಗಳು ಹೇಳಿದರು- ಎಲೈ ದೇವ ದೇವನೇ! ನಿನ್ನನ್ನು ನೋಡಿ ಇಂದಿನ ನಾನು ಧನ್ಯನಾದೆ. ನನ್ನ ಜನ್ಮವು ಸಫಲವಾಯಿತು ಎಂದನು.

೧೧೧-೧೧೪. ಎಲೈ ವಿಷ್ಣುವೇ ! ನನ್ನ ತಾಯಿ ತಂದೆಗಳನ್ನು ಕೇಳಿಕೊಂಡು ಬರುತ್ತೇನೆ ಎಂದನು. ಆಗ ವಿಷ್ಣುವು ಸಂತೋಷಪಟ್ಟು ಎಲೈ ಗರುಡನೇ ! ನಿನಗೆ ಮುಪ್ಪು ಸಾವುಗಳು ಬರದಿರಲಿ. ಒಬ್ಬರಿಂದಲೂ ಮರಣಬೇಡ, ಕೆಲಸವೂ ಬಲವೂ ಯಾವಾಗಲೂ ನನಗೆ ಸಮವಾಗಿರಲಿ ನಿನ್ನ ಗಮನವು ಎಲ್ಲಾ ಕಡೆಯಲ್ಲಿಯೂ ತಡೆ ಇಲ್ಲದೇ ಇರಲಿ. ಎಲ್ಲಾ ಕಡೆಯಲ್ಲಿಯೂ ನಿನಗೆ ಸುಖವಾಗಿರಲಿ. ನಿನ್ನ ಇಷ್ಟಾರ್ಥಗಳೆಲ್ಲವೂ ಬೇಗ ಕೈಗೂಡಲಿ. ನಿನಗೆ ಬೇಕಾದಷ್ಟು ಆಹಾರವು ಕಷ್ಟವಿಲ್ಲದೆ ಸಿಕ್ಕಲಿ. ನಿನ್ನ ತಾಯಿಯನ್ನು ಕಷ್ಟದಿಂದ ಒಡನೆಯೇ ಬಿಡಿಸುತ್ತೀಯೆ. ಎಂದು ವರವನ್ನು ಕೊಟ್ಟು ಅಂತರ್ಧಾನವನ್ನು ಹೊಂದಿದನು.

ತಾರ್ಕ್ಷ್ಯೋಽಪಿ ಪಿತರಂ ಗತ್ವಾಽಕಥಯಚ್ಚಾಖಿಲಂ ತತಃ ।
ಸ ತಚ್ಛ್ರುತ್ವಾ ಪ್ರಹೃಷ್ಟಾತ್ಮಾ ತನಯಂ ಪುನರಬ್ರವೀತ್ ॥ ೧೧೫ ॥

॥ ಕಶ್ಯಪ ಉವಾಚ ॥

ಧನ್ಯೋಽಹಂ ಚ ಖಗಶ್ರೇಷ್ಠ ಧನ್ಯಾ ತೇ ಜನನೀ ಶಿವಾ ।
ಧನ್ಯಂ ಕ್ಷೇತ್ರಂ ಕುಲಂ ಚೈವ ಯಸ್ಯ ಪುತ್ರಸ್ತ್ವಮೀದೃಶಃ ॥ ೧೧೬ ॥

ಯಸ್ಯ ಪುತ್ರಃ ಕುಲೇ ಜಾತೋ ವೈಷ್ಣವಃ ಪುರುಷೋತ್ತಮಃ ।
ಕುಲಕೋಟಿಂ ಸಮುದ್ಧೃತ್ಯ ವಿಷ್ಣುಸಾಯುಜ್ಯತಾಂ ವ್ರಜೇತ್ ॥ ೧೧೭ ॥

ವಿಷ್ಣುಂ ಯಃ ಪೂಜಯೇನ್ನಿತ್ಯಂ ವಿಷ್ಣುಂ ಧ್ಯಾಯೇತ ಗಾಯತಿ ।
ಜಪೇನ್ಮಂತ್ರಂ ಸದಾ ವಿಷ್ಣೋಃ ಸ್ತೋತ್ರಂ ತಸ್ಯ ಪಠಿಷ್ಯತಿ ॥ ೧೧೮ ॥

ಪ್ರಸಾದಂ ಚ ಭಜೇನ್ನಿತ್ಯಮುಪವಾಸಂ ಹರೇರ್ದಿನೇ ।
ಕ್ಷಯಾಚ್ಚ ಸರ್ವಪಾಪಾನಾಂ ಮುಚ್ಯತೇ ನಾತ್ರ ಸಂಶಯಃ ॥ ೧೧೯ ॥

---

೧೧೫. ಗರುಡನು ತಂದೆಯ ಬಳಿಗೆ ಹೋಗಿ ಇವೆಲ್ಲವನ್ನೂ ಹೇಳಲು ಅವನು ಸಂತೋಷಪಟ್ಟು ಮಗನಿಗೆ ಮತ್ತೆ ಇಂತೆಂದನು.

೧೧೬. ಕಶ್ಯಪನು ಹೇಳಿದನು- ಎಲೈ ಗರುಡನೆ ! ಇಂತಹ ಮಗನನ್ನು ಪಡೆದುದರಿಂದ ನಾನು ಧನ್ಯನು. ನಿನ್ನ ತಾಯಿಯು ಧನ್ಯಳು. ಈ ಜಾಗ ಈ ಕುಲಗಳೂ ಧನ್ಯವಾದುವು.

೧೧೭. ಯಾವನಿಗೆ ವಿಷ್ಣುಭಕ್ತನಾದ ಮಗನು ಹುಟ್ಟುವನೋ ಅವನು ತನ್ನ ಕೋಟಿ ಕುಲಗಳನ್ನು ಉದ್ಧಾರಮಾಡಿ ವಿಷ್ಣುವಿನ ಸಮೀಪವನ್ನು ಹೊಂದುತ್ತಾನೆ.

೧೧೮-೧೧೯. ನಿತ್ಯವೂ ವಿಷ್ಣುವನ್ನು ಪೂಜೆಮಾಡಬೇಕು. ಧ್ಯಾನಿಸಬೇಕು. ಅವನ ಹಾಡುಗಳನ್ನು ಹಾಡಬೇಕು. ಅವನ ಮಂತ್ರವನ್ನು ಜಪಿಸಬೇಕು. ಅವನ ಸ್ತೋತ್ರಗಳನ್ನು ಓದಬೇಕು. ಹರಿದಿನಗಳಲ್ಲಿ ಉಪವಾಸಮಾಡಬೇಕು. ಹೀಗೆ ಮಾಡಿದರೆ ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ. ಸಂಶಯವಿಲ್ಲ.

ಯಸ್ಯ ತಿಷ್ಠತಿ ಗೋವಿಂದೋ ಮಾನಸೇ ಚ ಸದೈವ ಹಿ ।
ಸ ಏವ ನರಶಾರ್ದೂಲೋ ವಿಷ್ಣುಲೋಕೇ ಮಹೀಯತೇ ॥ ೧೨೦ ॥

ಜಲೇ ವಿಷ್ಣುಃ ಸ್ಥಿತೋ ನಿತ್ಯಂ ರಮ್ಯಸ್ಥಾನೇ ಚ ಸತ್ಪಥೇ ।
ಗವಿ ವಿಪ್ರೇ ಸದಾ ಸ್ವರ್ಗೇ ಬ್ರಹ್ಮಾಗಾರೇ ಶುಚೇರ್ಗೃಹೇ ॥ ೧೨೧ ॥

ಏತೇಷು ಚ ಜಪೇದ್ಯಸ್ತು ಸ ಪುಣ್ಯೈಃ ಪುರುಷೋತ್ತಮಃ ।
ಜನ್ಮಕೋಟಿಸಹಸ್ರೇಭ್ಯಃ ಕೃತ್ವಾಽಸತ್ಕರ್ಮಸಂಚಯಂ ॥ ೧೨೨ ॥

ಕ್ಷಯಾಚ್ಚ ಸರ್ವಪಾಪಾನಾಂ ವಿಷ್ಣೋಃ ಕಿಂಕರತಾಂ ವ್ರಜೇತ್ ।
ಧನ್ಯೋಽಸೌ ಮಾನವೋ ಲೋಕೇ ವಿಷ್ಣೋಃ ಸಾದೃಶ್ಯತಾಂ ವ್ರಜೇತ್॥೧೨೩॥

ನಿತ್ಯಃ ಸುರವರೈಃ ಪೂಜ್ಯೋ ಲೋಕನಾಥೋಽಚ್ಯುತೋಽವ್ಯಯಃ ।
ಸುಪ್ರಸನ್ನೋ ಭವೇದ್ಯಸ್ತು ಸ ಏವ ಪುರುಷೋತ್ತಮಃ ॥ ೧೨೪ ॥

ತಪೋಭಿರ್ಬಹುಭಿರ್ಧರ್ಮೈರ್ಮಖೈರ್ನಾನಾವಿಧೈರಪಿ ।
ವಿಷ್ಣುರ್ನ ಲಭ್ಯತೇ ದೇವೈಸ್ತ್ವಯಾಽಸೌ ವಿಪ್ರ ಲಭ್ಯತೇ ॥ ೧೨೫ ॥

---

೧೨೦. ಯಾವನು ಮನಸ್ಸಿನಲ್ಲಿ ಗೋವಿಂದನನ್ನೇ ಧ್ಯಾನಮಾಡುತ್ತಾನೆಯೋ ಅವನು ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

೧೨೧-೧೨೨. ನೀರು, ರಮ್ಯವಾದ ಜಾಗ, ಒಳ್ಳೆಯದಾರಿ, ಗೋವು, ಬ್ರಾಹ್ಮಣ, ಸ್ವರ್ಗ, ಬ್ರಾಹ್ಮಣನ ಮನೆ, ಶುಚಿಯಾದ ಮನೆ, ಇವುಗಳಲ್ಲಿ ವಿಷ್ಣುವು ಯಾವಾಗಲೂ ಇರುತ್ತಾನೆ. ಈ ಜಾಗಗಳಲ್ಲಿ ವಿಷ್ಣುಮಂತ್ರವನ್ನು ಜಪಿಸಿದರೆ ಅವನು ಪುಣ್ಯವಂತನಾಗಿ ಸಾವಿರಾರು ಕೋಟಿ ಜನ್ಮಗಳ ಪಾಪಗಳನ್ನು ಕಳೆದುಕೊಳ್ಳುತ್ತಾನೆ.

೧೨೩. ಸಮಸ್ತ ಪಾಪಗಳನ್ನೂ ಕಳೆದುಕೊಂಡು ವಿಷ್ಣುವಿಗೆ ಆಳಾಗುತ್ತಾನೆ. ಇವನೇ ಧನ್ಯನು ಕೊನೆಗೆ ವಿಷ್ಣು ಸಮನಾಗುತ್ತಾನೆ.

೧೨೪. ನಿತ್ಯನಾದ, ದೇವತೆಗಳಿಂದ ಪೂಜೆಯನ್ನು ಹೊಂದುವ, ಲೋಕನಾಥನಾದ, ವಿಷ್ಣುವು ಯಾವನಿಗೆ ಪ್ರಸನ್ನನಾಗುತ್ತಾನೆಯೋ ಅವನೇ ಪುರುಷೋತ್ತಮನು.

೧೨೫. ಅನೇಕವಾದ ತಪಸ್ಸು ಧರ್ಮಗಳು, ಯಾಗಗಳು ಇವನ್ನು ಮಾಡಿದರೂ ವಿಷ್ಣುವು ದೊರಕುವುದು ಕಷ್ಟ. ಅಂತಹ ಅವನನ್ನು ನೀನು ಹೊಂದಿದ್ದೀಯೆ.

ಸಪತ್ನೀವ್ಯಸನಾದ್ಘೋರಾನ್ಮಾತರಂ ತೇ ಪ್ರಮೋಚಯ ।
ತತೋ ಯಾಸ್ಯಸಿ ದೇವೇಶಂ ಕೃತ್ವಾ ಮಾತುಃ ಪ್ರತಿಕ್ರಿಯಾಂ ॥ ೧೨೬ ॥

ಗೃಹೀತ್ವಾ ಜನಕಸ್ಯಾಽಜ್ಞಾಂ ಲಬ್ಧ್ವಾ ವಿಷ್ಣೋರ್ವರಂ ಮಹತ್ ।
ಅಂಬಾಪಾರ್ಶ್ವಂ ಗತೋ ಹೃಷ್ಟಸ್ತಾಂ ಪ್ರಣಮ್ಯಾಗ್ರತಃ ಸ್ಥಿತಃ ॥ ೧೨೭ ॥

॥ ವಿನತೋವಾಚ ॥

ಅಭವದ್ಭೋಜನಂ ತೇಽದ್ಯ ಪುತ್ರ ದೃಷ್ಟಃ ಪಿತಾಽಪಿ ಚ ।
ಕಿಮರ್ಥಂ ವಾ ವಿಲಂಬಸ್ತೇ ಚಿಂತಯಾ ವ್ಯಥಿತಾ ಹ್ಯಹಂ ॥ ೧೨೮ ॥

॥ ಋಷಯ ಊಚುಃ ॥

ಸ ಮಾತುರ್ವಚನಂ ಶ್ರುತ್ವಾ ಗರುಡಃ ಪ್ರಹಸನ್ನಿವ ।
ಕಥಯಾಮಾಸ ವೃತ್ತಾಂತಂ ಸಾ ಶ್ರುತ್ವಾ ವಿಸ್ಮಿತಾಽಭವತ್ ॥ ೧೨೯ ॥

---

೧೨೬. ಮೊದಲು ನಿನ್ನ ತಾಯಿಯನ್ನು ಸವತಿಯ ದಾಸ್ಯದಿಂದ ಬಿಡಿಸು. ತಾಯಿಗೆ ಉಪಕಾರವನ್ನು ಮಾಡಿದನಂತರ ನೀನು ವಿಷ್ಣುವಿನ ಹತ್ತಿರಕ್ಕೆ ಹೋಗು. ಎಂದನು.

೧೨೭. ತಂದೆಯ ಅಪ್ಪಣೆಯನ್ನು ಹೊಂದಿ ವಿಷ್ಣುವಿನ ಮಹಾ ವರವನ್ನೂ ಹೊಂದಿ ತಾಯಿಯ ಬಳಿಗೆ ಹೋಗಿ ನಮಸ್ಕರಿಸಿ ಆಕೆಯ ಮುಂದೆ ಸಂತೋಷದಿಂದ ನಿಂತುಕೊಂಡನು.

೧೨೮. ವಿನತೆಯು ಹೇಳಿದಳು- ಎಲೈ ಮಗನೇ ! ನಿನಗೆ ಊಟವು ಆಯಿತೇ ? ತಂದೆಯನ್ನು ನೋಡಿದೆಯಾ ? ಏತಕ್ಕೆ ಸಾವಕಾಶ ಮಾಡುತ್ತಿದ್ದೀಯೆ ? ಹೇಳು. ನನಗೆ ಯೋಚನೆಯಾಗಿರುವುದು.

೧೨೯. ಋಷಿಗಳು ಹೇಳಿದರು– ತಾಯಿಯ ಆ ಮಾತನ್ನು ಕೇಳಿ ಗರುಡನು ನಗುತ್ತ ವಿಷಯಗಳೆಲ್ಲವನ್ನೂ ತಿಳಿಸಿದನು. ಅದನ್ನು ಕೇಳಿ ಆಕೆಯು ಆಶ್ಚರ್ಯಗೊಂಡಳು.

॥ ವಿನತೋವಾಚ ॥

ಕಥಂ ಚ ದುಷ್ಕರಂ ಕರ್ಮ ಶಿಶುಭಾವಾತ್ತ್ವಯಾ ಕೃತಂ ।
ಧನ್ಯಾಽಹಂ ಮೇ ಕುಲಂ ಧನ್ಯಂ ಯಸ್ತ್ವಂ ವಿಷ್ಣು ಸಖೋಽಭವಃ ॥ ೧೩೦ ॥

ಲಬ್ಧ್ವಾ ವರಂ ಮಹಾತ್ಮಾನಂ ದೃಷ್ಟ್ವಾ ಮೇ ಹೃಷ್ಯತೇ ಮನಃ ।
ಪೌರುಷೇಣ ತ್ವಯಾ ವತ್ಸ ಉದ್ಧೃತಂ ಮೇ ಕುಲದ್ವಯಂ ॥ ೧೩೧ ॥

॥ ಸುಪರ್ಣ ಉವಾಚ ॥

ಮಾತಃ ಕಿಂ ತೇ ಕರಿಷ್ಯಾಮಿ ಪ್ರಿಯಮೇವ ತದುಚ್ಯತಾಂ ।
ಕಾರ್ಯಂ ಕೃತ್ವಾಽಥ ಯಾಸ್ಯಾಮಿ ಪಾರ್ಶ್ವಂ ನಾರಾಯಣಸ್ಯ ಚ ॥ ೧೩೨ ॥

॥ ಋಷಯ ಊಚುಃ ॥

ಏತಚ್ಛ್ರುತ್ವಾ ತು ಸಾ ಪ್ರಾಹ ಗರುಡಂ ವಿನತಾ ಸತೀ ।
ಮಹದ್ದುಃಖಂ ಚ ಮೇ ಚಾಸ್ತಿ ಕುರು ತಾತ ಪ್ರತಿಕ್ರಿಯಾಂ ॥ ೧೩೩ ॥

ಭಗನೀ ಮೇ ಸಪತ್ನೀ ಸಾ ಭಣಿತಾಽಹಂ ತಯಾ ಪುರಾ ।
ತಸ್ಯಾ ದಾಸ್ಯಮಹಂ ಪ್ರಾಪ್ತಾ ಕಸ್ತಾರಯತಿ ಮಾಮಿತಃ ॥ ೧೩೪ ॥

---

೧೩೦. ವಿನತೆಯು ಹೇಳಿದಳು– ಹುಡುಗ ಬುದ್ಧಿಯಿಂದ ಎಂತಹ ಅಸಾಧ್ಯವಾದ ಕೆಲಸವನ್ನು ಮಾಡಿದೆ? ನಾನೂ ನನ್ನ ಕುಲವೂ ಧನ್ಯರಾದೆವು. ನೀನು ವಿಷ್ಣುವಿಗೆ ಸ್ನೇಹಿತನಾದೆಯಲ್ಲ!

೧೩೧. ಆ ವರವನ್ನು ಹೊಂದಿ ಮಹಿಮಾವಂತನಾದ ನಿನ್ನನ್ನು ನೋಡಿ ನನ್ನ ಮನಸ್ಸು ಹಿಗ್ಗುತ್ತಿದೆ. ಪರಾಕ್ರಮದಿಂದ ನಮ್ಮ ಎರಡು ವಂಶಗಳನ್ನೂ ಉದ್ಧಾರ ಮಾಡಿದೆ.

೧೩೨. ಗರುಡನು ಹೇಳಿದನು- ಅಮ್ಮ! ನಿನಗೆ ಏನು ಹಿತವನ್ನು ಮಾಡಲಿ? ಅದನ್ನು ಹೇಳು. ಅದನ್ನು ಮಾಡಿ. ನಾರಾಯಣನ ಬಳಿಗೆ ಹೋಗುತ್ತೇನೆ.

೧೩೩. ಋಷಿಗಳು ಹೇಳಿದರು- ಇದನ್ನು ಕೇಳಿ ಆಕೆಯು ಎಲೈ ಗರುಡನೇ! ನನಗೆ ಒಂದು ಮಹಾ ದುಃಖವು ಪ್ರಾಪ್ತವಾಗಿದೆ. ಅದನ್ನು ತಪ್ಪಿಸಿ ಹೋಗು.

೧೩೪. ನನ್ನ ಸವತಿಯಾದ ನಮ್ಮ ಅಕ್ಕನ ಮಾತಿನಂತೆ ನಾನು ಅವಳಿಗೆ ದಾಸಿಯಾಗಿದ್ದೇನೆ. ಅದರಿಂದ ಯಾರು ನನ್ನನ್ನು ಬಿಡಿಸುತ್ತಾರೆ?

ಕೃಷ್ಣಂ ಕೃತ್ವಾ ವಿಷೈರಶ್ವಂ ತಸ್ಯಾಃ ಪುತ್ರೈರ್ಮಹೋರಗೈಃ ।
ಉಷಃಕಾಲೇಽವದತ್ಸಾ ಚ ಅಶ್ವೋಽಯಂ ಕೃಷ್ಣತಾಂ ವ್ರಜೇತ್ ॥ ೧೩೫ ॥

ತತೋಽಹಮವದಂ ತತ್ರ ಸದಾಚಾರಮಿವಾಽಹಿತಾ ।
ಮಿಥ್ಯಾ ತೇ ವಚನಂ ಮಾತಃ ಪ್ರತಿಜಜ್ಞೇ ತದಾ ಮಯಾ ॥ ೧೩೬ ॥

ಯದೀಯಂ ಕೃಷ್ಣತಾಽಭ್ಯೇತಿ ಹರೇರಶ್ವಮಹಂ ತದಾ ।
ಕೃತಾ ಭವಾಮಿ ತೇ ದಾಸೀ ಹ್ಯಹಮೇತತ್ತದಾಽವದಂ ॥ ೧೩೭ ॥

ತತಸ್ತಸ್ಮಿರ್ಹರೇರಶ್ವೇ ಕೃತೇ ಕೃಷ್ಣೇ ಚ ಕೃತ್ರಿಮೈಃ ।
ತಸ್ಯಾಃ ಪುತ್ರೈಶ್ಚ ಧೂರ್ತೈಶ್ಚ ದಾಸೀತ್ವಮಗಮಂ ತದಾ ॥ ೧೩೮ ॥

ಯಸ್ಮಿನ್ಕಾಲೇ ಹ್ಯಭೀಷ್ಟಂ ಚ ತಸ್ಯಾ ದ್ರವ್ಯಂ ದದಾಮ್ಯಹಂ ।
ತಸ್ಮಿನ್ಕಾಲೇ ಹ್ಯದಾಸೀತ್ವಂ ಯಾಸ್ಯಾಮಿ ಕುಲನಂದನ ॥ ೧೩೯ ॥

॥ ಗರುಡ ಉವಾಚ ॥

ಪೃಚ್ಛ ಶೀಘ್ರಂ ಚ ಮಾತಸ್ತಾಂ ಕರಿಷ್ಯಾಮಿ ಪ್ರತಿಕ್ರಿಯಾಂ ।
ಭಕ್ಷಯಿಷ್ಯಾಮಿ ತಾನ್ನಾಗಾನ್ಪ್ರತಿಜ್ಞಾ ಮೇ ಯಥಾರ್ಥತಃ ॥ ೧೪೦ ॥

---

೧೩೫. ಆಕೆಯ ಮಕ್ಕಳಾದ ಸರ್ಪಗಳು ವಿಷದಿಂದ ಬಿಳಿ ಕುದುರೆಯನ್ನು ಕಪ್ಪಗೆ ಮಾಡಿದುವು. ಆಗ ಬೆಳಗ್ಗೆ ಆಕೆಯು ಈ ಕುದುರೆಯು ಕಪ್ಪಗಾಗುತ್ತಿದೆ. ಎಂದಳು.

೧೩೬. ಆಗ ನಾನು ಹಿಂದಿನಂತೆಯೇ ಎಂದು ತಿಳಿದು ನಿನ್ನ ಮಾತು ಸುಳ್ಳು. ಇಬ್ಬರೂ ಪಂದ್ಯಮಾಡೋಣವೆಂದು ಹೇಳಿದೆ

೧೩೭ ಇಂದ್ರನ ಈ ಉಚ್ಚೈಶ್ರವಸ್ಸೆಂಬ ಕುದುರೆಯು ಕಪ್ಪಾದರೆ ಆಗ ನಾನು ನಿನಗೆ ದಾಸಿಯಾಗುತ್ತೇನೆ. ಎಂದೆನು.

೧೩೮. ಆಗ ಅವನು ತನ್ನ ಮಕ್ಕಳಿಂದ ಆ ಬಿಳಿಯ ಕುದುರೆಯನ್ನು ಕಪ್ಪಾಗುವಂತೆ ಮಾಡಿಸಿದಳು. ಆಗ ನಾನು ಅವಳಿಗೆ ಆಳಾದೆನು.

೧೩೯. ನಾನು ಯಾವಾಗ ಅವಳಿಗೆ ಬೇಕಾದುದನ್ನು ಕೊಡುವೆನೋ ಆಗ ಅವಳ ದಾಸೀತ್ವದಿಂದ ಪಾರಾಗುವೆನು.

೧೪೦ ಗರುಡನು ಹೇಳಿದನು- ಅಮ್ಮ! ನೀನು ಹೋಗಿ ಅವಳನ್ನು ಏನು ಬೇಕೋ ಅದನ್ನು ಕೇಳು. ಅದಕ್ಕೆ ಪ್ರತೀಕಾರವನ್ನು ಮಾಡುತ್ತೇನೆ. ಆ ಸರ್ಪಗಳೆಲ್ಲವನ್ನೂ ತಿಂದು ಹಾಕುತ್ತೇನೆ. ಇದೇ ನನ್ನ ಪ್ರತಿಜ್ಞೆಯು.

॥ ಋಷಯ ಊಚುಃ ॥

ತತಃ ಕದ್ರೂಮುವಾಚೇದಂ ವಿನತಾ ದುಃಖಿತಾಃ ಸತೀ ॥ ೧೪೧ ॥

॥ ವಿನತೋವಾಚ ॥

ಅಭಿಷ್ಟಂ ವದ ಕಲ್ಯಾಣಿ ಯೇನ ಮುಚ್ಯೇಽಥ ಕೃಚ್ಛ್ರತಃ ॥ ೧೪೨ ॥

॥ ಋಷಯ ಊಚುಃ ॥

ಅಬ್ರವೀತ್ತಾಂ ದುರಾಚಾರಾ ಪೀಯೂಷಂ ದೀಯತಾಮಿತಿ ।
ಏತಚ್ಛ್ರುತ್ವಾ ತು ವಚನಮುಭವತ್ಸಾ ಚ ನಿಷ್ಪ್ರಭಾ ॥
ತತಃ ಶನೈರುಪಾಗಮ್ಯ ತನಯಂ ಪ್ರಾಹ ದುಃಖಿತಾ ॥ ೧೪೩ ॥

॥ ವಿನತೋವಾಚ ॥

ಅಮೃತಂ ಪ್ರಾರ್ಥಯೇತ್ಪಾಪಾ ತಾತ ಕಿಂ ವಾ ಕರಿಷ್ಯಸಿ ॥ ೧೪೪ ॥

॥ ಋಷಯ ಊಚುಃ ॥

ಶ್ರುತ್ವಾ ವಾಕ್ಯಂ ಗರುತ್ಮಾಂಶ್ಚ ರುಷಾ ಕ್ರೋಧಸಮನ್ವಿತಃ ॥ ೧೪೫ ॥

---

೧೪೧. ಋಷಿಗಳು ಹೇಳಿದರು- ಅನಂತರ ವಿನತೆಯು ಕದ್ರುವನ್ನು ಕುರಿತು ದುಃಖದಿಂದ ನಿನಗೇನು ಬೇಕು ? ಎಂದು ಕೇಳಿದಳು.

೧೪೨. ವಿನತೆಯು ಹೇಳಿದಳು- ಅಮ್ಮಾ ನಿನಗೇನು ಬೇಕು ? ಹೇಳು. ನಾನು ದಾಸ್ಯದಿಂದ ಪಾರಾಗಬೇಕು.

೧೪೩. ಋಷಿಗಳು ಹೇಳಿದರು- ಆಗ ಆ ಕದ್ರುವು ನನಗೆ ಅಮೃತವನ್ನು ತಂದುಕೊಡೆಂದು ಕೇಳಿದಳು. ಇದನ್ನು ಕೇಳಿ ವಿನತೆಯು ಕಂಗೆಟ್ಟು ನಿಂತಳು ಅನಂತರ ಮಗನ ಹತ್ತಿರಕ್ಕೆ ಬಂದು ಇಂತೆಂದಳು.

೧೪೪. ವಿನತೆಯು ಹೇಳಿದಳು- ಎಲೈ ಗರುಡನೇ! ಆ ಪಾಪಿನಿಯು ಅಮೃತವನ್ನು ಕೇಳುವಳು. ಏನು ಮಾಡುತ್ತೀಯಪ್ಪ ?

೧೪೫. ಋಷಿಗಳು ಹೇಳಿದರು- ಗರುಡನು ಈ ಮಾತನ್ನು ಕೇಳಿ ಕೋಪಗೊಂಡನು.

॥ ಗರುಡ ಉವಾಚ ॥

ಅಮೃತಂ ಚಾಽನಯಿಷ್ಯಾಮಿ ಮಾತರ್ಮಾ ವಿಮುಖೀ ಭವ ॥ ೧೪೬ ॥

॥ ಋಷಯ ಊಚುಃ ॥

ಏವಮುಕ್ತ್ವಾ ತು ತರಸಾ ಗತೋಽಸೌ ಪಿತುರಂತಿಕಂ ॥ ೧೪೭ ॥

॥ ಗರುಡ ಉವಾಚ ॥

ಅಮೃತಂ ಚಾಽನಯಿಷ್ಯಾಮಿ ಮಾತುರರ್ಥೇಽಧುನಾಽನಘ ॥ ೧೪೮ ॥

॥ ಋಷಯ ಊಚುಃ ॥

ಸ ತಸ್ಯ ವಚನಂ ಶ್ರುತ್ವಾ ಮುನಿಃ ಪ್ರಾಹ ಖಗೇಶ್ವರಂ ॥ ೧೪೯ ॥

। ಕಶ್ಯಪ ಉವಾಚ ॥

ಸತ್ಯಲೋಕಸ್ಯ ವೈ ಚೋರ್ಧ್ವಂ ವಿಶ್ವಕರ್ಮವಿನಿರ್ಮಿತಾ ।
ಪುರೀ ಚಾಸ್ತಿ ಸಭಾ ರಮ್ಯಾ ದೇವಾನಾಂ ಹಿತಹೇತವೇ ॥ ೧೫೦ ॥

---

೧೪೬. ಗರುಡನು ಹೇಳಿದನು- ಅಮ್ಮ! ಅಮೃತವನ್ನು ತಂದುಕೊಡು ತ್ತೇನೆ. ನೀನು ಹೆದರಬೇಡ.

೧೪೭. ಋಷಿಗಳು ಹೇಳಿದರು- ಹೀಗೆಂದು ಹೇಳಿ ಶೀಘ್ರವಾಗಿ ತಂದೆಯ ಬಳಿಗೆ ಹೋದನು.

೧೪೮. ಗರುಡನು ಹೇಳಿದನು- ಎಲೈ ನಿರ್ದುಷ್ಟನಾದ ತಂದೆಯೆ ! ತಾಯಿ ಗೋಸ್ಕರ ಈಗ ಅಮೃತವನ್ನು ತರುತ್ತೇನೆ.

೧೪೯. ಋಷಿಗಳು ಹೇಳಿದರು- ಆ ಗರುಡನ ಮಾತನ್ನು ಕೇಳಿ ಕಶ್ಯಪನು ಗರುಡನಿಗೆ ಇಂತೆಂದನು.

೧೫೦. ಕಶ್ಯಪನು ಹೇಳಿದನು- ಸತ್ಯಲೋಕದ ಮೇಲೆ ವಿಶ್ವಕರ್ಮನು ಒಂದು ಪಟ್ಟಣವನ್ನು ಕಟ್ಟಿ ದೇವತೆಗಳಿಗೋಸ್ಕರ ಅಲ್ಲಿ ಒಂದು ಸಭೆಯನ್ನು ಸೃಷ್ಟಿಸಿದನು.

ವಹ್ನಿಪ್ರಾಕಾರದುರ್ಲಭ್ಯಾ ದುರ್ಧರ್ಷಾ ಚಾಸುರೈಃ ಸುರೈಃ ।
ರಕ್ಷಾರ್ಥಂ ನಿರ್ಮಿತೋ ದೇವಃ ಸುರೈಸ್ತತ್ರ ಮಹಾಬಲಃ ॥
ಯಂ ಯಂ ಪಶ್ಯತಿ ವೀರಃ ಸ ಸ ಏವ ಭಸ್ಮತಾಂ ವ್ರಜೇತ್ ॥ ೧೫೧ ॥

॥ ಸುಪರ್ಣ ಉವಾಚ ॥

ನಾರಾಯಣಾದ್ವರೋ ಲಭ್ಧೋ ಮಯಾ ಚ ಮುನಿಸತ್ತಮ ।
ಭಯಂ ನಾಸ್ತೀತಿ ಮೇ ತಾತ ಸುರಾಸುರಗಣಾದಪಿ ॥ ೧೫೨ ॥

॥ ಋಷಯ ಊಚುಃ ॥

ಏವಮುಕ್ತ್ವಾ ಗರುತ್ಮಾನ್ಸ ಉದ್ಧೃತ್ಯ ಸಾಗರಾಜ್ಜಲಂ ।
ಜಗಾಮಾಕಾಶಮಾವಿಶ್ಯ ಖಗಶ್ರಾಯಂ ಮನೋಜವಃ ॥ ೧೫೩ ॥

ಪಕ್ಷವಾತೇನ ತಸ್ಯೈವ ರಜಃ ಸಮುದ್ಗತಂ ಬಹು ।
ತಸ್ಯಾಂತಿಕಂ ನ ಚ ತ್ಯಕ್ತಮಗಮತ್ತಸ್ಯ ತಚ್ಛ್ರಯಂ ॥ ೧೫೪ ॥

---

೧೫೧. ಅದರ ಸುತ್ತಲೂ ಬೆಂಕಿಯ ಕೋಟೆ ಕಟ್ಟಿದೆ. ದೇವತೆಗಳಾಗಲಿ ರಾಕ್ಷಸರಾಗಲಿ ಅಲ್ಲಿಗೆ ಹೋಗಲಾರರು ದೇವತೆಗಳೆಲ್ಲರೂ ಸೇರಿ ಅದರ ರಕ್ಷಣೆಗೆ ಒಬ್ಬ ಬಲಿಷ್ಠನನ್ನು ನಿರ್ಮಿಸಿದ್ದಾರೆ. ಆ ವೀರನು ಯಾರ ಯಾರನ್ನು ನೋಡುತ್ತಾನೆಯೋ ಅವರೆಲ್ಲರೂ ಬೂದಿಯಾಗಿ ಹೋಗುತ್ತಾರೆ.

೧೫೨. ಸುಪರ್ಣನು ಹೇಳಿದನು– ಎಲೈ ಮುನಿಶ್ರೇಷ್ಠನೇ ! ನಾನು ನಾರಾಯಣನಿಂದ ವರವನ್ನು ಹೊಂದಿದ್ದೇನೆ. ನನಗೆ ಸುರರಿಂದಲಾಗಲಿ, ಅಸುರರಿಂದಲಾಗಲಿ, ಭಯವಿಲ್ಲ.

೧೫೩. ಋಷಿಗಳು ಹೇಳಿದರು-- ಹೀಗೆನ್ನಲು ಗರುಡನು ಸಮುದ್ರದಿಂದ ಕೊಕ್ಕಿನಲ್ಲಿ ನೀರನ್ನು ತುಂಬಿಕೊಂಡು ಆಕಾಶದಲ್ಲಿ ವೇಗದಿಂದ ಹೊರಟನು.

೧೫೪. ಅವನ ರೆಕ್ಕೆಗಳ ಗಾಳಿಯಿಂದ ಬಹುವಾದ ಧೂಳು ಎದ್ದಿತು. ಹಾಗೆ ಎದ್ದ ಧೂಳು ನಾಶವಾಗದೆ ಅವನ ಸುತ್ತಲೂ ಇದ್ದಿತು.

ಗತ್ವಾ ಚಂಚುಜಲೇನಾಪಿ ವಹ್ನಿಂ ನಿರ್ವಾಪಯದ್ಬಲೀ ।
ರಜೋಭಿಃ ಪರಿಪೂರ್ಣಾಕ್ಷ್ನೋ ನ ಸುರಸ್ತಂ ಚ ಪಶ್ಯತಿ ॥ ೧೫೫ ॥
ಜಘಾನ ರಕ್ಷಿವರ್ಗಾಂಸ್ತಾನಮೃತಂ ಚಾಽಹರದ್ಬಲೀ ।

ಆನಯಂತಂ ಚ ಪೀಯೂಷಂ ಖಗಂ ಗತ್ವಾ ಶತಕ್ರತುಃ ॥
ಐರಾವತಂ ಸಮಾರೂಢೋ ವಾಕ್ಯಮೇತದುವಾಚ ಹ ॥ ೧೫೬ ॥

॥ ಇಂದ್ರ ಉವಾಚ ॥

ಖಗರೂಪಧರಃ ಕಸ್ತ್ವಂ ಪೀಯೂಷಂ ಹರಸೇ ಬಲಾತ್ ।
ಅಪ್ರಿಯಂ ಸರ್ವದೇವಾನಾಂ ಕೃತ್ವಾ ಜೀವೇರಿತಃ ಕಥಂ ॥
ವಿಶಿಖೈರಗ್ನಿಸಂಕಾಶೈರ್ನಯಾಮಿ ಯಮಮಂದಿರಂ ॥ ೧೫೭ ॥

॥ ಋಷಯ ಊಚುಃ ॥

ಶ್ರುತ್ವಾ ವಾಕ್ಯಂ ಹರೇಸ್ತಸ್ಯ ಚುಕೋಪ ಚ ಮಹಾಬಲಃ ॥ ೧೫೮ ॥

---

೧೫೫. ಗರುಡನು ಹೋಗಿ ಕೊಕ್ಕಿನಲ್ಲಿದ್ದ ನೀರಿನಿಂದ ಆ ಬೆಂಕಿಯನ್ನು ಆರಿಸಿದನು. ಧೂಳಿನಿಂದ ಆವೃತನಾಗಿದ್ದುದರಿಂದ ಆ ಸುರನು ಈ ಗರುಡನನ್ನು ಕಾಣಲಿಲ್ಲ.

೧೫೬. ಅಲ್ಲಿರತಕ್ಕ ಕಾವಲುಗಾರನನ್ನು ಕೊಂದನು. ಅಮೃತವನ್ನು ತೆಗೆದುಕೊಂಡು ಬರುತ್ತಿರಲು ಇಂದ್ರನು ಐರಾವತದ ಮೇಲೆ ಕುಳಿತು ಈ ಗರುಡನ ಬಳಿಗೆ ಬಂದು ಇಂತೆಂದನು.

೧೫೭. ಇಂದ್ರನು ಹೇಳಿದನು- ಹಕ್ಕಿಯ ರೂಪವನ್ನು ಧರಿಸಿರುವ ನೀನಾರು? ಅಮೃತವನ್ನು ಬಲಾತ್ಕಾರದಿಂದ ತೆಗೆದುಕೊಂಡು ಹೋಗುತ್ತಿರುವೆಯಲ್ಲಾ ? ದೇವತೆಗಳಿಗೆಲ್ಲಾ ಕೆಡಕನ್ನುಂಟುಮಾಡಿ ಇದರಿಂದ ನೀನು ಹೇಗೆ ಬದುಕುತ್ತೀಯೇ ? ಬೆಂಕಿಯಂತಿರುವ ಈ ಬಾಣಗಳಿಂದ ನಿನ್ನನ್ನು ಯಮನ ಮನೆಗೆ ಕಳುಹಿಸುತ್ತೇನೆ.

೧೫೮. ಋಷಿಗಳು ಹೇಳಿದರು- ಇಂದ್ರನ ಈ ಮಾತನ್ನು ಕೇಳಿ ಈ ಬಲಿಷ್ಠನಾದ ಗರುಡನಿಗೆ ಕೋಪ ಬಂದಿತು.

॥ ಗರುಡ ಉವಾಚ ॥

ನಯಾಮಿ ತವ ಪೀಯೂಷಂ ದರ್ಶಯಸ್ವ ಪರಾಕ್ರಮಂ ॥ ೧೫೯ ॥

॥ ಋಷಯ ಊಚುಃ ॥

ನಿತಚ್ಛ್ರುತ್ವಾ ಮಹಾಬಾಹುರ್ಜಘಾನ ವಿಶಿಖೈಃ ಶಿತೈಃ ।
ಯಥಾ ಮೇರುಗಿರೇಃ ಶೃಂಗಂ ತೋಯವರ್ಷೇಣ ತೋಯದಃ ॥ ೧೬೦ ॥

ನಖೈರಶನಿಸಂಕಾಶೈರ್ಬಿಭೇದ ಗರುಡೋ ಗಜಂ ॥
ಮಾತಲಿಂ ಚ ರಥಂ ಚಕ್ರಂ ತಥಾ ದೇವಾನ್ಸುರಸ್ಸರಾ‌ನ್ ॥ ೧೬೧ ॥

ವ್ಯಥಿತೋಽಸೌ ಮಹಾಬಾಹುರ್ಮಾತಲಿರ್ಗಜಪುಂಗವಃ ।
ವಿಮುಖಾಃ ಪಕ್ಷವಾತೇನ ಸರ್ವೇ ದೇವಗಣಾಸ್ತಥಾ ॥ ೧೬೨ ॥

ತತಸ್ತು ಕೋಪಿತೋ ಜಿಷ್ಣುರ್ಜಘಾನ ಕುಲಿಶೇನ ತಂ ।
ಕುಲಿಶಸ್ಯಾವಪಾತೇನ ನ ಚ ಕ್ಷುಬ್ಧೋ ಮಹಾಖಗಃ ॥ ೧೬೩ ॥

೧೫೯. ಗರುಡನು ಹೇಳಿದನು-ಅಯ್ಯಾ ನಿನ್ನ ಅಮೃತವನ್ನು ತೆಗೆದುಕೊಂಡು ಹೋಗುತ್ತೇನೆ. ಪರಾಕ್ರಮವನ್ನು ತೋರಿಸು.

೧೬೦. ಋಷಿಗಳು ಹೇಳಿದರು- ಇದನ್ನು ಕೇಳಿ ಮೇರು ಪರ್ವತದ ಶಿಖರವನ್ನು ಮೇಘವು ಮಳೆಯ ಹನಿಗಳಿಂದ ಹೊಡೆದು ಮುಚ್ಚುವಂತೆ ಇಂದ್ರನು ಆ ಬಾಣಗಳಿಂದ ಆ ಗರುಡನನ್ನು ಹೊಡೆದನು

೧೬೧. ಗರುಡನು ಐರಾವತವನ್ನು ಉಗುರುಗಳಿಂದ ಸೀಳಿದನು. ಮತ್ತು ಮಾತಳಿಯನ್ನೂ ಇಂದ್ರನ ಜೊತೆಯಲ್ಲಿ ಬಂದಿದ್ದ ದೇವತೆಗಳನ್ನೂ ಗಾಯಪಡಿಸಿ ಅವರ ರಥವನ್ನೂ ಚಕ್ರವನ್ನೂ ಮುರಿದನು.

೧೬೨. ಆಗ ಆ ಮಾತಳಿಯೂ, ಆನೆಯೂ ದೇವತೆಗಳೂ ಈ ಗರುಡನ ರೆಕ್ಕೆಯ ಗಾಳಿಯಿಂದಲೂ ತೊಂದರೆಪಟ್ಟು ಹಿಂತಿರುಗಿದರು. ಇಂದ್ರನು ಬಹು ನೊಂದನು.

೧೬೩. ಅನಂತರ ಇಂದ್ರನು ಕೋಪಗೊಂಡು ವಜ್ರಾಯುಧದಿಂದ ಹೊಡೆದನು. ಆ ಏಟಿನಿಂದ ಗರುಡನು ನೋವನ್ನು ಹೊಂದಲಿಲ್ಲ.

ಸ್ವಂ ಮೋಘಂ ಭಿದುರಂ ದೃಷ್ಟ್ವಾ ಹರಿರ್ಭೀತೋಽಭವತ್ತದಾ ।
ಸನ್ನಿವೃತ್ಯ ತತೋ ಯುದ್ಧಾತ್ತತ್ರೈವಾಂತರಧೀಯತ ॥ ೧೬೪ ॥

ಸುತರಾಮಪಿ ಗಚ್ಛಂತಂ ವೇಗಾದ್ಭೂತಲಮಾಗತಃ ।
ಅಬ್ರವೀತ್ಸ ಸುರಶ್ರೇಷ್ಠಃ ಸರ್ವದೇವಗಣಾಗ್ರತಃ ॥ ೧೬೫ ॥

॥ ಶಕ್ರ ಉವಾಚ ॥

ಯದಿ ದಾಸ್ಯಾಮಿ ಪೀಯೂಷಮಿದಾನೀಂ ನಾಗಮಾತರಿ ।
ಭುಜಂಗಾಶ್ಚಾಮರಾಃ ಸರ್ವೇ ಕ್ರಿಯಂತೇ ಹಿ ಧ್ರುವಂ ತಯಾ ॥ ೧೬೬ ॥

ಪ್ರತಿಜ್ಞಾ ತೇ ಭವೇನ್ನಷ್ಟಾ ನ ಫಲಂ ಜೀವಿತಸ್ಯ ತೇ ।
ತಸ್ಮಾದಿದಂ ಹರಿಷ್ಯಾಮಿ ಸಮ್ಮತೇನ ತವಾಽನಘ ॥ ೧೬೭ ॥

॥ ಗರುತ್ಮಾನುವಾಚ ॥

ಯಸ್ಮಿನ್ಕಾಲೇ ಹ್ಯದಾಸೀ ಸಾ ಮಾತಾ ಮೇ ದುಃಖಿತಾ ಸತೀ ।
ವಿದಿತಾ ಸರ್ವಲೋಕೇಷು ಹರೇಽಮೃತಂ ಹರಿಷ್ಯಸಿ ॥ ೧೬೮ ॥

---

೧೬೪. ಇಂದ್ರನು ತನ್ನ ವಜ್ರಾಯುಧವು ಆತನಲ್ಲಿ ವ್ಯರ್ಥವಾದುದನ್ನು ತಿಳಿದು ಯುದ್ಧದಿಂದ ಹಿಂತಿರುಗಿ ಕಾಣದಂತಾದನು.

೧೬೫. ಗರುಡನು ಅವರನ್ನು ಸೋಲಿಸಿ ಇತ್ತ ಬರುತ್ತಿರಲು ಇಂದ್ರನು ಆ ದೇವತೆಗಳ ಎದುರಿಗೆ ಗರುಡನನ್ನು ಕುರಿತು ಇಂತೆಂದನು.

೧೬೬. ಇಂದ್ರನು ಹೇಳಿದನು- ಎಲೈ ಗರುಡನೇ! ನೀನು ಈಗ ನಾಗಗಳ ತಾಯಿಯಾದ ಕದ್ರುವಿಗೆ ಈ ಅಮೃತವನ್ನು ಕೊಟ್ಟರೆ ಎಲ್ಲಾ ಸರ್ಪಗಳನ್ನೂ ಆಕೆಯು ಅಮೃತದಿಂದ ಸಾಯದಂತೆ ಮಾಡುತ್ತಾಳೆ.

೧೬೭. ಆಗ ನಿನ್ನ ಪ್ರತಿಜ್ಞೆಯೂ ನಷ್ಟವಾಗುತ್ತದೆ. ನೀನು ಬದುಕಿದ್ದೂ ಸಾರ್ಥಕವಿಲ್ಲದಂತಾಗುತ್ತದೆ. ಆದ್ದರಿಂದ ಈ ಅಮೃತವನ್ನು ನಿನ್ನ ಒಪ್ಪಿಗೆಯಿಂದಲೇ ಹಿಂತಿರುಗಿ ತೆಗೆದುಕೊಳ್ಳುತ್ತೇನೆ.

೧೬೮. ಗರುಡನು ಹೇಳಿದನು- ದಾಸಿಯಾಗಿರುವ ನಮ್ಮ ತಾಯಿಯು ಎಲ್ಲಿ ರಿದುರಿಗೂ ಬಿಡಲ್ಪಟ್ಟ ಮೇಲೆ ಎಲ್ಲರಿಗೂ ಗೊತ್ತಾದನಂತರ ಅಮೃತವನ್ನು ನೀನು ತರಬಹುದು.

॥ ಋಷಯ ಊಚುಃ ॥

ಏವಮುಕ್ತ್ವಾ ಮಹಾವೀರ್ಯೋ ಗತ್ವೋವಾಚ ಪ್ರಸೂಂ ತದಾ ॥ ೧೬೯ ॥

॥ ಗರುಡ ಉವಾಚ ॥

ಆನೀತಮಮೃತಂ ಮಾತಸ್ತಸ್ಯಾ ಏವ ಪ್ರದೀಯತಾಂ ॥ ೧೭೦ ॥

॥ ಋಷಯ ಊಚುಃ ॥

ಪ್ರೋತ್ಫುಲ್ಲಹೃದಯಾಸಾ ಚ ದೃಷ್ಟ್ವಾ ಪುತ್ರಂ ಸಹಾಮೃತಂ ।
ತಾಮಾಹೂಯಾಮೃತಂ ದತ್ವಾ ಹ್ಯದಾಸೀತಾಂ ಗತಾ ತದಾ ॥ ೧೭೧ ॥

ತೃಣಕಾಷ್ಠಾನಿ ಭೂತಾನಿ ಪಶವಶ್ಚ ಸರೀಸೃಪಾಃ ।
ದೃಷ್ಟ್ವಾ ಸವಿಸ್ಮಯಾಃ ಸರ್ವೇ ದೇವಾ ಮಹರ್ಷಯಸ್ತಥಾ ॥ ೧೭೨ ॥

ಮೋಚಯಿತ್ವಾ ತು ತಾಮಂಬಾಂ ಗರುಡಃ ಸುಪ್ತತಾಂ ಗತಃ ।
ಏತಸ್ಮಿನ್ನಂತರೇ ಶಕ್ರೋ ಜಹಾರ ಸಹಸಾ ಸುಧಾಂ ॥ ೧೭೩ ॥

---

೧೬೯. ಋಷಿಗಳು ಹೇಳಿದರು- ಇಂದ್ರನಿಗೆ ಹೀಗೆಂದು ಹೇಳಿ ಆ ಗರುಡನು ಅಮೃತವನ್ನು ತೆಗೆದುಕೊಂಡು ತಾಯಿಯ ಬಳಿಗೆ ಹೋಗಿ ಇಂತೆಂದನು.

೧೭೦. ಗರುಡನು ಹೇಳಿದನು- ಅಮ್ಮಾ! ಅಮೃತವನ್ನು ತಂದಿದ್ದೇನೆ. ಆ ಕದ್ರುವಿಗೆ ಕೊಡು.

೧೭೧. ಋಷಿಗಳು ಹೇಳಿದರು- ಮಗನು ಅಮೃತವನ್ನು ತಂದಿರುವುದನ್ನು ವಿನತೆಯು ನೋಡಿ ಸಂತೋಷಪಟ್ಟು ಕದ್ರುವನ್ನು ಕರೆದು ಕೊಟ್ಟು ತಾನು ದಾಸಿತನದಿಂದ ಬಿಡುಗಡೆ ಹೊಂದಿದಳು.

೧೭೨. ಆಗ ತೃಣ, ಕಾಷ್ಠ, ಪಶುಗಳು ನಾಗಗಳೇ ಮುಂತಾದ ಎಲ್ಲಾ ಪ್ರಾಣಿಗಳೂ, ದೇವತೆಗಳೂ, ಋಷಿಗಳೂ, ಇದನ್ನು ನೋಡಿ ಆಶ್ಚರ್ಯಪಟ್ಟರು.

೧೭೩. ಅಮೃತವನ್ನು ಕೊಟ್ಟಮೇಲೆ ಗರುಡನು ತನ್ನ ತಾಯಿಯನ್ನು ಬಿಡಿಸಿ ಸ್ವತಂತ್ರನಾದನು. ಇಷ್ಟರೊಳಗೆ ಆ ಇಂದ್ರನು ಬಂದು ಅಮೃತವನ್ನು ಕದ್ದುಕೊಂಡು ಹೋದನು.

ತತಶ್ಚ ಗರಲಂ ದತ್ವಾ ತಯಾ ಚಾನುಪಮಲಕ್ಷಿತಃ ।
ಪ್ರಹೃಷ್ಟಹೃದಯಾ ಕದ್ರೂಃ ಪುತ್ರಾನಾಹೂಯ ಸಂಭ್ರಮಾತ್ ॥ ೧೭೪ ॥

ತೇಷಾಂ ಮುಖೇ ದದೌ ಹೃಷ್ಟಾ ಕ್ಷ್ವೇಡಂ ಚಾಮೃತಲಕ್ಷಣಂ ।
ತಾನುವಾಚ ಪ್ರಸೂಃ ಪುತ್ರಾನ್ಯುಷ್ಮಾಕಂ ಚ ಕುಲೇ ಸದಾ ॥ ೧೭೫ ॥

ಮುಖೇ ತಿಷ್ಠಂತ್ವಮೀ ದೇವಾ ಬಿಂದವಶ್ಚಾಸ್ಯ ನಿರ್ವೃತಾಃ ।
ಮಹರ್ಷಯಸ್ತತೋ ದೇವಾಃ ಸಿದ್ಧಗಂಧರ್ವಮಾನುಷಾಃ ॥ ೧೭೬ ॥

ಊಚುಃ ಸಂತು ಕುಲೇ ಮಾತರಸ್ಮಾಕಂ ಚ ಪ್ರಸಾದತಃ ।
ನಾಗೈರ್ವಿಸರ್ಜಿತಾ ದೇವಾಃ ಸಸಿದ್ಧಾ ಮುನಯಸ್ತಥಾ ॥ ೧೭೭ ॥

ಜಗ್ಮುಃ ಸ್ವಮಾಲಯಂ ಹೃಷ್ಟಾ ನಾಗಾಃ ಪ್ರಮುದಿತಾಃ ಸ್ಥಿತಾಃ ।
ಏತಸ್ಮಿನ್ನಂತರೇ ನಾಗಾಂಶ್ಚಖಾದ ಗರುಡೋ ಬಲಾತ್ ॥ ೧೭೮ ॥

ದಿಕ್ಷು ಪಲಾಯಿತಾಃ ಶೇಷಾಃ ಪರ್ವತೇಷು ವನೇಷು ಚ ।
ಸಾಗರೇಷು ಚ ಪಾತಾಲೇ ಬಿಲೇಷು ತರುಕೋಟರೇ ॥ ೧೭೯ ॥

ನಿಭೃತೇಷು ನಿಕುಂಜೇಷು ಸ್ಥಿತಾಃ ಸರ್ಪಾಶ್ಚ ನಿರ್ವೃತಾಃ ।
ಭುಜಗಾಂಶ್ಚೈವ ಭಕ್ಷ್ಯಾಂಶ್ಚ ಸದೈವ ವಿಧಿನಿರ್ಮಿತಾನ್ ॥ ೧೮೦ ॥

---

೧೭೪-೧೮೦. ಇಂದ್ರನು ಆ ಅಮೃತವನ್ನು ಕದಿಯುವಾಗ ಅದನ್ನು ಕದ್ದ ಅದರ ಸ್ಥಾನದಲ್ಲಿ ವಿಷದ ಪಾತ್ರೆಯನ್ನಿಟ್ಟಿದ್ದನು. ಅದು ಆ ಕದ್ರುವಿಗೆ ತಿಳಿಯಲಿಲ್ಲ. ಆಗ ಆ ಕದ್ರುವು ಮಕ್ಕಳನ್ನು ಕುರಿತು ನಿಮ್ಮ ಕುಲದಲ್ಲಿಯೂ ನಿಮ್ಮ ಬಾಯಿಯಲ್ಲಿಯೂ ಈ ಬಿಂದುಗಳೂ ದೇವತೆಗಳೂ ಇರಲಿ. ಮತ್ತು ಮಹರ್ಷಿಗಳೂ, ದೇವತೆಗಳೂ ಸಿದ್ಧರೂ, ಗಂಧರ್ವರೂ, ಮನುಷ್ಯರೂ, ಇರಲಿ. ಎಂದೂ ಹೇಳಿದಳು. ನಾಗಗಳೂ ಹಾಗೇ ಆಗಲೆಂದು ತಾಯಿಗೆ ಹೇಳಿದುವು. ಅಮೃತವಿದ್ದುದರಿಂದ ಆಗ ನಾಗಗಳು ಅಲ್ಲಿಗೆ ಬಂದಿದ್ದ ಎಲ್ಲರನ್ನೂ ಕಳುಹಿಸಲು ಎಲ್ಲರೂ ಅವರವರ ಸ್ಥಳಗಳಿಗೆ ಹೊರಟು ಹೋದರು. ನಾಗಗಳು ಸಂತೋಷದಿಂದಿದ್ದುವು. ಇಷ್ಟರಲ್ಲಿ ಗರುಡನು ಬಲಾತ್ಕಾರದಿಂದ ಹಾವುಗಳನ್ನೆಲ್ಲಾ ತಿನ್ನುತ್ತಾ ಬಂದನು. ಆಗ ಆ ಹಾವುಗಳು ಹೆದರಿ ದಿಕ್ಕುದಿಕ್ಕುಗಳಿಗೆ ಓಡಿಹೋಗಿ ಪರ್ವತದಲ್ಲಿಯೂ ವನದಲ್ಲಿಯೂ ಪಾತಾಳದಲ್ಲಿಯೂ ಬಿಲದಲ್ಲಿಯೂ ಮರದಪೊಟ್ಟರೆಗಳಲ್ಲಿಯೂ ಪೊದರುಗಳಲ್ಲಿಯೂ ಮರೆಯಾಗಿರುತ್ತ ಬಂದುವು. ದೇವರು

ಸ ಖಾದಯಿತ್ವಾ ನಾಗಾಂಶ್ಚ ಸಂಭಾಷ್ಯ ಪಿತರಾವಥ ।
ವಿಬುಧಾನ್ಪೂಜಯಿತ್ವಾ ತು ಜಗಾಮ ಹರಿಮವ್ಯಯಂ ॥ ೧೮೧ ॥

ಯಃ ಪಠೇಚ್ಛೃಣುಯಾದ್ವಾಪಿ ಸುಪರ್ಣಚರಿತಂ ಶುಭಂ ।
ಸರ್ವಪಾಪವಿನಿರ್ಮುಕ್ತಃ ಸುರಲೋಕೇ ಮಹೀಯತೇ ॥ ೧೮೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಗರುಡೋತ್ಪತ್ತಿರ್ನಾಮ
॥ ಚತುಶ್ಚತ್ವಾರಿಂಶತ್ತಮೋಽಧ್ಯಾಯಃ ॥

---

ತನಗೆ ಮಾಡಿದ ತಿಂಡಿಯಾದ ಹಾವುಗಳನ್ನು ತಿಂದು ತಾಯಿತಂದೆಗಳನ್ನು ಕೇಳಿಕೊಂಡು ದೇವತೆಗಳನ್ನು ಪೂಜಿಸಿ ಗರುಡನು ಹರಿಯ ಹತ್ತಿರಕ್ಕೆ ಹೋದನು.

೧೮೨. ಈ ಗರುಡ ಚರಿತ್ರೆಯನ್ನು ಓದಿದವನೂ, ಕೇಳಿದವನೂ, ಸರ್ವ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಸ್ವರ್ಗದಲ್ಲಿ ಸುಖಿಸುತ್ತಾನೆ

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಗರುಡೋತ್ಪತ್ತಿಯೆಂಬ
ನಾಲ್ವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಪಂಚಚತ್ವಾರಿಂಶತ್ತಮೋಽಧ್ಯಾಯಃ ॥



॥ ಬ್ರಹ್ಮೋವಾಚ ॥

ಅತಃ ಪರಂ ತು ವಿಪ್ರರ್ಷೇ ಚಾಂಡಾಲಪತಿತೋ ದ್ವಿಜಃ ।
ಪ್ರಲಪ್ಯ ಚ ಬಹೂಂ ಶೋಕಾಂ ಜಗಾಮ ಕಶ್ಯಪಂ ಮುನಿಂ ॥ ೧ ॥

ಗತ್ವೋವಾಚ ಮುನಿಶ್ರೇಷ್ಠ ವದಾಸ್ಮಾಕಂ ಹಿತಂ ವಚಃ ।
ಯಥಾ ಪಾಪಾದ್ವಿಮುಚ್ಯೇಽಹಂ ಮುನಿಶ್ರೇಷ್ಠ ತಥಾ ಕುರು ॥
ತಮುವಾಚ ಮಹಾತೇಜಾ ಈಷದ್ಧಾಸ್ಯಸಮನ್ವಿತಃ ॥ ೨ ॥

॥ ಕಶ್ಯಪ ಉವಾಚ ॥

ಸಂದರ್ಶನಾಚ್ಚ ಮ್ಲೇಚ್ಛಾನಾಮುಪಶಾಂತೋಽಸಿ ವೈ ಸ್ವಯಂ ।
ಗಾಯತ್ರ್ಯಾಶ್ಚ ಜಪೈರ್ಹೋಮೈರ್ವ್ರತೈಶ್ಚಾಂದ್ರಾಯಣಾದಿಭಿಃ ॥ ೩ ॥

---

## ನಾಲ್ವತ್ತೈದನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು- ಆ ಚಂಡಾಲರೊಡನೆ ಬೆರೆತ ಆ ಬ್ರಾಹ್ಮಣನು ಬಹುವಾಗಿ ದುಃಖಪಟ್ಟು ಕಶ್ಯಪನ ಬಳಿಗೆ ಹೋದನು.

೨. ಅವನ ಬಳಿಗೆ ಹೋಗಿ ಎಲೈ ಮುನಿಯೇ! ನನಗೆ ಅನುಕೂಲವಾಗುವಂತಹ ಬೋಧನೆ ಮಾಡು. ನಾನು ಪಾಪದಿಂದ ಮುಕ್ತಿಯನ್ನು ಹೊಂದುವಂತೆ ಬೋಧಿಸು ಎನ್ನಲು ಆ ಕಶ್ಯಪನು ಸ್ವಲ್ಪ ನಕ್ಕು ಇಂತೆಂದನು.

೩-೪. ಕಶ್ಯಪನು ಹೇಳಿದನು- ಅಯ್ಯಾ! ನೀನು ಮ್ಲೇಚ್ಛರುಗಳನ್ನು ನೋಡಿಯೇ ವೈರಾಗ್ಯವನ್ನು ಹೊಂದಿದ್ದೀಯೆ. ಗಾಯತ್ರಿಯ ಜಪ, ಹೋಮ,

ಸ್ಮರ್ ನಿತ್ಯಂ ಹರೇಃ ಪಾದಮುಪೋಷ ಹರಿವಾಸರಂ ।
ಅಹರ್ನಿಶಂ ಹರೇರ್ಧ್ಯಾನಂ ಪ್ರಣಾಮಂ ಕುರು ತಂ ಪ್ರಭುಂ ॥ ೪ ॥

ತೀರ್ಥಸ್ನಾನೇನ ಮಂತ್ರೇಣ ಪಂಕಸ್ಯಾಂತಂ ಗಮಿಷ್ಯಸಿ ।
ತತಃ ಪಾಪಕ್ಷಯಾದೇವ ಬ್ರಾಹ್ಮಣತ್ವಂ ಚ ಲಪ್ಸ್ಯಸೇ ॥
ವ್ರತೈರ್ವರ್ಷಾದ್ದಿವಂ ಮೋಕ್ಷಂ ನಾಶಯನ್ಕಲ್ಮಷಂ ದ್ವಿಜ ॥ ೫ ॥

॥ ಋಷಯ ಊಚುಃ ॥

ಮುನೇಸ್ತಸ್ಯ ವಚಃ ಶ್ರುತ್ವಾ ಕೃತಕೃತ್ಯೋಽಭವತ್ತದಾ ।
ಪುಣ್ಯಂ ಸ ವಿವಿಧಂ ಕೃತ್ವಾ ಪುನರ್ಬ್ರಹ್ಮತ್ವಮಾಪ್ತವಾನ್ ॥ ೬ ॥

ತತಸ್ತಪ್ತ್ವಾ ತಪಸ್ತೀವ್ರಂ ಸ್ವರ್ಲೋಕಂ ಚಿರಮಭ್ಯಗಾತ್ ।
ಸದ್ವೃತ್ತಸ್ಯಾಖಿಲಂ ಪಾಪಂ ಕ್ಷಯಂ ಯಾತಿ ದಿನೇ ದಿನೇ ॥ ೭ ॥

ಅಸದ್ವೃತ್ತಸ್ಯ ಪುಣ್ಯಂ ಹಿ ಕ್ಷಯಂ ಯಾತ್ಯಂಜನೋಪಮಂ ।
ಅನಾಚಾರಾದ್ಧತೋ ವಿಪ್ರಃ ಸ್ವಾಚಾರಾತ್ಸುರತಾಂ ವ್ರಜೇತ್ ॥ ೮ ॥

ವ್ರತ ಇವನ್ನಾಚರಿಸುತ್ತ ಹರಿವಾಸರದಲ್ಲಿ ಉಪವಾಸ ಮಾಡುತ್ತ ಯಾವಾಗಲೂ ಹರಿಯನ್ನೇ ಸ್ಮರಿಸುತ್ತ ಅವನನ್ನು ನಮಸ್ಕರಿಸುತ್ತಿರು.

೫. ತೀರ್ಥಗಳ ಸ್ನಾನದಿಂದಲೂ ಮಂತ್ರಗಳ ಉಚ್ಚಾರದಿಂದಲೂ ಪಾಪಗಳನ್ನು ಕಳೆದುಕೊಳ್ಳುತ್ತೀಯೆ. ಪಾಪ ನಾಶವಾದನಂತರ ಬ್ರಾಹ್ಮಣ್ಯವು ಒರುತ್ತದೆ. ವ್ರತಗಳ ಪುಣ್ಯದಿಂದ ಪಾಪಗಳನ್ನು ಕಳೆದುಕೊಂಡು ಮೋಕ್ಷವನ್ನು ಹೊಂದುತ್ತೀಯೆ.

೬. ಋಷಿಗಳು ಹೇಳಿದರು— ಆ ಋಷಿಯ ಮಾತನ್ನು ಕೇಳಿ ಆತನು ಕೃತಕೃತ್ಯನಾಗಿ ನಾನಾ ಒಗೆಯಾದ ಪುಣ್ಯ ಕೆಲಸಗಳನ್ನೂ ಮಾಡಿ ಮತ್ತೆ ಬ್ರಾಹ್ಮಣ್ಯವನ್ನು ಪಡೆದನು.

೭. ಅನಂತರ ಉಗ್ರವಾದ ತಪಸ್ಸನ್ನು ಮಾಡಿ ಆತನು ಸ್ವರ್ಗವನ್ನೂ ಹೊಂದಿದನು. ಒಳ್ಳೆಯ ಆಚಾರಶೀಲನಿಗೆ ಪಾಪಗಳು ದಿನದಿನಕ್ಕೂ ನಾಶವಾಗುತ್ತವೆ.

೮. ದುರಾಚಾರಿಯಾದವನು ಪರ್ವತದಷ್ಟು ಪುಣ್ಯವಿದ್ದರೂ ನಾಶಮಾಡಿಕೊಳ್ಳುತ್ತಾನೆ. ದುರಾಚಾರದಿಂದ ನಾಶವಾಗುತ್ತಾನೆ. ಆಚಾರವನ್ನು ಎಲ್ಲರಿಗೂ ಹೇಳಿಕೊಟ್ಟರೆ ಅವನು ದೇವತೆಯಾಗುತ್ತಾನೆ.

ತತಃ ಕಂಠಗತೈಃ ಪ್ರಾಣೈರಾಚಾರಂ ಕುರುತೇ ದ್ವಿಜಃ
ಕರ್ಮಣಾ ಮನಸಾಂಽಗೇನ ಸದಾಚಾರಂ ಸದಾ ಕುರು ॥ ೯ ॥

॥ ಬ್ರಹ್ಮೋವಾಚ ॥

ಕಶ್ಯಪಸ್ಯೋಪದೇಶೇನ ಸ ವಿನೀತೋಽಭವದ್ದ್ವಿಜಃ ।
ಪುಣ್ಯಾತ್ಪಾಪಕ್ಷಯಂ ಕೃತ್ವಾ ತಪಸ್ತಪ್ತ್ವಾಽಥ ಸ್ವರ್ಗತಃ ॥ ೧೦ ॥

ಹತಾಚಾರೀ ಹತೋ ವಿಪ್ರಃ ಸ್ವರ್ಗಲೋಕೇಷು ಗರ್ಹಿತಃ ।
ಆಚಾರಂ ತು ಪುನಃ ಕೃತ್ವಾ ಸುರಲೋಕೇ ಮಹೀಯತೇ ॥ ೧೧ ॥

॥ ನಾರದ ಉವಾಚ ॥

ಪ್ರಾಪ್ನುವಂತಿ ಗತಿಂ ಲೋಕಾಃ ಪೂಜಯಿತ್ವಾ ದ್ವಿಜೋತ್ತಮಾನ್ ।
ದ್ವಿಜಾನಾಂ ಪೀಡನಂ ಕೃತ್ವಾ ಗತಿಂ ಗಚ್ಛಂತಿ ಕಾಂ ಪ್ರಭೋ ॥ ೧೨ ॥

॥ ಬ್ರಹ್ಮೋವಾಚ ॥

ಕ್ಷುಧಾ ಸಂತಪ್ತದೇಹಾನಾಂ ಬ್ರಾಹ್ಮಣಾನಾಂ ಮಹಾತ್ಮನಾಂ ।
ನಾರ್ಚಯೇಚ್ಛಕ್ತಿತೋ ಭಕ್ತ್ಯಾ ಸ ಯಾತಿ ನರಕಂ ನರಃ ॥ ೧೩ ॥

---

೯. ಆದ್ದರಿಂದ ಬ್ರಾಹ್ಮಣನಾದವನು ಪ್ರಾಣಗಳು ಹೋಗುತ್ತಿದ್ದಾಗಲೂ, ಆಚಾರವನ್ನು ಅನುಸರಿಸುತ್ತಿರಬೇಕು. ಕರ್ಮ, ಮನಸ್ಸು, ಅಂಗಗಳಿಂದ ಯಾವಾಗಲೂ ಸದಾಚಾರವನ್ನು ಮಾಡುತ್ತಿರು.

೧೦. ಬ್ರಹ್ಮನು ಹೇಳಿದನು-ಕಶ್ಯಪನ ಉಪದೇಶದಿಂದ ವಿನಯವನ್ನು ಹೊಂದಿ ಆ ಬ್ರಾಹ್ಮಣನು ಪುಣ್ಯವನ್ನಾಚರಿಸಿ ಸ್ವರ್ಗವನ್ನು ಹೊಂದಿದನು.

೧೧. ಆಚಾರವಿಲ್ಲದ ಬ್ರಾಹ್ಮಣನು ನಾಶವಾಗುತ್ತಾನೆ. ಸ್ವರ್ಗದಲ್ಲಿ ಅವನಿಗೆ ಜಾಗವಿಲ್ಲ ಆಚಾರವಂತನಾದರೆ ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

೧೨. ನಾರದನು ಹೇಳಿದನು– ಜನರು ಬ್ರಾಹ್ಮಣರನ್ನು ಪೂಜಿಸಿದರೆ ಯಾವ ಲೋಕವು ಬರುತ್ತದೆ ? ಆ ದ್ವಿಜರನ್ನು ಪೀಡಿಸಿದವರಿಗೆ ಯಾವ ಗತಿಯು ಬರುತ್ತದೆ ?

೧೩. ಬ್ರಹ್ಮನು ಹೇಳಿದನು– ಹಸಿವುಗೊಂಡ ಬ್ರಾಹ್ಮಣರನ್ನು ಭಕ್ತಿಯಿಂದ ಆಹಾರಾದಿಗಳಿಂದ ಪೂಜಿಸದಿದ್ದರೆ ಅವನು ನರಕಕ್ಕೆ ಹೋಗುವನು.

ಪರುಷೇಣ ಕ್ರೋಶಯಿತ್ವಾ ಕ್ರೋಧಾದ್ಯಸ್ತು ವಿಸರ್ಜಯೇತ್ ।
ಸ ಯಾತಿ ನರಕಂ ಘೋರಂ ಮಹಾರೌರವಕೃಚ್ಛ್ರಕಂ ॥ ೧೪ ॥

ಸನ್ನಿವೃತ್ತಸ್ತತಃ ಕೀಟಾದಂತ್ಯಜಾತಿಷು ಜಾಯತೇ ।
ತತೋ ರೋಗೀ ದರಿದ್ರಸ್ತು ಕ್ಷುಧಯಾ ಪರಿಪೀಡಿತಃ ॥ ೧೫ ॥

ನಾವಮನ್ಯೇತ್ತತೋ ವಿಪ್ರಂ ಕ್ಷುಧಯಾ ಗೃಹಮಾಗತಂ ।
ನ ದದಾಮೀತಿ ಯೋ ಬ್ರೂಯಾದ್ದೇವಾಗ್ನಿಬ್ರಾಹ್ಮಣೇಷು ಚ ॥ ೧೬ ॥

ತಿರ್ಯಗ್ಯೋನಿ ಶತಂಗತ್ವಾ ಚಾಂಡಾಲತ್ವಂ ಸ ಗಚ್ಛತಿ ।
ಪಾದಮುದ್ಧಮ್ಯ ಯೋ ವಿಪ್ರಂ ಹಂತಿ ಗಾಂ ಪಿತರೌ ಗುರುಂ ॥ ೧೭ ॥

ರೌರವೇ ನಿಯತಂ ವಾಸಸ್ತಸ್ಯ ನಾಸ್ತೀತಿ ನಿಷ್ಕೃತಿಃ ।
ಯದಿ ಪುಣ್ಯಾದ್ಭವೇಜನ್ಮ ಸ ಏವ ಪಂಗುತಾಂ ವ್ರಜೇತ್ ॥ ೧೮ ॥

ಅತಿದೀನೋ ವಿಷಾದೀ ಚ ದುಃಖಶೋಕಾಭಿಪೀಡಿತಃ ।
ಏವಂ ಜನ್ಮತ್ರಯಂ ಪ್ರಾಪ್ಯ ಭವೇತ್ತಸ್ಯೈವ ನಿಷ್ಕೃತಿಃ ॥ ೧೯ ॥

---

೧೪. ಆ ಹಸಿದ ಬ್ರಾಹ್ಮಣನನ್ನು ಕ್ರೂರವಾದ ಮಾತುಗಳಿಂದ ಕೋಪಗೊಂಡು ಓಡಿಸಿದ ಪಕ್ಷದಲ್ಲಿ ಅವನು ಕ್ರೂರವಾದ ರೌರವಾದಿ ನರಕವನ್ನು ಹೊಂದುತ್ತಾನೆ.

೧೫. ಆ ನರಕದಿಂದ ಬಂದನಂತರ ಹುಳು ಮೊದಲಾದ ಕೀಳು ಜಾತಿಯಲ್ಲಿ ಹುಟ್ಟುತ್ತಾನೆ. ಅನಂತರ ಮನುಷ್ಯ ಜಾತಿಯಲ್ಲಿ ಹುಟ್ಟಿ ದರಿದ್ರನಾಗಿ, ರೋಗಿಯಾಗಿ ಯಾವಾಗಲೂ ಹಸಿವಿನಿಂದ ಕೂಡಿದವನಾಗಿಯೇ ಇರುತ್ತಾನೆ.

೧೬-೧೮. ಆದ್ದರಿಂದ ಹಸಿವುಗೊಂಡು ಮನೆಗೆ ಬಂದ ಬ್ರಾಹ್ಮಣನನ್ನು ಅವಮಾನ ಪಡಿಸಬಾರದು. ದೇವರು, ಅಗ್ನಿ, ಬ್ರಾಹ್ಮರಿಗೋಸ್ಕರ ಕೊಡುವುದಿಲ್ಲವೆಂದು ಹೇಳುವವನು ಅನೇಕ ಕೀಳುಜಾತಿಗಳನ್ನು ಹೊಂದಿ ಅನಂತರ ಚಂಡಾಲನಾಗಿ ಹುಟ್ಟುತ್ತಾನೆ. ಯಾವನು ಗೋವು, ತಾಯಿತಂದೆಗಳನ್ನು ಕಾಲೆತ್ತಿ ಒದೆದರೆ ರೌರವ ನರಕದಲ್ಲಿ ಬೀಳುತ್ತಾನೆ. ಅದಕ್ಕೆ ಪರಿಹಾರವೇ ಇರುವುದಿಲ್ಲ. ಒಂದು ವೇಳೆ ಪುಣ್ಯದಿಂದ ಜನ್ಮತಾಳಿದರೂ ಕುಂಟನಾಗಿ ಹುಟ್ಟುತ್ತಾನೆ.

೧೯. ಹಾಗೆ ಕುಂಟನಾಗಿ ಹುಟ್ಟಿದರೂ ದೀನನಾಗಿಯೂ ವಿಷಾದಗೊಂಡು ದುಃಖಶೋಕಗಳಿಂದ ಕೂಡಿಯೂ ಈ ರೀತಿ ಮೂರು ಜನ್ಮಗಳನ್ನು ಹೊಂದುತ್ತಾನೆ. ಆಗ ಅದಕ್ಕೆ ಪ್ರತೀಕಾರಮಾಡಿದಂತಾಗುತ್ತದೆ.

ಮುಷ್ಟಿಚರ್ಪಟಕೀಲೈಶ್ಚ ಹನ್ಯಾದ್ವಿಪ್ರಂ ತು ಯಃ ಪುಮಾನ್ ।
ತಾಪನೇ ರೌರವೇ ಘೋರೇ ಕಲ್ಪಾಂತಂ ಸೋऽಪಿ ತಿಷ್ಠತಿ ॥ ೨೦ ॥

ಅಥ ಜನ್ಮ ಸಮಾಸಾದ್ಯ ಕುಕ್ಕುರಃ ಕರವಂಡಕಃ ।
ಅಂತ್ಯಜಾತಿಷು ಜಾತೋऽಪಿ ದರಿದ್ರಃ ಕುಕ್ಷಿಶೂಲವಾನ್ ॥ ೨೧ ॥

ಪಾದಮುದ್ಯಮ್ಯತೇ ವಾಚಾ ತಸ್ಯ ಪಾದೇ ಶಿಲೀಪದಃ ।
ಖಂಜೋ ವಾ ಮೃದುಜಂಘೋ ವಾ ಖಂಡಪಾದೋ ಭವೇನ್ನರಃ ॥ ೨೨ ॥

ಪಕ್ಷವಾತೇನ ಚಾಂಗಾನಿ ಪ್ರಕಂಪಂತೇ ಸದೈವ ಹಿ ।
ಮಾತರಂ ಪಿತರಂ ವಿಪ್ರಂ ಸ್ನಾತಕಂ ಚ ತಪಸ್ವಿನಂ ॥ ೨೩ ॥

ಹತ್ವಾ ಗುರುಗಣಂ ಕ್ರೋಧಾತ್ಕುಂಭೀಪಾಕೇ ಚಿರಂ ವಸೇತ್ ।
ಉಷಿತ್ವಾ ಚೈವ ಜಾಯೇತ ಕೀಟಜಾತಿಷು ತತ್ಪರಂ ॥ ೨೪ ॥

---

೨೦. ಮುಷ್ಟಿ, ಬಿಚ್ಚಿರುವ ಕೈ, ದೊಣ್ಣೆಗಳಿಂದ ಯಾವನು ಬ್ರಾಹ್ಮಣನನ್ನು ಹೊಡೆಯುತ್ತಾನೆಯೋ ಅವನು ತಪಿಸುವ ರೌರವ ನರಕದಲ್ಲಿ ಕಲ್ಪಕಾಲದವರೆಗೂ ಬಿದ್ದಿರುತ್ತಾನೆ.

೨೧. ಅನಂತರ ಕೋಳಿ ಕೊಕ್ಕರೆಯಾಗಿ ಕೀಳು ಜಾತಿಯಲ್ಲಿ ಹುಟ್ಟುತ್ತಾನೆ. ಅನಂತರ ಅಂತ್ಯ ಜಾತಿಯಾದ ಚಂಡಾಲಾದಿಗಳಲ್ಲಿ ಹುಟ್ಟಿ ದರಿದ್ರನೂ, ಹೊಟ್ಟೆ ನೋವುಳ್ಳವನೂ ಆಗಿ ತೊಂದರೆ ಪಡುತ್ತಾನೆ.

೨೨. ಯಾವನು ಬಾಯಿಂದ ಒದೆಯುತ್ತೇನೆಂದನ್ನುತ್ತಾನೆಯೋ ಅವನು ಪಾದಗಳು ಕಿಸುಗಾಲನ್ನಾಗಿಯೋ ಕುಂಟನಾಗಿಯೋ ಬಲವಾದ ತೊಡೆಗಳಿಲ್ಲದವನಾಗಿಯೋ ಕುಂಟನಾಗಿಯೋ ಹುಟ್ಟುತ್ತಾನೆ.

೨೩-೨೪. ಅಂತಹವನಿಗೆ ಪಾರ್ಶ್ವ ವಾಯುವು ಬಂದು ಯಾವಾಗಲೂ ಅಂಗಗಳು ನಡುಗುತ್ತವೆ. ತಾಯಿ, ತಂದೆ, ಸ್ನಾತಕ, ತಪಸ್ವಿ ಗುರುಗಳು ಇವರನ್ನು ಕೊಂದರೆ ಕುಂಭೀಪಾಕದಲ್ಲಿ ಬೀಳುತ್ತಾನೆ. ಅಲ್ಲಿ ಹೀಗೆ ಬಹು ಕಾಲವಿದ್ದು ಅನಂತರ ಕೀಟಗಳ ಜಾತಿಯಲ್ಲಿ ಹುಟ್ಟುತ್ತಾನೆ.

ವಿರುದ್ಧಂ ಪರುಷಂ ವಾಕ್ಯಂ ಯೋ ವದೇದ್ಧಿ ದ್ವಿಜಾತಿಷು ।
ಅಷ್ಟೌ ಕುಷ್ಠಾಃ ಪ್ರಜಾಯಂತೇ ತಸ್ಯ ದೇಹೇ ದೃಢಂ ಸುತ ॥ ೨೫ ॥

ವಿಚರ್ಚಿಕಾಥ ದದ್ರುಶ್ಚ ಮಂಡಲಾಃ ಶಕ್ತಿಸಿಧ್ಮಕೌ ।
ಕಾಲಿಕುಷ್ಠಸ್ತಥಾ ಶುಕ್ಲಸ್ತ್ವರುಣಶ್ಚಾತಿ ದಾರುಣಃ ॥ ೨೬ ॥

ತತೋ ಭಿಷಕ್ಪ್ರಯೋಗೇ ಚ ಪಾಪಾತ್ಪುಣ್ಯಂ ಪಲಾಯತೇ ।
ಅಪುಣ್ಯಾಜ್ಜಲರೇಖೇವ ತೇನೈವ ನಿಧನಂ ವ್ರಜೇತ್ ॥ ೨೭ ॥

ಏಷಾಂ ಮಧ್ಯೇ ಮಹಾಕುಷ್ಠಸ್ತ್ರಯ ಏವ ಪ್ರಕೀರ್ತಿತಾಃ ।
ಕಾಲಿಕುಷ್ಠಸ್ತಥಾ ಶುಕ್ಲಸ್ತ್ವರುಣಶ್ಚಾತಿದಾರುಣಃ ॥ ೨೮ ॥

ಮಹಾಪಾತಕಭಾವಾನಾಂ ಜ್ಞಾನಾತ್ಸಂಸರ್ಗತೋಽಪಿ ವಾ ।
ಅತಿಪಾತಕಿನಾಮೇವ ತ್ರಯೋ ದೇಹೇ ಭವಂತಿ ವೈ ॥ ೨೯ ॥

ಸಂಸರ್ಗಾತ್ಸಹ ಸಂಬಂಧಾದ್ರೋಗಃ ಸಂಚರತೇ ನೃಣಾಂ ।
ದೂರಾತ್ಪರಿತ್ಯಜೇದ್ಧೀರಃ ಸ್ಪೃಷ್ಟ್ವಾ ಸ್ನಾನಂ ಸಮಾಚರೇತ್ ॥ ೩೦ ॥

---

೨೫. ಬ್ರಾಹ್ಮಣರಿಗೆ ವಿರುದ್ಧವಾಗಿ ಅಥವಾ ಕೆಟ್ಟ ಮಾತುಗಳನ್ನು ಆಡಿದರೆ ಅವನ ದೇಹದಲ್ಲಿ ಎಂಟು ಬಗೆಯ ಕುಷ್ಠರೋಗಗಳು ಹುಟ್ಟುತ್ತವೆ.

೨೬-೨೭. ಕಜ್ಜಿ, ದದ್ದುದದ್ದಾಗಿ ಮೈಯಲ್ಲಿ ಆಗುವುದು, ಕೊಳೆಹುಣ್ಣು, ಮೈ ಒಡೆಯುವುದು, ಚಿಬ್ಬು, ಕರಿತೊನ್ನು, ಬಿಳಿತೊನ್ನು, ಕೈಕಾಲುಗಳು ಕೊಳೆತು ಬೀಳುವುದು, ಈ ಎಂಟು ಬಗೆಯ ಕುಷ್ಠಗಳು. ಇವುಗಳಿಗೆ ಔಷಧಿಯನ್ನು ಮಾಡುವ ಪಾಪದಿಂದ ಪುಣ್ಯ ನಾಶವಾಗುತ್ತದೆ. ನೀರಿನ ರೇಖೆಯು ನಾಶವಾಗುವಂತೆ ಪಾಪ ದಿಂದ ಅವನು ಸಾಯುತ್ತಾನೆ.

೨೮. ಇವುಗಳಲ್ಲಿ ಕಪ್ಪುತೊನ್ನು, ಬಿಳಿಯ ತೊನ್ನು, ಕೊಳೆಯುವ ಕುಷ್ಠ, ಇವು ಮೂರೂ ಮಹಾ ಕುಷ್ಠಗಳು, ಎನ್ನಿಸಿಕೊಳ್ಳುತ್ತವೆ

೨೯. ಇವು ಮಹಾ ಪಾತಕಿಗಳ ಸಂಸರ್ಗದಿಂದಲೂ ಬರುತ್ತವೆ. ಅತಿ ಪಾಪ ಮಾಡಿದವರಿಗೆ ಈ ಮೂರು ಖಂಡಿತ ಬರುತ್ತವೆ.

೩೦. ಇವರನ್ನು ಮುಟ್ಟುವಿಕೆ. ಇವರ ಸಂಬಂಧ ಇವುಗಳಿಂದ ಮನುಷ್ಯರಿಂದ ಮನುಷ್ಯರಿಗೆ ರೋಗಗಳು ಬರುತ್ತವೆ. ಆದ್ದರಿಂದ ಬುದ್ಧಿವಂತನಾದವನು ಇವರನ್ನು ದೂರದಲ್ಲಿಯೇ ಬಿಡಬೇಕು. ಇಲ್ಲವೆ ಮುಟ್ಟಿದರೆ ಸ್ನಾನ ಮಾಡಬೇಕು.

ಪತಿತಂ ಕುಷ್ಠಸಂಯುಕ್ತಂ ಚಾಂಡಾಲಂ ಚ ಗವಾಶಿನಂ ।
ಶ್ವಾನಂ ರಜಸ್ವಲಾಂ ಭಿಲ್ಲಂ ಸ್ಪೃಷ್ಟ್ವಾ ಸ್ನಾನಂ ಸಮಾಚರೇತ್ ॥ ೩೧ ॥

ದುರಿತಸ್ಯಾನುರೂಪೇಣ ದೇಹೇ ಕುಷ್ಠಾ ವ್ಯವಸ್ಥಿತಾಃ ।
ಇಹ ಲೋಕೇ ಪರತ್ರೈವಾಪ್ಯತ್ರ ನಾಸ್ತಿ ತು ಸಂಶಯಃ ॥ ೩೨ ॥

ನ್ಯಾಯೇನೋಪವರ್ಜಿತಾಂ ವೃತ್ತಿಂ ಬ್ರಹ್ಮಸ್ವಂ ಹರತೇ ತು ಯಃ ।
ಅಕ್ಷಯಂ ನರಕಂ ಪ್ರಾಪ್ಯ ಪುನರ್ಜನ್ಮ ನ ವಿದ್ಯತೇ ॥ ೩೩ ॥

ಪಿಶುನೋ ಯಸ್ತು ವಿಪ್ರಾಣಾಂ ರಂಧ್ರಾನ್ವೇಷಣತತ್ಪರಃ ।
ತಂ ದೃಷ್ಟ್ವಾಽಪ್ಯಥ ವಾ ಸ್ಪೃಷ್ಟ್ವಾ ಸಚೈಲೋ ಜಲಮಾವಿಶೇತ್ ॥ ೩೪ ॥

ಬ್ರಹ್ಮಸ್ವಂ ಪ್ರಣಯಾದ್ಭುಕ್ತಂ ದಹತ್ಯಾಸಪ್ತಮಂ ಕುಲಂ ।
ವಿಕ್ರಮೇಣ ತು ಭುಂಜಾನೋ ದಶ ಪೂರ್ವಾನ್ ದಶಾಪರಾನ್ ॥ ೩೫ ॥

ನ ವಿಷಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ ।
ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರಪೌತ್ರಕಂ ॥ ೩೬ ॥

---

೩೧ ಪತಿತ, ಕುಷ್ಠರೋಗಿ, ಚಂಡಾಲ, ಗೋಮಾಂಸವನ್ನು ತಿನ್ನುವವನು ನಾಯಿ, ಮುಟ್ಟಾದವಳು, ಬೇಡರವನು, ಇವರನ್ನು ಮುಟ್ಟಿದರೆ ಸ್ನಾನಮಾಡಬೇಕು.

೩೨. ಪಾಪಕ್ಕೆ ತಕ್ಕಂತೆ ದೇಹದಲ್ಲಿ ರೋಗಗಳು ಇರುತ್ತವೆ. ಇಹ ಪರಗಳೆರಡರಲ್ಲಿಯೂ ಇರುತ್ತವೆ. ಸಂಶಯವಿಲ್ಲ.

೩೩. ನ್ಯಾಯದಿಂದ ಸಂಪಾದಿಸಿದ ಬ್ರಾಹ್ಮಣನ ಸ್ವತ್ತನ್ನು ಯಾವನು ಕದಿಯುತ್ತಾನೆಯೋ ಅವನು ಅಕ್ಷಯವಾದ ನರಕವನ್ನು ಹೊಂದುತ್ತಾನೆ. ಮತ್ತೆ ಜನ್ಮವನ್ನೇ ಹೊಂದುವುದಿಲ್ಲ.

೩೪. ಚಾಡಿಯನ್ನು ಹೇಳುತ್ತ ಬ್ರಾಹ್ಮಣರ ಹುಳುಕನ್ನೇ ಹುಡುಕುವವನನ್ನು ನೋಡಿದರಾಗಲೀ, ಮುಟ್ಟಿದರಾಗಲೀ ಉಟ್ಟ ಬಟ್ಟೆಯೊಡನೆ ಸ್ನಾನಮಾಡಬೇಕು.

೩೫. ಬ್ರಾಹ್ಮಣನ ಸ್ವತ್ತನ್ನು ಅವನೊಡನೆ ಸಂತೋಷದಿಂದ ತಿಂದರೇನೆ ಏಳು ಕುಲಗಳನ್ನು ದಹಿಸುತ್ತದೆ. ಬಲಾತ್ಕಾರದಿಂದ ಕಿತ್ತುಕೊಂಡು ತಿಂದರಂತೂ ಹಿಂದಿನ ಹತ್ತು ತಲೆಗಳನ್ನೂ ಮುಂದಿನ ಹತ್ತು ತಲೆಗಳನ್ನೂ ನಾಶಮಾಡುತ್ತದೆ

೩೬ ಜನರು ವಿಷವನ್ನು ವಿಷವೆನ್ನುವುದಿಲ್ಲ. ಬ್ರಾಹ್ಮಣನ ಸ್ವತ್ತನ್ನು ವಿಷವೆನ್ನುತ್ತಾರೆ. ವಿಷವು ಒಬ್ಬನನ್ನು ಕೊಲ್ಲುತ್ತದೆ. ಬ್ರಹ್ಮಸ್ವತ್ತು ಮಕ್ಕಳು ಮೊಮ್ಮಕ್ಕಳನ್ನೂ ನಾಶಮಾಡುತ್ತದೆ.

ಮೋಹಾಚ್ಚ ಮಾತರಂ ಗತ್ವಾ ಬ್ರಾಹ್ಮಣೀಂ ಚ ಗುರೋಃ ಸ್ತ್ರಿಯಂ ।
ಪತಿತ್ವಾ ರೌರವೇ ಘೋರೇ ಪುನರುತ್ಪತ್ತಿರ್ದುರ್ಲಭಃ ॥ ೩೭ ॥

ಪತಂತಿ ಪಿತರಸ್ತಸ್ಯ ಕುಂಭೀಪಾಕೇಽಥ ತಾಪನೇ ।
ಅವೀಚಿಕಾಲಸೂತ್ರೇ ಚ ಮಹಾರೌರವರೌರವೇ ॥ ೩೮ ॥

ಕದಾಪಿ ಚಿದಪಿ ವಾ ತೇಷಾಂ ನಿಷ್ಕೃತಿರ್ನಾವಮೇನಿರೇ ।
ಪ್ರಾಣಂ ಹತ್ವಾ ದ್ವಿಜಾತೀನಾಂ ಸ್ವಯಂ ಯಾತ್ಯಪುನರ್ಭವಂ ।
ಪತಂತಿ ಪುರುಷಾಸ್ತಸ್ಯ ರೌರವೇ ಚ ಸಹಸ್ರಶಃ ॥ ೩೯ ॥

॥ ನಾರದ ಉವಾಚ ॥

ಸರ್ವೇಷಾಮೇವ ವಿಪ್ರಾಣಾಂ ವಧೇ ಚ ಪಾತಕಂಸರುಂ ।
ವಿಷಮಂ ವಾ ಕುತಸ್ತಿಷ್ಠೇತ್ತತ್ತ್ವತೋ ವಕ್ತುಮರ್ಹಸಿ ॥ ೪೦ ॥

॥ ಬ್ರಹ್ಮೋವಾಚ ॥

ಪತ್ವಾ ವಿಪ್ರಂ ಧ್ರುವಂ ಪುತ್ರ ಪಾತಕಂ ಯದುದಾಹೃತಂ ।
ಲಭತೇ ಬ್ರಹ್ಮಹಾ ಘೋರಂ ವಕ್ತವ್ಯಂ ಚಾಪರಂ ಶೃಣು ॥ ೪೧ ॥

---

೩೭. ಬುದ್ಧಿಯಿಲ್ಲದೆ ತಾಯಿಯಲ್ಲಿ ರಮಿಸಿದರೆ, ಬ್ರಾಹ್ಮಣ ಜಾತಿಯವಳಾದ ಗುರುವಿನ, ಹೆಂಡತಿಯನ್ನು ರಮಿಸಿದರೆ, ಘೋರವಾದ ನರಕದಲ್ಲಿ ಬೀಳುತ್ತಾನೆ ಮತ್ತೆ ಹುಟ್ಟುವುದೇ ಇಲ್ಲ.

೩೮-೩೯. ಅವನ ಪಿತೃಗಳೂ ರೌರವದಲ್ಲಿಯೂ, ಘೋರವಾದ ಕುಂಭೀಪಾಕದಲ್ಲಿಯೂ, ಅವೀಚಿ ಕಾಲಸೂತ್ರವೆಂಬ, ದೊಡ್ಡ ಮತ್ತೊಂದು ರೌರವ ನರಕದಲ್ಲಿಯೂ, ಬೀಳುತ್ತಾರೆ, ಅವರಿಗ್ಗೆ ಇದಕ್ಕೆ ಪರಿಹಾರವೇ ಇರುವುದಿಲ್ಲ. ಬ್ರಾಹ್ಮಣರನ್ನು ಕೊಂದರೆ ಸಾವಿರ ಬಾರಿ ನರಕದಲ್ಲಿಯೇ ಬಿದ್ದು ಮತ್ತೆ ಏಳುವುದೇ ಇಲ್ಲ.

೪೦. ನಾರದನು ಹೇಳಿದನು- ಯಾವ ರೀತಿಯಾದ ಬ್ರಾಹ್ಮಣನನ್ನು ಕೊಂದರೂ ಪಾಪವು ಒಂದೇ ಬಗೆಯಾದುದೇ ? ಅಥವಾ ವ್ಯತ್ಯಾಸವುಂಟೇ ? ಅದನ್ನು ಸರಿಯಾಗಿ ತಿಳಿಸು.

೪೧. ಬ್ರಹ್ಮನು ಹೇಳಿದನು- ಎಲೈ ಮಗನೇ ! ಬ್ರಾಹ್ಮಣನನ್ನು ಕೊಂದರೆ ಪಾಪವನ್ನೂ, ಅದರ ಯಾತನೆಯನ್ನೂ, ಹೇಳಿದೆನು. ಅದಕ್ಕಿಂತಲೂ ಪಾಪದ ಹೆಚ್ಚು ಕಡಿಮೆಯಿಂದ ತಕ್ಕ ನರಕವನ್ನು ಹೊಂದುತ್ತಾನೆ. ಅದನ್ನು ಹೇಳುವೆನು. ಕೇಳು.

ಲಕ್ಷಕೋಟಿಸಹಸ್ರಾಣಾಂ ಬ್ರಾಹ್ಮಣಾನಾಂ ವಧೋ ಭವೇತ್
ವೇದಶಾಸ್ತ್ರಯುತಂ ಹತ್ವಾ ಶ್ರೋತ್ರಿಯಂ ವಿಜಿತೇಂದ್ರಿಯಂ ॥ ೪೨ ॥

ಶೈವಂ ಚ ವೈಷ್ಣವಂ ಹತ್ವಾ ತಸ್ಮಾದ್ದಶಗುಣೋತ್ತರಂ ।
ಸ್ವವಂಶಾನ್ಪಾತಯಿತ್ವಾ ತು ಪುನರ್ಜನ್ಮ ನ ವಿದ್ಯತೇ ॥ ೪೩ ॥

ತ್ರಿವೇದಂ ಸ್ನಾತಕಂ ಹತ್ವಾ ವಧಸ್ಯಾಂತೋ ನ ವಿದ್ಯತೇ ।
ಶ್ರೋತ್ರಿಯಂ ಚ ಸದಾಚಾರಂ ತೀರ್ಥಮಂತ್ರಪ್ರಪೂತಕಂ ॥ ೪೪ ॥

ಈದೃಶಂ ಬ್ರಾಹ್ಮಣಂ ಹತ್ವಾ ಪಾಪಸ್ಯಾಂತೋ ನ ವಿದ್ಯತೇ ।
ಅಪಕಾರಂ ಸಮುದ್ದಿಶ್ಯ ದ್ವಿಜಃ ಪ್ರಾಣಾನ್ಪರಿತ್ಯಜೇತ್ ॥ ೪೫ ॥

ದೃಶ್ಯತೇ ಯತ್ರ ಚಾನ್ಯೈಸ್ತು ಬ್ರಹ್ಮಹಾ ಸ ಭವೇನ್ನರಃ ।
ವಚೋಭಿಃ ಪುರುಷೈರ್ವೃತ್ತೈಃ ಪೀಡಿತಸ್ತಾಡಿತೋ ದ್ವಿಜಃ ॥ ೪೬ ॥

ಯಮುದ್ದಿಶ್ಯ ತ್ಯಜೇತ್ಪ್ರಾಣಾಂಸ್ತಮಾಹುರ್ಬ್ರಹ್ಮಘಾತಿನಂ ।
ಋಷಯೋ ಮುನಯೋ ದೇವಾಃ ಸರ್ವೇ ಬ್ರಹ್ಮವಿಧಸ್ತಥಾ ॥ ೪೭ ॥

---

೪೨. ವೇದ ಶಾಸ್ತ್ರಗಳನ್ನು ಓದಿ ಶ್ರೋತ್ರಿಯನಾಗಿ ಜಿತೇಂದ್ರಿಯನಾದವನನ್ನು ಕೊಂದರೆ, ಲಕ್ಷ ಕೋಟಿ ಸಾವಿರ ಬ್ರಾಹ್ಮಣರನ್ನು ಕೊಂದ ಪಾಪವು ಬರುತ್ತದೆ.

೪೩. ಶಿವಭಕ್ತ ವಿಷ್ಣುಭಕ್ತರಾದ ಬ್ರಾಹ್ಮಣರನ್ನು ಕೊಂದರೆ ಅದಕ್ಕೆ ಹತ್ತರಷ್ಟು ಹೆಚ್ಚು ಪಾಪ ಬರುತ್ತದೆ. ತನ್ನ ವಂಶದವರನ್ನು ಕೊಂದರೆ, ನರಕದಿಂದ ಬಂದು ಜನ್ಮವನ್ನು ಹೊಂದುವಂತೆಯೇ ಇಲ್ಲ.

೪೪-೪೮. ಮೂರು ವೇದ ಓದಿದವರನ್ನೂ ಸ್ನಾತಕನನ್ನೂ ಕೊಂದರೆ ಆ ಪಾಪಕ್ಕೆ ಕೊನೆಯೇ ಇಲ್ಲ. ಸದಾಚಾರವುಳ್ಳವನೂ, ಶ್ರೋತ್ರಿಯನೂ, ತೀರ್ಥದಿಂದ ಪವಿತ್ರನೂ ಆದವನನ್ನು ಕೊಂದರೆ ಆ ಪಾಪಕ್ಕೂ ಕೊನೆಯೇ ಇರುವುದಿಲ್ಲ. ಯಾವನಾದರೂ ಮಾಡಿದ ಅಪಕಾರವನ್ನೇ ಸ್ಮರಿಸಿಕೊಂಡು ಅದರಿಂದ ಪ್ರಾಣವನ್ನು ಕಳೆದುಕೊಂಡರೆ ಆ ಅಪಕಾರಮಾಡಿದವನು ಬ್ರಹ್ಮಹತ್ಯೆಯನ್ನು ಹೊಂದುವನು ಕೆಟ್ಟ ಮಾತುಗಳನ್ನಾಡಿಯಾಗಲೀ, ಹೊಡೆದಾಗಲಿ, ಪೀಡಿಸಿಯಾಗಲಿ, ಬ್ರಾಹ್ಮಣನು ಪ್ರಾಣ ಬಿಡುವಂತೆ ಮಾಡಿದರೆ ಯಾವನು ಪ್ರಾಣ ಬಿಡಲು ಕಾರಣನೋ ಅವನು ಬ್ರಹ್ಮಹತ್ಯೆಯನ್ನು ಹೊಂದುವನು. ಋಷಿಗಳಾಗಲಿ, ಮುನಿಗಳಾಗಲಿ, ದೇವರಾಗಲಿ, ಬ್ರಹ್ಮಜ್ಞಾನಿಗಳಾಗಲಿ, ಯಾವ ದೇಶದಿಂದಲಾಗಲಿ, ಯಾವ ರಾಜನಿಂದಾಗಲಿ, ಅವಮಾನ

ದೇಶಾನಾಂ ಪಾರ್ಥಿವಾನಾಂ ಚ ಸಾ ತೇ ವಧ್ಯಾ ಭವೇದಿಹ ।
ಅತೋ ಬ್ರಹ್ಮವಧಂ ಪ್ರಾಪ್ಯ ಪಿತೃಭಿಃ ಸಹ ಪಚ್ಯತೇ ॥ ೪೮ ॥

ಪ್ರಾಯೋಪವೇಶಕಂ ವಿಪ್ರಂ ಬುಧಃ ಸಮ್ಮಾನಯೇದ್ಧ್ರುವಂ ।
ದೋಷೈಶ್ಚಾಪಿ ವಿನಿರ್ಮುಕ್ತಮುದ್ದಿಶ್ಯ ಪ್ರಾಣಮುತ್ಸೃಜೇತ್ ॥ ೪೯ ॥

ಸ ಪ್ರಲಿಪ್ತೋ ವಧೈರ್ಘೋರೈರ್ನ ತು ಯಂ ಪರಿಕೀರ್ತಯೇತ್ ।
ಆತ್ಮಘಾತಂ ದ್ರುಮಾರೋಹಂ ಕೋಟರೈರುಪಜೀವಿನಂ ॥ ೫೦ ॥

ಯಃ ಕುರ್ಯಾದಾತ್ಮನೋ ಘಾತಂ ಸ್ವವಂಶೇ ಬ್ರಹ್ಮಹಾ ಭವೇತ್ ।
ಭ್ರೂಣಂ ಚ ಘಾತಯೇದ್ಯಸ್ತು ಶಿಶುಂ ವಾ ಆತುರಂ ಗುರುಂ ॥ ೫೧ ॥

ಬ್ರಹ್ಮಹಾ ಸ್ವಯಮೇವ ಸ್ಯಾನ್ನ ತು ಯಂ ಪರಿಕೀರ್ತಯೇತ್ ।
ಮಾರಯೇಚ್ಚ ಸಗೋತ್ರಂ ಯೋ ಬ್ರಾಹ್ಮಣಂ ಬ್ರಾಹ್ಮಣಾಧಮಃ ॥ ೫೨ ॥

ತಸ್ಯೈವ ತದ್ಭವೇತ್ಪಾಪಂ ನ ತು ಯಂ ಪರಿಕೀರ್ತಯೇತ್ ।
ಪೀಡಯಿತ್ವಾ ದ್ವಿಜಂ ಶೂದ್ರಃ ಸ್ವಕಾರ್ಯಂ ಚಾಪಿ ಸಾಧಯೇತ್ ॥ ೫೩ ॥

---

ಪಡೆದು ಹೀನಸ್ಥಿತಿಯನ್ನು ಹೊಂದಿದರೆ ಆ ದೇಶವೂ, ಆ ರಾಜನೂ, ಆ ವಧೆಗೆ ಕಾರಣ ವಾಗಿ ಪಾಪಿಗಳಾಗುತ್ತಾರೆ. ಆದ್ದರಿಂದ ಬ್ರಹ್ಮವಧೆಯನ್ನು ಮಾಡಿದರೆ ಪಿತೃಗಳೊಡನೆ ನರಕ ಭಾಗಿಯಾಗುತ್ತಾನೆ.

೪೯. ದೋಷಿಯಲ್ಲದ ಪ್ರಾಯೋಪವೇಶಮಾಡಿ ಪ್ರಾಣ ಬಿಡುವವನನ್ನು ಗೌರ ವಿಸಬೇಕು. ಅಂತಹವನಿಗೋಸ್ಕರ ಪ್ರಾಣಬಿಟ್ಟರೆ ಪಾಪವಿಲ್ಲ.

೫೦-೬೦. ತನ್ನನ್ನು ತಾನು ಕೊಂದುಕೊಳ್ಳಬಾರದು, ಮರ ಹತ್ತಿ ಬಿದ್ದು ಸಾಯಬಾರದು, ಪಕ್ಷಿಗಳು ತಂದಿಟ್ಟಿದನ್ನು ತಿಂದು ಜೀವಿಸಬಾರದು. ತನ್ನನ್ನು ತಾನು ಕೊಂದುಕೊಂಡರೆ ತನ್ನ ವಂಶಕ್ಕೆ ಬ್ರಹ್ಮಹತ್ಯೆಯನ್ನು ತರುತ್ತಾನೆ. ಗರ್ಭಪಾತನವಮಾ ಡಬಾರದು, ಮಕ್ಕಳನ್ನೂ, ರೋಗಿಗಳನ್ನೂ, ಗುರುವನ್ನೂ, ಕೊಲ್ಲಬಾರದು, ಅಂತಹ ವನು ಬ್ರಹ್ಮಹತ್ಯೆಯನ್ನು ಹೊಂದುತ್ತಾನೆ, ಅವನ ಹೆಸರು ಹೇಳಬಾರದು. ಯಾವನು ತನ್ನ ಗೋತ್ರದವನಾದ ಬ್ರಾಹ್ಮಣನನ್ನು ಕೊಲ್ಲುತ್ತಾನೆಯೋ, ಅವನು ಬ್ರಹ್ಮಹತ್ಯೆ ಯನ್ನು ಹೊಂದುತ್ತಾನೆ, ಅವನ ಹೆಸರು ಹೇಳಬಾರದು. ಶೂದ್ರನಾದವನು ಬ್ರಾಹ್ಮಣನನ್ನು ಪೀಡಿಸಿ ತನ್ನ ಕೆಲಸವನ್ನು ಮಾಡಿಕೊಂಡರೆ, ಬ್ರಾಹ್ಮಣನು ಪಾಪಿ

ತತ್ರಾಪಾಪೇ ಚ ಶೂದ್ರಸ್ಯ ಪಾತಕಂ ನಾನ್ಯಥಾ ಭವೇತ್ ।
ತಾತ್ಕಾಲಿಕವಧಂ ಹತ್ವಾ ಹಂತಾರಮಾತತಾಯಿನಂ ॥ ೫೪ ॥

ನ ಚ ಹಂತಾ ಚ ತತ್ಪಾಪೈರ್ಲಿಪ್ಯತೇ ದ್ವಿಜಸತ್ತಮ ।
ಆತತಾಯಿನಮಾಯಾಂತಮಪಿ ಚೇದಂತಿಕೇ ರಣೇ ॥ ೫೫ ॥

ಜಿಘಾಂಸಂತಂ ಜಿಘಾಂಸೀಯಾನ್ನ ತೇನ ಬ್ರಹ್ಮಹಾ ಭವೇತ್ ।
ಅಗ್ನಿದೋ ಗರದಶ್ಚೈವ ಧನಹಾರೀ ಚ ಸುಪ್ತಘಃ ॥ ೫೬ ॥

ಕ್ಷೇತ್ರದಾರಾಪಹಾರೀ ಚ ಷಡೇತೇ ಹ್ಯಾತತಾಯಿನಃ ।
ಖಲು ರಾಜವಧೋದ್ಯೋಗೀ ಪಿತೄಣಾಂ ಚ ವಧೇ ರತಃ ॥ ೫೭ ॥

ಅನುಯಾಯೀ ನೃಪೋ ರಾಜ್ಞಃ ಶ್ಚತ್ವಾರಶ್ಚಾತತಾಯಿನಃ ।
ತತ್ಕ್ಷಣಾನ್ನ ಮೃತಂ ವಿಪ್ರಂ ಪುನರ್ಹಂತುಂ ನ ಯುಜ್ಯತೇ ॥ ೫೮ ॥

ಪುನರ್ಹತ್ವಾ ವಧಂ ಘೋರಂ ಜ್ಞಾನಾತ್ಪ್ರಾಪ್ನೋತಿ ನಿಶ್ಚಿತಂ ।
ಲೋಕೇ ವಿಪ್ರಸಮೋ ನಾಸ್ತಿ ಪೂಜನೀಯೋ ಜಗದ್ಗುರುಃ ॥ ೫೯ ॥

---

ಇಲ್ಲದಿದ್ದರೆ, ಆ ಪೀಡೆಯ ಪಾಪವು ಶೂದ್ರನಿಗೆ ಬರುತ್ತದೆ. ಅದೇ ತಾನೇ ಮತ್ತೊಬ್ಬನನ್ನು ಕೊಂದು ಪಾಪಿಯಾದವನು ಬರುತ್ತಿರಲು ಅವನು ಪಾಪಿಯೆಂದು ತಿಳಿದು ಮತ್ತೊಬ್ಬನು ಅವನನ್ನು ಕೊಂದರೆ ಇವನಿಗೆ ಪಾಪ ಬರುವುದಿಲ್ಲ. ಒಬ್ಬನನ್ನು ಕೊಲ್ಲಲು ಉದ್ಯುಕ್ತನಾಗಿ ಬಂದು ಕೊಲ್ಲುತ್ತಾನೆಂದು ತೋರಿದರೆ, ಆ ಕೊಲ್ಲಬೇಕೆಂದಿರುವ ಮನಸ್ಸಿನವನನ್ನು ಕೊಂದರೆ ಪಾಪವಿಲ್ಲ. ಮನೆಗೆ ಬೆಂಕಿ ಹಾಕಿದವನು, ವಿಷ ಹಾಕಿದವನು, ಧನವನ್ನು ಕದಿವವನು, ಮಲಗಿರುವವರನ್ನು ಕೊಂದವನು, ಹೊಲಗದ್ದೆಗಳನ್ನು ಅಪಹರಿಸುವವನು, ಹೆಂಡಿರನ್ನು ಕದಿವವನು, ಈ ಆರು ಜನರು ಆತತಾಯಿಗಳು. ರಾಜವಧೆಯಲ್ಲಿ ಆಸಕ್ತ. ಪಿತೃವಧೆಯಲ್ಲಿ ಆಸಕ್ತ, ಇವರನ್ನು ಅನುಸರಿಸುವವನು,ರಾಜನನ್ನು ಅನುಸರಿಸುವ ರಾಜನು ಇವರು ನಾಲ್ವರೂ ಆತತಾಯಿಗಳು ಯಾವುದಾದರೂ ಕಾರಣದಿಂದ ಬ್ರಾಹ್ಮಣನು ವಧೆಗೆ ಪಾತ್ರನಾಗಿ ಆ ಏಟಿನಿಂದ ಅವನು ಸಾಯದಿದ್ದರೆ, ಮತ್ತೆ ಅವನನ್ನು ಕೊಲ್ಲಬಾರದು. ಹಾಗೆ ಮಾಡಿದರೆ ಪಾಪಿಯಾಗುತ್ತಾನೆ. ಲೋಕದಲ್ಲಿ ಬ್ರಾಹ್ಮಣನಿಗೆ ಸಮನಾದವನಿಲ್ಲ, ಪೂಜೆಗೆ ಯೋಗ್ಯ, ಜಗತ್ತಿಗೆ ಗುರು, ಅವನನ್ನು ಕೊಂದರೆ ಬರುವ ಪಾಪಕ್ಕಿಂತ ಹೆಚ್ಚಿನದು ಬೇರೆಯಿಲ್ಲ.

ಹತ್ವಾ ತಂ ಯದ್ಭವೇತ್ಪಾಪಂ ತತ್ಪರಂ ಚ ನ ವಿದ್ಯತೇ ।
ದೇವವತ್ಪೂಜನೀಯೋಽಸೌ ದೇವಾಸುರಗಣೈರ್ನರೈಃ ॥
ಬ್ರಾಹ್ಮಣಸ್ಯ ಸಮೋ ನಾಸ್ತಿ ತ್ರಿಷು ಲೋಕೇಷು ನಿಶ್ಚಿತಂ ॥ ೬೦ ॥

॥ ನಾರದ ಉವಾಚ ॥

ಕಾಂ ವೃತ್ತಿಂ ಸಮುಪಾಶ್ರಿತ್ಯ ಜೀವಿತವ್ಯಂ ದ್ವಿಜೇನ ಹಿ ।
ಅಪಾಪೇನ ಸುರಶ್ರೇಷ್ಠ ತತ್ವತೋ ವಕ್ತುಮರ್ಹಸಿ ॥ ೬೧ ॥

॥ ಬ್ರಹ್ಮೋವಾಚ ॥

ಅಯಾಚಿತಾ ಚ ಯಾ ಭಿಕ್ಷಾ ಪ್ರಶಾಸ್ತಾ ಸಾ ಪ್ರಕೀರ್ತಿತಾ ।
ಉಂಛವೃತ್ತಿಸ್ತತೋ ಭದ್ರಾ ಸುಭದ್ರಾ ಸರ್ವವೃತ್ತಿಷು ॥ ೬೨ ॥

ಯಾಮಾಶ್ರಿತ್ಯ ಮುನಿಶ್ರೇಷ್ಠಾ ಗಚ್ಛಂತಿ ಬ್ರಹ್ಮಣಃ ಪದಂ ।
ದಕ್ಷಿಣಾ ಯಜ್ಞಶೇಷಾಣಾಂ ಗ್ರಾಹ್ಯಾ ಯಜ್ಞಗತೇನ ಹಿ ॥ ೬೩ ॥

ಪಠನಂ ಯಜನಂ ಕೃತ್ವಾ ಗ್ರಹೀತವ್ಯಂ ಸಮಾ ದ್ವಿಜೈಃ ।
ಪಾಠಯಿತ್ವಾ ಪಠಿತ್ವಾ ಚ ಕೃತ್ವಾ ಸ್ವಸ್ತ್ಯಯನಂ ಶುಭಂ ॥ ೬೪ ॥

---

ಈ ಬ್ರಾಹ್ಮಣನು ದೇವತೆಗಳು, ಸುರರು, ನರರು ಇವರಿಂದ ದೇವತೆಗಳಂತೆ ಪೂಜಿಸಲು ಯೋಗ್ಯನು, ಬ್ರಾಹ್ಮಣನಿಗೆ ಸಮನಾದವನು ಮೂರು ಲೋಕದಲ್ಲಿಯೂ ಇಲ್ಲ.

೬೧. ನಾರದನು ಹೇಳಿದನು– ಪಾಪಿಯಲ್ಲದ ಬ್ರಾಹ್ಮಣನು ಯಾವ ವೃತ್ತಿಯನ್ನು ಅನುಸರಿಸಿ ಜೀವನ ಮಾಡಬೇಕು? ಎಂಬುದನ್ನು ತಿಳಿಸು.

೬೨-೬೩. ಬ್ರಹ್ಮನು ಹೇಳಿದನು– ಯಾಚನೆ ಮಾಡದಿರುವ ಭಿಕ್ಷೆಯು ಬ್ರಾಹ್ಮಣನಿಗೆ ಬಹು ಉತ್ತಮವಾದುದು ಉಂಛವೃತ್ತಿ, (ಭಿಕ್ಷೆ ಬೇಡುವುದು) ಕಾಳನ್ನಾಯುವುದು, ಇದು ಉತ್ತಮೋತ್ತಮವು, ಇದನ್ನು ಆಶ್ರಯಿಸಿ ಮುನಿಗಳೆಲ್ಲರೂ ಬ್ರಹ್ಮನ ಪದವಿಯನ್ನು ಹೊಂದಿದರು, ಯಜ್ಞಗಳಲ್ಲಿ ದಕ್ಷಿಣೆಯನ್ನು ತೆಗೆದುಕೊಳ್ಳಬಹುದು.

೬೪-೬೭. ವೇದವನ್ನು ಹೇಳಿ ಪೂಜೆ ಮುಂತಾದುವುಗಳನ್ನು ಮಾಡಿಸಿ ಹಣವನ್ನು ತೆಗೆದುಕೊಳ್ಳಬಹುದು, ಮಂತ್ರವನ್ನು ಹೇಳಿಸಿ, ಹೇಳಿ, ಸ್ವಸ್ತಿವಾಚನವನ್ನು

ಬ್ರಾಹ್ಮಣಾನಾಮಿದಂ ಜೀವ್ಯಂ ಶಿಷ್ಟಾ ವೃತ್ತಿಃ ಪ್ರತಿಗ್ರಹಃ ।
ಶಾಸ್ತ್ರೋಪಜೀವಿನೋ ಧನ್ಯಾ ಧನ್ಯಾ ವೃಕ್ಷೋಪಜೀವಿನಃ ॥ ೬೫ ॥

ಧನ್ಯಾ ವೃಕ್ಷಲತಾಜೀವ್ಯಾ ನಾಟೇಸಸ್ಯೋಪಜೀವಿನಃ ।
ಅನ್ನಜಂತುವಧೇ ಪಾಪಂ ತಸ್ಯ ದೋಷೋಪಶಾಂತಯೇ ॥ ೬೬ ॥

ನವ ಧಾನ್ಯಾನಿ ಶಸ್ತಾನಿ ವಿಪ್ರೇಭ್ಯಃ ಸಂಪ್ರದಾಪಯೇತ್ ।
ನ ಚೇತ್ಪ್ರಾಣಿವಧೇ ಹ್ಯತ್ರ ಕ್ಷೀಯಂತೇ ಚಾಽಯುಷೋ ಧ್ರುವಂ ॥ ೬೭ ॥

ತಸ್ಮಾದ್ದದ್ಯಾತ್ಸುಬಹೂನಿ ಪಿತೃದೇವದ್ವಿಜಾತಿಷು ।
ಅಭಾವಾತ್ಕ್ಷತ್ರಿಯಾವೃತ್ತಿರ್ಬ್ರಾಹ್ಮಣೈರುಪಜೀವ್ಯತೇ ॥ ೬೮ ॥

ನ್ಯಾಯಯುದ್ಧೇಷು ಯೋದ್ಧವ್ಯಂ ಚರೇದ್ವೀರವ್ರತಂ ಶುಭಂ ।
ನ ತಯಾ ಚ ದ್ವಿಜೋ ವೃತ್ತ್ಯಾ ಯದ್ಧನಂ ಲಭತೇ ನೃಪಾತ್ ॥ ೬೯ ॥

---

ಹೇಳಿ ಹಣವನ್ನು ತೆಗೆದುಕೊಳ್ಳಬಹುದು, ಇದೇ ಬ್ರಾಹ್ಮಣರ ಜೀವನವು. ಮತ್ತೊಂ ದೇನೆಂದರೆ, ದಾನ ತೆಗೆದುಕೊಳ್ಳಬಹುದು. ಶಾಸ್ತ್ರಗಳಿಂದ ಜೀವನಮಾಡುವವರು, ಧನ್ಯರು, ಮರದ ಸಂಬಂಧವಾದ ಹಣ್ಣು, ಎಲೆ, ಮುಂತಾದುವನ್ನು ತಿಂದು ಜೀವಿಸು ವವರೂ ಧನ್ಯರು. ಮರ, ಬಳ್ಳಿಗಳಿಂದ ಬಂದುದನ್ನು ತಿಂದು ಜೀವಿಸುವವರೂ, ಯೋಗ್ಯರು. ಅನ್ನದ ಸಂಬಂಧವಾದ ಪ್ರಾಣಿಗಳನ್ನು ಕೊಂದರೆ, ಪಾಪ ಬರುವುದು, ಅದಕ್ಕೋಸ್ಕರ ನವಧಾನ್ಯಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಹಾಗೆ ಮಾಡ ದರೆ ಅದರ ಪಾಪವು ಹೋಗುತ್ತದೆ, ಇಲ್ಲದಿದ್ದರೆ ಆ ಪಾಪವು ಆಯುಸ್ಸನ್ನು ನಾಶ ಮಾಡುತ್ತದೆ.

೬೮. ಆದ್ದರಿಂದ ಅನೇಕ ದಾನಗಳನ್ನು ದೇವತೆಗಳಿಗೆ, ಪಿತೃಗಳಿಗೆ, ಬ್ರಾಹ್ಮಣ ರಿಗೆ, ಕೊಡಬೇಕು, ಈ ರೀತಿ ಜೀವನ ಮಾಡಲಾಗದಿದ್ದರೆ, ಬ್ರಾಹ್ಮಣರು ಕ್ಷತ್ರಿಯ ವೃತ್ತಿಯನ್ನು ಆಶ್ರಯಿಸಬಹುದು.

೬೯-೭೧. ನ್ಯಾಯವಾದ ಯುದ್ಧಗಳಲ್ಲಿ ನ್ಯಾಯದಿಂದ ಯುದ್ಧಮಾಡಬೇಕು. ವೀರನ ವ್ರತವನ್ನು ಅನುಸರಿಸಬೇಕು, ಆ ವೃತ್ತಿಯಿಂದ ರಾಜನು ಕೊಡುವ ಹಣವು

ಪಿತೃಯಜ್ಞಾದಿದಾನೇಷು ಮೋಧ್ಯಂ ತದ್ಧನಮುಚ್ಯತೇ ।
ಸಮಭ್ಯಸೇದ್ಧನುರ್ವಿದ್ಯಾಂ ವೇದಯುಕ್ತಾಂ ಸದಾಽನಘಃ ॥ ೭೦ ॥

ಶಕ್ತಿಕುಂತಗದಾಖಡ್ಗಪರಿಘಾಣಾಂ ಸಮಂತತಃ ।
ಅಶ್ವಾರೋಹಂ ಗಜಾರೋಹಮನ್ಯೆಂದ್ರಜಾಲಮುಮಾನಕಂ ॥ ೭೧ ॥

ರಥಭೂಮಿಗತಂ ಯುದ್ಧಂ ಯುಕ್ತಂ ಸರ್ವತ್ರ ಕಾರಯೇತ್ ।
ದ್ವಿಜದೇವಧ್ರುವಾಣಾಂ ಚ ಸ್ತ್ರೀಣಾಂ ವೃತ್ತಂ ತಪಸ್ವಿನಾಂ ॥ ೭೨ ॥

ಸಾಧುಸಾಧ್ವೀಗುರೂಣಾಂ ಚ ನೃಪಾಣಾಂ ರಕ್ಷಣಾಧ್ರುವಂ ।
ಯತ್ಪುಣ್ಯಂ ಲಭತೇ ಶೂರಃ ಕಥಂ ತದ್ಬ್ರಹ್ಮವಾದಿಭಿಃ ॥ ೭೩ ॥

ಸರ್ವಪಾಪಕ್ಷಯಂ ಕೃತ್ವಾ ಅಕ್ಷಯಂ ಸ್ವರ್ಗಮಶ್ನುತೇ ।
ಸಮ್ಮುಖೇ ನ್ಯಾಯಯುದ್ಧೇ ಚ ಪತಂತಿ ಬ್ರಾಹ್ಮಣಾ ರಣೇ ॥ ೭೪ ॥

ತೇ ವ್ರಜಂತಿ ಪರಂ ಸ್ಥಾನಮುಗಮ್ಯಂ ಬ್ರಹ್ಮವಾದಿನಂ ।
ಧರ್ಮಯುದ್ಧಸ್ಯ ಯದ್ವೃತ್ತಂ ಶೃಣು ಪುಣ್ಯಂ ಯಥಾರ್ಥತಃ ॥ ೭೫ ॥

---

ಪಿತೃಯಜ್ಞ ದಾನ ಮುಂತಾದುವುಗಳಲ್ಲಿ ಯೋಗ್ಯವಾದುದು ಎನ್ನಿಸಿಕೊಳ್ಳುತ್ತದೆ. ವೇದೋಕ್ತವಾದ ಧನುರ್ವಿದ್ಯೆಯನ್ನು ಅಭ್ಯಾಸಮಾಡಬೇಕು, ಶಕ್ತಿ, ಕುಂತ, ಗದೆ, ಖಡ್ಗ,ಪರಿಘಗಳ ಪ್ರಯೋಗಗಳನ್ನು ಅಭ್ಯಾಸಿಸಬೇಕು, ಕುದುರೆ ಸವಾರಿ, ಆನೆ ಸವಾರಿ ಇಂದ್ರಜಾಲ, ಮಹೇಂದ್ರಜಾಲಗಳನ್ನು ಅಭ್ಯಾಸಮಾಡಬೇಕು.

೭೨-೭೫. ರಥದಲ್ಲಿ ಕುಳಿತು ಭೂಮಿ ಯುದ್ಧವನ್ನು ಮಾಡಬೇಕು, ಇದು ಯೋಗ್ಯವಾದುದು, ದೇವರು, ಬ್ರಾಹ್ಮಣರು, ಶಿಷ್ಯರುಗಳು, ತಪಸ್ವಿಗಳು, ಇವರ ವ್ರತವನ್ನು ಕಾಪಾಡಬೇಕು, ಸಾಧುಗಳು, ಪತಿವ್ರತೆಯರು, ಗುರುಗಳು, ರಾಜರು, ಇವರ ರಕ್ಷಣೆಯಿಂದ ಯಾವ ಪುಣ್ಯವು ಬರುತ್ತದೆಯೋ, ಅದನ್ನು ಬ್ರಹ್ಮವಾದಿಗಳೂ ಹೊಂದುವುದಿಲ್ಲ ಇದರಿಂದ ಪಾಪಗಳನ್ನು ನಾಶಮಾಡಿಕೊಂಡು ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ನ್ಯಾಯ ಯುದ್ಧದಲ್ಲಿ ಹಿಂತಿರುಗದೆ ಬ್ರಾಹ್ಮಣರು ಸತ್ತರೆ, ಅವರು ಬ್ರಹ್ಮವಾದಿಗಳ ಸ್ಥಾನವನ್ನು ಹೊಂದುತ್ತಾರೆ, ಇದು ಸರಿಯಾದ ಧರ್ಮ ಯುದ್ಧದ ರೀತಿಯು, ಹೇಳಿದ್ದೇನೆ.

ಸಮ್ಮುಖೇನ ಪ್ರಯುಧ್ಯಂತೇ ನ ಚ ಗಚ್ಛಂತಿ ಕಾತರಂ ।
ನ ಭಗ್ನಂ ಪೃಷ್ಠತೋ ಘ್ನಂತಿ ನಿಶ್ಶಸ್ತ್ರಂ ಪ್ರಪಲಾಯಿತಂ ॥ ೨೬ ॥

ಅಯುಧ್ಯಮಾನಂ ಭೀರುಂ ಚ ಪತಿತಂ ಗತಕಲ್ಮಷಂ ।
ಅಸಚ್ಛೂದ್ರಂ ಸ್ತುತಿಪ್ರೀತಮಾಹವೇ ಶರಣಾಗತಂ ॥ ೨೭ ॥

ಹತ್ವಾ ಚ ನರಕಂ ಯಾಂತಿ ದುರ್ವೃತ್ತಾ ಜಯಕಾಂಕ್ಷಿಣಃ ।
ಏಷಾ ಚ ಕ್ಷತ್ರಿಯಾ ವೃತ್ತಿಃ ಸದಾಚಾರೈಸ್ತು ಗೀಯತೇ ॥ ೨೮ ॥

ಯಾಮಾಶ್ರಿತ್ಯ ದಿವಂ ಯಾಂತಿ ಸರ್ವಕ್ಷತ್ರಿಯ ಕುಂಜರಾಃ ।
ಧರ್ಮಯುದ್ಧೇ ಶುಭೋ ಮೃತ್ಯುಃ ಸಮ್ಮುಖೇ ಕ್ಷತ್ರಿಯಸ್ಯ ಚ ॥ ೨೯ ॥

ಅತ್ರ ಪೂತೋ ಭವೇತ್ಸೋಽಪಿ ಸರ್ವಪಾಪೈಃ ಪ್ರಮುಚ್ಯತೇ ।
ಸತಿಷ್ಠೇತ್ಸ್ವರ್ಗಲೋಕೇ ಚ ಪ್ರಾಸಾದೇ ರತ್ನಭೂಷಿತೇ ॥ ೩೦ ॥

ಜಾಂಬೂನದಸಮಸ್ತಂಭೇ ರತ್ನಭೂಷಿತಭೂತಲೇ ।
ಇಷ್ಟದ್ರವ್ಯೈಃ ಸುಸಂಪೂರ್ಣೇ ದಿವ್ಯವಸ್ತ್ರೋಪಶೋಭಿತೇ ॥ ೩೧ ॥

---

೨೬-೨೮. ಎದಿರು ಒದಿರಿಗೆ ಯುದ್ಧಮಾಡಬೇಕು, ಹೆದರಿದವನನ್ನು ಹೊಡೆಯಬಾರದು. ಬಿದ್ದು ಹೋದವನನ್ನು ಮತ್ತೆ ಹೊಡೆಯಬಾರದು, ಶಸ್ತ್ರವಿಲ್ಲದವನನ್ನೂ ಓಡಿ ಹೋಗುತ್ತಿರುವವನನ್ನೂ, ಕೊಲ್ಲಬಾರದು, ಯುದ್ಧ ಮಾಡದವನನ್ನೂ, ಹೆದರಿದವನನ್ನೂ, ಕೊಲ್ಲಬಾರದು, ಬಿದ್ದು ಹೋದವನನ್ನೂ, ತಪ್ಪಿಲ್ಲದವನನ್ನೂ, ಕೊಲ್ಲಬಾರದು, ಅಯೋಗ್ಯನಾದ ಶೂದ್ರ, ಸ್ತೋತ್ರದಿಂದ ಪ್ರೀತಿ ಪಡುವವನು, ಶರಣಾಗತ ಇವರನ್ನು ಕೊಲ್ಲಬಾರದು. ಕೊಂದರೆ ನರಕವು ಬರುತ್ತದೆ. ಜಯವನ್ನಪೇಕ್ಷಿಸಿ, ಈ ಕೆಟ್ಟಮಾರ್ಗಕ್ಕೆ ಕಾಲಿಡಬಾರದು ಇವೇ ಕ್ಷತ್ರಿಯ ವೃತ್ತಿಯು. ಇದೇ ಸದಾಚಾರವು. ಎಂದು ತಿಳಿದವರು ಹೇಳುತ್ತಾರೆ.

೨೯-೩೦. ಇಂತಹ ಒಳ್ಳೆಯ ದಾರಿಯನ್ನು ಅನುಸರಿಸಿ ಕ್ಷತ್ರಿಯರು ಸ್ವರ್ಗವನ್ನು ಹೊಂದುತ್ತಾರೆ. ಕ್ಷತ್ರಿಯನಿಗೆ ಎದುರು ಬದುರು ನಡೆದ ಧರ್ಮ ಯುದ್ಧದಲ್ಲಿ ಸಾವು ಒಳ್ಳೆಯದು. ಇದರಿಂದ ಅವನ ಪಾಪವೆಲ್ಲವೂ ಹೋಗಿ ಪವಿತ್ರನಾಗಿ ಸ್ವರ್ಗದ ಉತ್ತಮವಾದ ಅರಮನೆಯಲ್ಲಿ ವಾಸಿಸುತ್ತಾನೆ.

೩೧-೩೫ ಆ ಅರಮನೆಯು ಚಿನ್ನದ ಕಂಬಗಳಿಂದ ಮಾಡಲ್ಪಟ್ಟಿರುತ್ತದೆ. ತನಗೆ ಬೇಕಾದ ಪದಾರ್ಥಗಳಿಂದ, ಕೂಡಿರುತ್ತದೆ. ದಿವ್ಯವಾದ ವಸ್ತ್ರಗಳು ಅಲ್ಲಿರುತ್ತವೆ.

ಪುರತಃ ಕಲ್ಪವೃಕ್ಷಾಶ್ಚ ತಿಷ್ಠಂತಿ ಸರ್ವದಾಯಿನಃ ।
ವಾಪೀಕೂಪತಡಾಗಾಢ್ಯೈರುದ್ಯಾನೈರುಪಶೋಭಿತೇ ॥ ೮೨ ॥

ಯೌವನಾಢ್ಯಾಶ್ಚ ಸೇವಂತೇ ತಂ ದೇವಪುರಕನ್ಯಕಾಃ ।
ತಸ್ಯಾಗ್ರತೋ ಮುದಾ ನಿತ್ಯಂ ನೃತ್ಯಂತ್ಯಪ್ಸರಸಾಂ ಗಣಾಃ ॥ ೮೩ ॥

ಗೀತಂ ಗಾಯಂತಿ ಗಂಧರ್ವಾ ದೇವಾಶ್ಚ ಸ್ತುತಿಪಾಠಕಾಃ ।
ಏವಂ ಕ್ರಮೇಣ ಕಲ್ಪಾಂತೇ ಸಾರ್ವಭೌಮೋ ಭವೇನ್ನೃಪಃ ॥ ೮೪ ॥

ಸರ್ವಭೋಗೈಕಕರ್ತಾ ಚ ನೀರುಜ್ಮನ್ಮಥವಿಗ್ರಹಃ ।
ತಸ್ಯ ಪತ್ನ್ಯಃ ಪ್ರರೂಪಾಢ್ಯಾಃ ಸದೈವ ಯೌವನಾನ್ವಿತಾಃ ॥ ೮೫ ॥

ಧರ್ಮಶೀಲಾಃ ಸುತಾಃ ಶುಭ್ರಾಃ ಸಮೃದ್ಧಾಃ ಪಿತೃಸಮ್ಮತಾಃ ।
ಏವಂ ಕ್ರಮೇಣ ಭುಂಜಂತಿ ಸಪ್ತಜನ್ಮಸು ಕ್ಷತ್ರಿಯಾಃ ॥ ೮೬ ॥

ಅನ್ಯಾಯೇನ ತು ಯೋದ್ಧಾರಸ್ತಿಷ್ಠಂತಿ ನರಕೇ ಚಿರಂ ।
ಏವಂ ಚ ಕ್ಷತ್ರಿಯಾ ವೃತ್ತಿರ್ಬ್ರಾಹ್ಮಣೈರುಪಜೀವ್ಯತೇ ॥ ೮೭ ॥

---

ಅರಮನೆಯ ಎದುರಿಗೆ ಬೇಕಾದುದನ್ನು ಕೊಡುವ ಕಲ್ಪವೃಕ್ಷಗಳು ಇರುತ್ತವೆ. ಬಾವಿ, ಕೊಳ, ಕೆರೆ ಉದ್ಯಾನಗಳೆಲ್ಲವೂ ಅದರಲ್ಲಿವೆ. ಯುವತಿಯರಾದ ದೇವ ಕನ್ಯೆಯರು ಅವರನ್ನು ಸೇವಿಸುತ್ತಾರೆ ಅವನೆದುರಿಗೆ ಅಪ್ಸರ ಸ್ತ್ರೀಯರು ಸಂತೋಷದಿಂದ ಕುಣಿಯುತ್ತಾರೆ. ಗಂಧರ್ವರು ಹಾಡುತ್ತಾರೆ. ದೇವತೆಗಳು ಸ್ತುತಿಸುತ್ತಾರೆ. ಹೀಗೆಯೇ ಕಲ್ಪ ಕಾಲದವರೆಗೂ ಇದ್ದು ಚಕ್ರವರ್ತಿಯಾಗಿ ಆಗುತ್ತಾನೆ. ಆಗ ಎಲ್ಲಾ ಭೋಗಗಳೂ ಇರುತ್ತವೆ. ರೋಗಹೀನನಾಗಿ ಮನ್ಮಥನಂತೆ ಸುಂದರನಾಗಿರುತ್ತಾನೆ ಅವನ ಹೆಂಡಿರು ರೂಪವತಿಯರಾಗಿಯೂ ಯೌವನವತಿಯರಾಗಿಯೂ ಇರುತ್ತಾರೆ.

೮೬. ಅವನ ಮಕ್ಕಳು ಧರ್ಮಿಷ್ಠರೂ, ಶುಚಿಗಳೂ, ಭಾಗ್ಯವಂತರೂ, ತಂದೆಗೆ ಸಮಾನರೂ ಆಗಿರುತ್ತಾರೆ. ಈ ರೀತಿಯಾಗಿ ಏಳು ಜನ್ಮಗಳನ್ನು ತಾಳುತ್ತಾರೆ.

೮೭. ಅನ್ಯಾಯದಿಂದ ಯುದ್ಧ ಮಾಡುವವರು ನರಕ ಭಾಗಿಗಳಾಗುತ್ತಾರೆ. ಈ ರೀತಿಯಾದ ಕ್ಷತ್ರಿಯ ವೃತ್ತಿಯನ್ನು ಬ್ರಾಹ್ಮಣರು ಅನುಸರಿಸಬಹುದು.

ವೈಶ್ಯೈಃ ಶೂದ್ರೈಸ್ತಥಾಽನ್ಯೈಶ್ಚ ಅಂತ್ಯಜೈರ್ಮ್ಲೇಚ್ಛಜಾತಿಭಿಃ ।
ಯೇ ಚ ಯೋಧಾಃ ಪ್ರಯುಧ್ಯಂತೇ ನ್ಯಾಯಯುದ್ಧೇನ ಸರ್ವದಾ ॥ ೮೮ ॥

ತೇಽಪಿ ಯಾಂತಿ ಪರಂ ಸ್ಥಾನಂ ಸರ್ವೇ ವರ್ಣಾ ದ್ವಿಜಾತಯಃ ।
ನ ಶೂರೋ ಯೋ ದ್ವಿಜೋ ಭೀರುರಸ್ತ್ರಶಸ್ತ್ರವಿವರ್ಜಿತಃ ॥ ೮೯ ॥

ವಿಪತ್ತೌ ವೈಶ್ಯವೃತ್ತಿಂ ಚ ಕಾರಯೇದ್ದ್ವಿಜಸತ್ತಮಃ ।
ವೈಶ್ಯವೃತ್ತಿಂ ವಣಿಗ್ಭಾವಂ ಕೃಷಿಂ ಚೈವ ತಥಾಽಪರೈಃ ॥ ೯೦ ॥

ಕಾರಯೇತ್ಕೃಷಿವಾಣಿಜ್ಯಂ ವಿಪ್ರಕರ್ಮ ನ ಚ ತ್ಯಜೇತ್ ।
ವಣಿಗ್ಭಾವಾನ್ಮೃಷಾಽತ್ಯುಕ್ತೌ ದುರ್ಗತಿಂ ಪ್ರಾಪ್ನುಯಾದ್ದ್ವಿಜಃ ॥ ೯೧ ॥

ಆದ್ರ್ರದ್ರವ್ಯಂ ಪರಿತ್ಯಜ್ಯ ಬ್ರಾಹ್ಮಣೋ ಲಭತೇ ಶಿವಂ ।
ಸಮುತ್ಪಾದ್ಯ ತತೋ ವೃತ್ತಿಂ ದದ್ಯಾದ್ವಿಪ್ರಾಯ ಸರ್ವಶಃ ॥ ೯೨ ॥

ಪಿತೃಯಜ್ಞೇ ತಥಾ ಚಾಗ್ನೌ ಜುಹುಯಾದ್ವಿಧಿವದ್ದ್ವಿಜಃ ।
ತುಲೇಽಸತ್ಯಂ ನ ಕರ್ತವ್ಯಂ ತುಲಾ ಧರ್ಮಪ್ರತಿಷ್ಠಿತಾ ॥ ೯೩ ॥

---

೮೮-೯೧. ವೈಶ್ಯರು, ಶೂದ್ರರು, ಅಂತ್ಯ ಜಾತಿಯವರು, ಮ್ಲೇಂಛ ಜಾತಿಯವರು, ಇವರಲ್ಲಿ ಯಾರಾದರೂ ಸರಿ, ನ್ಯಾಯವಾದ ರೀತಿಯಲ್ಲಿ ಯುದ್ಧ ಮಾಡಿದರೆ ಅವರೂ ದ್ವಿಜರು ಹೊಂದುವಂತೆ ಸ್ವರ್ಗವನ್ನು ಹೊಂದುತ್ತಾರೆ. ಶೂರನಲ್ಲದ, ಹೆದರಿಕೆಯಿಂದ ಶಸ್ತ್ರಾಸ್ತ್ರಗಳನ್ನು ಹಿಡಿಯದ, ಬ್ರಾಹ್ಮಣನು ಕಷ್ಟಕಾಲದಲ್ಲಿ ವೈಶ್ಯವೃತ್ತಿಯನ್ನು ಅನುಸರಿಸಬಹುದು. ವೈಶ್ಯವೃತ್ತಿ. ವ್ಯಾಪಾರ, ಕೃಷಿಗಳನ್ನು ಮತ್ತೊಬ್ಬರಿಂದ ಮಾಡಿಸಬೇಕು. ಬ್ರಾಹ್ಮಣ ಕರ್ತವ್ಯವನ್ನು ಬಿಡಬಾರದು. ವ್ಯಾಪಾರದಲ್ಲಿ ಸುಳ್ಳು ಹೊಗಳಿಕೆಗಳಿಂದ ಬ್ರಾಹ್ಮಣನು ನರಕವನ್ನು ಹೊಂದುತ್ತಾನೆ.

೯೨. ಹಸಿಯ ಪದಾರ್ಥಗಳನ್ನು ಮಾರಬಾರದು. ಹಾಗಾದರೆ ಬ್ರಾಹ್ಮಣಿಕೆ ಹೋಗುವುದಿಲ್ಲ. ಅದರಿಂದ ಜೀವನವನ್ನು ನಡೆಸಿಕೊಂಡು ಬ್ರಾಹ್ಮಣನಿಗೆ ದಾನ ಮಾಡಬೇಕು.

೯೩-೯೪. ಪಿತೃ, ಯಜ್ಞಗಳು, ಅಗ್ನಿ ಹೋತ್ರಾದಿಗಳನ್ನು ಬಿಡಬಾರದು. ಅಳತೆಯಲ್ಲಿ ಮೋಸವನ್ನು ಮಾಡಬಾರದು. ಅಳತೆಯಲ್ಲಿ ಧರ್ಮವು ನಿಂತಿರುವುದು.

ಫಲಭಾವಂ ತುಲೇ ಕೃತ್ವಾ ನರಕಂ ಪ್ರತಿಪದ್ಯತೇ ।
ಅತುಲಂ ಚಾಪಿ ಯದ್ದ್ರವ್ಯಂ ತತ್ರ ಮಿಥ್ಯಾ ಪರಿತ್ಯಜೇತ್ ॥ ೯೪ ॥

ಏವಂ ಮಿಥ್ಯಾ ನ ಕರ್ತವ್ಯಾ ಮೃಷಾ ಪಾಪಪ್ರಸೂತಿಕಾ ।
ನಾಸ್ತಿ ಸತ್ಯಾತ್ಪರೋ ಧರ್ಮೋ ನಾನೃತಾತ್ಪಾತಕಂ ಪರಂ. ॥ ೯೫ ॥

ಅತಃ ಸರ್ವೇಷು ಕಾರ್ಯೇಷು ಸತ್ಯಮೇವ ವಿಶಿಷ್ಯತೇ ।
ಅಶ್ವಮೇಧಸಹಸ್ರಂ ತು ಸತ್ಯಂ ಚ ತುಲಯಾ ಧೃತಂ ॥ ೯೬ ॥

ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ।
ಯೋ ವದೇತ್ಸರ್ವಕಾರ್ಯೇಷು ಸತ್ಯಂ ಮಿಥ್ಯಾ ಪರಿತ್ಯಜೇತ್ ॥ ೯೭ ॥

ಸ ನಿಸ್ತರತಿ ದುರ್ಗಾಣಿ ಸ್ವರ್ಗಮಕ್ಷಯಮಶ್ನುತೇ ।
ವಾಣಿಜ್ಯಂ ಕಾರಯೇದ್ವಿಪ್ರೋ ಮಿಥ್ಯಾವಶ್ಯಂ ಪರಿತ್ಯಜೇತ್ ॥ ೯೮ ॥

ವೃದ್ಧಿಂ ಚ ನಿಕ್ಷಿಪೇತ್ತೀರ್ಥೇ ಸ್ವಯಂ ಶೇಷಂ ತು ಭೋಜಯೇತ್ ।
ದೇಹಕ್ಲೇಶಾತ್ತತ್ಸಹಸ್ರಗುಣಂ ಭವತಿ ಸರ್ವದಾ ॥ ೯೯ ॥

---

ಅಳತೆಯಲ್ಲಿ ಮೋಸಮಾಡಿದರೆ ನರಕ ಪ್ರಾಪ್ತಿಯಾಗುತ್ತದೆ. ತೂಗದಿರುವ ಪದಾರ್ಥಗಳಲ್ಲಿ ಅನ್ಯಾಯಮಾಡಬಾರದು.

೯೫-೯೭. ಈ ರೀತಿ ಸುಳ್ಳುತನವನ್ನು ಬಿಡಬೇಕು. ಆ ವಂಚನೆಯೇ ಪಾಪಕ್ಕೆ ಮನೆಯು. ಸತ್ಯಕ್ಕಿಂತಲೂ ಉತ್ತಮ ಧರ್ಮವಿಲ್ಲ. ಸುಳ್ಳಿಗಿಂತಲೂ ಹೆಚ್ಚಾದ ನರಕವಿಲ್ಲ. ಆದ್ದರಿಂದ ಎಲ್ಲ ಕೆಲಸದಲ್ಲಿಯೂ ಸತ್ಯವನ್ನೇ ಆಚರಿಸಬೇಕು ಆ ಸಾವಿರ ಅಶ್ವಮೇಧಗಳನ್ನೂ, ಸತ್ಯವನ್ನೂ ತಕ್ಕಡಿಯಲ್ಲಿ ತೂಕಕ್ಕೆ ಹಾಕಲು ಆ ಅಶ್ವಮೇಧಗಳಗಿಂತಲೂ ಸತ್ಯವೇ ಭಾರವಾಯಿತು. ಆದ್ದರಿಂದ ಕೆಲಸದಲ್ಲಿಯೂ ಸತ್ಯವೇ ಉತ್ತಮವು. ಸುಳ್ಳನ್ನು ಆಡಬಾರದು.

೯೮. ಅಂತಹವನು ಕಷ್ಟಗಳನ್ನು ದಾಟುತ್ತಾನೆ. ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ಈ ರೀತಿ ಸುಳ್ಳನ್ನು ಬಿಟ್ಟು ವ್ಯಾಪಾರವನ್ನು ಬ್ರಾಹ್ಮಣನು ಮಾಡಬಹುದು. ಸುಳ್ಳು ಹೇಳಿ ವಶ ಮಾಡಿಕೊಳ್ಳುವುದನ್ನೂ ಬಿಡಬೇಕು.

೯೯. ವೃದ್ಧಿಯನ್ನು ಯೋಗ್ಯರಲ್ಲಿ ದಾನಮಾಡಬೇಕು. ಉಳಿದುದನ್ನು ತಾನು ತಿನ್ನಬೇಕು. ದೇಹದ ಶ್ರಮದಿಂದ ಸಂಪಾದಿಸಿದುದು ಸಾವಿರ ಪಾಲಿನಷ್ಟು ಫಲವನ್ನು ಕೊಡುತ್ತದೆ

ಅರ್ಥಾರ್ಜನವಿಧೌ ಮರ್ತ್ಯಾ ವಿಶಂತಿ ವಿಷಮೇ ಜಲೇ ।
ಕಾಂತಾರಮಟವೀಂ ಚೈವ ಶ್ವಾಪದೈಃ ಸೇವಿತಾಂ ತಥಾ ॥ ೧೦೦ ॥

ಗಿರಿಂ ಗಿರಿಗುಹಾಂ ದುರ್ಗಾನ್ಮ್ಲೇಚ್ಛಾನಾಂ ಶಸ್ತ್ರಪಾತಿನಾಂ ।
ಗೃಹಂ ಪ್ರತಿಭಯಂ ಸ್ಥಾನಂ ಧನಲೋಭಾತ್ಸಮಂತತಃ ॥ ೧೦೧ ॥

ಸುತದಾರಾನ್ಪರಿತ್ಯಜ್ಯ ದೂರಂ ಗಚ್ಛಂತಿ ಲೋಭಿನಃ ।
ಸ್ಕಂಧೇ ಭಾರಂ ವಹಂತ್ಯನ್ಯೇ ತರ್ಯಾಂ ಚ ಕೇನಿಪಾತನೈಃ ॥ ೧೦೨ ॥

ಕ್ಷೇಪಣೀಭಿರ್ಮಹಾದುಃಖೈಃ ಸದಾ ಪ್ರಾಣವ್ಯಯೇನ ಚ ।
ಅರ್ಥಸ್ಯ ಸಂಚಯಃ ಪುತ್ರ ಪ್ರಾಣಾತ್ಪ್ರಿಯತರೋ ಮಹಾನ್ ॥ ೧೦೩ ॥

ಏಭಿರ್ನ್ಯಾಯಾರ್ಜಿತಂ ವಿತ್ತಂ ವಣಿಗ್ಭಾವೇನ ಯತ್ನತಃ ।
ಪಿತೃದೇವದ್ವಿಜಾತಿಭ್ಯೋ ದತ್ತಂ ಚಾಕ್ಷಯಮಶ್ನುತೇ ॥ ೧೦೪ ॥

ಏತೌ ದೋಷೌ ಮಹಾಂತೌ ಚ ವಾಣಿಜ್ಯೇ ಲಾಭಕರ್ಮಣಿ ।
ಲೋಭಾನಾಮಪರಿತ್ಯಾಗೋ ಮೃಷಾಗ್ರಾಹ್ಯಶ್ಚ ವಿಕ್ರಯಃ ॥ ೧೦೫ ॥

---

೧೦೦-೧೦೧. ಮನುಷ್ಯರು ಹಣವನ್ನು ಸಂಪಾದಿಸುವುದಕ್ಕೆ ಕಷ್ಟವಾದ ನೀರಿನಲ್ಲಿಯೂ ಪ್ರವೇಶಿಸುತ್ತಾರೆ. ಕಾಡು, ಬೆಂಗಾಡು ಪ್ರದೇಶ, ಕ್ರೂರ ಮೃಗಗಳಿರುವ ಸ್ಥಳ, ಬೆಟ್ಟ, ಗುಹೆ, ದುರ್ಗ, ಮ್ಲೇಚ್ಛರ ಜಾಗ, ಶಸ್ತ್ರ ಹಿಡಿದವರ ಮನೆ, ಭಯಂಕರವಾದ ಸ್ಥಾನ ಇವನ್ನೂ ಹೊಂದುತ್ತಾರೆ.

೧೦೨-೧೦೩. ಹಣದಲ್ಲಿ ಆಶೆಯುಳ್ಳವರು, ಹೆಂಡರು ಮಕ್ಕಳನ್ನು ಬಿಟ್ಟು ದೂರವಾಗಿಯಾದರೂ ಹೋಗುತ್ತಾರೆ. ಮತ್ತೆ ಕೆಲವರು ಹಣಕ್ಕೋಸ್ಕರ ಭಾರವನ್ನು ಹೊರುತ್ತಾರೆ. ನೀರಿನಲ್ಲಿ ದೋಣಿಯನ್ನು ನಡೆಸುತ್ತಾರೆ ಪ್ರಾಣನಾಶಕವಾದ ಕ್ಷೇಪಣಿ ಆಯುಧಗಳಿಂದ ಕ್ರೀಡಿಸುತ್ತಾರೆ. ಎಲೈ ನಾರದನೆ! ಹಣವನ್ನು ಸೇರಿಸುವುದು ಪ್ರಾಣಕ್ಕಿಂತಲೂ ಪ್ರೀತಿಪಾತ್ರವಾದದು.

೧೦೪. ಇಂಥವುಗಳಿಂದಲೂ, ವ್ಯಾಪಾರದಲ್ಲಿ ನ್ಯಾಯದಿಂದಲೂ ಸಂಪಾದಿಸಿದ ಹಣವನ್ನು ಪಿತೃಗಳಿಗೆ, ದೇವತೆಗಳಿಗೆ, ಬ್ರಾಹ್ಮಣರಿಗೆ ದಾನ, ಮಾಡಿದರೆ ಅಕ್ಷಯ ಫಲವು ಬರುತ್ತದೆ.

೧೦೫-೧೦೬. ವ್ಯಾಪಾರದಿಂದ ಬರುವ ಲಾಭ ಕೆಲಸದಲ್ಲಿ ಇವೆರಡು ದೊಡ್ಡ ದೋಷಗಳು ಇವೆ. ಆಸೆ ಬಿಡದಿರುವಿಕೆ, ಸುಳ್ಳು ಹೇಳಿ ವ್ಯಾಪಾರ

ಏತೌ ದೋಷೌ ಪರಿತ್ಯಜ್ಯ ಕುರ್ಯಾದರ್ಥಾರ್ಜನಂ ಬುಧಃ ।
ಅಕ್ಷಯಂ ಲಭತೇ ದಾನಾದ್ವಣಿಗ್ದೋಷೈರ್ನ ಲಿಪ್ಯತೇ ॥ ೧೦೬ ॥

ಪುಣ್ಯಕರ್ಮರತೋ ವಿಪ್ರಃ ಕೃಷಿಂ ಹಿ ಪರಿಕಾರಯೇತ್ ।
ವಾಹಯೇದ್ದಿವಸಸ್ಯಾರ್ಧಂ ಬಲೀವರ್ದಚತುಷ್ಟಯಂ ॥ ೧೦೭ ॥

ಅಭಾವಾತ್ತ್ರಿತಯಂ ಚೈವ ಅವಿಶ್ವಾಸಂ ನಕಾರಯೇತ್ ।
ಚಾರಯೇಚ್ಚ ತೃಣೇಽಚ್ಛಿನ್ನೇ ಚೌರವ್ಯಾಘ್ರವಿವರ್ಜಿತೇ ॥ ೧೦೮ ॥

ದದ್ಯಾದ್ಘಾಸಂ ಯಥೇಷ್ಟಂ ಚ ನಿತ್ಯಮಾತಿಷ್ಠಯೇತ್ಸ್ವಯಂ ।
ಗೋಷ್ಠಂ ಚ ಕಾರಯೇತ್ತತ್ರ ಕಿಂಚಿದ್ವಿಘ್ನವಿವರ್ಜಿತಂ ॥ ೧೦೯ ॥

ಸದಾ ಗೋಮಯಮೂತ್ರಾಭ್ಯಾಂ ವಿಧ್ವಂಸೈಶ್ಚ ವಿವರ್ಜಿತಂ ।
ನ ಮಲಂ ನಿಕ್ಷಿಪೇದ್ಗೋಷ್ಠೇ ಸರ್ವದೇವನಿಕೇತನೇ ॥ ೧೧೦ ॥

ಆತ್ಮನಃ ಶಯನೀಯಸ್ಯ ಸದೃಶಂ ಕಾರಯೇದ್ಬುಧಃ ।
ಸಮಂ ನಿರ್ವಾಪಯೇದ್ಯತ್ನಾಚ್ಛೀತವಾತರಜಸ್ತಥಾ ॥ ೧೧೧ ॥

---

ಮಾಡುವುದು. ಈ ದೋಷಗಳನ್ನು ಬಿಟ್ಟು ಹಣವನ್ನು ಸಂಪಾದಿಸಿದರೆ, ವ್ಯಾಪಾರದ ದೋಷವನ್ನು ಹೊಂದದೇ ಅಕ್ಷಯಫಲವನ್ನು ಹೊಂದುತ್ತಾನೆ.

೧೦೭-೧೦೯. ಒಳ್ಳೆಯ ಕೆಲಸದಲ್ಲಿರಬೇಕೆನ್ನುವವನು, ಕೃಷಿಯನ್ನು ಮಾಡ ಬೇಕು ನಾಲ್ಕು ಎತ್ತುಗಳನ್ನು ಇಡಬೇಕು. ಅವಕ್ಕೋಸ್ಕರ ಅರ್ಧ ದಿವಸವನ್ನು ಕಳೆಯಬೇಕು. ನಾಲ್ಕನ್ನಿಡಲಾಗದಿದ್ದರೆ, ಮೂರನ್ನಾದರೂ ಇಡಬೇಕು. ಅವು ಗಳನ್ನು ಉದಾಸೀನ ಮಾಡಬಾರದು. ದುಷ್ಟಮೃಗಗಳಿಲ್ಲದ ಹುಲ್ಲಿರುವ ಜಾಗದಲ್ಲಿ ಮೇಯಿಸಬೇಕು. ಬೇಕಾದಷ್ಟು ಹುಲ್ಲನ್ನು ಕೊಡಬೇಕು. ನಿತ್ಯವೂ ಅವನ್ನು ಶುಶ್ರೂಷಿಸಬೇಕು. ತೊಂದರೆಯಿಲ್ಲದಿರುವ ಜಾಗದಲ್ಲಿ ಕೊಟ್ಟಿಗೆಯನ್ನು ಮಾಡಬೇಕು.

೧೧೦-೧೧೨. ಸಗಣಿ, ಗಂಜಲಗಳನ್ನು ತೆಗೆದುಹಾಕುತ್ತಿರಬೇಕು. ಹಳ್ಳ ಕೊಳ್ಳಗಳಿರಕೂಡದು. ಕೊಟ್ಟಿಗೆಯಲ್ಲಿ ದೇವತೆಗಳೆಲ್ಲರೂ ಇರುತ್ತಾರಾದ್ದರಿಂದ ಮಲ ಮೂತ್ರಗಳನ್ನು ಹಾಕಬಾರದು. ಅವು ಮಲಗುವ ಜಾಗವನ್ನು ತನ್ನ ಹಾಸಿಗೆ ಹಾಕಿ ಕೊಳ್ಳುವ ಜಾಗದಂತೆ ಮಾಡಬೇಕು. ತನ್ನಂತೆಯೇ ಅವುಗಳನ್ನು ಶೀತ, ಉಷ್ಣ.

ಪ್ರಾಣಸ್ಯ ಸದೃಶಂ ಪಶ್ಯೇದ್ಗಾಂ ಚ ಸಾಮಾನ್ಯವಿಗ್ರಹಂ ।
ಅಸ್ಯ ದೇಹೇ ಸುಖಂ ದುಃಖಂ ತಥಾ ತಸ್ಯೈವ ಕಲ್ಪತೇ ॥ ೧೧೨ ॥

ಅನೇನ ವಿಧಿನಾ ಯಸ್ತು ಕೃಷಿಕರ್ಮಾಣಿ ಕಾರಯೇತ್ ।
ಸ ಚ ಗೋವಾಹನೈರ್ದೋಷೈರ್ನ ಲಿಪ್ಯೇತ ಧನೀ ಭವೇತ್ ॥ ೧೧೩ ॥

ದುರ್ಬಲಂ ಪೀಡಯೇದ್ಯಸ್ತು ತಥೈವ ಗದಸಂಯುತಂ ।
ಅತಿಬಾಲಾತಿವೃದ್ಧಂ ಚ ಸ ಗೋಹತ್ಯಾಂ ಸಮಾಲಭೇತ್ ॥ ೧೧೪ ॥

ವಿಷಮಂ ವಾಹಯೇದ್ಯಸ್ತು ದುರ್ಬಲೇನ ಬಲೇನ ಚ ।
ಸ ಗೋಹತ್ಯಾಸಮಂ ಪಾಪಂ ಪ್ರಾಪ್ನೋತೀಹ ನ ಸಂಶಯಃ ॥ ೧೧೫ ॥

ಯೋ ವಾಹಯೇದ್ವಿನಾ ಸಸ್ಯಂ ಖಾದಂತಂ ಗಾಂ ನಿವಾರಯೇತ್ ।
ನೋಹಾತ್ತೃಣಂ ಜಲಂ ವಾಽಪಿ ಸ ಗೋಹತ್ಯಾಂ ಸಮಾಲಭೇತ್ ॥೧೧೬॥

---

ಗಾಳಿ, ಧೂಳಿನಿಂದ ನೋಡಿಕೊಳ್ಳಬೇಕು. ಆ ಗೋವನ್ನು ಪ್ರಾಣಕ್ಕೆ, ಸಮವಾಗಿ, ನೋಡಿಕೊಳ್ಳಬೆ ಕು. ಮನುಷ್ಯನ ದೇಹದಲ್ಲಿ ಸುಖ ದುಃಖಗಳಿರುವಂತೆಯೇ ಅದರ ದೇಹಕ್ಕೂ ಸುಖದುಃಖಗಳುಂಟು.

೧೧೩. ಈ ರೀತಿಯಾಗಿ ಯಾವನು ವ್ಯವಸಾಯವನ್ನು ಮಾಡುತ್ತಾನೆಯೋ, ಅವನು ಆ ಗೋವುಗಳನ್ನು ಕಟ್ಟಿಉತ್ತ ಗಾಡಿಗೆ ಕಟ್ಟಿದ, ದೋಷಗಳನ್ನು ಹೊಂದುವುದಿಲ್ಲ ಧನಿಕನೂ ಆಗುತ್ತಾನೆ.

೧೧೪. ಯಾವನು ಬಲವಿಲ್ಲದುದನ್ನೂ, ರೋಗಿಯನ್ನೂ, ಎಳೆಯದನ್ನೂ, ಮುದಿಯನ್ನೂ, ಕೆಲಸಕ್ಕೆ ಉಪಯೋಗಿಸಿಕೊಳ್ಳುತ್ತಾನೆಯೋ, ಅವನಿಗೆ ಗೋಹತ್ಯೆಯು ಬರುತ್ತದೆ.

೧೧೫. ಒಂದು ಬಲವಾದ ಎತ್ತು, ಮತ್ತೊಂದು ಬಲವಿಲ್ಲದ್ದು, ಈ ರೀತಿ ಸಮವಿಲ್ಲದುವುಗಳನ್ನು ಕಟ್ಟಿ ಕೆಲಸ ಮಾಡಿದರೆ ಗೋಹತ್ಯೆಯನ್ನು ಹೊಂದುತ್ತಾನೆ, ಸಂಶಯವಿಲ್ಲ.

೧೧೬. ಯಾವುದಾದರೂ ಹಸುವು ಮನುಷ್ಯನ ಆಹಾರದ ಸಸ್ಯಗಳನ್ನು ತಿನ್ನದೆ ಅವನಿಗೆ ಬೇಕಾದ ನೀರನ್ನು ಕುಡಿಯದೆ, ಅವನಿಗೆ ಬೇಡದುದನ್ನು ತಿನ್ನುತ್ತಿರುವಾಗ, ಅಡ್ಡಿ ಪಡಿಸಿದರೆ ಅವನಿಗೆ ಗೋಹತ್ಯೆಯು ಬರುತ್ತದೆ.

ಅಮಾವಾಸ್ಯಾಂ ಚ ಸಂಕ್ರಾಂತ್ಯಾಂ ಪೌರ್ಣಮಸ್ಯಾಂ ತಥೈವ ಚ ।
ಹಲಸ್ಯ ವಾಹನಾತ್ಪಾಪಂ ಗವಾಮಯುತಹತ್ಯಯಾ ॥ ೧೧೭ ॥

ಅಮೂಷು ಪೂಜಯೇದ್ಯಸ್ತು ಸಿತೈಶ್ಚಿತ್ರಾದಿಭಿರ್ನರಃ ।
ಕಜ್ಜಲೈಃ ಕುಸುಮೈಸ್ತೈಲೈಃ ಸೋಽಕ್ಷಯಂ ಸ್ವರ್ಗಮಶ್ನುತೇ ॥ ೧೧೮ ॥

ಘಾಸಮುಷ್ಟಿಂ ಪರಗವೇ ಯೋ ದದಾತಿ ಸದಾಹ್ನಿಕಂ ।
ಸರ್ವಪಾಪಕ್ಷಯಸ್ತಸ್ಯ ಸ್ವರ್ಗಂ ಚಾಕ್ಷಯಮಶ್ನುತೇ ॥ ೧೧೯ ॥

ಯಥಾ ವಿಪ್ರಸ್ತಥಾ ಗೌಶ್ಚ ದ್ವಯೋಃ ಪೂಜಾಫಲಂ ಸಮಂ ।
ವಿಚಾರೇ ಬ್ರಾಹ್ಮಣೋ ಮುಖ್ಯೋ ನೃಣಾಂ ಗಾವಃ ಪಶೌ ಯಥಾ ॥೧೨೦॥

॥ ನಾರದ ಉವಾಚ ॥

ವಿಪ್ರೋ ಬ್ರಹ್ಮಮುಖೇ ಜಾತಃ ಕಥಿತೋ ಮೇ ತ್ವಯಾನಘ ।
ಕಥಂ ಗೋಭಿಃ ಸಮೋ ನಾಥ ವಿಸ್ಮಯೋ ಮೇ ವಿಧೇ ಧ್ರುವಂ ॥ ೧೨೧ ॥

---

೧೧೭. ಅಮಾವಾಸ್ಯೆ, ಸಂಕ್ರಾಂತಿ, ಹುಣ್ಣಿಮೆಗಳಲ್ಲಿ, ಉತ್ತರೆ, ಸಾವಿರ ಗೋವುಗಳನ್ನು ಕೊಂದ ಪಾಪವು ಬರುತ್ತದೆ

೧೧೮. ಇಂತಹ ಕಾಲಗಳಲ್ಲಿ ಯಾವನು ವಿಧವಿಧವಾದ ಹೂಗಳಿಂದಲೂ, ಒಣ್ಣಗಳಿಂದಲೂ, ಎಣ್ಣೆಯಿಂದಲೂ, ಪೂಜಿಸುವನೋ ಅವನಿಗೆ ಅಕ್ಷಯವಾದ ಸ್ವರ್ಗವು ಬರುತ್ತದೆ.

೧೧೯. ಇತರರ ಗೋವಿಗೆ ಯಾವನು ಪ್ರತಿದಿನವೂ ಒಂದು ಮುಷ್ಟಿ ಹುಲ್ಲನ್ನು ಕೊಡುವನೋ ಅವನಿಗೆ ಪಾಪಗಳೆಲ್ಲವೂ ಹೋಗಿ ಅಕ್ಷಯವಾದ ಸ್ವರ್ಗವು ಲಭಿಸುತ್ತದೆ.

೧೨೦. ಬ್ರಾಹ್ಮಣನಂತೆಯೇ ಗೋವೂ, ಪೂಜ್ಯವು, ಇಬ್ಬರ ಪೂಜೆಯೂ ಒಂದೇ ಸಮವಾದುದು. ಜನರಿಗೆ ಉಪಚಾರಮಾಡಲು ಬ್ರಾಹ್ಮಣನು ಮುಖ್ಯನಾಗಿರುವಂತೆ ಹಸುವೂ ಮುಖ್ಯವು.

೧೨೧. ನಾರದನು ಹೇಳಿದನು- ಎಲೈ ಬ್ರಹ್ಮನೇ ! ಬ್ರಾಹ್ಮಣನು ಬ್ರಹ್ಮನ ಮುಖದಿಂದ ಹುಟ್ಟಿದವನು ಎಂದು ಹೇಳಿದೆಯಲ್ಲ. ಅವನಿಗೆ ಗೋವುಗಳು ಸಮವಾಗುತ್ತವೆಯೇ ? ನನಗೆ ಆಶ್ಚರ್ಯವಾಗುತ್ತದೆ.

॥ ಬ್ರಹ್ಮೋವಾಚ ॥

ಶೃಣು ಚಾತ್ರ ಯಥಾತಥ್ಯಂ ಬ್ರಾಹ್ಮಣಾನಾಂ ಗವಾಂ ಯಥಾ ।
ಏಕಪಿಂಡಕ್ರಿಯೈಕ್ಯಂ ತು ಪುರುಷೈರ್ನಿರ್ಮಿತಂ ಪುರಾ ॥ ೧೨೨ ॥

ಪುರಾ ಬ್ರಹ್ಮಮುಖೋದ್ಭೂತಂ ಕೂಟಂ ತೇಜೋಮಯಂ ಮಹತ್ ।
ಚತುರ್ಭಾಗಪ್ರಜಾತಂ ತದ್ವೇದಾಗ್ನಿ ದ್ವಿಜಗೌಸ್ತಥಾ ॥ ೧೨೩ ॥

ಪ್ರಾಕ್ತೇಜಃಸಂಭವೋ ವೇದೋ ವಹ್ನಿರೇವ ತಥೈವ ಚ ।
ಪರತೋ ಗೌಸ್ತಥಾ ವಿಪ್ರೋ ಜಾತಾಶ್ಚೈವ ಪೃಥಕ್ಪೃಥಕ್ ॥ ೧೨೪ ॥

ತತ್ರ ಸೃಷ್ಟಾ ಮಯಾ ಚಾದೌ ವೇದಾಶ್ಚತ್ವಾರ ಏಕಶಃ ।
ಸ್ಥಿತ್ಯರ್ಥಂ ಸರ್ವಲೋಕಾನಾಂ ಭುವನಾನಾಂ ಸಮಂತತಃ ॥ ೧೨೫ ॥

ಅಗ್ನಿರ್ಹವ್ಯಾನಿ ಭುಂಜೀತ ದೇವಹೇತೋಸ್ತಥಾ ದ್ವಿಜಃ ।
ಆಜ್ಯಂ ಗೋಪ್ರಭವಂ ವಿದ್ಧಿ ತಸ್ಮಾದೇತೇ ಪ್ರಸೂತಕಾಃ ॥ ೧೨೬ ॥

---

೧೨೨. ಬ್ರಹ್ಮನು ಹೇಳಿದನು– ಬ್ರಾಹ್ಮಣರ ಗೋವುಗಳ ಸರಿಯಾದ ವಿಷಯುವನ್ನು ಕೇಳು, ಇವರಿಬ್ಬರೂ ಏಕಪಿಂಡದವರು. ಕೆಲಸವು ಇಬ್ಬರಿಗೂ ಒಂದೇ ಎಂದು ದೊಡ್ಡವರು ಮಾಡಿದ್ದಾರೆ.

೧೨೩. ಪೂರ್ವದಲ್ಲಿ ಬ್ರಹ್ಮನ ಮುಖದಲ್ಲಿ ಒಂದು ತೇಜಸ್ಸಿನ ಗಟ್ಟಿಯೇ ಹುಟ್ಟಿತು. ಆ ಗಟ್ಟಿಯು ವೇದ, ಅಗ್ನಿ, ದ್ವಿಜ, ಗೌ, ಎಂಬದಾಗಿ ನಾಲ್ಕು ಭಾಗವಾಯಿತು

೧೨೪. ಅವುಗಳಲ್ಲಿ ಮೊದಲ ಭಾಗದಲ್ಲಿ ವೇದವೂ, ಎರಡನೆಯ ಭಾಗದಲ್ಲಿ ಅಗ್ನಿಯೂ, ಮೂರನೆಯದರಲ್ಲಿ ದ್ವಿಜರೂ, ನಾಲ್ಕನೆಯದರಲ್ಲಿ ಗೋವುಗಳೂ, ಹುಟ್ಟಿದುವು.

೧೨೫. ನಾನು ಮೊದಲು ನಾಲ್ಕು ವೇದಗಳನ್ನೂ, ಪ್ರಪಂಚದ ನೆಲೆಗೋಸ್ಕರ ಉತ್ಪತ್ತಿಮಾಡಿದೆನು.

೧೨೬. ದೇವತೆಗಳಿಗೆ ಕೊಡಲು ಅಗ್ನಿಯು ಹವಿಸ್ಸನ್ನು ತಿನ್ನುತ್ತಾನೆ. ಅವನ್ನು ಮಾಡತಕ್ಕವನು ವಿಪ್ರನು, ಆ ಹವಿಸ್ಸಿನ ತುಪ್ಪವು ಗೋವಿನಿಂದ ಉಂಟಾಗುತ್ತದೆ, ಆದ್ದರಿಂದ ಇವರೆಲ್ಲರೂ ಒಂದೇ ಜಾಗದಲ್ಲಿ ಹುಟ್ಟಿದವರು.

ನ ಸಂತಿ ಯದಿ ಲೋಕೇಷು ಚತ್ವಾರೋಽಮೀ ಮಹತ್ತರಾಃ ।
ತದಾಽಖಿಲಂ ಚ ಭುವನಂ ನಷ್ಟಂ ಸ್ಥಾವರಜಂಗಮಂ ॥ ೧೨೭ ॥

ಏಭಿರ್ಧೃತಾಃ ಸದಾ ಲೋಕಾಃ ಪ್ರತಿಷ್ಠಂತಿ ಸ್ವಭಾವತಃ ।
ಸ್ವಭಾವೋ ಬ್ರಹ್ಮರೂಪೋಽಸಾವೇತೇ ಬ್ರಹ್ಮಮಯಾಃ ಸ್ಮೃತಾಃ ॥ ೧೨೮ ॥

ತಸ್ಮಾದ್ಗೌಃ ಪೂಜನೀಯೋಽಸೌ ವಿಪ್ರದೇವಾಸುರೈರಪಿ ।
ಉದಾರಃ ಸರ್ವಕಾರ್ಯೇಷು ಜಾತಸ್ತಥ್ಯೋ ಗುಣಾಕರಃ ॥ ೧೨೯ ॥

ಸರ್ವದೇವಮಯಃ ಸಾಕ್ಷಾತ್ಸರ್ವಸತ್ವಾನುಕಂಪಕಃ ।
ಅಸ್ಯ ಕಾಯಂ ಮಯಾ ಸೃಷ್ಟಂ ಪುರೈವ ಪೋಷಣಂ ಪ್ರತಿ ॥ ೧೩೦ ॥

ಅತ ಏವ ಮಯಾ ದತ್ತಂ ವರಂ ಚಾತಿಸುಶೋಭನಂ ।
ಏಕಜನ್ಮನಿ ತೇ ಮೋಕ್ಷಸ್ತವಾಸ್ತ್ವಿತಿ ವಿನಿಶ್ಚಿತಂ ॥ ೧೩೧ ॥

ಅತ್ರೈವ ಯೇ ಮೃತಾ ಗಾವಸ್ತೇ ಗಚ್ಛಂತಿ ಮಮಾಽಲಯಂ ।
ಪಾಪಸ್ಯ ಕಣಮಾತ್ರಂ ತು ತೇಷಾಂ ದೇಹೇ ನ ತಿಷ್ಠತಿ ॥ ೧೩೨ ॥

---

೧೨೭. ಈ ಮಹಿಮರಾದ ನಾಲ್ವರೂ ಲೋಕದಲ್ಲಿಲ್ಲದಿದ್ದರೆ, ಚರಾಚರಾತ್ಮಕವಾದ ಈ ಪ್ರಪಂಚವು ನಾಶವಾಗುತ್ತಿದ್ದಿತು.

೧೨೮. ಇವುಗಳು ಇರುವುದರಿಂದಲೇ, ಪ್ರಪಂಚವು ಉಳಿದಿದೆ. ಇವರ ಸ್ವಭಾವವು ಬ್ರಹ್ಮ ರೂಪವಾದುದು, ಇವರೆಲ್ಲರೂ ಬ್ರಹ್ಮಮಯರು.

೧೨೯. ಆದ್ದರಿಂದ ಗೋವನ್ನು ಎಲ್ಲರೂ ಪೂಜೆ ಮಾಡಬೇಕು. ಅದು ಎಲ್ಲಾ ಕೆಲಸಕ್ಕೂ ಉಪಯುಕ್ತವಾಗಿ ಗುಣಗಳಿಗೆ ನಿಧಿಯಾಗಿ ಆಯಿತು

೧೩೦. ಆ ಗೋವು ಎಲ್ಲಾ ದೇವತೆಗಳ ಸ್ವರೂಪವು, ಎಲ್ಲಾ ಪ್ರಾಣಗಳ ದಯೆಯು, ಅದರ ದೇಹವನ್ನು ಎಲ್ಲಾ ಪ್ರಾಣಿಗಳಿಗೂ ಪೋಷಣ ರೂಪವಾಗಿ ಸೃಷ್ಟಿಸಿದ್ದೇನೆ.

೧೩೧. ಆದ್ದರಿಂದಲೇ ನಾನು ಅದಕ್ಕೆ ಒಳ್ಳೆಯ ವರವನ್ನು ಕೊಟ್ಟಿದ್ದೇನೆ, ಒಂದೇ ಜನ್ಮದಲ್ಲಿ ನಿನಗೆ ಮೋಕ್ಷವಾಗಲಿ ಎಂದು.

೧೩೨. ಈ ಲೋಕದಲ್ಲಿ ಸತ್ತ ಗೋವುಗಳೆಲ್ಲವೂ ನನ್ನಲ್ಲಿಗೆ ಬರುತ್ತವೆ ಒಂದು ಚೂರು ಪಾಪವೂ ಅದರ ದೇಹದಲ್ಲಿರುವುದಿಲ್ಲ.

ದೇವೀ ಗೌರ್ಧೇನುಕಾ ದೇವ್ಯೈಶ್ಚಾಽದಿದೇವಾಸ್ತ್ರಿಶಕ್ತಿಕಾಃ ।
ಪ್ರಸಾದಾದ್ಯಸ್ಯ ಯಜ್ಞಾನಾಂ ಪ್ರಭವೋ ಹಿ ವಿನಿಶ್ಚಿತಂ ॥ ೧೩೩ ॥

ಗವಾಂ ಸರ್ವಪವಿತ್ರಾಣಿ ಪುನಂತಿ ಸಕಲಂ ಜಗತ್ ।
ಮೂತ್ರಂ ಗೋರ್ಗೋಮಯಂ ಕ್ಷೀರಂ ದಧಿ ಸರ್ಪಿಸ್ತಥೈವ ಚ ॥ ೧೩೪ ॥

ಅಮೀಷಾಂ ಭಕ್ಷಣೇ ಪಾಪಂ ನ ತಿಷ್ಠತಿ ಕಲೇವರೇ ।
ತಸ್ಮಾದ್ಘೃತಂ ದಧಿ ಕ್ಷೀರಂ ನಿತ್ಯಂ ಖಾದಂತಿ ಧಾರ್ಮಿಕಾಃ ॥ ೧೩೫ ॥

ವಿಶಿಷ್ಟಂ ಸರ್ವದ್ರವ್ಯೇಷು ಗವ್ಯಮಿಷ್ಟಂ ಪರಂ ಶುಭಂ ।
ಯಸ್ಯಾಸ್ಯ ಭೋಜನಂ ನಾಸ್ತಿ ತಸ್ಯ ಮೂರ್ತಿಸ್ತು ಪೂತಿಕಾ ॥ ೧೩೬ ॥

ಅನ್ನಾದ್ಯಂ ಪಂಚರಾತ್ರೇಣ ಸಪ್ತರಾತ್ರೇಣ ವೈ ಪಯಃ ।
ದಧಿ ವಿಂಶತಿರಾತ್ರೇಣ ಘೃತಂ ಸ್ಯಾನ್ಮಾಸಮೇಕಕಂ ॥ ೧೩೭ ॥

---

೧೩೩. ಆ ಗೋವೇನೇ ಮಹಾದೇವಿಯು, ಆ ಗೋವೇ ಆದಿಯಾದ ಮೂರು ಶಕ್ತಿ ಸ್ವರೂಪವು. ಅದರ ಅನುಗ್ರಹದಿಂದಲೇ ಯಜ್ಞಗಳು ನಡೆಯುತ್ತವೆ. ನಿಶ್ಚಯವು.

೧೩೪. ಗೋವಿನ ಸಗಣಿ, ಗಂಜಲ, ಹಾಲು, ಮೊಸರು, ತುಪ್ಪ, ಎಲ್ಲವೂ ಪವಿತ್ರವಾದುವು.

೧೩೫. ಅವನ್ನು ತಿಂದರೆ ದೇಹದಲ್ಲಿ ಪಾಪವಿರುವುದೇ ಇಲ್ಲ. ಆದ್ದರಿಂದಲೇ ಹಾಲು, ಮೊಸರು, ತುಪ್ಪಗಳನ್ನು ದಿನವೂ ಸತ್ಪುರುಷರು ತಿನ್ನುತ್ತಾರೆ.

೧೩೬. ಗೋವಿನ ಸಂಬಂಧವಾದುವು ಎಲ್ಲವೂ ಪವಿತ್ರಗಳೇ ಊಟ ಮುಂತಾದುವುಗಳನ್ನು ಮಾಡದೆ ಗವ್ಯವನ್ನು ತಿಂದುಕೊಂಡೇ ಇದ್ದರೆ ಅವನು ಬಹಳ ಪರಿಶುದ್ಧನು.

೧೩೭. ಅನ್ನವೇ ಮುಂತಾದುವು ಜೀರ್ಣಿಸಲು ಒಂದು ರಾತ್ರಿ ಬೇಕು. ಹಾಲು ಜೀರ್ಣಿಸಲು ಏಳು ರಾತ್ರಿಗಳು ಬೇಕು. ಮೊಸರು ಇಪ್ಪತ್ತು ದಿನಗಳಿಗೂ ತುಪ್ಪವು ಒಂದು ತಿಂಗಳಿಗೂ ಜೀರ್ಣವಾಗುತ್ತವೆ.

ಅಗವ್ಯೈರ್ಯಶ್ಚ ಭುಂಕ್ತೇ ವೈ ಮಾಸಮೇಕಂ ನಿರಂತರಂ ।
ಭೋಜನೇ ತಸ್ಯ ಮರ್ತ್ಯಸ್ಯ ಪ್ರೇತಾದಂತಿ ತಥೈವ ಹಿ ॥ ೧೩೮ ॥

ಪರಮಾನ್ನಂ ಪರಂ ಶುದ್ಧಂ ಸ್ವಿನ್ನಂ ಚಾಽತಪತಂಡುಲೈಃ ।
ಭುಕ್ತ್ವಾ ತು ಯತ್ಕೃತಂ ಪುಣ್ಯಂ ಕೋಟಿಕೋಟಿಗುಣಂ ಭವೇತ್ ॥೧೩೯॥

ಅನ್ಯಚ್ಚಾಪಿ ಚ ಯದ್ದ್ರವ್ಯಂ ಹವಿಷ್ಯಂ ಶಾಸ್ತ್ರನಿರ್ಮಿತಂ ।
ತದ್ಭುಕ್ತ್ವಾ ಯತ್ಕೃತಂ ಕರ್ಮ ಸರ್ವಂ ಲಕ್ಷಗುಣಂ ಭವೇತ್ ॥ ೧೪೦ ॥

ನಿರಾಮಿಷಂ ಚ ಯತ್ಕಿಂಚಿತ್ತಸ್ಮಾದ್ಯದ್ಯತ್ಫಲಂ ಲಭೇತ್ ।
ತಸ್ಮಾದ್ಗೌಃ ಸರ್ವಕಾರ್ಯೇಷು ಶಸ್ತ ಏಕೋ ಯುಗೇ ಯುಗೇ ॥
ಸರ್ವದಾ ಸರ್ವಕಾರ್ಯೇಷು ಧರ್ಮಕಾಮಾರ್ಥಮೋಕ್ಷದಃ ॥ ೧೪೧ ॥

॥ ನಾರದ ಉವಾಚ ॥

ಕೇಷು ಕಿಂ ವಾ ಪ್ರಯೋಗೇಣ ಪರಂ ಪುಣ್ಯಂ ಪ್ರಕೀರ್ತಿತಂ ।
ವದ ತತ್ಸರ್ವಲೋಕೇಶ ಯಥಾ ಜಾನಾಮಿ ತತ್ತ್ವತಃ ॥ ೧೪೨ ॥

---

೧೩೮. ಗೋವಿನ ಹಾಲು ಮುಂತಾದುವುಗಳಿಲ್ಲದೆ ಒಂದು ತಿಂಗಳು ಯಾವನು ಊಟ ಮಾಡುವನೋ, ಅವನ ಊಟವನ್ನು ಪ್ರೇತಗಳು ತಿನ್ನುತ್ತವೆ.

೧೩೯. ಪಾಯಸವು ಬಹು ಶುದ್ಧವಾದುದು. ಬೆಳ್ಳಗಿರುವ ಸಣ್ಣ ಅಕ್ಕಿಯನ್ನು ಹಾಕಿ ಮಾಡಿ ಅದಕ್ಕೆ ತುಪ್ಪವನ್ನು ಹಾಕಿ ಅದನ್ನು ಮತ್ತೊಬ್ಬರಿಗೂ ಹಾಕಿ ನಾವೂ ತಿಂದರೆ ನಾವುಮಾಡಿದ ಊಟದ ಪುಣ್ಯವು ಕೋಟಿಗಳ ಕೋಟಿಯಷ್ಟಾಗುತ್ತದೆ.

೧೪೦. ಶಾಸ್ತ್ರವತ್ತಾಗಿ ಮಾಡಿದ ಹವಿಸ್ಸನ್ನು ತಿಂದರೆ, ಅದನ್ನು ಯಾವ ಕೆಲಸಕ್ಕೆ ಉಪಯೋಗಿಸಿದ್ದರೋ, ಆ ಕಾರ್ಯವು ಲಕ್ಷದಷ್ಟು ಫಲವನ್ನು ಕೊಡುತ್ತದೆ.

೧೪೧. ಮಾಂಸವಿಲ್ಲದ ಕ್ರಿಯೆಗಳಲ್ಲಿ ಯಾವ ಫಲವನ್ನು ಹೊಂದುತ್ತಾನೆಯೋ ಅವುಗಳಲ್ಲಿ ಈ ಗೋವಿನ ಹಾಲು ಮುಂತಾದುವು ಬೇಕು. ಆದ್ದರಿಂದ ಹಸುವು ಒಂದೇ ಎಲ್ಲಾ ಯುಗಗಳಲ್ಲಿಯೂ ಪ್ರಶಸ್ತವಾದುದು. ಯಾವಾಗಲೂ ಎಲ್ಲಾ ಕೆಲಸದಲ್ಲಿಯೂ ಧರ್ಮಾರ್ಥ ಕಾಮ ಮೋಕ್ಷಗಳನ್ನು ಕೊಡುತ್ತದೆ.

೧೪೨. ನಾರದನು ಹೇಳಿದನು– ಯಾವುದರಲ್ಲಿ ಏನನ್ನು ಮಾಡಿದರೆ ಬಹು ಫಲವು ಬರುತ್ತದೆ? ಸ್ವಾಮಿ ಅವನ್ನು ಹೇಳು, ಕ್ರಮವಾಗಿ ತಿಳಿದುಕೊಳ್ಳಬೇಕು.

॥ ಬ್ರಹ್ಮೋವಾಚ ॥

ಸಕೃತ್ಪ್ರದಕ್ಷಿಣಂ ಕೃತ್ವಾ ಗೋಧನಂ ಚಾಭಿವಂದಯೇತ್ ।
ಸರ್ವಪಾಪೈರ್ವಿನಿರ್ಮುಕ್ತಃ ಸ್ವರ್ಗಂ ಚಾಕ್ಷಯಮಶ್ನುತೇ ॥ ೧೪೩ ॥

ಸುರಾಚಾರ್ಯೋ ಯಥಾ ವಂದ್ಯಃ ಪ್ರೋಕ್ತೋಽಸೌ ಮಾಧವೋ ಯಥಾ ।
ಸಪ್ತಪ್ರದಕ್ಷಿಣಂ ಕೃತ್ವಾ ಚೈಶ್ವರ್ಯಾತ್ಪಾಕಶಾಸನಃ ॥ ೧೪೪ ॥

ಕಲ್ಯ ಉತ್ಥಾಯ ಗೋಮಧ್ಯೇ ಪಾತ್ರಂ ಗೃಹ್ಯ ಸಹೋದಕಂ ।
ನಿಷಿಂಚೇದ್ಯೋ ಗವಾಂ ಶೃಂಗಂ ಮಸ್ತಕೇನೈವ ತಜ್ಜಲಂ ॥ ೧೪೫ ॥

ಪ್ರತೀಕ್ಷೇತ ನಿರಾಹಾರಸ್ತಸ್ಯ ಪುಣ್ಯಂ ನಿಬೋಧತ ।
ಶ್ರೂಯಂತೇ ಯಾನಿ ತೀರ್ಥಾನಿ ತ್ರಿಷು ಲೋಕೇಷು ನಾರದ ॥ ೧೪೬ ॥

ಸಿದ್ಧಚಾರಣಯುಕ್ತಾನಿ ಸೇವಿತಾನಿ ಮಹರ್ಷಿಭಿಃ ।
ಅಭಿಷೇಕಃ ಸಮಸ್ತೇಷಾಂ ಗವಾಂ ಶೃಂಗೋದಕಸ್ಯ ಚ ॥ ೧೪೭ ॥

ಪ್ರಾತರುತ್ಥಾಯ ಯೋ ಮರ್ತ್ಯಃ ಸ್ಪೃಶೇದ್ಗಾಂ ಚ ಘೃತಂ ಮಧು ।
ಸರ್ಷಪಾಂಶ್ಚ ಪಿಯಂಗೂಂಶ್ಚ ಕಲ್ಮಷಾತ್ಪ್ರತಿಮುಚ್ಯತೇ ॥ ೧೪೮ ॥

---

೧೪೩. ಬ್ರಹ್ಮನು ಹೇಳಿದನು– ಗೋವನ್ನು ಒಂದು ಬಾರಿ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರೆ ಎಲ್ಲ ಪಾಪಗಳನ್ನೂ ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ.

೧೪೪. ಬೃಹಸ್ಪತಿಯಂತೆಯೂ, ಸ್ವಾಮಿಯಾದ ಮಾಧವನಂತೆಯೂ, ಆ ಹಸುವು ವಂದ್ಯವು. ಏಳುಬಾರಿ ಪ್ರದಕ್ಷಿಣೆಮಾಡಿ ಇಂದ್ರನು ಐಶ್ವರ್ಯವನ್ನು ಹೊಂದಿದನು.

೧೪೫-೧೪೭. ಬೆಳಗ್ಗೆ ಎದ್ದು ಪಾತ್ರೆಯಲ್ಲಿ ನೀರನ್ನು ಹಿಡಿದುಕೊಂಡು ಗೋವಿನ ಕೊಂಬುಗಳನ್ನು ತೊಳೆದು ನೀರನ್ನು ತಲೆಗೆ ಪ್ರೋಕ್ಷಿಸಿಕೊಂಡು ಎಂದು ಆಹಾರವನ್ನು ಸೇವಿಸುವುದಿಲ್ಲವೋ ಅವನ ಪುಣ್ಯವನ್ನು ಕೇಳು ಲೋಕದಲ್ಲಿ ಸಿದ್ಧರೂ, ಚಾರಣರೂ, ಮಹರ್ಷಿಗಳೂ ಸೇವಿಸಿರುವ ಎಷ್ಟು ತೀರ್ಥಗಳಿವೆಯೋ ಗೋವಿನ ಕೊಂಬಿನ ನೀರಿನಿಂದ ಪ್ರೋಕ್ಷಿಸಿಕೊಂಡರೆ ಅವುಗಳಲ್ಲೆಲ್ಲಾ ಸ್ನಾನಮಾಡಿದ ಪುಣ್ಯವು ಬರುತ್ತವೆ.

೧೪೮. ಬೆಳಗ್ಗೆ ಎದ್ದು ಯಾವನು ಗೋವು, ತುಪ್ಪ, ಜೇನು, ಬಿಳಿಸಾಸಿವೆ, ನವಣೆಗಳನ್ನು ಮುಟ್ಟುತ್ತಾನೆಯೋ ಅವನ ಪಾಪಗಳೆಲ್ಲ ನಾಶವಾಗುತ್ತವೆ.

ಘೃತಕ್ಷೀರಪ್ರದಾ ಗಾವೋ ಘೃತಯೋನ್ಯೋ ಘೃತೋದ್ಭವಾಃ ।
ಘೃತನದ್ಯೋ ಘೃತಾವರ್ತಾಸ್ತಾ ಮೇ ಸಂತು ಸದಾ ಗೃಹೇ ॥ ೧೪೯ ॥

ಘೃತಂ ಮೇ ಸರ್ವಗಾತ್ರೇಷು ಘೃತಂ ಮೇ ಮನಸಿ ಸ್ಥಿತಂ ।
ಗಾವೋ ಮಮಾಗ್ರತೋ ನಿತ್ಯಂ ಗಾವಃ ಪೃಷ್ಠತ ಏವ ಚ ॥ ೧೫೦ ॥

ಗಾವಶ್ಚ ಸರ್ವಗಾತ್ರೇಷು ಗವಾಂ ಮಧ್ಯೇ ವಸಾಮ್ಯಹಂ ।
ಇತ್ಯಾಚಮ್ಯ ಜಪೇನ್ಮಂತ್ರಂ ಸಾಯಂ ಪ್ರಾತರಿಮಂ ಶುಚಿಃ ॥ ೧೫೧ ॥

ಸರ್ವಪಾಪಕ್ಷಯಸ್ತಸ್ಯ ಸ್ವರ್ಲೋಕೇ ಪೂಜಿತೋ ಭವೇತ್ ।
ಯಥಾ ಗೌಶ್ಚ ತಥಾ ವಿಪ್ರೋ ಯಥಾ ವಿಪ್ರಸ್ತಥಾ ಹರಿಃ ॥ ೧೫೨ ॥

ಹರಿರ್ಯಥಾ ತಥಾ ಗಂಗಾ ಏತೇ ನ ಹ್ಯವೃಷಾಃ ಸ್ಮೃತಾಃ ।
ಗಾವೋ ಬಂಧುರ್ಮನುಷ್ಯಾಣಾಂ ಮನುಷ್ಯಾ ಬಾಂಧವಾ ಗವಾಂ ॥ ೧೫೩ ॥

ಗೌಸ್ತು ಯಸ್ಮಿನ್ಗೃಹೇ ನಾಸ್ತಿ ತದ್ಬಂಧುರಹಿತಂ ಗೃಹಂ ।
ಗೋಮುಖೇ ಚಾಶ್ರಿತಾ ವೇದಾಃ ಸಷಡಂಗಪದಕ್ರಮಾಃ ॥ ೧೫೪ ॥

---

೧೪೯. ಗೋವುಗಳು ಹಾಲು ತುಪ್ಪಗಳನ್ನು ಕೊಡುತ್ತವೆ. ತುಪ್ಪ ಹುಟ್ಟುವ ಜಾಗವು, ತುಪ್ಪದ ನದಿ ತುಪ್ಪದ, ಮಡು, ಇವು ನನ್ನ ಮನೆಯಲ್ಲಿ ಸದಾ ಇರಲಿ.

೧೫೦. ನನ್ನ ಮೈಯಲ್ಲಿಯೂ ನನ್ನ ಮನಸ್ಸಿನಲ್ಲಿಯೂ ತುಪ್ಪವೇ ಇರಲಿ. ಗೋವುಗಳು ನನ್ನ ಹಿಂದೆಯೂ ಮುಂದೆಯೂ ಯಾವಾಗಲೂ ಇರಲಿ.

೧೫೧. ಗೋವುಗಳು ನನ್ನ ಮೈಯಲ್ಲೆಲ್ಲಾ ಇರಲಿ. ಗೋವಿನ ಮಧ್ಯದಲ್ಲಿ ವಾಸಮಾಡುತ್ತೇನೆ. ಎಂದು ಈ ಮಂತ್ರವನ್ನು ಆಚಮನ ಮಾಡಿ ಬೆಳಗ್ಗೆ ಸಾಯಂ ಕಾಲಗಳಲ್ಲಿ ಜಪಿಸಬೇಕು.

೧೫೨-೧೫೩. ಈ ರೀತಿ ಮಂತ್ರವನ್ನು ಜಪಿಸಿದವನು ಸ್ವರ್ಗದಲ್ಲಿ ಪೂಜಿತನಾಗುತ್ತಾನೆ. ಗೋವಿನಂತೆ ವಿಪ್ರನೂ, ವಿಪ್ರನಂತೆ ಹರಿಯೂ, ಹರಿಯಂತೆ ಗಂಗೆಯೂ, ಪೂಜ್ಯರು. ಇವರು ಯಾವಾಗಲೂ ಪುಣ್ಯವಂತರು ಪಾಪಗಳಿಲ್ಲವೇ ಇಲ್ಲ. ಗೋವುಗಳು ಮನುಷ್ಯರಿಗೆ ಬಂಧುಗಳು. ಮನುಷ್ಯರು ಗೋವುಗಳಿಗೆ ಬಂಧುಗಳು.

೧೫೪. ಯಾವನ ಮನೆಯಲ್ಲಿ ಗೋವುಗಳಿಲ್ಲವೋ ಆ ಮನೆಯಲ್ಲಿ ಬಂಧುಗಳಿಲ್ಲವು. ಗೋವಿನ ಮುಖದಲ್ಲಿ ವೇದಗಳು, ವೇದಾಂಗಗಳು, ಪದಕ್ರಮಗಳೂ. ಇರುತ್ತವೆ.

ಶೃಂಗಯೋಶ್ಚ ಸ್ಥಿತೌ ನಿತ್ಯಂ ಸದೈವ ಹರಕೇಶವೌ ।
ಉದರೇ ಚ ಸ್ಥಿತಃ ಸ್ಕಂದಃ ಶೀರ್ಷೇ ಬ್ರಹ್ಮಾ ಸ್ಥಿತಃ ಸದಾ ॥ ೧೫೫ ॥

ವೃಷಧ್ವಜೋ ಲಲಾಟೇ ಚ ಶೃಂಗಾಗ್ರ ಇಂದ್ರ ಏವ ಚ ।
ಕರ್ಣಯೋರಶ್ವಿನೌ ದೇವೌ ಚಕ್ಷುಷೋಃ ಶಶಿಭಾಸ್ಕರೌ ॥ ೧೫೬ ॥

ದಂತೇಷು ಗರುಡೋ ದೇವೋ ಜಿಹ್ವಾಯಾಂ ಚ ಸರಸ್ವತೀ ।
ಅಪಾನೇ ಸರ್ವತೀರ್ಥಾನಿ ಪ್ರಸ್ರಾವೇ ಚೈವ ಜಾಹ್ನವೀ ॥ ೧೫೭ ॥

ಋಷಯೋ ರೋಮಕೂಪೇಷು ಮುಖತಃ ಪೃಷ್ಠತೋ ಯಮಃ ।
ಧನದೋ ವರುಣಶ್ಚೈವ ದಕ್ಷಿಣಂ ಪಾರ್ಶ್ವಮಾಶ್ರಿತೌ ॥ ೧೫೮ ॥

ವಾಮಪಾರ್ಶ್ವೇ ಸ್ಥಿತಾ ಯಕ್ಷಾಸ್ತೇಜಸ್ವಂತೋ ಮಹಾಬಲಾಃ ।
ಮುಖಮಧ್ಯೇ ಚ ಗಂಧರ್ವಾ ನಾಸಾಗ್ರೇ ಪನ್ನಗಾಸ್ತಥಾ ॥ ೧೫೯ ॥

ಖುರಾಣಾಂ ಪಶ್ಚಿಮೇ ಪಾರ್ಶ್ವೇ ಅಪ್ಸರಾಶ್ಚ ಸಮಾಶ್ರಿತಾಃ ।
ಗೋಮಯೇ ವಸತೇ ಲಕ್ಷ್ಮೀರ್ಗೋಮೂತ್ರೇ ಸರ್ವಮಂಗಲಾ ॥೧೬೦॥

---

೧೫೫. ಕೊಂಬುಗಳಲ್ಲಿ ಈಶ್ವರನೂ, ಕೇಶವನೂ, ಇದ್ದಾರೆ. ಹೊಟ್ಟೆಯಲ್ಲಿ ಸ್ಕಂದನೂ, ತಲೆಯಲ್ಲಿ ಬ್ರಹ್ಮನೂ ಇದ್ದಾರೆ.

೧೫೬-೧೫೭. ಶಿವನು ಹಣೆಯಲ್ಲಿಯೂ, ಕೊಂಬಿನ ತುದಿಯಲ್ಲಿ ಇಂದ್ರನೂ, ಕಿವಿಗಳಲ್ಲಿ ಅಶ್ವಿನಿ ದೇವತೆಗಳೂ, ಕಣ್ಣುಗಳಲ್ಲಿ ಚಂದ್ರಸೂರ್ಯರೂ, ಹಲ್ಲಿನಲ್ಲಿ ಗರುಡನೂ, ನಾಲಗೆಯಲ್ಲಿ ಸರಸ್ವತಿಯೂ, ಅಪಾನದಲ್ಲಿ ಎಲ್ಲಾ ತೀರ್ಥಗಳೂ, ಕೆಚ್ಚಲಿನಲ್ಲಿ ಗಂಗೆಯೂ ಇರುತ್ತಾರೆ.

೧೫೮. ಋಷಿಗಳು ರೋಮದ ಬುಡದಲ್ಲಿಯೂ, ಮುಖ ಮತ್ತು ಹಿಂಭಾಗದಲ್ಲಿ ಯಮನೂ, ಕುಬೇರ ವರುಣರು ಬಲಭಾಗದಲ್ಲಿಯೂ, ಇರುವರು.

೧೫೯-೧೬೦. ಎಡಗಡೆಯಲ್ಲಿ ಯಕ್ಷರೂ, ಮುಖ ಮಧ್ಯದಲ್ಲಿ ಗಂಧರ್ವರೂ, ಮೂಗಿನ ತುದಿಯಲ್ಲಿ ಸರ್ಪಗಳೂ, ಗೊರಸುಗಳ ಹಿಂಭಾಗದಲ್ಲಿ ಅಪ್ಸರರೂ, ಸಗಣಿಯಲ್ಲಿ ಲಕ್ಷ್ಮಿಯೂ, ಗಂಜಲದಲ್ಲಿ ಸರ್ವಮಂಗಳೆಯಾದ ಪಾರ್ವತಿಯೂ ಇದ್ದಾರೆ.

ಪಾದಾಗ್ರೇ ಖೇಚರಾ ವೇದ್ಯಾ ಹಂಬಶಬ್ದೇ ಪ್ರಜಾಪತಿಃ ।
ಚತ್ವಾರಃ ಸಾಗರಾಃ ಪೂರ್ಣಾಃ ಧೇನೂನಾಂ ಚ ಪಯೋಧರೇ ॥ ೧೬೧ ॥

ಗಾಂ ಚ ಸ್ಪೃಶತಿ ಯೋ ನಿತ್ಯಂ ಸ್ನಾತೋ ಭವತಿ ನಿತ್ಯತಃ ।
ಅತೋ ಮರ್ತ್ಯಃ ಪ್ರಪುಷ್ಟೈಸ್ತು ಸರ್ವಪಾಪೈಃ ಪ್ರಮುಚ್ಯತೇ ॥ ೧೬೨ ॥

ಗವಾಂ ಖುರೋದ್ಧತರಜಃ ಶಿರಸಾ ಯುಸ್ತು ಧಾರಯೇತ್ ।
ಸ ಚ ತೀರ್ಥಜಲೇ ಸ್ನಾತಃ ಸರ್ವಪಾಪೈಃ ಪ್ರಮುಚ್ಯತೇ ॥ ೧೬೩ ॥

॥ ನಾರದ ಉವಾಚ ॥

ಗವಾಂ ಚ ದಶವರ್ಣಾಣಂ ಕಸ್ಯ ದಾನೇ ಚ ಕಿಂ ಫಲಂ ।
ಬ್ರೂಹಿ ತತ್ತ್ವಂ ಗುರಶ್ರೇಷ್ಠ ಪರಮೇಷ್ಠಿನ್ಪ್ರಿಯಂ ಯದಿ ॥ ೧೬೪ ॥

॥ ಬ್ರಹ್ಮೋವಾಚ ॥

ಶ್ವೇತಾಂ ಗಾಂ ಬ್ರಾಹ್ಮಣೇ ದತ್ವಾ ಮಾನವಶ್ಚೇಶ್ವರೋ ಭವೇತ್ ।
ಪ್ರಾಸಾದೇ ವಸತೇ ನಿತ್ಯಂ ಭೋಗೀ ಚ ಸುಖಮೇಧತೇ ॥ ೧೯೫ ॥

---

೧೬೧. ಕಾಲಿನ ತುದಿಯಲ್ಲಿ ಯಕ್ಷರೂ, ಹಂಭಾ ಶಬ್ದದಲ್ಲಿ ಬ್ರಹ್ಮನೂ, ಹಸುವಿನ ಮೊಲೆಯಲ್ಲಿ ನಾಲ್ಕು ಸಮುದ್ರಗಳೂ ಇರುತ್ತವೆ

೧೬೨. ಗೋವನ್ನು ನಿತ್ಯವೂ ಮುಟ್ಟಿದರೆ ಸ್ನಾನಮಾಡಿದಂತಾಗುತ್ತಾನೆ. ಆದ್ದರಿಂದ ಈ ರೀತಿ ಇರುವ ಗೋವಿನಿಂದ ಸರ್ವ ಪಾಪಗಳೂ ಹೋಗುತ್ತವೆ.

೧೬೩. ಗೋವಿನ ಪಾದ ಧೂಳಿಯನ್ನು ತಲೆಯಲ್ಲಿ ಧರಿಸಿಕೊಂಡರೆ ತೀರ್ಥದಲ್ಲಿ ಸ್ನಾನಮಾಡಿದಂತಾಗಿ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ.

೧೬೪. ನಾರದನು ಹೇಳಿದನು- ಎಲೈ ಬ್ರಹ್ಮನೇ ! ಗೋವುಗಳಲ್ಲಿ ಹತ್ತು ವರ್ಣಗಳು ಇವೆಯಷ್ಟೆ. ಅವುಗಳಲ್ಲಿ ಯಾವ್ಯಾವುಗಳನ್ನು ದಾನ ಮಾಡಿದರೆ ಯಾವ ಯಾವ ಫಲವು ಬರುತ್ತದೆ? ಹೇಳು.

೧೬೫. ಬ್ರಹ್ಮನು ಹೇಳಿದನು- ಬಿಳಿಯ ಹಸುವನ್ನು ದಾನಮಾಡಿದರೆ ಚಕ್ರವರ್ತಿಯಾಗಿ ಮಹಡಿ ಮನೆಯಲ್ಲಿ ವಾಸಿಸುತ್ತ ನಿತ್ಯಭೋಗಿಯಾಗಿ ಸುಖವನ್ನು ಹೊಂದುತ್ತಾನೆ.

ಧೂಮ್ರಾ ತು ಸ್ವರ್ಗಕಾಂತಾರಸಂಸಾರೇ ಪಾಪಮೋಕ್ಷಿಣೀ ।
ಅಕ್ಷಯಂ ಕಪಿಲಾದಾನಂ ಕೃಷ್ಣಾಂ ದತ್ವಾ ನ ಸೀದತಿ ॥ ೧೬೬ ॥

ಪಾಂಡುರಾ ದುರ್ಲಭಾ ಲೋಕೇ ಗೌರೀ ಚ ಕುಲನಂದನಾ ।
ರಕ್ತಾಕ್ಷೀ ರೂಪಕಾಮಸ್ಯ ಧನಕಾಮಸ್ಯ ನೀಲಿಕಾ ॥ ೧೬೭ ॥

ಏಕಾಂ ಚ ಕಪಿಲಾಂ ದತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಯತ್ತು ಬಾಲ್ಯಕೃತಂ ಪಾಪಂ ಯೌವನೇ ವಾರ್ಧಕೇ ಕೃತಂ ॥ ೧೬೮ ॥

ವಾಚಾ ಕೃತಂ ಕರ್ಮಕೃತಂ ಮನಸಾ ಯತ್ಪ್ರಚಿಂತಿತಂ ।
ಅಗಮ್ಯಾಗಮನಂ ಚೈವ ಮಿತ್ರದ್ರೋಹೇ ಚ ಪಾತಕಂ ॥ ೧೬೯ ॥

ಮಾನಕೂಟಂ ತುಲಾಕೂಟಂ ಕನ್ಯಾನೃತಂ ಗವಾನೃತಂ ।
ಸರ್ವಂ ಚ ನಾಶಯೇತ್ಕ್ಷಿಪ್ರಂ ಕಪಿಲಾಂ ಯಃ ಪ್ರಯಚ್ಛತಿ ॥ ೧೭೦ ॥

---

೧೬೬. ಬೂದು ಬಣ್ಣದ ಹಸುವು ಸಂಸಾರವನ್ನು ಪಾರುಮಾಡಿ ಮೋಕ್ಷವನ್ನು ಕೊಡುತ್ತವೆ. ಕಪಿಲೆಯನ್ನು ದಾನಮಾಡಿದರೆ ಅಕ್ಷಯ ಫಲವೂ, ಕಪ್ಪು ಹಸುವನ್ನು ಕೊಟ್ಟರೆ ದುಃಖ ನಾಶವೂ ಆಗುತ್ತದೆ.

೧೬೭ ಪಾಂಡುರ (ಬಿಳುಪು ಕೆಂಪು ಕೂಡಿದುದು) ವಾದುದು ಲೋಕದಲ್ಲಿ ಸಿಕ್ಕುವುದಿಲ್ಲ. ಅದು ಬಹು ಪುಣ್ಯವಾದುದು. ಗೌರ ವರ್ಣವುಳ್ಳದ್ದು ಕುಲವನ್ನು ವೃದ್ಧಿಗೊಳಿಸುತ್ತದೆ ಕಣ್ಣು ಕೆಂಪಗಿದ್ದರೆ ರೂಪವಂತನಾಗುತ್ತಾನೆ. ಕಪ್ಪು ಹಸುವನ್ನು ಕೊಟ್ಟರೆ ಹಣವು ಸಿಕ್ಕುತ್ತದೆ.

೧೬೮-೧೭೦. ಒಂದು ಕಪಿಲೆಯ ಹಸುವನ್ನು ದಾನಮಾಡಿದರೆ ಬಾಲ್ಯ ಯೌವನ, ವಾರ್ಧಿಕ್ಯ (ಮುಪ್ಪು) ಗಳಲ್ಲಿ ಮಾಡಿದ, ಮನಸ್ಸು, ವಾಕ್ಕು, ಕೈಗಳಿಂದ ಮಾಡಿದ ಪಾಪವೂ ತಾನು ರಮಿಸಲು ಬಾರದವರಲ್ಲಿ ರಮಿಸಿದ ಪಾಪವೂ, ಮಿತ್ರ ದ್ರೋಹ ಪಾಪವೂ, ಅಳತೇ ತೂಗುವಿಕೆ, ಕನ್ಯೆಯ ವಿಷಯದ ಸುಳ್ಳು, ಗೋ ವಿಷಯದ ಸುಳ್ಳು, ಇವುಗಳ ಪಾಪವೂ ಎಲ್ಲವೂ ನಾಶವಾಗುತ್ತದೆ.

ದಶಯೋಜನವಿಸ್ತೀರ್ಣಾ ಮಹಾಪಾರಾ ಮಹಾನದೀ ।
ನಾರಾಚಜಲಕಾಂತಾರೇ ಪ್ರಸೃತ ಉದಕಾರ್ಣವೇ ॥ ೧೭೧ ॥

ಯಾವದ್ವತ್ಸಸ್ಯ ದ್ವೌ ಪಾದೌ ಮುಖಂ ಯಾವನ್ನ ಜಾಯತೇ ।
ತಾವದ್ಗೌಃ ಪೃಥಿವೀ ದೇಯಾ ಯಾವದ್ಗರ್ಭಂ ನ ಮುಂಚತಿ ॥ ೧೭೨ ॥

ಸುವರ್ಣಶೃಂಗೀಂ ವಸ್ತ್ರಾಢ್ಯಾಂ ಸರ್ವಾಲಂಕಾರಭೂಷಿತಾಂ ।
ತಾಮ್ರಪೃಷ್ಠಾಂ ರೌಪ್ಯಖುರಾಂ ತಥಾ ಕಾಂಸ್ಯೋಪದೋಹನಾಂ ॥ ೧೭೩ ॥

ಶೋಭಿತಾಂ ಗಂಧಪುಷ್ಪೈಶ್ಚ ಸರ್ವಾಲಂಕಾರಭೂಷಿತಾಂ ।
ಈದೃಶೀಂ ಕಪಿಲಾಂ ದದ್ಯಾದ್ದ್ವಿಜಾತೌ ವೇದಪಾರಗೇ ॥ ೧೭೪ ॥

ಸರ್ವಪಾಪಕ್ಷಯಸ್ತಸ್ಯ ವಿಷ್ಣುಲೋಕೇಽಚ್ಯುತೋ ಭವೇತ್ ।
ತಸ್ಯಾಂ ತು ದುಹ್ಯಮಾನಾಯಾಂ ಭೂಮೌ ಪತಂತಿ ಬಿಂದವಃ ॥ ೧೭೫ ॥

---

೧೭೧. ವೈತರಣೀ ನದಿಯು ಹತ್ತು ಯೋಜನಗಳ ವಿಸ್ತಾರವಾಗಿದೆ. ದಾಟಲು ಕಷ್ಟವಾದ ದೊಡ್ಡ ನದಿಯು. ಮುಳ್ಳು ಮೊಸಳೆಗಳು ಬೇಕಾದಂತೆ ಇರುವ ಆಳವಾದ ನದಿ ಇದನ್ನು ದಾಟಿಸುತ್ತದೆ.

೧೭೨. ಹಸು ಕರುಹಾಕುವಾಗ ಕರುವಿನ ಎರಡು ಕಾಲುಗಳು ಹೊರಕ್ಕೆ ಬಂದಿರಬೇಕು. ಮುಖವು ಹೊರಕ್ಕೆ ಬಂದಿರಬಾರದು. ಆ ರೀತಿ ಕರುವನ್ನು ಹಾಕುತ್ತಿರುವ ಹಸುವನ್ನು ದಾನಮಾಡಬೇಕು. ಆ ರೀತಿ ದಾನಮಾಡಿದರೆ ಭೂಮಿಯನ್ನೆಲ್ಲಾ ದಾನ ಮಾಡಿದ ಪುಣ್ಯವು ಬರುತ್ತದೆ.

೧೭೩-೧೭೪. ಕೋಡಿಗೆ ಚಿನ್ನದ ಗೊಣಸುಗಳನ್ನು ಹಾಕಿರಬೇಕು. ಬಟ್ಟೆಯನ್ನು ಹೊದ್ದಿಸಿರಬೇಕು. ಬೆಳ್ಳಿಯ ಗೊರಸನ್ನು ಮಾಡಿಸಿ ಅದಕ್ಕೆ ತಾಮ್ರದ ಹಿಂಬಳೆಯಿರಬೇಕು ಕಂಚಿನ ಕರೆಯುವ ಪಾತ್ರೆಗಳಿರಬೇಕು ಗಂಧ ಹೂಗಳಿಂದ ಅಲಂಕರಿಸಿರಬೇಕು. ಈ ರೀತಿಯಾದ ಕಪಿಲೆ ಹಸುವನ್ನು ವೇದವನ್ನು ಓದಿದ ಬ್ರಾಹ್ಮಣನಿಗೆ ದಾನಮಾಡಬೇಕು

೧೭೫-೧೮೭. ಹಾಗೆ ದಾನಮಾಡಿದವನು ಪಾಪಗಳನ್ನು ನಾಶಮಾಡಿಕೊಂಡು ವಿಷ್ಣುಲೋಕದಲ್ಲಿ ಶಾಶ್ವತವಾಗಿ ಅವನ ಜೊತೆಯಲ್ಲಿಯೇ ಇರುತ್ತಾನೆ. ಆ ಹಸುವನ್ನು ಕರೆಯುವಾಗ ಭೂಮಿಯಲ್ಲಿ ಬೀಳುವ ಬಿಂದುಗಳು ದೇವಲೋಕದಲ್ಲಿ ಹೂವು ಹಣ್ಣು

ಆರಾಮಾ ದಿವಿ ಜಾಯಂತೇ ಬಹುಪುಷ್ಪಫಲೋತ್ತಮಾಃ ।
ಯತ್ರ ಕಾಮಫಲಾ ವೃಕ್ಷಾ ನದ್ಯಃ ಪಾಯಸಕರ್ದಮಾಃ ॥ ೧೭೬ ॥

ಪ್ರಾಸಾದಾಶ್ಚಾಪಿ ಸೌವರ್ಣಾಸ್ತತ್ರ ಗಚ್ಛಂತಿ ಗೋಪ್ರದಾಃ ।
ದಶಧೇನುಂ ಚ ಯೋ ದದ್ಯಾದೇಕಂ ಚೈವ ದುರಂಧರಂ ॥ ೧೭೭ ॥

ಸಮಾನಂ ತು ಫಲಂ ಪ್ರೋಕ್ತಂ ಬ್ರಹ್ಮಣಾ ಸಮುದಾಹೃತಂ ।
ಏಕಂ ಚ ದಶಭಿರ್ದದ್ಯಾತ್ಸಹಸ್ರಾಣಿ ಶತಂ ಫಲಂ ॥ ೧೭೮ ॥

ತಸ್ಯಾನುಸಾರತೋ ವೇದ್ಯಂ ಫಲಂ ನಾರದ ಯತ್ನತಃ ।
ಪಿತೄನುದ್ದಿಶ್ಯ ಯಃ ಪುತ್ರೋ ವೃಷಂ ಚ ಮೋಕ್ಷಯೇದ್ಭುವಿ ॥ ೧೭೯ ॥

ಪಿತರೋ ವಿಷ್ಣುಲೋಕೇಷು ಮಹೀಯಂತೇ ಯಥೇಪ್ಸಯಾ ।
ಚತಸ್ರೋ ವತ್ಸತರ್ಯಶ್ಚ ಏಕಸ್ಯೈವ ವೃಷಸ್ಯ ಚ ॥ ೧೮೦ ॥

ಮೋಕ್ಷ್ಯಂತೇ ಸರ್ವತಃ ಪುತ್ರ ವಿಧಿರೇಷ ಸನಾತನಃ ।
ಯಾವಂತಿ ಚೈವ ರೋಮಾಣಿ ತಸ್ಯ ತಾಸಾಂ ಚ ಸರ್ವಶಃ ॥ ೧೮೧ ॥

---

ಗಳಿಂದ ಕೂಡಿದ ಮರಗಳುಳ್ಳ ತೋಟಗಳಾಗುತ್ತವೆ. ಗೋದಾನ ಮಾಡಿದವರು ಕಲ್ಪವೃಕ್ಷಗಳುಳ್ಳ, ಪಾಯಸದ ನದಿಗಳು ಹರಿಯುವ ಚಿನ್ನದ ಮಹಡಿ ಮನೆಗಳಿರುವ ಸ್ಥಳಗಳಿಗೆ ಹೋಗುತ್ತಾರೆ. ಹತ್ತು ಗೋವುಗಳನ್ನು ದಾನ ಮಾಡುವವನು ಒಂದು ಹೋರಿಯನ್ನು ಕೊಡಬೇಕು. ಹಾಗೆ ಕೊಟ್ಟರೆ ಆ ಹತ್ತು ಹಸುಗಳ ಫಲದಷ್ಟು ಫಲವನ್ನು ಕೊಡುತ್ತದೆ. ಹತ್ತು ಹಸುಗಳಿಗೆ ಒಂದು ಹೋರಿ ನೂರಕ್ಕೆ ಹತ್ತು ಸಾವಿರಕ್ಕೆ ನೂರು, ಈ ರೀತಿ ಊಹಿಸಿಕೊಳ್ಳಬೇಕು. ಅದಕ್ಕೆ ಅನುಸಾರವಾಗಿ ಫಲವನ್ನು ತಿಳಿದುಕೊಳ್ಳಬೇಕು. ಪಿತೃಗಳಿಗೋಸ್ಕರ ಯಾವ ಮಗನು ಬಸವನನ್ನು ಬಿಡುತ್ತಾನೆಯೋ ಅವನ ಪಿತೃಗಳು ವಿಷ್ಣುಲೋಕದಲ್ಲಿ ಯಥೇಚ್ಛವಾಗಿ ವಿಹರಿಸುತ್ತಾರೆ. ನಾಲ್ಕು ಹೆಣ್ಣು ಕರುಗಳು ಒಂದು ಹೋರಿಗರುವಿಗೆ ಸಮ. ಅವನ್ನು ಬಿಟ್ಟರೆ ಮೋಕ್ಷ ಸಿಕ್ಕುತ್ತದೆ, ಇದು ಹಿಂದಿನ ವಿಧಿಯು ಅಲ್ಲದೆ ಒಂದು ಹೋರಿಗರುವನ್ನು ಬಿಟ್ಟರೆ ನಾಲ್ಕು ಹೆಣ್ಣುಗರುಗಳನ್ನು ಬಿಡಬೇಕು. ಆ ಹೋರಿಯ ಮತ್ತು ಹೆಣ್ಣು ಕರುಗಳ ರೋಮಗಳೆಷ್ಟಿವೆಯೋ ಅಷ್ಟು ಸಾವಿರ ವರ್ಷಗಳು ಸ್ವರ್ಗವನ್ನು

ತಾವದ್ವರ್ಷಸಹಸ್ರಾಣಿ ಸ್ವರ್ಗಂ ಭುಂಜಂತಿ ಮಾನವಾಃ ।
ಲಾಂಗೂಲೇನ ವೃಷೋ ಯಚ್ಚ ಜಲಂ ಚೋತ್ಕ್ಷಿಪತಿ ಧ್ರುವಂ ॥ ೧೮೨ ॥

ತತ್ತ್ರೋಯಂ ತು ಸಹಸ್ರಾಬ್ದಂ ಪಿತೄಣಾಮಮೃತಂ ಭವೇತ್ ।
ಖುರೇಣ ಕರ್ಷಯೇದ್ಭೂಮಿಂ ತತೋ ಲೋಷ್ಟಂ ಚ ಕರ್ದಮಃ ॥ ೧೮೩ ॥

ಪಿತೃಭ್ಯಶ್ಚ ಸ್ವಧಾ ತತ್ರ ಲಕ್ಷಕೋಟಿಗುಣಂ ಭವೇತ್ ।
ವಿದ್ಯಮಾನೇ ಚ ಜನಕೇ ಯದಿ ಮಾತಾ ವಿನಶ್ಯತಿ ॥ ೧೮೪ ॥

ಚಂದನೇನಾಂಕಿತಾ ಧೇನುಸ್ತಸ್ಯಾಃ ಸ್ವರ್ಗಾಯ ದೀಯತೇ ।
ದಾತಾ ಚೈವ ಪಿತೄಣಾಂ ಚ ಋಣಂ ಚೈವ ಪ್ರಮುಂಚತಿ ॥ ೧೮೫ ॥

ಅಕ್ಷಯಂ ಲಭತೇ ಸ್ವರ್ಗಂ ಪೂಜಿತೋ ಮಾಧವೋ ಯಥಾ ।
ಸರ್ವಲಕ್ಷಣಸಂಯುಕ್ತಾ ತರುಣಾ ಗೌಃ ಪಯಸ್ವಿನೀ ॥ ೧೮೬ ॥

ಸಮಾಪ್ರಸೂತಿಕಾ ಶುದ್ಧಾ ಸಾ ಚ ಗೌಃ ಪೃಥಿವೀ ಸ್ಮೃತಾ ।
ತಸ್ಯಾ ದಾನೇನ ಮಂತ್ರಸ್ಯ ಪೃಥ್ವೀದಾನಫಲಂ ಸಮಂ ॥ ೧೮೭ ॥

ಶತಕ್ರತುಸಮೋ ಮರ್ತ್ಯಃ ಕುಲಮುದ್ಧರತೇ ಶತಂ ।
ಗವಾಂ ಚ ಹರಣಂ ಕೃತ್ವಾ ಮೃತೇ ಗೋರಥ ವತ್ಸಕೇ ॥ ೧೮೮ ॥

---

ಅನುಭವಿಸುತ್ತಾರೆ. ಅದು ಬಾಲದಿಂದ ಎರಚುವ ನೀರು ಆ ಪಿತೃಗಳಿಗೆ ಸಾವಿರ ವರ್ಷದ ಅಮೃತದ ಆಹಾರವಾಗಿ ಪರಿಣಮಿಸುತ್ತದೆ. ಆ ಹೋರಿಯು ಗೊರಸಿನಿಂದ ಭೂಮಿಯನ್ನು ಕೆರೆಯುವಾಗ ಎಷ್ಟು ಹೆಂಟೆಗಳು ಏಳುತ್ತವೆಯೋ ಅವೆಲ್ಲವೂ ಪಿತೃಗಳಿಗೆ ಸ್ವಧೆಯೆಂಬ ಆಹಾರಪದಾರ್ಥಗಳಾಗಿ ಲಕ್ಷ ಕೋಟಿಗಳಷ್ಟು ಆಗುತ್ತವೆ. ತಂದೆಯಿದ್ದು ತಾಯಿಯು ಸತ್ತರೆ ಆಗ ಚಂದನದಿಂದ ಲೇಪಿಸಿ ಗೋವನ್ನು ದಾನಮಾಡಬೇಕು. ದಾನಮಾಡಿದವನು ಪಿತೃಋಣದಿಂದ ಮುಕ್ತನಾಗುತ್ತಾನೆ. ಮಾಧವನನ್ನು ಪೂಜಿಸಿದರೆ ಸಿಕ್ಕುವ ಸ್ವರ್ಗದಂತೆ ಇದಕ್ಕೂ ಸ್ವರ್ಗವು ಲಭಿಸುತ್ತದೆ. ಲಕ್ಷಣದಿಂದ ಕೂಡಿದ, ಪ್ರಾಯದ, ಕರೆಯುತ್ತಿರುವ, ಕರು ಹಾಕಿ ಹದಿನೈದು ದಿನಗಳೊಳಗಿರುವ ಪಸುವು ಭೂಮಿಯೆಂದೆನಿಸಿಕೊಳ್ಳುತ್ತದೆ. ಅದರ ದಾನದಿಂದ ಭೂ ದಾನದ ಫಲವು ಬರುತ್ತದೆ.

೧೮೮-೯೨. ಆ ಮನುಷ್ಯನು ನೂರು ಯಾಗ ಮಾಡಿದವನಂತಾಗಿ ನೂರು ವಂಶಗಳನ್ನು ಉದ್ಧಾರಮಾಡುತ್ತಾನೆ. ಗೋವನ್ನು ಕದ್ದು ಅವುಗಳಲ್ಲಿ ಕರುವಾಗಲಿ,

ತೃಣಪೂರ್ಣೇ ಸಕೂಪೇ ಚ ತಿಷ್ಠೇದಾಭೂತಸಂಪ್ಲವಂ ।
ಗವಾಂ ಚೈವ ವಧಂ ಕೃತ್ವಾ ಪಿತೃಭಿಃ ಸಹ ಪಚ್ಯತೇ ॥ ೧೮೯ ॥

ರೌರವೇ ನರಕೇ ಘೋರೇ ತಾವತ್ಕಾಲಂ ಪ್ರತಿಕ್ರಿಯಾ ।
ಗೋಪ್ರಚಾರಪ್ರಭಗ್ನಶ್ಚ ಖಂಡವಾಹನಬಂಧನಃ ॥ ೧೯೦ ॥

ಅಕ್ಷಯಂ ನರಕಂ ಪ್ರಾಯಾತ್ಪುನರ್ಜನ್ಮನಿ ಜನ್ಮನಿ ।
ಸಕೃಚ್ಚ ಶ್ರಾವಯೇದ್ಯಸ್ತು ಕಥಾಂ ಪುಣ್ಯತಮಾಮಿಮಾಂ ॥ ೧೯೧ ॥

ಸರ್ವಪಾಪಕ್ಷಯಸ್ತಸ್ಯ ದೇವೈಶ್ಚ ಸಹ ಮೋದತೇ ।
ಯ ಇದಂ ಶೃಣುಯಾದ್ವಾಽಪಿ ಪರಂ ಪುಣ್ಯತಮಂ ಮಹತ್ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ತತ್ಕ್ಷಣೇನ ಹಿ ॥ ೧೯೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಗೋಮಾಹಾತ್ಮ್ಯಂ ನಾಮ
॥ ಪಂಚಚತ್ವಾರಿಂಶತ್ತಮೋಽಧ್ಯಾಯಃ ॥

---

ಹಸುವಾಗಲಿ, ಸತ್ತರೆ ಅವನು ಹುಳಿತಿರುವ ಭಾವಿಯಲ್ಲಿ ಪ್ರಳಯಕಾಲದವರೆಗೂ ಇರುತ್ತಾನೆ. ಗೋವುಗಳನ್ನು ಕೊಂದರೆ ಪಿತೃಗಳೊಡನೆ ರೌರವ ನರಕದಲ್ಲಿ ಬೀಳುತ್ತಾನೆ ಪ್ರಳಯಕಾಲದವರೆಗೂ ಇರುತ್ತಾನೆ ಗೋವುಗಳು ಮೇಯುವ ಜಾಗವನ್ನು ನಾಶಮಾಡಿದವನು, ವಾಹನಗಳ ಕೊಟ್ಟಿಗೆಗಳನ್ನು ನಾಶಮಾಡಿದವನು, ಅಕ್ಷಯವಾದ ನರಕವನು ಹೊಂದುತ್ತಾನೆ, ಮತ್ತೆ ಜನ್ಮವೆತ್ತಿ ಅನಂತರವೂ ನರಕವನ್ನು ಹೊಂದುತ್ತಾನೆ. ಈ ಪುಣ್ಯಕರವಾದ ಕಥೆಯನ್ನು ಹೇಳುವವನು ಪಾಪವನ್ನು ನಾಶಮಾಡಿಕೊಂಡು ಸ್ವರ್ಗವನ್ನು ಹೊಂದುತ್ತಾನೆ. ಪುಣ್ಯವನ್ನು ಕೊಡುವ ಇದನ್ನು ಕೇಳಿದವನು, ಏಳುಜನ್ಮದ ಪಾಪಗಳನ್ನು ಕ್ಷಣಕಾಲದಲ್ಲಿ ಕಳೆದುಕೊಳ್ಳುತ್ತಾನೆ,

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಗೋಮಹಿಮೆಯೆಂಬ
ನಾಲ್ವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
## ॥ ಷಟ್ಚತ್ವಾರಿಂಶತ್ತಮೋಽಧ್ಯಾಯಃ ॥



॥ ನಾರದ ಉವಾಚ ॥

ಕೇನಾಽಚಾರೇಣ ವಿಪ್ರಸ್ಯ ಬ್ರಹ್ಮತೇಜೋ ವಿವರ್ಧತೇ ।
ಕೇನಾಚಾರೇಣ ತಸ್ಯೈವ ಬ್ರಾಹ್ಮಂ ತೇಜೋ ವಿನಶ್ಯತಿ ॥ ೧ ॥

॥ ಬ್ರಹ್ಮೋವಾಚ ॥

ಶಯನೀಯಾತ್ಸಮುತ್ಥಾಯ ರಾತ್ರ್ಯಂಶೇ ದ್ವಿಜಸತ್ತಮಃ ।
ದೇವಾಂಶ್ಚೈವ ಸ್ಮರೇನ್ನಿತ್ಯಂ ತಥಾ ಪುಣ್ಯವತೋ ಧ್ರುವಂ ॥ ೨ ॥

ಗೋವಿಂದಂ ಮಾಧವಂ ಕೃಷ್ಣಂ ಹರಿಂ ದಾಮೋದರಂ ತಥಾ ।
ನಾರಾಯಣಂ ಜಗನ್ನಾಥಂ ವಾಸುದೇವಮಜಂ ವಿಭುಂ ॥ ೩ ॥

---

## ನಾಲ್ವತ್ತಾರನೆಯ ಅಧ್ಯಾಯವು

೧. ನಾರದನು ಹೇಳಿದನು– ಯಾವ ಆಚಾರವನ್ನು ಮಾಡಿದರೆ ಬ್ರಹ್ಮತೇಜಸ್ಸು ಹೆಚ್ಚುತ್ತದೆ ? ಯಾವ ಆಚಾರದಿಂದ ಆ ಬ್ರಾಹ್ಮಣ ತೇಜಸ್ಸು ನಾಶವಾಗುತ್ತದೆ ?

೨. ಬ್ರಹ್ಮನು ಹೇಳಿದನು– ರಾತ್ರಿಯ ಅಂಶವಿರುವಾಗಲೇ ಹಾಸಿಗೆಯಿಂದೆದ್ದು ದೇವತೆಗಳನ್ನೂ, ಪುಣ್ಯವಂತರನ್ನೂ, ಸ್ಮರಿಸಬೇಕು.

೩. ಗೊವಿಂದ, ಮಾಧವ, ಕೃಷ್ಣ, ಹರಿ, ದಾಮೋದರ, ನಾರಾಯಣ, ಜಗನ್ನಾಥ, ವಾಸುದೇವ, ಅಜ, ವಿಭು, ಎಂದು ವಿಷ್ಣುವನ್ನು ಸ್ಮರಿಸಬೇಕು.

ಸರಸ್ವತೀಂ ಮಹಾಲಕ್ಷ್ಮೀಂ ಸಾವಿತ್ರೀಂ ವೇದಮಾತರಂ ।
ಬ್ರಹ್ಮಾಣಂ ಭಾಸ್ಕರಂ ಚಂದ್ರಂ ದಿಕ್ಪಾಲಾಂಶ್ಚ ಗ್ರಹಾಂಸ್ತಥಾ ॥ ೪ ॥

ಶಂಕರಂ ಚ ಶಿವಂ ಶಂಭುಮೀಶ್ವರಂ ಚ ಮಹೇಶ್ವರಂ ।
ಗಣೇಶಂ ಚ ತಥಾ ಸ್ಕಂದಂ ಗೌರೀಂ ಭಾಗೀರಥೀಂ ಶಿವಾಂ ॥ ೫ ॥

ಪುಣ್ಯಶ್ಲೋಕೋ ನಲೋ ರಾಜಾ ಪುಣ್ಯಶ್ಲೋಕೋ ಜನಾರ್ದನಃ ।
ಪುಣ್ಯಶ್ಲೋಕಾ ಚ ವೈದೇಹೀ ಪುಣ್ಯಶ್ಲೋಕೋ ಯುಧಿಷ್ಠಿರಃ ॥ ೬ ॥

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಾಶ್ಚ ಸಪ್ತೈತೇ ಚಿರಜೀವಿನಃ ॥ ೭ ॥

ಏತಾನ್ಯಸ್ತು ಸ್ಮರೇನ್ನಿತ್ಯಂ ಪ್ರಾತರುತ್ಥಾಯ ಮಾನವಃ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥ ೮ ॥

ಸಕೃದುಚ್ಚಾರಿತೇ ತಾತ ಸರ್ವಯಜ್ಞಫಲಂ ಲಭೇತ್ ।
ಗವಾಂ ಶತಸಹಸ್ರಾಣಾಂ ದಾನಸ್ಯ ಫಲಮಶ್ನುತೇ ॥ ೯ ॥

---

೪-೫. ಸರಸ್ವತೀ, ಲಕ್ಷ್ಮೀ, ಸಾವಿತ್ರೀ ಗಾಯತ್ರಿ, ಬ್ರಹ್ಮ, ಭಾಸ್ಕರ, ಚಂದ್ರ, ದಿಕ್ಪಾಲಕರು, ಗ್ರಹಗಗಳು, ಶಂಕರ, ಶಿವ, ಶಂಭು, ಮಹೇಶ್ವರ, ಗಣೇಶ, ಸ್ಕಂದ, ಗೌರಿ, ಭಾಗೀರಥಿ, ಶಿವೆ, ಇವರನ್ನು ಸ್ಮರಿಸಬೇಕು.

೬-೭. ನಳ, ಜನಾರ್ದನ, ವೈದೇಹಿ, ಯುಧಿಷ್ಠಿರ, ಇವರು ಪುಣ್ಯಶ್ಲೋಕರು, (ಪುಣ್ಯವನ್ನು ಕೊಡುವ ಯಶಸ್ಸುಳ್ಳವರು) ಅಶ್ವತ್ಥಾಮ, ಬಲಿ, ವ್ಯಾಸ, ಹನುಮ, ವಿಭೀಷಣ, ಕೃಪ, ಪರಶುರಾಮ, ಈ ಏಳುಜನರು ಚಿರಂಜೀವಿಗಳು.

೮. ಬೆಳಿಗ್ಗೆ ಎದ್ದು ಮನುಷ್ಯನು ಇವರನ್ನು ಸ್ಮರಿಸಿದರೆ, ಬ್ರಹ್ಮಹತ್ಯೆ ಮುಂತಾದ ಪಾಪಗಳಿಂದ ಮುಕ್ತನಾಗುತ್ತಾನೆ, ಸಂಶಯವಿಲ್ಲ.

೯. ಒಂದಾವರ್ತಿ ಸ್ಮರಿಸಿದರೂ ಎಲ್ಲಾ ಯಜ್ಞಗಳ ಫಲವೂ ಬರುತ್ತದೆ. ಒಂದು ಲಕ್ಷ ಗೋಗಳನ್ನು ದಾನಮಾಡಿದ ಫಲವನ್ನು ಹೊಂದುತ್ತಾನೆ.

ತತಶ್ಚಾಪಿ ಶುಚೌ ದೇಶೇ ಮಲಮೂತ್ರಂ ಪರಿತ್ಯಜೇತ್ ।
ದಕ್ಷಿಣಾಭಿಮುಖೋ ರಾತ್ರೌ ದಿವಾ ಕುರ್ಯಾದುದಙ್ಮುಖಃ ॥ ೧೦ ॥

ಪರತೋ ದಂತಕಾಷ್ಠಂ ಚ ತೃಣೈರುದುಂಬರಾದಿಭಿಃ ।
ಅತಃ ಪರಂ ಚ ಸಂಧ್ಯಾಯಾಂ ಸಂಯುತಶ್ಚ ದ್ವಿಜೋ ಭವೇತ್ ॥ ೧೧ ॥

ಪೂರ್ವಾಹ್ಣೇ ರಕ್ತವರ್ಣಾಂ ತು ಮಧ್ಯಾಹ್ನೇ ಶುಕ್ಲವರ್ಣಿಕಾಂ ।
ಸಾಯಂ ಸರಸ್ವತೀಂ ಕೃಷ್ಣಾಂ ದ್ವಿಜೋ ಧ್ಯಾಯೇದ್ಯಥಾವಿಧಿ ॥ ೧೨ ॥

ತತಃ ಸಮಾಚರೇತ್ಸ್ನಾನಂ ಯಥಾಜ್ಞಾನೇನ ಯತ್ನತಃ ।
ಅಂಗಂ ಪ್ರಕ್ಷಾಲಯಿತ್ವಾ ತು ಮೃದ್ಭಿಃ ಸಂಲೇಪಯೇತ್ತತಃ ॥ ೧೩ ॥

ಶಿರೋದೇಶೇ ಲಲಾಟೇ ಚ ನಾಸಿಕಾಯಾಂ ಹೃದಿ ಭ್ರುವೋಃ ।
ಬಾಹ್ವೋಃ ಪಾರ್ಶ್ವೇ ತಥಾ ನಾಭೌ ಜಾನ್ವೋರಂಘ್ರಿದ್ವಯೇ ತಥಾ ॥ ೧೪ ॥

ಏಕಾ ಲಿಂಗೇ ಗುದೇ ತಿಸ್ರಸ್ತಥಾ ವಾಮಕರೇ ದಶ ।
ಉಭಯೋಃ ಸಪ್ತ ದಾತವ್ಯಾ ಮೃದಃ ಶುದ್ಧಿಮಭೀಪ್ಸತಾ ॥ ೧೫ ॥

---

೧೦. ಅನಂತರ ಶುಚಿಯಾದ ಪ್ರದೇಶದಲ್ಲಿ ಮೂತ್ರ ಮಲಗಳನ್ನು ಕಳೆದು ಕೊಳ್ಳಬೇಕು. ರಾತ್ರಿಯಲ್ಲಿ ದಕ್ಷಿಣಕ್ಕೆ ಮುಖಮಾಡಿಕೊಂಡು ಹಗಲಿನಲ್ಲಿ ಉತ್ತರಕ್ಕೆ ಮುಖಮಾಡಿಕೊಂಡು ಅವನ್ನು ವಿಸರ್ಜಿಸಬೇಕು.

೧೧. ಅನಂತರ ಅತ್ತಿ ಮುಂತಾದ ಕಡ್ಡಿಗಳಿಂದ ಹಲ್ಲನ್ನು ತಿಕ್ಕಬೇಕು. ಅನಂತರ ಸಂಧ್ಯಾವಂದನೆಯಲ್ಲಿ ಆಸಕ್ತನಾಗಬೇಕು.

೧೨. ಬೆಳಗ್ಗೆ ಕೆಂಪುಬಣ್ಣದ, ಮಧ್ಯಾಹ್ನದಲ್ಲಿ ಬೆಳ್ಳಗಿರುವ, ಸಾಯಂಕಾಲ ಕಪ್ಪಗಿರುವ, ಸರಸ್ವತಿಯನ್ನು ಬ್ರಾಹ್ಮಣನು ಧ್ಯಾನಿಸಬೇಕು.

೧೩. ಅನಂತರ ತಿಳಿದಷ್ಟು ಜ್ಞಾನದಿಂದ ಸ್ನಾನ ಮಾಡಬೇಕು. ಅವಯವಗಳನ್ನು ಮಣ್ಣಿನಿಂದ ಲೇಪಿಸಿ ತೊಳೆದುಕೊಳ್ಳಬೇಕು.

೧೪. ತಲೆ, ಹಣೆ, ಮೂಗು, ಎದೆ, ಹುಬ್ಬುಗಳು, ತೋಳುಗಳು, ಹೊಕ್ಕಳು, ತೊಡೆ, ಪಾದಗಳಲ್ಲಿ ಮಣ್ಣನ್ನು ಹಾಕಿಕೊಳ್ಳಬೇಕು.

೧೫. ಲಿಂಗದಲ್ಲಿ ಒಂದು ಬಾರಿ, ಅಂಡಿಗೆ ಮೂರು ಬಾರಿ, ಎಡಗೈಗೆ ಹತ್ತು ಬಾರಿ, ಎರಡು ಕೈಗಳಿಗೂ ಏಳೇಳು ಬಾರಿ, ಮಣ್ಣನ್ನು ಹಾಕಿಕೊಂಡರೆ ಶುದ್ಧಿಯಾಗುತ್ತದೆ.

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ !
ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ　　॥ ೧೬ ॥

ಅನೇನೈವ ತು ಮಂತ್ರೇಣ ಮೃತ್ತಿಕಾಂ ಯಸ್ತನೌ ಕ್ಷಿಪೇತ್ ।
ಸರ್ವಪಾಪಕ್ಷಯಸ್ತಸ್ಯ ಶುಚಿರ್ಭವತಿ ಮಾನವಃ　　॥ ೧೭ ॥

ತತಸ್ತು ವೇದಪೂರ್ವೇಣ ಸ್ನಾನಂ ಕುರ್ಯಾದ್ವಿಚಕ್ಷಣಃ ।
ನದೇ ನದ್ಯಾಂ ತಥಾ ಕೂಪೇ ಪುಷ್ಕರಿಣ್ಯಾಂ ತಡಾಗಕೇ　　॥ ೧೮ ॥

ಜಲರಾಶೌ ಚ ವಪ್ರೇ ಚ ಘಟಸ್ನಾನಂ ತಥೋತ್ತರಂ ।
ಕಾರಯೇದ್ವಿಧಿವನ್ಮರ್ತ್ಯಃ ಸರ್ವಪಾಪಕ್ಷಯಾಯ ಚ　　॥ ೧೯ ॥

ಪ್ರಾತಃ ಸ್ನಾನಂ ಮಹಾಪುಣ್ಯಂ ಸರ್ವಪಾಪಪ್ರಣಾಶನಂ ।
ಯಃ ಕುರ್ಯಾತ್ಸತತಂ ವಿಪ್ರೋ ವಿಷ್ಣುಲೋಕೇ ಮಹೀಯತೇ　　॥ ೨೦ ॥

---

೧೬. ಕುದುರೆ, ರಥ, ವಿಷ್ಣು, ಇವರುಗಳಿಂದ ದಾಟಲ್ಪಟ್ಟ ಎಲೈ ಭೂಮಿಯ ಮೃತ್ತಿಕೆಯೇ! ನಾನು ಮಾಡಿದ ಪಾಪವನ್ನು ನಾಶಮಾಡು.

೧೭. ಈ ಮೇಲಿನ ಮಂತ್ರದಿಂದ ಮೃತ್ತಿಕೆಯನ್ನು ಮೈಗೆ ಬಳಿದುಕೊಂಡು ಸ್ನಾನಮಾಡಿದರೆ ಅವನ ಪಾಪಗಳೆಲ್ಲವೂ ಹೋಗಿ ಶುಚಿಯಾಗುತ್ತಾನೆ.

೧೮-೧೯. ಅನಂತರ ವೇದಮಂತ್ರಗಳನ್ನು ಹೇಳಿಕೊಂಡು ಸ್ನಾನಮಾಡಬೇಕು. ಗಂಡುನದಿ, ನದಿ, ಬಾವಿ, ಕೊಳ, ಕೆರೆ, ಸಮುದ್ರ, ಹಳ್ಳಗಳು, ಇವುಗಳಲ್ಲಿ ಯಾವುದರಲ್ಲಿಯಾದರೂ ಸ್ನಾನಮಾಡಬೇಕು. ಅಂತೂ ಮುಳುಗಿ ಸ್ನಾನಮಾಡುವುದು ಶ್ರೇಷ್ಠವು. ಆದಿಲ್ಲದಿದ್ದರೆ ಸೇದುವ ಭಾವಿ ಮುಂತಾದುವುಗಳಲ್ಲಿ ಬಿಂದಿಗೆಯಲ್ಲಿ ನೀರನ್ನು ತೆಗೆದುಕೊಂಡು ಸುರಿದುಕೊಂಡು ಸ್ನಾನಮಾಡಬೇಕು. ಹೀಗೆ ಮಾಡಿದರೆ ಪಾಪಗಳು ಪರಿಹಾರವಾಗುತ್ತವೆ.

೨೦. ಪ್ರಾತಃಸ್ನಾನವು ಮಹಾ ಪುಣ್ಯಕರವು. ಪಾಪಗಳೆಲ್ಲವನ್ನೂ ನಾಶಮಾಡುತ್ತದೆ. ಯಾವಾಗಲೂ ಪ್ರಾತಃಸ್ನಾನ ಮಾಡತಕ್ಕವನು ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

ಪ್ರಾತಃಸಂಧ್ಯಾಸಮೀಪೇ ಚ ಯಾವದ್ದಂಡಚತುಷ್ಟಯಂ ।
ತಾವತ್ಪಾನೀಯಮಮೃತಂ ಪಿತೄಣಾಮುಪತಿಷ್ಠತೇ ॥ ೨೧ ॥

ಪರತೋ ಘಟಿಕಾಯುಗ್ಮಂ ಯಾವದ್ಯಾಮೈಕಮಾಹ್ನಿಕಂ ।
ಮಧುತುಲ್ಯಂ ಜಲಂ ತಸ್ಮಿನ್ಪಿತೄಣಾಂ ಪ್ರೀತಿವರ್ಧನಂ ॥ ೨೨ ॥

ತತಸ್ತು ಸಾರ್ಧಯಾಮೈಕಂ ಜಲಂ ಕ್ಷೀರಮಯಂ ಸ್ಮೃತಂ ।
ಕ್ಷೀರಮಿಶ್ರಂ ಜಲಂ ತಾವದ್ಯಾವದ್ದಂಡಚತುಷ್ಟಯಂ ॥ ೨೩ ॥

ಅತಃ ಪರಂ ಚ ಪಾನೀಯಂ ಯಾವಚ್ಚ ಪ್ರಹರತ್ರಯಂ ।
ತತ್ಪರಂ ಲೋಹಿತಂ ಪ್ರೋಕ್ತಂ ಯಾವದಸ್ತಂ ಗತೋ ರವಿಃ ॥ ೨೪ ॥

ಚತುರ್ಥಪ್ರಹರಸ್ನಾನೇ ರಾತ್ರೌ ವಾ ತರ್ಪಯೇತ್ಪಿತೄನ್ ।
ತತ್ತೋಯಂ ರಕ್ಷಸಾಮೇವ ಗ್ರಹಣೇನ ವಿನಾಶಿತಂ ॥ ೨೫ ॥

---

೨೧. ಬೆಳಗಿನ ಸಂಧ್ಯೆಗಿಂತ ಮೊದಲು ನಾಲ್ಕು ದಂಡಗಳ ಕಾಲ (ಸುಮಾರು ನಾಲ್ಕು ಘಂಟೆ ಕಾಲ ಹಿಂದಕ್ಕೂ, ಮುಂದಕ್ಕೂ,) ನೀರು ಅಮೃತವು. ಪಿತೃಗಳು ಆ ನೀರನ್ನು ತೆಗೆದುಕೊಳ್ಳುತ್ತಾರೆ.

೨೨. ಅನಂತರ ಎರಡು ಘಂಟೆ ಕಾಲ ಒಂದು ಯಾಮ ಪೂರ್ತಿಯಾಗುವವರೆಗೆ ನೀರು ಜೇನಿಗೆ ಸಮಾನವು. ಆ ನೀರು ಪಿತೃಗಳಿಗೆ ಪ್ರೀತಿಕರವಾಗಿರುತ್ತದೆ.

೨೩. ಅನಂತರ ಒಂದೂವರೆ ಯಾಮದವರೆಗೆ ನೀರು ಹಾಲಿಗೆ ಸಮವಾದುದು. ನಾಲ್ಕು ದಂಡಗಳವರೆಗೆ (ನಾಲ್ಕು ಘಂಟೆಗಳ ಕಾಲ) ನೀರು ಕ್ಷೀರಮಿಶ್ರವೆನ್ನಿಸಿಕೊಳ್ಳುತ್ತದೆ.

೨೪. ಅನಂತರ ಮೂರು ಘಂಟೆಗಳ ಕಾಲ ಲೋಹಿತವೆಂಬ ಹೆಸರು ನೀರಿಗೆ ಬರುತ್ತದೆ. ಸೂರ್ಯಾಸ್ತವಾಗುವವರೆಗೂ ಆ ಹೆಸರಿರುತ್ತದೆ.

೨೫. ನಾಲ್ಕನೆಯ ಪ್ರಹರದಲ್ಲಿ ಸ್ನಾನಮಾಡಿದರೂ ರಾತ್ರಿ ಸ್ನಾನಮಾಡಿ ತರ್ಪಣಾದಿಗಳನ್ನು ಮಾಡಿದರೂ ಆ ನೀರು ರಾಕ್ಷಸರ ಪಾಲಾಗುತ್ತದೆ. (ಹಗಲನ್ನು ನಾಲ್ಕು ಭಾಗವಾಗಿ ಮಾಡಬೇಕು. ಮೊದಲನೆಯ ಭಾಗವು ಉತ್ತಮವು. ಎರಡನೆಯ ಭಾಗವು ಉತ್ತಮವು. ಮೂರನೆಯ ಭಾಗವು ಮಧ್ಯಮವು. ನಾಲ್ಕನೆಯ ಭಾಗವು ಅಧಮವು.)

ಪಾನೀಯಂ ಸರ್ವಶುದ್ಧ್ಯರ್ಥಂ ಪುರೈವ ನಿರ್ಮಿತಂ ಮಯಾ ।
ರಕ್ಷಾರ್ಥಂ ತಸ್ಯ ತೋಯಸ್ಯ ಯಕ್ಷಾಶ್ಚೈವ ಧುರಂಧರಾಃ ॥ ೩೬

ನ ಪ್ರಾಪ್ನುವಂತಿ ಪಿತರೋ ಯೇ ಚ ಲೋಕಾಂತರಂ ಗತಾಃ ।
ದುಷ್ಪ್ರಾಪ್ಯಂ ಸಲಿಲಂ ತೇಷಾಮ್ಮೃತೇ ಸ್ವಾನ್ಮರ್ತ್ಯವಾಸಿನಃ ॥ ೩೭ ॥

ತಸ್ಮಾಚ್ಛಿಷ್ಯೈಶ್ಚ ಪುತ್ರೈಶ್ಚ ಪೌತ್ರದೌಹಿತ್ರಕಾದಿಭಿಃ ।
ಬಂಧುವರ್ಗೈಸ್ತಥಾ ಚಾನ್ಯೈಸ್ತರ್ಪಣೀಯಂ ಪಿತೃವ್ರತೈಃ ॥ ೩೮ ॥

॥ ನಾರದ ಉವಾಚ ॥

ಜಲಸ್ಯ ದೈವತಂ ಬ್ರೂಹಿ ತರ್ಪಣಸ್ಯ ವಿಧಿಂ ಮಯಿ ।
ಯಥಾ ಜಾನಾಮಿ ದೇವೇಶ ತತ್ತ್ವತೋ ವಕ್ತುಮರ್ಹಸಿ ॥ ೩೯ ॥

॥ ಬ್ರಹ್ಮೋವಾಚ ॥

ಜಲಸ್ಯ ದೇವತಾ ವಿಷ್ಣುಃ ಸರ್ವಲೋಕೇಷು ಗೀಯತೇ ।
ಜಲಪೂತೋ ಭವೇದ್ಯಸ್ತು ವಿಷ್ಣುಸ್ತಚ್ಛಂಕರೋ ಭವೇತ್ ॥ ೪೦ ॥

---

೩೬. ಸರ್ವ ಶುದ್ಧಿಗೋಸ್ಕರ ನಾನು ಪೂರ್ವದಲ್ಲಿ ನೀರನ್ನು ಸೃಷ್ಟಿ ಮಾಡಿದೆನು. ಅದನ್ನು ಕಾಪಾಡುವುದಕ್ಕೆ ಯಕ್ಷರನ್ನು ನಿಯಮಿಸಿದೆನು.

೩೭. ಬೇರೆಯ ಲೋಕದಲ್ಲಿರುವವರು ಈ ನೀರನ್ನು ಹೊಂದುವಂತಿಲ್ಲ ಅವರು ಆದನ್ನು ಹೊಂದಬೇಕಾದರೆ ಮನುಷ್ಯಲೋಕದಲ್ಲಿರುವ ತನ್ನವರಿಂದಲೇ ಹೊಂದಬೇಕು.

೩೮. ಆದ್ದರಿಂದ ಮಕ್ಕಳು, ಮಮ್ಮಕ್ಕಳು, ಶಿಷ್ಯರು, ಬಂಧುಗಳು, ಇತರರು, ಇವರುಗಳು ನೀರನ್ನು ಕೊಡುವುದನ್ನು ಪಿತೃಗಳು ಎದುರು ನೋಡುತ್ತಿರುವರು. ಆದ್ದರಿಂದ ತರ್ಪಣಮಾಡಿ ನೀರನ್ನು ಅವರಿಗೆ ಕೊಡಬೇಕು.

೩೯. ನಾರದನು ಹೇಳಿದನು– ನೀರಿಗೆ ದೇವರನ್ನು ಹೇಳು. ತರ್ಪಣದ ವಿಧಿಯನ್ನು ತಿಳಿಸು. ಅದನ್ನು ನನಗೆ ತಿಳಿಯುವಂತೆ ಹೇಳು.

೪೦. ಬ್ರಹ್ಮನು ಹೇಳಿದನು– ನೀರಿನ ದೇವತೆಯು ವಿಷ್ಣುವು. ನೀರಿನಿಂದ ಪರಿಶುದ್ಧವನಾದವನಿಗೆ ವಿಷ್ಣುವು ಮಂಗಳವನ್ನು ಮಾಡುತ್ತಾನೆ.

ಜಲಂ ಗಂಡೂಷಮಾತ್ರಂ ತು ಪೀತ್ವಾ ಪೂತೋ ಭವೇನ್ನರಃ ।
ವಿಶೇಷೇ ಕುಶಸಂಸರ್ಗಾತ್ಪೀಯೂಷಾದಧಿಕಂ ಜಲಂ ॥ ೩೧ ॥

ಸರ್ವದೇವಾಲಯೋ ದರ್ಭೋ ಮಯಾsಯಂ ನಿರ್ಮಿತಃ ಪುರಾ ।
ಕುಶಮೂಲೇ ಭವೇದ್ಬ್ರಹ್ಮಾ ಕುಶಮಧ್ಯೇ ತು ಕೇಶವಃ ॥ ೩೨ ॥

ಕುಶಾಗ್ರೇ ಶಂಕರಂ ವಿದ್ಧಿ ಕುಶ ಏತ್ಯೈಃ ಪ್ರತಿಷ್ಠಿತಃ ।
ಕುಶಹಸ್ತೈಃ ಸದಾ ಮೇಧ್ಯಃ ಸ್ತೋತ್ರಂ ಮಂತ್ರಂ ಪಠೇದ್ಯದಿ ॥ ೩೩ ॥

ಸರ್ವಂ ಶತಗುಣಂ ಪ್ರೋಕ್ತಂ ತೀರ್ಥೇ ಸಾಹಸ್ರಮುಚ್ಯತೇ ।
ಕುಶಾಃ ಕಾಶಾಸ್ತಥಾ ದೂರ್ವಾ ಯವಪತ್ರಾಣಿ ವ್ರೀಹಯಃ ॥ ೩೪ ॥

ಬಲ್ವಜಾಃ ಪುಂಡರೀಕಾಶ್ಚ ಕುಶಾಃ ಸಪ್ತ ಪ್ರಕೀರ್ತಿತಾಃ ।
ಆನುಪೂರ್ವ್ಯೇಣ ಮೇಧ್ಯಾಃ ಸ್ಯುಃ ಕುಶಾ ಲೋಕೇ ಪ್ರತಿಷ್ಠಿತಾಃ ॥ ೩೫ ॥

---

೩೧. ಬಾಯಿ ಮುಕ್ಕಳಿಸುವಷ್ಟು ನೀರನ್ನು ಕುಡಿದರೂ ಮನುಷ್ಯನು ಪವಿತ್ರನಾಗುತ್ತಾನೆ. ಆ ನೀರಿಗೆ ದರ್ಭೆ ಸೇರಿಸಿದ್ದರಂತೂ ಅಮೃತಕ್ಕಿಂತಲೂ ಅಧಿಕ ಮಹಿಮೆಯುಳ್ಳದ್ದು.

೩೨-೩೫. ದರ್ಭೆಯು ಎಲ್ಲಾ ದೇವರಿಗೂ ಸ್ಥಾನವಾಗಿರುವಂತೆ ಪೂರ್ವದಲ್ಲಿ ನಿರ್ಮಿಸಿದೆನು. ಆ ದರ್ಭೆಯ ಬುಡದಲ್ಲಿ ಬ್ರಹ್ಮನೂ, ಮಧ್ಯದಲ್ಲಿ ಕೇಶವನೂ, ತುದಿಯಲ್ಲಿ ಶಂಕರನೂ ಇದ್ದಾರೆ. ಸ್ತೋತ್ರವನ್ನಾಗಲಿ, ಮಂತ್ರವನ್ನಾಗಲಿ, ಕೈಯಲ್ಲಿ ದರ್ಭೆಯನ್ನು ಹಾಕಿಕೊಂಡು ಪಠಿಸಿದರೆ ಅದು ಪವಿತ್ರವು. ಹಾಗೆ ಮಾಡಿದರೆ ಆ ಮಂತ್ರಗಳ ಫಲವು ನೂರರಷ್ಟು ಹೆಚ್ಚುತ್ತದೆ. ತೀರ್ಥದಲ್ಲಿ ಪಠಿಸಿದರೆ ಅದು ಸಾವಿರದಷ್ಟು ಫಲವನ್ನು ಕೊಡುತ್ತದೆ. ದರ್ಭೆ, ಕಾಶವೆಂಬ ವಿಶ್ವಾಮಿತ್ರದರ್ಭೆ, ಗರಿಕೆ, ಯವವೆಂಬ ಧಾನ್ಯದ ಎಲೆ, ಭತ್ತದಗಿರಿ, ಬಲ್ಬಜವೆಂಬ ಜೊಂಡು, ಬಿಳಿಯಕಮಲ, ಇವೆಲ್ಲವೂ ಕುಶಗಳೆನಿಸಿಕೊಳ್ಳುತ್ತವೆ. ಇವು ಹಿಂದು ಹಿಂದಕ್ಕೆ ಹೋದಹಾಗೆಲ್ಲಾ ಅತ್ಯಂತ ಪವಿತ್ರಗಳು. ಆ ಲೋಕದಲ್ಲೆಲ್ಲಾ ದರ್ಭೆಯೇ ಹೆಚ್ಚಿನದು.

ವಿನಾ ಮಂತ್ರೇಣ ಯತ್ಸ್ನಾನಂ ಸರ್ವಂ ತನ್ನಿಷ್ಫಲಂ ಭವೇತ್ ।
ಅಮೃತಾತ್ಸ್ವಾದುತಾಮೇತಿ ಸಂಸ್ಪರ್ಶಾಚ್ಚ ತಿಲಸ್ಯ ಚ ॥ ೩೬ ॥

ತಸ್ಮಾಚ್ಚ ತರ್ಪಯೇನ್ನಿತ್ಯಂ ಪಿತೄಂಸ್ತಿಲಜಲೈರ್ಬುಧಃ ।
ದಶಭಿಶ್ಚ ತಿಲೈಸ್ತಾತ ಪಿತೄಣಾಂ ಪ್ರೀತಿರುತ್ತಮಾ ॥ ೩೭ ॥

ಅಗ್ನಿಸ್ತಂಭಭಯಾದೇವ ಅನಿಚ್ಛನ್ನತಿವಿಸ್ತರಂ ।
ಸ್ನಾತ್ವಾ ಯಸ್ತರ್ಪಯೇನ್ನಿತ್ಯಂ ತಿಲಮಿಶ್ರೋದಕೈಃ ಪಿತೄನ್ ॥ ೩೮ ॥

ಸ ಯಾತಿ ಬ್ರಹ್ಮಣಃ ಸ್ಥಾನಂ ಸಮುದ್ಧೃತ್ಯೋಭಯಂ ।
ವಿಶೇಷೇ ವಾ ಯುಗಾದ್ಯಾಸು ತ್ವಮಾವಾಸ್ಯಾಂ ತಥೈವ ಚ ॥ ೩೯ ॥

ಅಕ್ಷಯಂ ಸ್ವರ್ಗಮಶ್ನಾತಿ ತರ್ಪಯಿತ್ವಾ ತಿಲೈಃ ಪಿತೄನ್ ।
ನೀಲಖಂಡವಿಮೋಕ್ಷೇಣ ತ್ವಮಾವಾಸ್ಯಾಂ ತಿಲೋದಕೈಃ ॥ ೪೦ ॥

ವರ್ಷಾಸು ದೀಪದಾನೇನ ಪಿತೄಣಾಮನೃಣೋ ಭವೇತ್ ।
ವತ್ಸರೈಕಮಮಾವಾಸ್ಯಾಂ ತರ್ಪಯೇದ್ಯಸ್ತಿಲೈಃ ಪಿತೄನ್ ॥ ೪೧ ॥

---

೩೬-೪೫. ಮಂತ್ರವನ್ನು ಹೇಳದೆ ಮಾಡಿದ ಸ್ನಾನವು ಫಲವನ್ನು ಕೊಡುವು ದಿಲ್ಲ. ಎಳ್ಳನ್ನು ಮುಟ್ಟುವುದರಿಂದ ಆ ನೀರು ಅಮೃತದಂತೆ ರುಚಿಯಾಗುತ್ತದೆ. ಆದ್ದ ರಿಂದ ಎಳ್ಳು ನೀರು ಹಾಕಿಕೊಂಡು ಪಿತೃಗಳಿಗೆ ತರ್ಪಣವನ್ನು ಕೊಡಬೇಕು. ಹತ್ತು ಎಳ್ಳಿನ ಕಾಳುಗಳನ್ನು ಹಾಕಿಕೊಂಡು ತರ್ಪಣಮಾಡಿದರೆ ಪಿತೃಗಳಿಗೆ ಬಹು ಪ್ರೀತಿ ಯುಂಟಾಗುತ್ತದೆ. ಅಜೀರ್ಣದ ಹೆದರಿಕೆಯಿಂದ ಹೆಚ್ಚು ಎಳ್ಳನ್ನು ಅವರು ಅಪೇಕ್ಷಿಸು ವುದಿಲ್ಲ. ಎಳ್ಳಿನಿಂದ ಕೂಡಿದ ನೀರಿನಿಂದ ತರ್ಪಣಮಾಡುವವನು ತನ್ನ ಎರಡು ವಂಶಗಳನ್ನು ಉದ್ಧಾರಮಾಡಿ ಬ್ರಹ್ಮನಸ್ಥಾನವನ್ನು ಹೊಂದುತ್ತಾನೆ. ಯುಗಾದಿ ಅಮಾವಾಸ್ಯೆಗಳಲ್ಲಿ ನಿಯಮದಿಂದ ತರ್ಪಣಮಾಡಬೇಕು. ಆಗ ಮಾಡಿದರೆ ನಾಶರಹಿ ತವಾದ ಸ್ವರ್ಗವು ಪ್ರಾಪ್ತಿಯಾಗುತ್ತದೆ. ಅಮಾವಾಸ್ಯೆಯಲ್ಲಿ ತರ್ಪಣ ಮಾಡುವುದ ರಿಂದಲೂ, ವರ್ಷ ಋತುವಿನಲ್ಲಿ ದೀಪದಾನ ಕೊಡುವುದರಿಂದಲೂ ಕಪ್ಪು ಕರುವನ್ನು, ಬಸವನನ್ನು, ಬಿಡುವುದರಿಂದಲೂ, ಪಿತೃಗಳ ಋಣದಿಂದ ಮುಕ್ತನಾಗುತ್ತಾನೆ ಒಂದು ವರ್ಷದವರೆಗೂ ಅಮಾವಾಸ್ಯೆಯ ದಿವಸ ಪಿತೃಗಳಿಗೆ ಎಳ್ಳಿನೊಡನೆ ತರ್ಪಣ

ವಿನಾಯಕತ್ವಮಾಪ್ನೋತಿ ಸರ್ವದೇವೈಃ ಪ್ರಪೂಜ್ಯತೇ ।
ಯುಗಾದ್ಯಾಸು ಚ ಸರ್ವಾಸು ಯಸ್ತಿಲೈಸ್ತರ್ಪಯೇತ್ಪಿತೄನ್ ॥ ೪೨ ॥

ಉಕ್ತಂ ಯದ್ವ್ಯಾಸ್ಯಮಾವಾಸ್ಯಾಂ ತಸ್ಮಾಚ್ಛತಗುಣಾಧಿಕಂ ।
ಅಯನೇ ವಿಷುವೇ ಚೈವ ರಾಕಾಮಾಯಾಂ ತಥೈವ ಚ ॥ ೪೩ ॥

ತರ್ಪಯಿತ್ವಾ ಪಿತೄನ್ಯ್ಯಾಹ ಸರ್ಗಲೋಕೇ ಮಹೀಯತೇ ।
ತಥಾ ಮನ್ವಂತರಾಖ್ಯಾಯಾಮನ್ಯಸ್ಯಾಂ ಪುಣ್ಯಸಂಸ್ಥಿತೌ ॥ ೪೪ ॥

ಗ್ರಹಣೇ ಚಂದ್ರಸೂರ್ಯಸ್ಯ ಪುಣ್ಯತೀರ್ಥೇ ಗಯಾದಿಷು ।
ತರ್ಪಯಿತ್ವಾ ಪಿತೄನ್ಯಾತಿ ಮಾಧವಸ್ಯ ನಿಕೇತನಂ ॥ ೪೫ ॥

ತಸ್ಮಾತ್ಪುಣ್ಯಾಹಕಂ ಪ್ರಾಪ್ಯ ತರ್ಪಯೇತ್ಪಿತೃಸಂಚಯಂ ।
ತರ್ಪಣಂ ದೇವತಾನಾಂ ಚ ಪೂರ್ವಂ ಕೃತ್ವಾ ಸಮಾಹಿತಃ ॥ ೪೬ ॥

ಅಧಿಕಾರೀ ಭವೇತ್ಪಶ್ಚಾತ್ಪಿತೄಣಾಂ ತರ್ಪಣೇ ಬುಧಃ ।
ಶ್ರಾದ್ಧೇ ಭೋಜನಕಾಲೇ ಚ ಪಾಣಿನೈಕೇನ ದಾಪಯೇತ್ ॥ ೪೭ ॥

---

ಮಾಡಿದರೆ ಗಣಾಧಿಪತ್ಯವನ್ನು ಹೊಂದುತ್ತಾನೆ. ದೇವತೆಗಳೆಲ್ಲಾ ಗೌರವಿಸುತ್ತಾರೆ. ಯುಗಾದಿಗಳಲ್ಲಿ ಪಿತೃಗಳಿಗೆ ತರ್ಪಣಮಾಡಿದರೆ, ಅಮಾವಾಸ್ಯೆಯ ಫಲಕ್ಕಿಂತಲೂ ನೂರರಷ್ಟು ಫಲವನ್ನು ಹೊಂದುತ್ತಾನೆ. ಉತ್ತರಾಯಣ, ದಕ್ಷಿಣಾಯನ, ಪುಣ್ಯ ಕಾಲಗಳು, ವಿಷುವತ್ಪುಣ್ಯಕಾಲಗಳು, ಹುಣ್ಣಿಮೆ, ಅಮಾವಾಸ್ಯೆಗಳಲ್ಲಿ ಪಿತೃಗಳಿಗೆ ತರ್ಪಣಮಾಡಿದರೆ ಸ್ವರ್ಗದಲ್ಲಿ ಸುಖಿಸುತ್ತಾನೆ ಮನ್ವಂತರಗಳಲ್ಲಿ ಉಳಿದ ಪುಣ್ಯ ತಿಥಿಗಳಲ್ಲಿ ,ಸೂರ್ಯ ಚಂದ್ರರ ಗ್ರಹಣಕಾಲದಲ್ಲಿ, ಪುಣ್ಯ ತೀರ್ಥಗಳಲ್ಲಿ, ಗಯೆ, ಮುಂತಾದ ಕ್ಷೇತ್ರಗಳಲ್ಲಿ, ತರ್ಪಣಮಾಡಿದರೆ ವೈಕುಂಠವನ್ನು ಹೊಂದುತ್ತಾನೆ.

೪೬-೫೦. ಪುಣ್ಯ ದಿನಗಳಲ್ಲಿ ತರ್ಪಣಮಾಡುವವನು ಮೊದಲು ದೇವತೆಗಳಿಗೆ ತರ್ಪಣವನ್ನು ಕೊಟ್ಟರೆ ಅನಂತರ ಪಿತೃತರ್ಪಣದಲ್ಲಿ ಅಧಿಕಾರವನ್ನು ಹೊಂದುತ್ತಾನೆ. ಶ್ರಾದ್ಧದಲ್ಲಿ, ಭೋಜನಕಾಲದಲ್ಲಿ, ಒಂದೇ ಕೈಯಿಂದ ತರ್ಪಣವನ್ನು ಕೊಡಬೇಕು.

ಉಭಾಭ್ಯಾಂ ತರ್ಪಣೇ ದದ್ಯಾದ್ವಿಧಿರೇಷ ಸನಾತನಃ ।
ದಕ್ಷಿಣಾಭಿಮುಖೋ ಭೂತ್ವಾ ಶುಚಿಸ್ತು ತರ್ಪಯೇತ್ಪಿತೄನ್ ॥ ೪೮ ॥

ತೃಪ್ಯತಾಮಿತಿ ವಾಕ್ಯೇನ ನಾಮಗೋತ್ರೇಣ ವಾ ಪುನಃ ।
ಅಕೃಷ್ಣೈರ್ಯಸ್ತಿಲೈರ್ಮೋಹಾತ್ತರ್ಪಯೇತ್ಪಿತೃಸಂಚಯಂ ॥ ೪೯ ॥

ಭೂಮ್ಯಾಂ ಯದ್ಯಾಪೋ ದೀಯಂತೇ ದಾತಾ ಚೈವ ಜಲೇ ಸ್ಥಿತಃ ।
ವೃಥಾ ತದ್ದೀಯತೇ ದಾನಂ ನೋಪತಿಷ್ಠತಿ ಕಸ್ಯಚಿತ್ ॥ ೫೦ ॥

ಸ್ಥಲೇ ಸ್ಥಿತ್ವಾ ಜಲೇ ಯಸ್ತು ಪ್ರಯಚ್ಛೇದುದಕಂ ನರಃ ।
ನೋಪತಿಷ್ಠೇತ್ಪಿತೄಣಾಂ ತು ಸಲಿಲಂ ತನ್ನಿರರ್ಥಕಂ ॥ ೫೧ ॥

ಆರ್ದ್ರವಾಸಾ ಜಲೇ ಯಸ್ತು ಕುರ್ಯಾದುದಕತರ್ಪಣಂ ।
ಪಿತರಸ್ತಸ್ಯ ತೃಪ್ಯಂತಿ ಸಹ ದೇವೈಃ ಸದಾಽನಘ ॥ ೫೨ ॥

ರಜಕೈಃ ಕ್ಷಾಲಿತಂ ವಸ್ತ್ರಮಶುದ್ಧಂ ಕವಯೋ ವಿದುಃ ।
ಹಸ್ತಪ್ರಕ್ಷಾಲನೇ ಚೈವ ಪುನರ್ವಸ್ತ್ರಂ ಚ ಶುಧ್ಯತಿ ॥ ೫೩ ॥

---

ಉಳಿದ, ಕಾಲಗಳಲ್ಲಿ ಎರಡು ಕೈಗಳಿಂದಲೂ ತರ್ಪಣವನ್ನು ಕೊಡಬೇಕು. ದಕ್ಷಿಣಕ್ಕೆ ಮುಖ ಮಾಡಿಕೊಂಡು ಶುಚಿಯಾಗಿ ಹೆಸರು ಗೋತ್ರಗಳನ್ನು ಹೇಳುತ್ತ ತರ್ಪಣ ಕೊಡಬೇಕು. ತಿಳಿವಳಿಕೆಯಿಲ್ಲದೆ ಬಿಳಿಯ ಎಳ್ಳಿನಿಂದ ತರ್ಪಣ ಬಿಟ್ಟರೂತಾನು ನೀರಿನಲ್ಲಿದ್ದುಕೊಂಡು ಭೂಮಿಯಮೇಲೆ (ನೆಲದ ಮೇಲೆ) ತರ್ಪಣ ಬಿಟ್ಟರೂ ಆ ದಾನವು ವ್ಯರ್ಥವಾಗಿ ಯಾರಿಗೂ ಸೇರುವುದಿಲ್ಲ

೫೧. ನೆಲದ ಮೇಲೆ ನಿಂತು ನೀರಿನಲ್ಲಿ ತರ್ಪಣಕೊಟ್ಟರೆ ಆದೂ ಕೂಡ ಪಿತೃಗಳಗೆ ಸೇರುವುದಿಲ್ಲ.

೫೨. ಒದ್ದೆಯ ಬಟ್ಟೆಯಲ್ಲಿ ತರ್ಪಣವನ್ನು ಕೊಟ್ಟರೆ ದೇವತೆಗಳೂ ಪಿತೃಗಳೂ ತೃಪ್ತರಾಗುತ್ತಾರೆ.

೫೩. ಅಗಸನಿಂದ ತಂದ ಬಟ್ಟೆಯಲ್ಲಿ ತರ್ಪಣಮಾಡಬಾರದು. ಅದು ಅಶುದ್ಧವು. ಒಂದು ವೇಳೆ ಅದನ್ನುಟ್ಟುಕೊಂಡು ಕೈ ತೊಳೆದುಕೊಂಡರೆ ಆಗ ಬಟ್ಟೆಯೂ ಶುದ್ಧವಾಗುತ್ತದೆ.

ಶುಷ್ಕವಾಸಾಃ ಶುಚ್ ದೇಶೇ ಸ್ಥಾನೇ ಯಸ್ತರ್ಪಯೇತ್ಪಿತೄನ್ ।
ತತೋ ದಶಗುಣೇನೈವ ತುಷ್ಯಂತಿ ಪಿತರೋ ಧ್ರುವಂ ॥ ೫೪ ॥

ಸ್ನಾನಂ ಸಂಧ್ಯಾಂ ಚ ಪಾಷಾಣೇ ಖಡ್ಗೇ ವಾ ತಾಮ್ರಭಾಜನೇ ।
ತರ್ಪಣಂ ಕುರುತೇ ಯಸ್ತು ಪ್ರತ್ಯೇಕಂ ಚ ಶತಾಧಿಕಂ ॥ ೫೫ ॥

ರೌಪ್ಯಾಂಗುಲೀಯಂ ತರ್ಜಿನ್ಯಾಂ ಧೃತ್ವಾ ಯಸ್ತರ್ಪಯೇತ್ಪಿತೄನ್ ।
ಸರ್ವಂ ಚ ಶತಸಾಹಸ್ರಗುಣಂ ಭವತಿ ನಾನ್ಯಥಾ ॥ ೫೬ ॥

ತಥೈವಾನಾಮಿಕಾಯಾಂ ತು ಧೃತ್ವಾ ಸ್ವರ್ಣಾಂಗುಲೀಂ ಬುಧಃ ।
ತರ್ಪಯೇತ್ಪಿತೃಸಂದೋಹಂ ಲಕ್ಷಕೋಟಿಗುಣಂ ಭವೇತ್ ॥ ೫೭ ॥

ಅಂಗುಷ್ಠದೇಶಿನೀಮಧ್ಯೇ ಸವ್ಯಹಸ್ತಸ್ಯ ಖಡ್ಗಕಂ ।
ಧೃತ್ವಾಽನಾಮಿಕಯಾ ರಕ್ತಮಂಜಲೇರಕ್ಷಯಂ ಫಲಂ ॥ ೫೮ ॥

---

೫೪. ಒಣಗಿದ ಬಟ್ಟೆಯನ್ನುಟ್ಟು ಶುಚಿಯಾದ ಪ್ರದೇಶದಲ್ಲಿ ತರ್ಪಣಮಾಡಿದರೆ ಹತ್ತುಪಾಲು ಹೆಚ್ಚಾಗಿ ಪಿತೃಗಳಿಗೆ ತೃಪ್ತಿಯಾಗುತ್ತದೆ.

೫೫. ಸ್ನಾನ ಸಂಧ್ಯಾವಂದನೆ ತರ್ಪಣಗಳನ್ನು ಕಲ್ಲಿನ ಮೇಲೆಯೂ, ಕತ್ತಿಯಲ್ಲಿಯೂ, ತಾಮ್ರದ ಪಾತ್ರೆಯಲ್ಲಿಯೂ,ಮಾಡಿದರೆ ನೂರು ನೂರರಷ್ಟು ಹೆಚ್ಚು ಫಲವನ್ನು ಕೊಡುತ್ತದೆ.

೫೬. ಬೆಳ್ಳಿಯ ಉಂಗುರವನ್ನು ಹೆಬ್ಬೆಟ್ಟಿನಿಂದ ಎರಡನೆಯ ಬೆಟ್ಟಿಗೆ ಹಾಕಿಕೊಂಡು ತರ್ಪಣಮಾಡಿದರೆ ಲಕ್ಷದಷ್ಟು ಹೆಚ್ಚು ಗುಣ ಕೊಡುತ್ತದೆ.

೫೭. ಅನಾಮಿಕೆ (ಕಿರು ಬೆರಳಿನಿಂದ ಎರಡನೆಯದು) ಯಲ್ಲಿ ಚಿನ್ನದ ಉಂಗುರವನ್ನು ಹಾಕಿಕೊಂಡು ತರ್ಪಣಮಾಡಿದರೆ ಲಕ್ಷ ಕೋಟಿಯಷ್ಟು ಹೆಚ್ಚು ಗುಣವುಂಟು.

೫೮. ಎಡಗೈಯಲ್ಲಿ ಅಂಗುಷ್ಠದ ಬಳಿ ಖಡ್ಗವನ್ನು ಹಿಡಿದು ಅನಾಮಿಕೆಯಲ್ಲಿ ಕೆಂಪು ರತ್ನವನ್ನಾಗಲಿ, ರಕ್ತವನ್ನಾಗಲಿ, ಇಟ್ಟುಕೊಂಡು ತರ್ಪಣಮಾಡಿದರೆ ಅಕ್ಷಯ ಫಲವು ಬರುತ್ತದೆ.

ಸ್ನಾನಾರ್ಥಮಭಿಗಚ್ಛಂತಂ ದೇವಾಃ ಪಿತೃಗಣೈಃ ಸಹ ।
ವಾಯುಭೂತಾऽನುಗಚ್ಛಂತಿ ತೃಷಾರ್ತಾಃ ಸಲಿಲಾರ್ಥಿನಃ ॥ ೫೯ ॥

ನಿರಾಶಾಸ್ತೇ ನಿವೃತ್ತಂತೇ ವಸ್ತ್ರನಿಷ್ಪೀಡನೇನ ಚ ।
ತಸ್ಮಾನ್ನ ಪೀಡಯೇದ್ವಸ್ತ್ರಮಕೃತ್ವಾ ಪಿತೃತರ್ಪಣಂ ॥ ೬೦ ॥

ತಿಸ್ರಃ ಕೋಟ್ಯೋऽರ್ಧಕೋಟೀ ಚ ಯಾನಿ ಲೋಮಾನಿ ಮಾನುಷೇ ।
ಸ್ರವಂತಿ ಸರ್ವತೀರ್ಥಾನಿ ತಸ್ಮಾನ್ನ ಪರಿಪೀಡಯೇತ್ ॥ ೬೧ ॥

ದೇವಾಃ ಪಿಬಂತಿ ಶಿರಸಃ ಶ್ಮಶ್ರುತಃ ಪಿತರಸ್ತಥಾ ।
ಚಕ್ಷುಷೋರಪಿ ಗಂಧರ್ವಾ ಅಧಸ್ತಃ ಸರ್ವಜಂತವಃ ॥ ೬೨ ॥

ದೇವಾಃ ಪಿತೃಗಣಾಃ ಸರ್ವೇ ಗಂಧರ್ವಾ ಜಂತವಸ್ತಥಾ ।
ಸ್ನಾನಮಾತ್ರೇಣ ತುಷ್ಯಂತಿ ಸ್ನಾನಾತ್ಪಾಪಂ ನ ವಿದ್ಯತೇ ॥ ೬೩ ॥

---

೫೯. ಸ್ನಾನಕ್ಕೆ ಹೋಗುವ ಮನುಷ್ಯನನ್ನು ನೋಡಿ ದೇವತೆಗಳೂ, ಪಿತೃಗಳೂ, ಬಾಯಾರಿಕೆಯಿಂದ ನೀರನ್ನು ಕುಡಿಯಬೇಕೆಂದು ಗಾಳಿಯ ರೂಪದಿಂದ ಅವನನ್ನು ಅನುಸರಿಸುತ್ತಾರೆ.

೬೦ ಆಗ ಸ್ನಾನವಾದನಂತರ ನಾವು ಬಟ್ಟೆಯನ್ನು ಹಿಂಡಿದರೆ ಅದನ್ನು ನೋಡಿ ಅವರು ನಿರಾಶೆಯಿಂದ ಹೊರಟುಹೋಗುತ್ತಾರೆ. ಆದ್ದರಿಂದ ಪಿತೃ ತರ್ಪಣ ಮಾಡುವುದಕ್ಕೆ ಮೊದಲು ಬಟ್ಟೆಯನ್ನು ಹಿಂಡಕೂಡದು.

೬೧. ಆಗ ನಮ್ಮ ಮೈಯಲ್ಲಿರುವ ಮೂರುವರೆಕೋಟಿ ರೋಮಗಳಿಂದಲೂ, ಎಲ್ಲಾ ತೀರ್ಥಗಳು ಹರಿಯುತ್ತಿರುತ್ತವೆ. ಆದ್ದರಿಂದ ಬಟ್ಟೆಯನ್ನು ಹಿಂಡಬಾರದು

೬೨. ತಲೆಯ ನೀರನ್ನು ದೇವತೆಗಳೂ, ಮುಖದ ನೀರನ್ನು ಪಿತೃಗಳೂ, ಕಣ್ಣುಗಳ ಹುಬ್ಬಿನದನ್ನು ಗಂಧರ್ವರೂ, ಉಳಿದುದನ್ನು ಎಲ್ಲಾ ಪ್ರಾಣಿಗಳೂ ಕುಡಿಯುತ್ತವೆ.

೬೩. ದೇವತೆಗಳು, ಪಿತೃಗಳು, ಗಂಧರ್ವರು, ಉಳಿದ ಜಂತುಗಳು ಕೂಡ ಈತನು ಸ್ನಾನಮಾಡುವುದರಿಂದಲೇ ಈರೀತಿ ತೃಪ್ತರಾಗುವುದರಿಂದ ಸ್ನಾನದಿಂದ ಪಾಪವೆಲ್ಲವೂ ಹೋಗುತ್ತವೆ

ನಿತ್ಯಸ್ನಾನಂ ಚ ಯಃ ಕುರ್ಯಾತ್ಸ ನರಃ ಪುರುಷೋತ್ತಮಃ ।
ಸರ್ವಪಾಪೈರ್ವಿನಿಮುಕ್ತೋ ನಾಕಲೋಕೇ ಮಹೀಯತೇ ॥ ೬೪ ॥

ಸ್ನಾನಂ ತರ್ಪಣಪರ್ಯಂತಂ ದೇವಾ ಮಹರ್ಷಯೋ ವಿದುಃ ।
ಅತಃ ಪರಂ ಚ ದೇವಾನಾಂ ಪೂಜನಂ ಕಾರಯೇದ್ಬುಧಃ ॥ ೬೫ ॥

ಗಣೇಶಂ ಪೂಜಯೇದ್ಯಸ್ತು ವಿಘ್ನಸ್ತಸ್ಯ ನ ಜಾಯತೇ ।
ಆರೋಗ್ಯಾರ್ಥಂ ಚ ಸೂರ್ಯಂ ಚ ಧರ್ಮಮೋಕ್ಷಾಯ ಮಾಧವಂ ॥೬೬॥

ಶಿವಂ ಚ ಕೃತ್ಯಕಾಮಾರ್ಥಂ ಸರ್ವಕಾಮಾಯ ಚಂಡಿಕಾಂ ।
ದೇವಾಂಸ್ತು ಪೂಜಯಿತ್ವಾ ತು ಬಲಿಂ ವೈಶ್ವಂ ತಥಾ ಚರೇತ್ ॥ ೬೭ ॥

ವಹ್ನಿಕಾರ್ಯಂ ತತಃ ಕೃತ್ವಾ ಯಜ್ಞಂ ಬ್ರಾಹ್ಮಣತರ್ಪಣಂ ।
ದೇವಾನಾಂ ಸರ್ವಸತ್ವಾನಾಂ ಪುನಸ್ತ್ರಿವಿಷ್ಟಪಂ ವ್ರಜೇತ್ ॥ ೬೮ ॥

---

೬೪. ನಿತ್ಯ ಸ್ನಾನಮಾಡತಕ್ಕ ಮನುಷ್ಯನೇ ಪುರುಷಶ್ರೇಷ್ಠನು, ಅವನು ಪಾಪಗಳೆಲ್ಲವನ್ನೂ ಕಳೆದುಕೊಂಡು ಸ್ವರ್ಗದಲ್ಲಿ ಸುಖಿಸುತ್ತಾನೆ

೬೫. ಸ್ನಾನಕ್ಕೆ ತರ್ಪಣವೇ ಕೊನೆ. ಎಂದು ದೇವತೆಗಳೂ, ಋಷಿಗಳೂ, ಹೇಳುತ್ತಾರೆ. ಅನಂತರ ದೇವರ ಪೂಜೆಯನ್ನು ಮಾಡಬೇಕು.

೬೬-೬೭. ಗಣೇಶನನ್ನು ಪೂಜಿಸಿದರೆ ಅವನಿಗೆ ವಿಘ್ನವುಂಟಾಗುವುದಿಲ್ಲ. ಆರೋಗ್ಯಕ್ಕೋಸ್ಕರ ಸೂರ್ಯನನ್ನೂ ಪೂಜಿಸಬೇಕು. ಮಾಧವನನ್ನು ಪೂಜಿಸಿದರೆ ಧರ್ಮವೂ ಮೋಕ್ಷವೂ ಸಿಕ್ಕುತ್ತವೆ. ಶಿವನನ್ನು ಪೂಜಿಸಿದರೆ, ಮಾಡತಕ್ಕ ಕೆಲಸಗಳು ಈಡೇರುತ್ತವೆ. ಎಲ್ಲಾ ಇಷ್ಟಗಳನ್ನೂ ನೆರವೇರಿಸಲು ಚಂಡಿಕೆಯನ್ನು ಪೂಜಿಸಬೇಕು. ಈರೀತಿ ದೇವತೆಗಳನ್ನು ಪೂಜಿಸಿ ಅನಂತರ ವೈಶ್ವದೇವನನ್ನು ಮಾಡಬೇಕು. ಬಲಿಯನ್ನೆ ಹಾಕಬೇಕು.

೬೮. ಅನಂತರ ಔಪಾಸನವನ್ನು ಮಾಡಿ ಬ್ರಹ್ಮಯಜ್ಞಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ತೃಪ್ತಿಪಡಿಸಬೇಕು. ದೇವತೆಗಳಿಗೂ ಎಲ್ಲಾ ಪ್ರಾಣಿಗಳಿಗೂ ತೃಪ್ತಿಪಡಿಸಬೇಕು. ಹೀಗೆ ಮಾಡಿದರೆ ಸ್ವರ್ಗಕ್ಕೆ ಹೋಗುತ್ತಾನೆ.

ಗತಾಗತಂ ಸ್ಥಿರಂ ಕೃತ್ವಾ ಕಾಮಾನ್ಮೋಕ್ಷಂ ಸುಖಂ ದಿವಂ ।
ತಸ್ಮಾತ್ಸರ್ವಪ್ರಯತ್ನೇನ ನಿತ್ಯಂ ಕರ್ಮಾಣಿ ಕಾರಯೇತ್ ॥ ೧೯ ॥

॥ ನಾರದ ಉವಾಚ ॥

ಕಿಮರ್ಥಂ ಚ ಜಲಂ ತಾತ ದೇವಾಃ ಪಿತೃಗಣೈಃ ಸಹ ।
ನ ಪ್ರಾಪ್ನುವಂತಿ ಸರ್ವಜ್ಞ ಲಭಂತೇ ಮಾನವಾ ಯಥಾ ॥ ೨೦ ॥

॥ ಬ್ರಹ್ಮೋವಾಚ ॥

ಪುರಾ ಸೃಷ್ಟಂ ಮಯಾ ತೋಯಂ ಸರ್ವದೇವಮಯಾಮೃತಂ ।
ತಸ್ಯೈವ ರಕ್ಷಣಾರ್ಥಂ ಚ ರಕ್ಷೋಯಕ್ಷಾ ಧನುರ್ಧರಾಃ ॥ ೨೧ ॥

ಘ್ನಂತಿ ತೇ ಪಿತರಂ ದೇವಮಸ್ಮದ್ವಾಕ್ಯಾನ್ನ ಮಾನುಷಂ ।
ಪಶವಃ ಪಕ್ಷಿಣಃ ಕೀಟಾ ಮರ್ತ್ಯಲೋಕೇ ವ್ಯವಸ್ಥಿತಾಃ ॥ ೨೨ ॥

ಮರ್ತ್ಯಜಾತಾಶ್ಚ ದೇವಾ ಯೇ ತಥೈವ ಮಾನುಷಾ ಧ್ರುವಂ ।
ತರ್ಪಯಿತ್ವಾ ಗುರುಂ ನಿತ್ಯಂ ಸುರಲೋಕಾನ್ಪ್ರತಿಷ್ಠಿತಾಃ ॥ ೨೩ ॥

---

೧೯. ಸಂಚಾರಗಳನ್ನು ನಿಲ್ಲಿಸಬೇಕು, ಒಂದೇ ಸ್ಥಳದಲ್ಲಿರಬೇಕು, ಹೀಗೆ ಮಾಡಿದರೆ ಕಾಮ ಮೋಕ್ಷಗಳನ್ನೂ ಸುಖವಾಗಿ ಸ್ವರ್ಗವನ್ನೂ ಹೊಂದುತ್ತಾನೆ. ಆದ್ದರಿಂದ ಸರ್ವ ಪ್ರಯತ್ನದಿಂದಲೂ ನಿತ್ಯ ಕರ್ಮಗಳನ್ನು ಮಾಡಬೇಕು.

೨೦. ನಾರದನು ಹೇಳಿದನು– ಎಲೈ ಬ್ರಹ್ಮನೇ ! ದೇವತೆಗಳೂ ಪಿತೃಗಳೂ, ಮನುಷ್ಯರಂತೆ ನೀರನ್ನು ಏತಕ್ಕೆ ಹೊಂದುವುದಿಲ್ಲ ?

೨೧. ಬ್ರಹ್ಮನು ಹೇಳಿದನು– ಪೂರ್ವದಲ್ಲಿ ಸರ್ವ ದೇವತೆಗಳ ರೂಪವಾದ ನೀರನ್ನು ಸೃಷ್ಟಿಸಿ ಅದರ ರಕ್ಷಣೆಗೆ ರಾಕ್ಷಸರನ್ನೂ, ಯಕ್ಷರನ್ನೂ, ನಿಯಮಿಸಿದೆನು.

೨೨. ಅವರು ನನ್ನ ಮಾತಿನಂತೆ ಪಿತೃಗಳನ್ನೂ ದೇವತೆಗಳನ್ನೂ ಅಲ್ಲಿಗೆ ಸೇರಿಸದೆ ಹೊಡೆಯುವುದಕ್ಕೆ ಹೋಗುತ್ತಾರೆ. ಮನುಷ್ಯರು, ಪಶುಗಳು, ಪಕ್ಷಿಗಳು, ಕೀಟಗಳು, ಮನುಷ್ಯಲೋಕದ ಪ್ರಾಣಿಗಳನ್ನು ನಮ್ಮ ಅಪ್ಪಣೆಯಂತೆಯೇ ತೊಂದರೆ ಪಡಿಸುವುದಿಲ್ಲ.

೨೩. ಮನುಷ್ಯಲೋಕದಲ್ಲಿ ಹುಟ್ಟಿದವರು, ತರ್ಪಣಾದಿಗಳನ್ನು ಕೊಟ್ಟು ದೇವಲೋಕಕ್ಕೆ ಹೋಗಿದ್ದಾರೆ.

ಅಸ್ನಾಯೀ ಚ ಮಲಂ ಭುಂಕ್ತೇ ಅಜಪೀ ಪೂಯಶೋಣಿತಂ ।
ಅಕೃತ್ವಾ ತರ್ಪಣಂ ನಿತ್ಯಂ ಪಿತೃಹಾ ಚೋಪಜಾಯತೇ ॥ ೭೪ ॥

ಬ್ರಹ್ಮಹತ್ಯಾ ಸಮಂ ಪಾಪಂ ದೇವಾನಾಮಪ್ಯಪೂಜನೇ ।
ಸಂಧ್ಯಾಕೃತ್ಯಮಕೃತ್ವಾ ಚ ಸೂರ್ಯಂ ಹಂತಿ ಚ ಪಾಪಕೃತ್ ॥ ೭೫ ॥

॥ ನಾರದ ಉವಾಚ ॥

ಬ್ರಾಹ್ಮಣಸ್ಯ ಸದಾಚಾರಂ ಕ್ರಮಂ ಬ್ರೂಹಿ ಚ ಕರ್ಮಣಾಂ ।
ಇತರೇಷಾಂ ಚ ವರ್ಣಾನಾಂ ಪ್ರವೃತ್ತಮಖಿಲಂ ವದ ॥ ೭೬ ॥

॥ ಬ್ರಹ್ಮೋವಾಚ ॥

ಆಚಾರಾಲ್ಲಭತೇ ಹ್ಯಾಯುರಾಚಾರಾಲ್ಲಭತೇ ಧನಂ ।
ಆಚಾರಾತ್ಸ್ವರ್ಗಮೋಕ್ಷಂ ಚ ಆಚಾರೋ ಹಂತ್ಯಲಕ್ಷಣಂ ॥ ೭೭ ॥

ಅನಾಚಾರೋ ಹಿ ಪುರುಷೋ ಲೋಕೇ ಭವತಿ ನಿಂದಿತಃ ।
ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ॥ ೭೮ ॥

---

೭೪. ಸ್ನಾನಮಾಡದೆ ಊಟಮಾಡಿದರೆ ಮಲವನ್ನು ತಿಂದಂತೆಯೂ ಜಪ, ಮಾಡದೆ ಊಟಮಾಡಿದರೆ ರಕ್ತ ಕೀವುಗಳನ್ನು ತಿಂದಂತೆಯೂ, ತರ್ಪಣವನ್ನು ಮಾಡದೆ ಊಟಮಾಡಿದರೆ ಪಿತೃಗಳ ವಧೆಯನ್ನು ಮಾಡಿದಂತೆಯೂ ಆಗುತ್ತದೆ.

೭೫. ದೇವತೆಗಳನ್ನು ಪೂಜಿಸದಿದ್ದರೆ, ಬ್ರಹ್ಮಹತ್ಯೆಯ ಪಾಪವು ಬರುತ್ತದೆ. ಸಂಧ್ಯಾವಂದನೆಯನ್ನು ಮಾಡದಿದ್ದರೆ ಸೂರ್ಯನನ್ನು ಕೊಂದ ಪಾಪವು ಬರುತ್ತದೆ.

೭೬. ನಾರದನು ಹೇಳಿದನು– ಬ್ರಾಹ್ಮಣನ ಸದಾಚಾರವನ್ನೂ, ಅವನ ಕರ್ಮಗಳನ್ನೂ ತಿಳಿಸು. ಉಳಿದವರ ಕರ್ಮಗಳನ್ನೂ ಅವರು ಮಾಡುವುದನ್ನೂ ತಿಳಿಸು.

೭೭. ಬ್ರಹ್ಮನು ಹೇಳಿದನು– ಆಚಾರದಿಂದ ಆಯುಸ್ಸೂ, ಧನವೂ, ಸ್ವರ್ಗ ಮೋಕ್ಷಗಳೂ, ಬರುತ್ತವೆ, ಆಚಾರವು ಅಮಂಗಳಗಳನ್ನು ನಾಶಮಾಡುತ್ತದೆ.

೭೮-೭೯. ಅನಾಚಾರವನ್ನು ಮಾಡುವ ಮನುಷ್ಯನು ಲೋಕದಲ್ಲಿ ನಿಂದಿಸಲ್ಪಡುತ್ತಾನೆ. ದುಃಖವನ್ನು ಹೊಂದುತ್ತಾನೆ. ರೋಗಿಯೂ, ಅಲ್ಪಾಯುಸ್ಸುಳ್ಳವನೂ,

ನರಕೇ ನಿಯತಂ ವಾಸೋ ಹ್ಯನಾಚಾರಾನ್ನರಸ್ಯ ಚ ।
ಆಚಾರಾಚ್ಚ ಪರಂ ಲೋಕಮಾಚಾರಂ ಶೃಣು ತತ್ತ್ವತಃ ॥ ೭೯ ॥

ಗೋಮಯೇನ ಗೃಹೇ ನಿತ್ಯಂ ಪ್ರಕುರ್ಯಾದುಪಲೇಪನಂ ।
ಪ್ರಕ್ಷಾಲಯೇತ್ತತಃ ಪೀಠಂ ಕಾಷ್ಠಂ ಪಾತ್ರಂ ಶಿಲಾತಲಂ ॥ ೮೦ ॥

ಭಸ್ಮನಾ ಕಾಂಸ್ಯಪಾತ್ರಂ ತು ತಾಮ್ರಮಮ್ಲೇನ ಶುಧ್ಯತಿ ।
ಶಿಲಾಪಾತ್ರಂ ತು ತೈಲೇನ ಫಾಲಂ ಗೋವಾಲಕೇನ ತು ॥ ೮೧ ॥

ಸ್ವರ್ಣರೌಪ್ಯಾದಿಪಾತ್ರಂ ತು ಜಲಮಾತ್ರೇಣ ಶುಧ್ಯತಿ ।
ಅಗ್ನಿನಾ ಲೋಹಪಾತ್ರಂ ತು ಪಾಕಪ್ರಕ್ಷಾಲನೇನ ತು ॥ ೮೨ ॥

ಖನನಾದ್ದಾಹನಾಚ್ಚೈವ ಉಪಲೇಪನಧಾವನಾತ್ ।
ಪರ್ಜನ್ಯವರ್ಷಣಾಚ್ಚೈವ ಭೂರಮೇಧ್ಯಾ ವಿಶುಧ್ಯತಿ ॥ ೮೩ ॥

ತೈಜಸ್ಯಾನಾಂ ಮಣೀನಾಂ ಚ ಸರ್ವಸ್ಯಾಶ್ಮಮಯಸ್ಯ ಚ ।
ಭಸ್ಮಭಿರ್ಮೃತ್ತಿಕಾಭಿಶ್ಚ ಶುದ್ಧಿರುಕ್ತಾ ಮಯಾ ಪುರಾ ॥ ೮೪ ॥

---

ಆಗುತ್ತಾನೆ ಅನಾಚಾರದಿಂದ ನರಕವು ಬರುತ್ತದೆ, ಆಚಾರದಿಂದ ಸ್ವರ್ಗವು ಬರುತ್ತದೆ, ಆಚಾರವನ್ನು ಹೇಳುತ್ತೇನೆ. ಕೇಳು.

೮೦. ಹಸುವಿನ ಸಗಣಿಯನ್ನು ಹಾಕಿ ಮನೆಯನ್ನು ಸಾರಿಸಬೇಕು. ಅನಂತರ ಮಣೆಯನ್ನೂ ಮರದ ಪಾತ್ರೆಗಳನ್ನೂ ಮಿಕ್ಕ ಪಾತ್ರೆಗಳನ್ನೂ ನೆಲಗಳನ್ನೂ, ಕಲ್ಲನ್ನೂ ತೊಳೆಯಬೇಕು

೮೧-೮೨. ಬೂದಿಯಿಂದ ಕಂಚೂ, ಹುಳಿಯಿಂದ ತಾಮ್ರವೂ, ಎಣ್ಣೆಯಿಂದ ಕಲ್ಲಿನ ಪಾತ್ರೆಯೂ, ಮರದ ಹಲಗೆ ಮುಂತಾದುವು ಗೋವಿನ ಬಾಲದಿಂದಲೂ ಶುದ್ಧಿಯಾಗುತ್ತವೆ. ಚಿನ್ನ ಬೆಳ್ಳಿಗಳು ನೀರಿನಿಂದಲೇ ಶುದ್ಧವಾಗುತ್ತವೆ. ಕಬ್ಬಿಣದ ಪಾತ್ರೆಯು ಬೆಂಕಿಗೆ ಹಾಕಿ ಕಾಯಿಸಿ ತೊಳೆಯುವುದರಿಂದ ಶುದ್ಧಿಯಾಗುತ್ತದೆ.

೮೩. ಅಗೆಯುವುದು, ಸುಡುವುದು, ಸಾರಿಸುವುದು, ತೊಳೆಯುವುದು, ಇವುಗಳಿಂದಲೂ ಮಳೆ ಬೀಳುವುದರಿಂದಲೂ ಅಶುದ್ಧವಾದ ಭೂಮಿಯು ಶುದ್ಧವಾಗುತ್ತದೆ.

೮೪. ತೇಜಸ್ಸುಳ್ಳ ಮಣಿಗಳು ಉಳಿದ ಕಲ್ಲಿನ ಪಾತ್ರೆಗಳು ಇವುಗಳು ಬೂದಿಯಿಂದಲೂ, ಮಣ್ಣಿನಿಂದಲೂ ಶುದ್ಧಿಯಾಗುತ್ತವೆಂದು ಹೇಳಿದ್ದೇನೆ

ಶಯ್ಯಾ ಭಾರ್ಯಾಶಿಶುರ್ವಸ್ತ್ರಮುಪವೀತಂ ಕಮಂಡಲುಃ ।
ಆತ್ಮನಃ ಕಥಿತಾ ಶುದ್ಧಿರ್ನ ಪರೇಷಾಂ ಕದಾಚನ ॥ ೮೫ ॥

ನ ಭುಂಜೀತೈಕವಸ್ತ್ರೇಣ ನ ಸ್ನಾಯಾದೇಕವಾಸಸಾ ।
ನ ಧಾರಯೇತ್ಪರಸ್ಯೈವ ಸ್ನಾನವಸ್ತ್ರಂ ಕದಾಚನ ॥ ೮೬ ॥

ಸಂಸ್ಕಾರಂ ಕೇಶದಂತಾನಾಂ ಪ್ರಾತರೇವ ಸಮಾಚರೇತ್ ।
ಗುರೂಣಾಂ ಚ ನಮಸ್ಕಾರಂ ನಿತ್ಯಮೇವ ಸಮಾಚರೇತ್ ॥ ೮೭ ॥

ಹಸ್ತಪಾದಂ ಮುಖಂ ಚೈವ ಪಂಚಾರ್ದ್ರೋ ಭೋಜಯೇದ್ಬುಧಃ ।
ಪಂಚಾರ್ದ್ರಕಸ್ತು ಭುಂಜಾನಃ ಶತವರ್ಷಾಣಿ ಜೀವತಿ ॥ ೮೮ ॥

ದೇವತಾನಾಂ ಗುರೋರಾಜ್ಞಾಂ ಸ್ನಾತಕಾಚಾರ್ಯಯೋರಪಿ ।
ನಾಕ್ರಾಮೇತ್ಕಾಮತಶ್ಛಾಯಾಂ ವಿಪ್ರಸ್ಯ ದೀಕ್ಷಿತಸ್ಯ ಚ ॥ ೮೯ ॥

---

೮೫. ಹಾಸಿಗೆ, ಹೆಂಡತಿ, ಮಕ್ಕಳು, ಬಟ್ಟೆ, ಜನಿವಾರ, ಕಮಂಡಲು, ತನಗೆ ಶುದ್ಧಿಯನ್ನು ಹೇಳಿದ್ದರಿಂದಲೇ ಶುದ್ಧಿಯಾದಂತಾಗುತ್ತವೆ. ಇತರರಿಗೆ ಶುದ್ಧಿಯನ್ನು ಹೇಳಿಲ್ಲ.

೮೬. ಒಂದೇ ಬಟ್ಟೆಯನ್ನು ಉಟ್ಟುಕೊಂಡು ಊಟ ಮಾಡಬಾರದು, ಒಂದೇ ಒಟ್ಟೆಯಿಂದ ಸ್ನಾನಮಾಡಬಾರದು, ಮತ್ತೊಬ್ಬರ ಸ್ನಾನ ವಸ್ತ್ರವನ್ನು ಹಾಕಿಕೊಳ್ಳಬಾರದು

೮೭. ಕೂದಲನ್ನು ಸರಿಮಾಡಿಕೊಳ್ಳುವುದು, ತಲೆಬಾಚಿಕೊಳ್ಳುವುದು, ಹಲ್ಲನ್ನು ತಿಕ್ಕುವುದು, ಇವನ್ನು ಬೆಳಗಿನ ಹೊತ್ತಿನಲ್ಲಿಯೇ ಮಾಡಿಕೊಳ್ಳಬೇಕು. ಗುರುಗಳಿಗೆ ನಿತ್ಯವೂ ನಮಸ್ಕಾರಮಾಡಬೇಕು.

೮೮. ಕಾಲೆರಡು, ಕೈಗಳೆರಡು, ಮುಖ ಒಂದು, ಇವು ಐದನ್ನು ಒದ್ದೆಮಾಡಿಕೊಂಡು ಊಟ ಮಾಡಬೇಕು. ಹಾಗೆ ಮಾಡಿದವನು ನೂರು ವರ್ಷಗಳು ಬದುಕುತ್ತಾನೆ.

೮೯. ದೇವತೆಗಳು, ಗುರುಗಳು, ಸ್ನಾತಕ, ಆಚಾರ್ಯರು, ದೀಕ್ಷಿತ, ಶ್ರೋತ್ರಿಯರನ್ನು ಮೀರಿ ಹತ್ತಿರ ಹೋಗಬಾರದು. ದೂರದಲ್ಲಿರಬೇಕು.

ಗೋಗಣಂ ದೈವತಂ ವಿಪ್ರಂ ಘೃತಂ ಮಧು ಚತುಷ್ಪಥಂ ।
ಪ್ರದಕ್ಷಿಣಂ ಪ್ರಕುರ್ವೀತ ಪ್ರಖ್ಯಾತಾಂಶ್ಚ ವನಸ್ಪತೀನ್ ॥ ೯೦ ॥

ಗೋವಿಪ್ರಾವಗ್ನಿವಿಪ್ರೌ ಚ ವಿಪ್ರೌ ದ್ವೌ ದಂಪತೀ ತಥಾ ।
ತಯೋರ್ಮಧ್ಯೇ ನ ಗಚ್ಛೇತ ಸ್ವರ್ಗಸ್ಥೋಽಪಿ ಪತೇದ್ಧ್ರುವಂ ॥ ೯೧ ॥

ಉಚ್ಛಿಷ್ಟೋ ನ ಸ್ಪೃಶೇದಗ್ನಿಂ ಬ್ರಾಹ್ಮಣಂ ದೈವತಂ ಗುರುಂ ।
ಸ್ವಶೀರ್ಷಂ ಪುಷ್ಪವೃಕ್ಷಂ ಚ ಯಜ್ಞವೃಕ್ಷಮಥಾನ್ಯಕಂ ॥ ೯೨ ॥

ತ್ರೀಣಿ ತೇಜಾಂಸಿ ನೋಚ್ಛಿಷ್ಟ ಉಪರೀಕ್ಷೇತ್ಕದಾಚನ ।
ಸೂರ್ಯಾಚಂದ್ರಮಸಾವೇವ ನಕ್ಷತ್ರಾಣಿ ಚ ಸರ್ವಶಃ ॥ ೯೩ ॥

ನೇಕ್ಷೇದ್ವಿಪ್ರಂ ಗುರುಂ ದೇವಂ ರಾಜಾನಂ ಯತಿನಾಂ ವರಂ ।
ಯೋಗಿನಂ ದೇವಕರ್ಮಾಣಂ ಧರ್ಮಾಣಾಂ ಕಥಕಂ ದ್ವಿಜಂ ॥ ೯೪ ॥

---

೯೦. ದನಗಳ ಗುಂಪು, ದೇವರು, ಬ್ರಾಹ್ಮಣರು, ತುಪ್ಪ, ಜೇನು, ನಾಲ್ಕು ದಾರಿಗಳು ಸೇರಿರುವ ಚೌಕ, ಪ್ರಸಿದ್ಧವಾದ ಮರಗಳು, ಇವನ್ನು ಬಲಕ್ಕೆ ಬಿಟ್ಟು ಕೊಂಡು ಹೋಗಬೇಕು.

೯೧. ಗೋ ಬ್ರಾಹ್ಮಣರ ಯುಗ್ಮ, ಅಗ್ನಿ ಬ್ರಾಹ್ಮಣರ ಯುಗ್ಮ, ದಂಪತಿಗಳು, ಇವರ ಮಧ್ಯದಲ್ಲಿ ಹೋಗಬಾರದು. ಪುಣ್ಯವಂತನಾಗಿ ಸ್ವರ್ಗವನ್ನು ಹೊಂದಿದವನಾಗಿದ್ದರೂ ಅದನ್ನು ಕಳೆದುಕೊಂಡು ಪತಿತನಾಗುತ್ತಾನೆ.

೯೨ ಅಶುಚಿಯಾಗಿ ಅಗ್ನಿಯನ್ನು ಮುಟ್ಟಬಾರದು, ದೇವರನ್ನೂ ಬ್ರಾಹ್ಮಣರನ್ನೂ, ಗುರುವನ್ನೂ, ತಲೆಯನ್ನೂ, ಹೂವಿನ ಮರವನ್ನೂ, ಅತ್ತಿ ಮುಂತಾದ ಯಜ್ಞದ ಮರಗಳನ್ನೂ, ಮಿಕ್ಕವುಗಳನ್ನೂ ಕೂಡ ಅಶುಚಿಯಾಗಿ ಮುಟ್ಟಬಾರದು

೯೩. ಸೂರ್ಯ ಚಂದ್ರರೂ, ನಕ್ಷತ್ರಗಳನ್ನು ಅಶುಚಿಯಾಗಿ ನೋಡಬಾರದು. ಯಜ್ಞದ ಮೂರು ಅಗ್ನಿಗಳನ್ನು ಅಶುಚಿಯಾಗಿ ನೋಡಬಾರದು.

೯೪. ಬ್ರಾಹ್ಮಣ, ಗುರು, ದೇವರು, ರಾಜ, ಯತಿ, ಯೋಗಿ, ದೇವರಪೂಜಕ ಧರ್ಮವನ್ನು ಉಪದೇಶಿಸುವವನು ಇವರನ್ನು ಅಶುಚಿಯಾಗಿ ನೋಡಬಾರದು.

ನದೀನಾಂ ಚ ಪ್ರತೀರೇ ಚ ಪತ್ಯುಶ್ಚ ಸರಿತಾಂ ತಥಾ ।
ಯಜ್ಞವೃಕ್ಷಸ್ಯ ಮೂಲೇ ಚ ಉದ್ಯಾನೇ ಪುಷ್ಪವಾಟಿಕೇ ॥ ೯೫ ॥

ಶರೀರಸ್ಯ ಮಲತ್ಯಾಗಂ ನ ಕುರ್ಯಾಜ್ಜೀವನೇ ತಥಾ ।
ವಿಪ್ರಸ್ಯಾಽಯತನೇ ಗೋಷ್ಠೇ ರಮ್ಯೇ ರಾಜಪಥೇಷು ಚ ॥ ೯೬ ॥

ನ ರೂಕ್ಷಂ ಕಾರಯೇದ್ಧೀರಃ ಕಚಾಂಘ್ರಿಂ ಚ ಕರಾನನಂ ।
ಮಲಂ ನ ಧಾರಯೇದ್ದಂತೇ ನಖಂ ನ ವದನೇ ಕ್ಷಿಪೇತ್ ॥ ೯೭ ॥

ತೈಲಾಭ್ಯಂಗಂ ನ ಕುರ್ವೀತ ವಾಸರೇ ರವಿಭೌಮಯೋಃ ।
ಸ್ವಗಾತ್ರಾಸನಯೋರ್ವಾದ್ಯಂ ಗುರೋರೇಕಾಸನಾದನಂ ॥ ೯೮ ॥

ನ ಹರೇಚ್ಛ್ರೋತ್ರಿಯಸ್ವಂ ಚ ದೇವಸ್ಯಾಪಿ ಗುರೋರಪಿ ।
ರಾಜ್ಞಸ್ತಪಸ್ವಿನಾಂ ಚೈವ ಪಂಗೋರಂಧಸ್ಯ ಯೋಷಿತಃ ॥ ೯೯ ॥

ಪಂಥಾ ದೇಯೋ ಬ್ರಾಹ್ಮಣಾಯ ಗೋಭ್ಯೋ ರಾಜಭ್ಯ ಏವ ಚ ।
ರೋಗಿಣೇ ಭಾರತಪ್ತಾಯ ಗುರ್ವಿಣ್ಯೈ ದುರ್ಬಲಾಯ ಚ । ॥ ೧೦೦ ॥

---

೯೫-೯೬. ನದಿಯ ತೀರ, ಸಮುದ್ರದ ತೀರ, ಯಜ್ಞದ ಮರಗಳ ಬುಡದಲ್ಲಿ ಉದ್ಯಾನದಲ್ಲಿ, ಹೂವಿನ ತೋಟದಲ್ಲಿ, ನೀರಿನಲ್ಲಿ, ಬ್ರಾಹ್ಮಣನ ಮನೆಯಲ್ಲಿ, ದನಗಳ ಕೊಟ್ಟಿಗೆಯಲ್ಲಿ. ಸುಂದರವಾದ ಸ್ಥಳಗಳಲ್ಲಿ, ರಾಜ ಮಾರ್ಗದಲ್ಲಿ, ಪಾಯಖಾನೆಯನ್ನು ಮಾಡಬಾರದು.

೯೭. ಕೂದಲು ಕಾಲುಗಳು ಮುಖಗಳನ್ನು ಭಯಂಕರವಾಗಿ ಮಾಡಿಕೊಳ್ಳ ಬಾರದು. ಹಲ್ಲಿನಲ್ಲಿ ಕೊಳೆಯನ್ನಿಟ್ಟುಕೊಳ್ಳಬಾರದು, ಹಲ್ಲಿನಿಂದ ಉಗುರನ್ನು ಕಚ್ಚ ಬಾರದು.

೯೮-೯೯. ಭಾನು ಮಂಗಳವಾರಗಳಲ್ಲಿ ಎಣ್ಣೆ ಹಚ್ಚಿಕೊಂಡು ಸ್ನಾನಮಾಡ ಬಾರದು, ತನ್ನ ದೇಹ, ಆಸನ, ಗುರುವಿನ ಆಸನಗಳನ್ನು ವಾದ್ಯವನ್ನಾಗಿ ಬಾರಿಸಬಾ ರದು, ಶ್ರೋತ್ರಿಯನ ಸ್ವತ್ತು, ದೇವರು, ಗುರು, ರಾಜ, ತಪಸ್ವಿ, ಕುಂಟ, ಕುರುಡ, ಹೆಂಗಸು, ಇವರ ಸ್ವತ್ತನ್ನು ಅಪಹರಿಸಬಾರದು. ಗುರುವಿನ ಸಮಕ್ಕೆ ಕುಳಿತು ಊಟ ಮಾಡಬಾರದು.

೧೦೦. ಬ್ರಾಹ್ಮಣ, ಗೋವು, ರಾಜ, ರೋಗಿ, ಭಾರಹೊತ್ತವನು, ಗರ್ಭಿಣಿ, ಬಲವಿಲ್ಲದವನು ಇವರಿಗೆ ದಾರಿಯನ್ನು ಬಿಡಬೇಕು.

ವಿವಾದಂ ನ ಚ ಕುರ್ವೀತ ನೃಪವಿಪ್ರಚಿಕಿತ್ಸಕೈಃ ।
ಬ್ರಾಹ್ಮಣಂ ಗುರುಪತ್ನೀಂ ಚ ದೂರತಃ ಪರಿವರ್ಜಯೇತ್ ॥ ೧೦೧ ॥

ಪತಿತಂ ಕುಷ್ಠಸಂಯುಕ್ತಂ ಚಾಂಡಾಲಂ ಚ ಗವಾಶಿನಂ ।
ನಿರ್ಧೂತಂ ಜ್ಞಾನಹೀನಂ ಚ ದೂರತಃ ಪರಿವರ್ಜಯೇತ್ ॥ ೧೦೨ ॥

ಸ್ತ್ರಿಯಂ ದುಷ್ಟಾಂ ಚ ದುರ್ವೃತ್ತಾಮಪವಾದಪ್ರದಾಯಿನೀಂ ।
ಕುಕರ್ಮಕಾರಿಣೀಂ ದುಷ್ಟಾಂ ಸದೈವ ಕಲಹಪ್ರಿಯಾಂ ॥ ೧೦೩ ॥

ಪ್ರಮಲಾಮವಿಶಂಕಾಂ ಚ ನಿರ್ಲಜ್ಜಾಂ ಬಾಹ್ಯಚಾರಿಣೀಂ ।
ವ್ಯಯಶೀಲಾಮನಾಚಾರಂ ದೂರತಃ ಪರಿವರ್ಜಯೇತ್ ॥ ೧೦೪ ॥

ಮಲಿನಾಂ ನಾಭಿವಂದೇತ ಗುರುಪತ್ನೀಂ ಕದಾಚನ ।
ಸ ಸ್ಪೃಶೇತ್ತಾಂ ಚ ಮೇಧಾವೀ ಸ್ಪೃಷ್ಟ್ವಾ ಸ್ನಾನೇನ ಶುಧ್ಯತಿ ॥ ೧೦೫ ॥

ಸ ತಯಾ ಸಹ ಕೇಲಿಂ ಚ ವರ್ಜಯೇಚ್ಚ ಸದೈವ ಹಿ ।
ಶೃಣುಯಾಚ್ಚ ವಚೋ ನೂನಂ ನ ಪಶ್ಯೇಚ್ಚ ಗುರೋಃ ಸ್ತ್ರಿಯಂ ॥ ೧೦೬ ॥

---

೧೦೧. ರಾಜ ಬ್ರಾಹ್ಮಣ ವೈದ್ಯರೊಡನೆ ಜಗಳವಾಡಬಾರದು, ಬ್ರಾಹ್ಮಣ, ಗುರುವಿನ ಹೆಂಡತಿ, ಇವರ ಹತ್ತಿರ ಹೋಗಬಾರದು.

೧೦೨. ಜಾತಿಗೆಟ್ಟವನು, ಕುಷ್ಠರೋಗಿ, ಚಂಡಾಲ, ಗೋವನ್ನು ತಿನ್ನುವವನು, ತಿರಸ್ಕೃತನು, ದಡ್ಡ ಇವರ ಸಹವಾಸವನ್ನು ಮಾಡಬಾರದು.

೧೦೩-೧೦೪. ದುಷ್ಟಸ್ತ್ರೀ, ಕೆಟ್ಟ ನಡತೆಯುಳ್ಳವಳು, ಅಪವಾದವನ್ನು ಹೊರಿಸುವವಳು, ಕೆಟ್ಟಕೆಲಸದಲ್ಲಿ ಆಸಕ್ತಳು, ಯಾವಾಗಲೂ ಜಗಳವಾಡುವವಳು, ಮುಟ್ಟಾದವಳು, ಅಂಜದವಳು, ನಾಚಿಕೆಯಿಲ್ಲದವಳು, ಇವರನ್ನು ದೂರದಲ್ಲಿ ಬಿಟ್ಟು ಬಿಡಬೇಕು.

೧೦೫. ಮುಟ್ಟಾಗಿರುವ ತನ್ನ ಗುರುಪತ್ನಿಯನ್ನು ನಮಸ್ಕರಿಸಬಾರದು. ಆಕೆಯನ್ನು ಮುಟ್ಟಬಾರದು, ಒಂದು ವೇಳೆ ಮುಟ್ಟಿದರೆ ಸ್ನಾನದಿಂದ ಶುದ್ಧನಾಗುತ್ತಾನೆ.

೧೦೬, ಆ ಗುರುವಿನ ಹೆಂಡತಿಯೊಡನೆ ಆಟವಾಡಬಾರದು, ಆಕೆಯ ಮಾತನ್ನು ಕೇಳಬೇಕು, ಆಕೆಯನ್ನು ನೋಡಬಾರದು.

ವಧೂಂ ಪುತ್ರಸ್ಯ ಭ್ರಾತುಶ್ಚ ಸ್ವಪುತ್ರೀಂ ಯುವತೀಂ ಧ್ರುವಂ ।
ಅನ್ಯಾಂ ಚ ಗುರುಪತ್ನೀಂ ಚ ನೇಕ್ಷೇತ್ಸ್ಪರ್ಶಂ ನ ಕಾರಯೇತ್ ॥ ೧೦೭ ॥

ತಾಭಿಃ ಸಹ ಕಥಾಲಾಪಂ ತಥಾ ಭ್ರೂಭಂಗದರ್ಶನಂ ।
ಕಲಹಂ ನಿಸ್ತ್ರಪಾಂ ವಾಣೀಂ ಸದೈವ ಪರಿವರ್ಜಯೇತ್ ॥ ೧೦೮ ॥

ನ ದದ್ಯಾಚ್ಚ ಸದಾ ಪಾದಂ ತುಷಾಂಗಾರಾಸ್ಥಿಭಸ್ಮಸು ।
ಕಾರ್ಪಾಸಾಸ್ಥಿಷು ನಿರ್ಮಾಲ್ಯೇ ಚಿತಿಕಾಷ್ಠೇ ಚಿತೌ ಗುರೌ ॥ ೧೦೯ ॥

ಶುಷ್ಕಮೀನಂ ನ ಭಕ್ಷೇತ ಪೂತಿಗಂಧಿಮಮೇಧ್ಯಕಂ ।
ವಿಘಸಂ ಚಾನ್ಯದುಚ್ಛಿಷ್ಟಂ ಪಾಕಾರ್ಥಂ ಚ ಪರಸ್ಯ ಚ ॥ ೧೧೦ ॥

ನ ಸ್ಥಾತವ್ಯಂ ನ ಗಂತವ್ಯಂ ಕ್ಷಣಮಪ್ಯಸತಾ ಸಹ ।
ನ ತಿಷ್ಠೇಚ್ಚ ಕ್ಷಣಂ ಧೀರೋ ದೀಪಚ್ಛಾಯೇ ಕಲಿದ್ರುಮೇ ॥ ೧೧೧ ॥

---

೧೦೭. ಮಗನ ಹೆಂಡತಿ, ಸೋದರನ ಹೆಂಡತಿ, ತನ್ನ ಮಗಳು ಯುವತಿಯುರಾದ ಇವರನ್ನು ನೋಡಬಾರದು ಬೇರೆಯವರ ಹೆಂಡಿರನ್ನೂ ಗುರುವಿನ ಹೆಂಡತಿಯನ್ನೂ ನೋಡಬಾರದು, ಮುಟ್ಟಲೂ ಬಾರದು.

೧೦೮. ಅವರೊಡನೆ ವಿಶೇಷ ಮಾತುಗಳನ್ನಾಡಬಾರದು, ಹುಬ್ಬು ಹಾರಿಸುಕೆ, ಮುಂತಾದುವನ್ನೂ ನೋಡಬಾರದು. ಜಗಳವಾಡಬಾರದು, ಲಜ್ಜೆರಹಿತವಾದ ಮಾತನ್ನಾಡಬಾರದು.

೧೦೯. ಹೊಟ್ಟು, ಕೆಂಡ, ಮೂಳೆ, ಭಸ್ಮಗಳಲ್ಲಿ ಕಾಲಿಡಲಾರದು. ಹತ್ತಿ, ಮೂಳೆ, ದೇವಗುರುಗಳು ಅನುಭವಿಸಿ ಮಿಕ್ಕ ನಿರ್ಮಾಲ್ಯ ಚಿತಿಯ ಸೌದೆ, ಚಿತಿ, ಗುರು, ಇವರುಗಳಿಗೆ ಕಾಲನ್ನು ತಗುಲಿಸಬಾರದು.

೧೧೦. ಒಣಗಿದ ಮೀನನ್ನು ತಿನ್ನಬಾರದು, ದುರ್ವಾಸನೆ ಬರುವ ಪವಿತ್ರವಲ್ಲದ ಮೀನನ್ನು ತಿನ್ನಬಾರದು, ಹಳಸಿದುದನ್ನು ತಿನ್ನಬಾರದು, ಬೇರೆಯವರ ಎಂಜಲನ್ನು ತಿನ್ನಬಾರದು, ಇತರರು ಅಡಿಗೆಗೆ ಇಟ್ಟಿರುವುದನ್ನು ಉಪಯೋಗಿಸಬಾರದು.

೧೧೧. ಅಯೋಗ್ಯರೊಡನೆ ನಿಲ್ಲಲೂಬಾರದು, ಹೋಗಲೂ ಬಾರದು. ದೀಪದ ನೆರಳಿನಲ್ಲಿ, ತಾರೆಯ ಮರಗಳ ನೆರಳಿನಲ್ಲಿ, ಕ್ಷಣಕಾಲವೂ ನಿಲ್ಲಬಾರದು.

ಅಸ್ಪೃಶ್ಯೈಃ ಸಹ ಚಾಽಲಾಪಂ ಪತಿತೈಃ ಕುಪಿತೈಃ ಸಹ ।
ನ ಕುರ್ಯಾತ್ಕ್ಷಣಮಾತ್ರಂ ತು ಕೃತ್ವಾ ಗಚ್ಛೇತ ರೌರವಂ ॥ ೧೧೨ ॥

ಕನಿಷ್ಠಂ ನಾಭಿವಂದೇತ ಪಿತೃವ್ಯಂ ಮಾತುಲಂ ತಥಾ ।
ಉತ್ಥಾಯ ಚಾಽಽಸನಂ ದದ್ಯಾತ್ಕೃತಾಂಜಲ್ಯಗ್ರತಃ ಸ್ಥಿತಃ ॥ ೧೧೩ ॥

ತೈಲಾಭ್ಯಕ್ತಂ ತಥೋಚ್ಛಿಷ್ಟಮಾರ್ದ್ರವಸ್ತ್ರಂ ಚ ರೋಗಿಣಂ ।
ಪಾರಾವಾರಗತೋದ್ವಿಗ್ನಂ ವಹಂತಂ ನಾಭಿವಾದಯೇತ್ ॥ ೧೧೪ ॥

ಯಜ್ಞಸ್ಯಾಂತರ್ಗತಂ ನಷ್ಟಂ ಕ್ರೀಡಂತಂ ಸ್ತ್ರೀಜನೈಃ ಸಹ ।
ಬಾಲಕ್ರೀಡಾಗತಂ ಚಾಪಿ ಪುಷ್ಪಯುಕ್ತಂ ಕುಶೈರ್ಯುತಂ ॥ ೧೧೫ ॥

ಶಿರಃ ಪ್ರಾವೃತ್ಯ ಕರ್ಣಂ ವಾ ಅಪ್ಸು ಮುಕ್ತಶಿಖೋಽಪಿ ವಾ ।
ಅಕೃತ್ವಾ ಪಾದಯೋಃ ಪೂಜಾಂ ನಾಽಽಚಾಮೇದ್ದಕ್ಷಿಣಾಮುಖಃ ॥ ೧೧೬ ॥

---

೧೧೨. ಅಸ್ಪೃಶ್ಯರು, ಪತಿತರು, ಕೋಪಿಗಳು, ಇವರೊಡನೆ ಮಾತಾಡಬಾರದು, ಹಾಗೆ ಮಾತಾಡಿದರೆ ರೌರವ ನರಕ ಬರುತ್ತದೆ

೧೧೩. ಚಿಕ್ಕಪ್ಪಂದಿರು, ಸೋದರಮಾವಂದಿರು, ತನಗಿಂತಲೂ ಚಿಕ್ಕವರಾಗಿದ್ದರೆ ನಮಸ್ಕರಿಸಬಾರದು, ಅವರಿಗೆ ಎದ್ದು ಆಸನವನ್ನು ಕೊಡಬೇಕು.

೧೧೪. ಎಣ್ಣೆ ಹಚ್ಚಿಕೊಂಡಿರುವವನು, ಅಶುಚಿಯಾಗಿರುವವನು, ಒದ್ದೆ ಬಟ್ಟೆ ಹಾಕಿಕೊಂಡಿರುವವನು ರೋಗವುಳ್ಳವನು, ಕೆಲಸಮಾಡಿ ಕಷ್ಟದಿಂದ ಕೂಡಿರುವವನು ಕೋಪ ದುಃಖಗಳುಳ್ಳವನು, ಹೊರೆ ಹೊತ್ತಿರುವವನು, ಇವರನ್ನು ನಮಸ್ಕರಿಸಬಾರದು.

೧೧೫. ಪೂಜಾದಿಗಳನ್ನು ಮಾಡುತ್ತಿರುವವನು, ಕೆಟ್ಟು ಹೋದವನು, ಹೆಂಗಸರೊಡನೆ ಸಲ್ಲಾಪದಲ್ಲಿರುವವನು, ಹುಡುಗರನ್ನು ಆಡಿಸುವವನು, ಹೂವನ್ನಾಗಲೆ, ದರ್ಭೆಯನ್ನಾಗಲಿ, ಹಿಡಿದಿರುವವನು ಇವರನ್ನು ನಮಸ್ಕರಿಸಬಾರದು.

೧೧೬. ತಲೆಗೆ ಸುತ್ತಿಕೊಂಡಾಗಲಿ, ಕಿವಿಗೆ ಕಟ್ಟಿಕೊಂಡಾಗಲಿ, ನೀರಿನಲ್ಲಿ ನಿಂತಾಗಲಿ, ತಲೆ ಕೆದರಿಕೊಂಡಾಗಲಿ, ಕಾಲು ತೊಳೆಯದೆ ಇದ್ದಾಗಲಿ, ಆಚಮನ ಮಾಡಿದರೂ ದಕ್ಷಿಣ ಮುಖವಾಗಿ ಆಚಮನ ಮಾಡಿದರೂ ಶುದ್ಧನಾಗುವುದಿಲ್ಲ.

ಉಪವೀತವಿಹೀನಶ್ಚ ನಗ್ನಕೋ ಮುಕ್ತಕಚ್ಛಕಃ ।
ಏಕವಸ್ತ್ರಪಿಧಾನಶ್ಚ ಆಚಾಂತೋ ನೈವ ಶುಧ್ಯತಿ ॥ ೧೧೭ ॥

ಮಧ್ಯಮಾಭಿರ್ಮುಖಂ ಪೂರ್ವಂ ತಿಸೃಭಿಃ ಸಮುಪಸ್ಪೃಶೇತ್ ।
ಅಂಗುಷ್ಠದೇಶಿನೀಭ್ಯಾಂ ಚ ನಾಸಾಂ ಚ ತದನಂತರಂ ॥ ೧೧೮ ॥

ಅಂಗುಷ್ಠಾನಾಮಿಕಾಭ್ಯಾಂ ಚ ಚಕ್ಷುಷೀ ಸಮುಪಸ್ಪೃಶೇತ್ ।
ಕನಿಷ್ಠಾಂಗುಷ್ಠಯೋಃ ಶ್ರೋತ್ರೇ ನಾಭಿಮಂಗುಷ್ಠಕೇನ ತು ॥ ೧೧೯ ॥

ತಲೇನ ಹೃದಯಂ ನ್ಯಸ್ಯ ಸರ್ವಾಭಿಃ ಶಿರಸೋಪರಿ ।
ಬಾಹುಂ ಚಾಗ್ರೇಣ ಸಂಸ್ಪೃಶ್ಯ ತತಃ ಶುದ್ಧೋ ಭವೇನ್ನರಃ ॥ ೧೨೦ ॥

ಅನೇನಾಽಚಮನಂ ಕೃತ್ವಾ ಮಾನವಃ ಪ್ರಯತೋ ಭವೇತ್ ।
ಸರ್ವಪಾಪೈರ್ವಿನಿರ್ಮುಕ್ತಃ ಸ್ವರ್ಗಂ ಚಾಕ್ಷಯಮಶ್ನುತೇ ॥ ೧೨೧ ॥

---

೧೧೭. ಉಪವೀತವಿಲ್ಲದೆ ಬೆತ್ತಲೆ ಕಚ್ಚೆಯನ್ನು ಬಿಚ್ಚಿಕೊಂಡು ಒಂದೇ ಬಟ್ಟೆಯುಳ್ಳವನಾಗಿಯಾಗಲಿ ಆಚಮನಮಾಡಿದರೆ ಶುದ್ಧನಾಗುವುದಿಲ್ಲ.

೧೧೮. ಮೊದಲು ಮಧ್ಯದ ಮೂರು ಬೆರಳುಗಳಿಂದಲೂ ಮುಖವನ್ನು ಮುಟ್ಟಬೇಕು, ಅಂಗುಷ್ಠ ಕೊನೆಯುದರ ಪಕ್ಕದ ಬೆರಳುಗಳಿಂದ ಮೂಗನ್ನು ಹಿಡಿದುಕೊಳ್ಳಬೇಕು.

೧೧೯. ಅಂಗುಷ್ಠ ಅನಾಮಿಕೆಗಳಿಂದ ಕಣ್ಣುಗಳನ್ನು ಮುಟ್ಟಿಕೊಳ್ಳಬೇಕು. ಕನಿಷ್ಠ ಅಂಗುಷ್ಠಗಳಿಂದ ಕಿವಿಯನ್ನೂ ಅಂಗುಷ್ಠದಿಂದ ಹೊಕ್ಕಳನ್ನೂ ಮುಟ್ಟಿಕೊಳ್ಳಬೇಕು.

೧೨೦. ಕೈಯಿನ ಒಳಗಿನಿಂದ (ಅಂಗೈನಿಂದ) ಹೃದಯವನ್ನೂ ಮುಟ್ಟಬೇಕು. ಎಲ್ಲಾ ಬೆರಳುಗಳಿಂದಲೂ, ತಲೆಯನ್ನು ಮುಟ್ಟಬೇಕು, ತೋಳುಗಳನ್ನು ತುದಿ ಬೆರಳುಗಳಿಂದ ಮುಟ್ಟಬೇಕು, ಅನಂತರ ಶುದ್ಧನಾಗುತ್ತಾನೆ.

೧೨೧. ಈರೀತಿ ಆಚಮನಮಾಡಿದರೆ ಅವನು ಪಾಪಗಳನ್ನು ಕಳೆದುಕೊಂಡು ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ.

ಪ್ರಾಣಸ್ತ್ರಿಪುಟಿಶ್ಶೃಂಗ್ಯಾ ಚ ವ್ಯಾನೋಽಪಾನಶ್ಚ ಮುದ್ರಯಾ ।
ಸಮಾನಸ್ತು ಸಮಸ್ತಾಭಿರುದಾನಸ್ತರ್ಜನೀಂ ವಿನಾ　　॥ ೧೨೨ ॥

ನಾಗಃ ಕೂರ್ಮಶ್ಚ ಕೃಕರೋ ದೇವದತ್ತೋ ಧನಂಜಯಃ ।
ಉಪಪ್ರೀಣಂತು ತೇ ಪ್ರೀತಾ ಯೇಭ್ಯೋ ಭೂಮೌ ಪ್ರದೀಯತೇ ॥೧೨೩॥

ಶಯನಂ ಚಾಽದ್ರಪಾದೇನ ಶುಷ್ಕಪಾದೇನ ಭೋಜನಂ ।
ನಾಂಧಕಾರೇ ಚ ಶಯನಂ ಭೋಜನಂ ನೈವ ಕಾರಯೇತ್　　॥ ೧೨೪ ॥

ಪಶ್ಚಿಮೇ ದಕ್ಷಿಣೇ ಚೈವ ನ ಕುರ್ಯಾದ್ದಂತಧಾವನಂ ।
ಉತ್ತರೇ ಪಶ್ಚಿಮೇ ಚೈವ ನ ಸ್ವಪೇದ್ಧಿ ಕದಾಚನ　　॥ ೧೨೫ ॥

ಸ್ವಪನ್ನಾದಾಯುಃ ಕ್ಷಯಂ ಯಾತಿ ಬ್ರಹ್ಮಹಾ ಪುರುಷೋ ಭವೇತ್ ।
ನ ಕುರ್ವೀತ ತತಃ ಸ್ವಪ್ನಂ ಶಸ್ತಂ ಚ ಪೂರ್ವದಕ್ಷಿಣಂ　　॥ ೧೨೬ ॥

---

೧೨೨. ಪ್ರಾಣ, ಅಪಾನ, ವ್ಯಾನಗಳನ್ನು ಮೂರು ಬೆರಳಿನ ಮುದ್ರೆಯಿಂದಲೂ, ಸಮಾನವನ್ನು ಎಲ್ಲಾ ಬೆರಳಿನ ಮುದ್ರಯಿಂದಲೂ ಉದಾನವನ್ನು ಹೆಬ್ಬೆಟ್ಟಿನ ಒತ್ತಿನ ಬೆರಳನ್ನು ಬಿಟ್ಟು ಅನ್ನವನ್ನು ಹಾಕಿ ತೃಪ್ತಿಪಡಿಸಬೇಕು.

೧೨೩. ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳನ್ನು ಭೂಮಿಯಲ್ಲಿ ಅನ್ನ ಹಾಕುವುದರಿಂದ ತೃಪ್ತಿಪಡಿಸಬೇಕು.

೧೨೪. ಕಾಲನ್ನು ಒದ್ದೆಮಾಡಿಕೊಂಡು ಮಲಗಬಾರದು, ಕಾಲು ತೊಳೆದುಕೊಳ್ಳದೆ ಊಟ ಮಾಡಬಾರದು. ಕತ್ತಲೆಯಲ್ಲಿ ಮಲಗಬಾರದು, ಊಟ ಮಾಡಲೂ ಬಾರದು.

೧೨೫. ಪಶ್ಚಿಮ ದಕ್ಷಿಣ ಮುಖವಾಗಿ ಕುಳಿತು ಹಲ್ಲುಗಳನ್ನುಜ್ಜಬಾರದು ಉತ್ತರಕ್ಕೂ ಪಶ್ಚಿಮಕ್ಕೂ ತಲೆ ಹಾಕಿಕೊಂಡು ಮಲಗಬಾರದು.

೧೨೬. ಹಾಗೆ ಮಲಗಿದರೆ ಆಯುಸ್ಸು ಕ್ಷೀಣವಾಗುತ್ತದೆ, ಬ್ರಹ್ಮಹತ್ಯೆಯ ದೋಷವು ಬರುತ್ತದೆ, ಆದ್ದರಿಂದ ಹಾಗೆ ಮಲಗಬಾರದು, ಪೂರ್ವಮುಖ ದಕ್ಷಿಣ ಮುಖವಾಗಿ ಮಲಗುವುದು ಒಳ್ಳೆಯದು.

ಆಯುಷ್ಯಂ ಪ್ರಾಙ್ಮುಖೋ ಭುಂಕ್ತೇ ಯಶಸ್ಯಂ ದಕ್ಷಿಣಾಮುಖಃ ।
ಶ್ರಿಯಃ ಪ್ರತ್ಯಙ್ಮುಖೋ ಭುಂಕ್ತೇ ಯಶೋ ಭುಂಕ್ತ ಉದಙ್ಮುಖಃ॥ ೧೨೭ ॥

ಪ್ರಾಚ್ಯಾಂ ನರೋ ಲಭೇದಾಯುರ್ಯಾಮ್ಯಾಂ ಪ್ರೇತತ್ವಮಶ್ನುತೇ ।
ವಾರುಣೇ ಚ ಭವೇದ್ರೋಗೀ ಆಯುರ್ವಿತ್ತಂ ತಥೋತ್ತರೇ ॥ ೧೨೮ ॥

ದೇವಾನ್ನಮೇಕಭುಕ್ತಂ ತು ದ್ವಿಭುಕ್ತಂ ಸ್ಯಾನ್ನರಸ್ಯ ಚ ।
ತ್ರಿಭುಕ್ತಂ ಪ್ರೇತದೈತ್ಯಸ್ಯ ಚಾತುರ್ಥಂ ಕೋಣಪಸ್ಯ ಚ ॥ ೧೨೯ ॥

ನಿರಾಮಿಷಂ ಹವಿರ್ದೇವಾ ಮತ್ಸ್ಯಮಾಂಸಾದಿ ಮಾನುಷಾಃ ।
ಪೂತಿಪರ್ಯುಷಿತಂ ದುಷ್ಟಮನ್ಯೇ ಭುಂಜಂತ್ಯನಾವೃತಾಃ ॥ ೧೩೦ ॥

ಸ್ವರ್ಗಸ್ಥಿತಾನಾಮಿಹ ಜೀವಲೋಕೇ
ಚತ್ವಾರಿ ತೇಷಾಂ ಹೃದಯೇ ವಸಂತಿ ।
ದಾನಂ ಪ್ರಶಸ್ತಂ ಮಧುರಾ ಚ ವಾಣೀ
ದೇವಾರ್ಚನಂ ಬ್ರಾಹ್ಮಣತರ್ಪಣಂ ಚ ॥ ೧೩೧ ॥

---

೧೨೭. ಪೂರ್ವ ಮುಖವಾಗಿ ಊಟಮಾಡಿದರೆ ಆಯುಸ್ಸೂ, ದಕ್ಷಿಣಮುಖವಾಗಿ ಊಟಮಾಡಿದರೆ ಯಶಸ್ಸೂ, ಪಶ್ಚಿಮಮುಖವಾಗಿ ಊಟಮಾಡಿದರೆ ಸಂಪತ್ತೂ ಉತ್ತರ ಮುಖವಾಗಿ ಊಟಮಾಡಿದರೆ ಯಶಸ್ಸೂ ಉಂಟಾಗುತ್ತದೆ.

೧೨೮. ಪೂರ್ವಮುಖವಾಗಿ ಊಟಮಾಡಿದರೆ ಆಯುಸ್ಸು ಹೆಚ್ಚುತ್ತದೆ. ದಕ್ಷಿಣ ದಿಕ್ಕಿಗೆ ಮುಖಮಾಡಿಕೊಂಡು ಊಟಮಾಡಿದರೆ ಪ್ರೇತತ್ವವನ್ನು ಹೊಂದುತ್ತಾನೆ. ಪಶ್ಚಿಮದಿಕ್ಕಿಗೆ ಊಟಮಾಡಿದರೆ ರೋಗಿಯಾಗುತ್ತಾನೆ ಉತ್ತರದಿಕ್ಕಿಗೆ ಮುಖಮಾಡಿ ಊಟಮಾಡಿದರೆ ಆಯುಸ್ಸನ್ನೂ ಧನವನ್ನೂ ಹೊಂದುತ್ತಾನೆ.

೧೨೯ ದಿನಕ್ಕೊಂದುಬಾರಿ ಊಟಮಾಡಿದರೆ ಅದು ದೇವತೆಗಳ ಊಟವು. ಎರಡಾವರ್ತಿ ಮಾಡಿದರೆ ಮನುಷ್ಯರ ಊಟವು, ಮೂರುಬಾರಿ ಮಾಡಿದರೆ ರಾಕ್ಷಸರ ಊಟವು ಆಗುತ್ತವೆ.

೧೩೦. ಮಾಂಸವಿಲ್ಲದ ಊಟವನ್ನು ಮಾಡಿದರೆ ದೇವತೆಗಳು ತಿನ್ನುತ್ತಾರೆ, ಮೀನು ಮುಂತಾದ ಮಾಂಸಗಳಿದ್ದರೆ ಮನುಷ್ಯರ ಊಟವು. ದುರ್ಗಂಧ, ಹಳಸಿದ್ದು, ದುಷ್ಟವಾದುದು, ಮುಚ್ಚು ಮರೆಯಿಲ್ಲದುದಾದರೆ ಮಿಕ್ಕವರು ತಿನ್ನುತ್ತಾರೆ.

೧೩೧. ಒಳ್ಳೆಯ ದಾನ, ಒಳ್ಳೆಯ ಮಾತು, ದೇವರಪೂಜೆ, ಬ್ರಾಹ್ಮಣ ತೃಪ್ತಿ ಈ ನಾಲ್ಕು ಯಾರ ಮನಸ್ಸಿನಲ್ಲಿವೆಯೋ, ಅವರು ಸ್ವರ್ಗದಿಂದ ಬಂದವರೆಂದು ತಿಳಿ.

ಕಾರ್ಪಣ್ಯವೃತ್ತಿಃ ಸ್ವಜನೇಷು ನಿಂದಾ
ಕುಚೈಲತಾ ನೀಚಜನೇಷು ಭಕ್ತಿಃ ।
ಅತೀವ ರೋಷಃ ಕಟುಕಾ ಚ ವಾಣೀ
ನರಸ್ಯ ಚಿಹ್ನಂ ನರಕಾಗತಸ್ಯ ॥ ೧೩೨ ॥

ನವನೀತೋಪಮಾ ವಾಣೀ ಕರುಣಾ ಕೋಮಲಂ ಮನಃ ।
ಧರ್ಮಬೀಜಪ್ರಸೂತಾನಾಮೇತತ್ಪ್ರತ್ಯಕ್ಷಲಕ್ಷಣಂ ॥ ೧೩೩ ॥

ದಯಾದರಿದ್ರಹೃದಯಂ ವಚಃ ಕ್ರಕಚಕರ್ಕಶಂ ।
ಪಾಪಬೀಜಪ್ರಸೂತಾನಾಮೇತತ್ಪ್ರತ್ಯಕ್ಷಲಕ್ಷಣಂ ॥ ೧೩೪ ॥

ಶ್ರಾವಯೇಚ್ಛೃಣುಯಾದ್ವಾಽಪಿ ಸದಾಚಾರಾದಿಕಂ ನರಃ ।
ಆಚಾರಾದೇಃ ಫಲಂ ಲಬ್ಧ್ವಾ ಪಾಪಾತ್ಪೂತೋಽಚ್ಯುತೋ ದಿವಿ ॥ ೧೩೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಸದಾಚಾರೋ ನಾಮ
॥ ಷಟ್ಚತ್ವಾರಿಂಶೋಽಧ್ಯಾಯಃ ॥

---

೧೩೨. ಕೃಪಣತನದ ಜೀವನ, ತಮ್ಮವರನ್ನು ನಿಂದಿಸುವುದು, ಕೊಳಕುಬಟ್ಟೆ ಅಯೋಗ್ಯರಲ್ಲಿ ಭಕ್ತಿ, ಹೆಚ್ಚು ರೋಷ, ಕ್ರೂರವಾದ ಮಾತು, ಇವು ನರಕದಿಂದ ಬಂದವರ ಗುರುತುಗಳು.

೧೩೩. ಬೆಣ್ಣೆಯಂತೆ ಮೃದುವಾದ ಮಾತು, ಕೃಪೆ, ಮೃದುಮನಸ್ಸು, ಇವು ಧರ್ಮಬೀಜದಿಂದ ಹುಟ್ಟಿದವರ ಲಕ್ಷಣಗಳು.

೧೩೪. ದಯೆಯಿಲ್ಲದಿರುವಿಕೆ, ಕಠಿನವಾದ ಮಾತು, ಪಾಪಗಳಿಂದ ಹುಟ್ಟಿದ, ವರ ಲಕ್ಷಣಗಳು.

೧೩೫. ಯಾವನು ಈ ಸದಾಚಾರಾದಿಗಳನ್ನು ಹೇಳುತ್ತಾನೆಯೋ ಅಥವಾ ಕೇಳಿಸುತ್ತಾನೆಯೋ ಅವನು ಆಚಾರಾದಿಗಳ ಫಲವನ್ನು ಹೊಂದಿ ಪಾಪವನ್ನು ಕಳೆದು ಕೊಂಡು ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಸದಾಚಾರ ಕಥನವೆಂಬ
ನಾಲ್ವತ್ತಾರನೆಯ ಅಧ್ಯಾಯವು ಮುಗಿದುದು.

